


# ಎಂ ಎಸ್ ಪುಟ್ಟಣ್ಣ

## — ಒಂದು ಅಧ್ಯಯನ



ಡಾ. ಎಚ್ ಎಸ್ ಸುಜಾತಾ

ಹೊಸಗನ್ನಡದ ಬರವಣಿಗೆಯ ದಾರಿಯಲ್ಲಿ ಅಡಿಯಿಟ್ಟ ಮೊದಲಿಗರಲ್ಲಿ ಒಬ್ಬರಾದ ಎಂ. ಎಸ್. ಪುಟ್ಟಣ್ಣ ಅವರನ್ನು ಕುರಿತು ಇದು ಒಂದು ಸಮಗ್ರವಾದ ಅಧ್ಯಯನವಾಗಿದೆ. ಈ ಅಧ್ಯಯನವನ್ನು ಕೈಗೊಂಡ ಶ್ರೀಮತಿ ಎಚ್. ಎಸ್. ಸುಜಾತಾ ಅವರು ಪುಟ್ಟಣ್ಣನವರ ಜೀವನ ಮತ್ತು ವ್ಯಕ್ತಿತ್ವಗಳ ವಿಚಾರವಾಗಿ ಸಾಧ್ಯವಿದ್ದ ಎಲ್ಲ ಮಾಹಿತಿಯನ್ನು ಸಂಗ್ರಹಿಸಿ ವಿವರವಾಗಿ ನಿರೂಪಿಸಿದ್ದಾರೆ. ಅವರ ಕೃತಿಗಳಲ್ಲಿ ಅಚ್ಚಾದ, ಅಚ್ಚಾಗದೆ ಉಳಿದ ಎಲ್ಲವನ್ನೂ ಗುರುತಿಸಿ ಅವುಗಳ ಸೂಕ್ತ ಸಮೀಕ್ಷೆಯನ್ನು ಮಾಡಿದ್ದಾರೆ. ಹಳೆಗಾಲದ ಅನೇಕ ಕವಿಗಳ ವಿಷಯದಲ್ಲಿ ಎಂದಿಗೂ ಕಳೆಯದ ಕತ್ತಲಗವಿಯಲ್ಲಿದ್ದ ನಾವು ಹೊಸ ಕಾಲದ ಮೊದಲಿಗರ ವಿಚಾರದಲ್ಲಿಯೂ ಅಂಥದೇ ಗವಿಯನ್ನು ಸೇರುವ ಮೊದಲೇ ಉಪಲಬ್ಧವಾದ ಎಲ್ಲ ದಾಖಲೆಗಳನ್ನು ಒತ್ತಟ್ಟಿಗೆ ನಮೂದಿಸಿರುವುದು ಸಾಹಿತ್ಯಚರಿತ್ರೆಯಲ್ಲಿ ತುಂಬ ಮಹತ್ತ್ವದ ಕೆಲಸ. ಪುಟ್ಟಣ್ಣನವರನ್ನು ಕುರಿತು ಅತ್ಯಂತ ಪರಿಶ್ರಮ ಮತ್ತು ನಿಷ್ಠೆಯಿಂದ ಶ್ರೀಮತಿ ಸುಜಾತಾ ಅವರು ಇಂಥ ಕೆಲಸವನ್ನು ಬೇರೆಯವರಿಗೆ ಮಾದರಿಯಾಗುವಂತೆ ಬಹುಮಟ್ಟಿಗೆ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ಡಾ. ರಂ. ಶ್ರೀ. ಮುಗಳಿ

ಪುಟ್ಟಣ್ಣನವರ ಬಗ್ಗೆ ನಮಗಿದ್ದ ಪರಿಚಯ ತೀರ ಹರಕು ಮುರುಕು. ಈ ಪ್ರಬಂಧದಲ್ಲಿ ಅವರ ಜೀವನ ಕೃತಿಗಳ ಸಮೃದ್ಧ ಪರಿಚಯ, ನಿಖರ ವಿಮರ್ಶೆ ಕಂಡುಬಂದು, ಇದುವರೆಗೆ ಸಾಹಿತ್ಯ ಚರಿತ್ರೆಯಲ್ಲಿ ತೆರವಾಗಿದ್ದ ಪೀಠದಲ್ಲಿ ಪುಟ್ಟಣ್ಣನವರನ್ನು ಪ್ರತಿಷ್ಠಾಪಿಸಿದಂತೆ ಆಗಿದೆ.

ಡಾ. ಶ್ರೀನಿವಾಸ ಹಾವನೂರ

# ಎಂ.ಎಸ್. ಪುಟ್ಟಣ್ಣ : ಒಂದು ಅಧ್ಯಯನ



ಡಾ. ಎಚ್. ಎಸ್. ಸುಜಾತಾ



ಐಬಿಎಚ್ ಪ್ರಕಾಶನ
ಗಾಂಧಿನಗರ ಬೆಂಗಳೂರು 560 009

*M. S. PUTTANNA : ONDU ADHYAYANA* – (M. S. Puttanna : A Study) by Dr. H. S. Sujatha 53, 'Suhasa' VI Block Tonachikoppal Layout Mysore 570 009, Published by G.K. Ananthram for IBH Prakashana Fifth Main Road Gandhinagar Bangalore 560 009. Pp. 359 + xvi.





**ಬೆಲೆ : ಕ್ಯಾಲಿಕೊ ರೂ. 45.00 , ಸಾದಾ ರೂ. 30.00**

ಮೊದಲ ಮುದ್ರಣ : 1981 ಪ್ರಕಾಶಕರು : ಐಬಿಎಚ್ ಪ್ರಕಾಶನ ಇವರ ಪರವಾಗಿ ಜಿ. ಕೆ. ಅನಂತರಾಮ್ ಐದನೆಯ ಮುಖ್ಯರಸ್ತೆ ಗಾಂಧಿನಗರ ಬೆಂಗಳೂರು 560 009 ಮುದ್ರಕರು : ಎಚ್ ಎಸ್ ಎನ್ ರಾವ್ ಐಬಿಎಚ್ ಪ್ರಕಾಶನ ಪ್ರಿಂಟರಿ ಬೆಂಗಳೂರು 560 054.




ಪೂಜ್ಯ ಗುರುಗಳಾದ

ಡಾ. ಹಾ. ಮಾ. ನಾಯಕ

ಅವರಿಗೆ

ಗೌರವಪೂರ್ವಕ

# ಮುನ್ನುಡಿ

ಹೊಸಗನ್ನಡ ಸಾಹಿತ್ಯದ ಪ್ರಾರಂಭಕಾರರಲ್ಲಿ ಒಂದು ವಿಶಿಷ್ಟಸ್ಥಾನವನ್ನು ಪಡೆದ ಎಂ. ಎಸ್. ಪುಟ್ಟಣ್ಣ ಅವರನ್ನು ಕುರಿತು ಶ್ರೀಮತಿ ಡಾಕ್ಟರ್ ಎಚ್.ಎಸ್. ಸುಜಾತಾ ಅವರು ನಡಸಿದ ಸಮಗ್ರ ಅಧ್ಯಯನದ ಫಲವು ಈ ಪುಸ್ತಕರೂಪದಲ್ಲಿ ಕಾಣಿಸಿಕೊಂಡಿದೆ. ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಇದನ್ನು ಸಾದರಪಡಿಸಿ ಆ ಪದವಿಯ ಗೌರವವನ್ನು ಅವರು ಪಡೆದಿದ್ದಾರೆ. ಪುಸ್ತಕವನ್ನು ಆಮೂಲಾಗ್ರವಾಗಿ ನೋಡಿದರೆ ಪುಟ್ಟಣ್ಣ ಅವರ ಜೀವನ ಮತ್ತು ಕೃತಿಗಳ ಬಗೆಗೆ ದೊರೆಯುವ ಎಲ್ಲ ವಿವರಗಳನ್ನು ಸಂಗ್ರಹಿಸಲು ಶ್ರೀಮತಿ ಸುಜಾತಾ ಅವರು ಎಷ್ಟು ಪರಿಶ್ರಮ ಪಟ್ಟಿದ್ದಾರೆ, ಎಷ್ಟು ವ್ಯಾಸಂಗನಿಷ್ಠೆಯನ್ನು ತೋರಿಸಿದ್ದಾರೆ ಎಂಬುದನ್ನು ಅರಿತುಕೊಳ್ಳಬಹುದು.

ಸಾಮಾನ್ಯವಾಗಿ ಹಿಂದಿನಿಂದಲೂ ನಮ್ಮ ದೇಶದಲ್ಲಿ ವಸ್ತುನಿಷ್ಠವಾದ ಇತಿಹಾಸ ಪ್ರಜ್ಞೆ ಕಡಿಮೆ. ಬಹು ಬೇಗ ಯಾವುದೇ ಗಣ್ಯವ್ಯಕ್ತಿಯ ಜೀವನಚರಿತ್ರೆ ದಂತಕಥೆಯಾಗಿ ಪರಿಣಮಿಸುತ್ತದೆ. ಅದನ್ನೇ ಬರಬರುತ್ತ ಜನರು ಸತ್ಯಕಥೆಯೆಂದು ನಂಬುತ್ತಾರೆ. ಅದರಲ್ಲಿ ಹುದುಗಿದ ವಾಸ್ತವಾಂಶಗಳನ್ನು ಬೇರ್ಪಡಿಸುವುದೇ ಕಷ್ಟಕರವಾಗುತ್ತದೆ. ಕನ್ನಡ ಸಾಹಿತ್ಯದ ವಿಚಾರದಲ್ಲಿ ಹಿಂದೆ ಹಿಂದೆ ಹೋದಂತೆ ನಮ್ಮ ಕವಿಗಳ ಜೀವನ ಮತ್ತು ವ್ಯಕ್ತಿತ್ವದ ಬಗೆಗೆ ನಾವು ಹೆಚ್ಚು ಹೆಚ್ಚು ಅಜ್ಞಾನಿಗಳಾಗಿಯೇ ಉಳಿಯುತ್ತೇವೆ. ಇದರಿಂದ ಜೀವನ ಹಾಗೂ ಕೃತಿ ಇವುಗಳ ಅನ್ಯೋನ್ಯಸಂಬಂಧವನ್ನು ಸರಿಯಾಗಿ ಗುರುತಿಸಲಾರದೆ ನಮ್ಮ ಸಾಹಿತ್ಯಚರಿತ್ರೆಗಳು ವಸ್ತುವಿಮರ್ಶೆಗಳು ಬಹುಮಟ್ಟಿಗೆ ಊಹೆಗಳಾಗಿ ಪರಿಣಮಿಸುತ್ತವೆ. ಹೊಸಗನ್ನಡದ ಪುನರುಜ್ಜೀವನ ಯುಗವು ಮೊದಲಾದಂದಿನಿಂದ ನಾವು ದೂರದೂರದ ಅನ್ಯಪ್ರಭಾವಗಳಿಗೆ ಒಳಗಾಗಿ ಆ ಇತಿಹಾಸಪ್ರಜ್ಞೆಯನ್ನು ನಮ್ಮಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇವೆ. ಆದರೂ ನಮ್ಮ ಲೇಖಕರು ತಮ್ಮ ವಿಷಯವಾಗಿ ಕಡಿಮೆ ಹೇಳಬೇಕೆಂಬ ಸಂಪ್ರದಾಯದಿಂದ ಪೂರ್ತಿಯಾಗಿ ಬಿಡುಗಡೆ ಹೊಂದಿಲ್ಲ. ವಿಶೇಷವಾಗಿ ಪುಟ್ಟಣ್ಣನವರಂಥ ಪ್ರಾರಂಭಕಾರರು ತಮ್ಮ ಆತ್ಮಚರಿತ್ರೆಯನ್ನು ಬರೆದಿಟ್ಟಿರುವುದಿಲ್ಲ. ಅವರ ಸಮಕಾಲೀನರು ಸಹ ಅವರ ಜೀವನ ವಿವರಗಳನ್ನು ಒಂದೆಡೆಗೆ ವ್ಯವಸ್ಥಿತವಾಗಿ ಬರೆದಿಟ್ಟಿಲ್ಲ. ಇಂಥ ಸಂನಿವೇಶದಲ್ಲಿ ಎಲ್ಲೆಲ್ಲಿ ಯಾವಯಾವ ವಿವರಗಳು ದೊರೆಯಬಹುದೋ ಅಲ್ಲಲ್ಲಿಗೆ ಹೋಗಿ ಸಂಬಂಧಪಟ್ಟ ವ್ಯಕ್ತಿಗಳಿಂದ ಅವನ್ನು ಸಂಗ್ರಹಿಸಿ ಅವನ್ನು ತಾಳೆಹಾಕಿ ಸತ್ಯತೆ

ಯನ್ನು ಖಚಿತಪಡಿಸಿಕೊಂಡು ಹರಿದುಹಾಕಿದ ಕಾಗದದ ಚೂರುಗಳನ್ನು ಸರಿಯಾಗಿ ಜೋಡಿಸುವಂತೆ ಮಾಡಿ ದಾಖಲೆಗಳನ್ನು ಸಿದ್ಧಪಡಿಸಬೇಕಾಗುತ್ತದೆ. ಅಚ್ಚಿನಲ್ಲಿ ಉಪ ಲಬ್ಧವಾದ, ಹಸ್ತಪ್ರತಿಯಲ್ಲಿರುವ ಕೃತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಲೇಖಕನ ಜೀವನ – ವ್ಯಕ್ತಿತ್ವ ಇವುಗಳ ಪ್ರತ್ಯಕ್ಷ – ಅಪ್ರತ್ಯಕ್ಷ ಪರಿಣಾಮವು ಅವನ ಯಾವ ಕೃತಿ ಯಲ್ಲಿ ಎಷ್ಟರ ಮಟ್ಟಿಗೆ ಕಂಡುಬಂದಿದೆ ಎಂಬುದನ್ನು ವಿಶದಗೊಳಿಸಬೇಕಾಗುತ್ತದೆ. ಇದಕ್ಕೆ ಅವಶ್ಯಕವಾದ ಪರಿಶ್ರಮ ಮತ್ತು ವಿಮರ್ಶನಪ್ರಜ್ಞೆ ಎರಡನ್ನೂ ಶ್ರೀಮತಿ ಸುಜಾತಾ ಅವರು ಪುಟ್ಟಣ್ಣ ಅವರನ್ನು ಕುರಿತು ಮಾಡಿದ ಈ ಅಧ್ಯಯನದಲ್ಲಿ ಎದ್ದು ಕಾಣುವಂತೆ ತೋರ್ಪಡಿಸಿದ್ದಾರೆ. ಇದಕ್ಕಾಗಿ ನಾನು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಹೊಸಸಾಹಿತ್ಯದ ಚರಿತ್ರಕಾರರಿಗೆ ಮತ್ತು ಸಮೀಕ್ಷಕರಿಗೆ ಈ ಪುಸ್ತಕವು ಅತ್ಯಂತ ಉಪಯುಕ್ತವಾಗುವುದೆಂದು ನಾನು ಭಾವಿಸಿದ್ದೇನೆ. ಇತರ ಇಂಥ ಲೇಖಕರ ಅಧ್ಯಯನವನ್ನು ಕೈಗೊಳ್ಳುವವರಿಗೆ ಇದು ಒಂದು ಮಾದರಿಯಾಗಲಿ ಎಂದು ಹಾರೈಸುತ್ತೇನೆ.

ಈ ಅಧ್ಯಯನದಲ್ಲಿ ಪುಟ್ಟಣ್ಣನವರ ಎಲ್ಲ ಸ್ವತಂತ್ರ ಮತ್ತು ಅನುವಾದಿತ ಕೃತಿ ಗಳ ಸಾದ್ಯಂತ ಪರಿಚಯವಿದೆ, ವಿಮರ್ಶೆಯಿದೆ. ಸಾಹಿತ್ಯ ಲೋಕಕ್ಕೆ ಹೆಚ್ಚು ಪರಿಚಿತ ವಾದ ಅವರ 'ಮಾಡಿದ್ದುಣ್ಣೋ ಮಹಾರಾಯ', 'ಮುಸುಗ ತೆಗೆಯೇ ಮಾಯಾಂಗನೆ' ಹಾಗೂ ಅಷ್ಟು ಪರಿಚಿತವಾಗಿರದ 'ಅವರಿಲ್ಲದೂಟ' ಈ ಕಾದಂಬರಿಗಳು ಅವರ 'ಸಾಹಿತ್ಯಕ ಸಿದ್ಧಿಯ ಅತ್ಯುತ್ತಮ ಉದಾಹರಣೆಗಳು' ಎಂದು ಉಪಸಂಹಾರದಲ್ಲಿ ಹೇಳಲಾಗಿದೆ. ಅಲ್ಲದೆ, 'ಕಾದಂಬರಿ, ಜೀವನಚರಿತ್ರೆ, ಸಂಶೋಧನೆ, ಪತ್ರರಚನೆ, ಲೇಖನ ವ್ಯವಸಾಯಗಳಲ್ಲಿ ಅವರದು ಮೊದಲವರ್ಗದ ಫಸಲು' ಎಂದೂ ಪ್ರಶಂಸಿಸ ಲಾಗಿದೆ. ಕನ್ನಡವು ಆಧುನಿಕ ಕ್ಷಿತಿಜದಲ್ಲಿ ಇನ್ನೂ ಮೂಡುವುದರಲ್ಲಿದ್ದ ಕಾಲದಲ್ಲಿ ಕತ್ತಲೆ ಯನ್ನು ಬದಿಗೆ ಸರಿಸಿ ಬರುವ ಬೆಳಕು ಅಚ್ಚರಿಯನ್ನು ಹೊಮ್ಮಿಸುತ್ತದಾದರೂ ಚಿರಂತನವಾದ ಸಾಹಿತ್ಯಿಕಮೂಲ್ಯಗಳನ್ನು ನಂಬುವವರಿಗೆ ಮೇಲಿನ ಪ್ರಶಂಸೆಯಲ್ಲಿ ಅತಿಶಯೋಕ್ತಿಯಿದೆ ಎಂದು ತೋರಬಹುದು. ಇನ್ನು ಕೆಲವರಿಗೆ ಇದು ಸರಿಯಾದ ತೀರ್ಮಾನವೆಂದೂ ಅನ್ನಿಸಬಹುದು. ಏನಿದ್ದರೂ ಶ್ರೀಮತಿ ಸುಜಾತಾ ಅವರು ತಮ್ಮ ಪ್ರಾಮಾಣಿಕವಾದ ಸಮೀಕ್ಷೆಯನ್ನು ಮಾಡಿ ಕೃತಾರ್ಥರಾಗಿದ್ದಾರೆ.

ಈ ಪುಸ್ತಕವನ್ನು ಕನ್ನಡಸಾಹಿತ್ಯದ ಅಭಿಮಾನಿಗಳೂ ಅಭ್ಯಾಸಿಗಳೂ ಆದರ ದಿಂದ ಸ್ವಾಗತಿಸುವರೆಂದು ನಾನು ಹಾರೈಸಿದ್ದೇನೆ.

೫–೫–೮೧

**ರಂ. ಶ್ರೀ. ಮುಗಳಿ**

ಬೆಂಗಳೂರು

# ಕೃತಜ್ಞತೆಗಳು

'ಎಂ. ಎಸ್. ಪುಟ್ಟಣ್ಣ : ಒಂದು ಅಧ್ಯಯನ' ಎಂಬ ಈ ಕೃತಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ನಾನು ಸಂಶೋಧನೆ ನಡೆಸಿ ಸಿದ್ಧಪಡಿಸಿದ ಪ್ರೌಢಪ್ರಬಂಧದ ಪರಿಷ್ಕೃತರೂಪ. ಪ್ರಕಟಣೆಯ ದೃಷ್ಟಿಯಿಂದ ಕೃತಿಯಲ್ಲಿ ಕೆಲವು ಅಗತ್ಯವಾದ ಬದಲಾವಣೆಗಳನ್ನು ಮಾಡಲಾಗಿದೆ. ಅನೇಕ ಹೊಸ ಸಂಗತಿಗಳನ್ನು ಸೇರಿಸಿದೆ. ಕೆಲವೆಡೆ ಸಂಗ್ರಹ ಮಾಡಲಾಗಿದೆ. ಅನುಬಂಧದಲ್ಲಿದ್ದ ಹಲವು ವಿಚಾರಗಳನ್ನು (ಪುಟ್ಟಣ್ಣನವರು ಬಳಸಿದ ಗಾದೆಗಳು, ನುಡಿಗಟ್ಟುಗಳು ಇತ್ಯಾದಿ) ತೆಗೆದುಹಾಕಲಾಗಿದೆ. ಅವುಗಳನ್ನು ಬೇರೆ ಕಡೆ ಪ್ರಕಟಿಸುವ ಉದ್ದೇಶವಿದೆ.

ಎಂ.ಎಸ್. ಪುಟ್ಟಣ್ಣನವರನ್ನು ಕುರಿತು ಸಂಶೋಧನೆ ಮಾಡಲು 7-2-1976 ರಿಂದ 7-2-1980 ರವರೆಗೆ ನಾಲ್ಕು ವರ್ಷಗಳ ಕಾಲ ವಿದ್ಯಾರ್ಥಿವೇತನವನ್ನು ನೀಡಿದ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳಿಗೆ ನಾನು ಆಭಾರಿಯಾಗಿದ್ದೇನೆ. ಈ ನಾಲ್ಕು ವರ್ಷಗಳ ಕಾಲ ನನಗೆ ಅಧ್ಯಯನದ ರಜೆಯನ್ನು ಕೊಟ್ಟ ಡಿ. ಬನುಮಯ್ಯ ಕಾಲೇಜಿನ ಅಧಿಕಾರಿಗಳಿಗೆ ಹಾಗೂ ಕರ್ನಾಟಕ ಕಾಲೇಜು ಶಿಕ್ಷಣದ ನಿರ್ದೇಶಕರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ನನ್ನ ಸಂಶೋಧನೆಯ ವಿಷಯವನ್ನು ಸೂಚಿಸಿದ್ದಲ್ಲದೆ ಮಾರ್ಗದರ್ಶನ ಮಾಡಲು ಒಪ್ಪಿ ನನ್ನ ಕೆಲಸಕ್ಕೆ ಪ್ರೋತ್ಸಾಹ ಕೊಟ್ಟವರು ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕ ನಿರ್ದೇಶಕರಾದ ಡಾ. ಹಾ. ಮಾ. ನಾಯಕರು. ನನ್ನ ಈ ನಾಲ್ಕು ವರ್ಷಗಳ ಸಂಶೋಧನೆಯ ಅವಧಿಯಲ್ಲಿ ಸತತ ಪರಿಶ್ರಮಕ್ಕೆ ಇರುವ ಬೆಲೆಯನ್ನು ಅವರಿಂದ ನಾನು ತಿಳಿದುಕೊಂಡಿದ್ದೇನೆ. ಪ್ರತಿಯೊಂದು ವಿಚಾರವನ್ನೂ ಅವರು ಚರ್ಚೆಗೆ ಒಳಪಡಿಸಿ ಅಗತ್ಯವಿದ್ದಲ್ಲೆಲ್ಲ ಸೂಚನೆಗಳನ್ನು ಕೊಟ್ಟಿದ್ದಾರೆ, ತಪ್ಪುಗಳನ್ನು ತಿದ್ದಿದ್ದಾರೆ ಹಾಗೂ ಧೈರ್ಯ ತುಂಬಿದ್ದಾರೆ. ವಿಮರ್ಶಾತ್ಮಕವಾಗಿ ನಿರ್ಣಯಗಳನ್ನು ತಲುಪುವ ಕಡೆಗಳಲ್ಲಿ ಹಲವು ಬಾರಿ ಅವರು ಭಿನ್ನಾಭಿಪ್ರಾಯವನ್ನು ಸೂಚಿಸಿದರೂ ಅಂತಿಮ ನಿರ್ಣಯವನ್ನು ನನ್ನ ಪಾಲಿಗೇ ಬಿಟ್ಟುಕೊಟ್ಟಿದ್ದಾರೆ. ಸಾಮಗ್ರಿ ಸಂಗ್ರಹಣದಲ್ಲಿ ಆಸಕ್ತಿ, ಸಂಗ್ರಹಿತ ವಿಷಯದ ಕ್ರಮಬದ್ಧ ಅಧ್ಯಯನ ಮತ್ತು ಬರವಣಿಗೆಯಲ್ಲಿ ವಿಮರ್ಶಾತ್ಮಕ ಎಚ್ಚರ ಹಾಗೂ ರಾಸಾಯನಿಕವಾದ ರಚನೆ (Writing as an organic whole) ಇವುಗಳ ಪ್ರಾಮುಖ್ಯವನ್ನು ಪ್ರತಿ ಘಟ್ಟದಲ್ಲೂ ತಿಳಿಸಿಕೊಟ್ಟಿದ್ದಾರೆ. ನನ್ನ ಪ್ರೌಢಪ್ರಬಂಧ ಅಚ್ಚಾಗುವಾಗ ಪ್ರತಿ ಹಂತದಲ್ಲೂ

ಹಲವು ಸೂಚನೆಗಳನ್ನು ಕೊಟ್ಟು ಉಪಕರಿಸಿದ್ದಾರೆ. ಕೆರೆಯ ನೀರನು ಕೆರೆಗೆ ಚೆಲ್ಲು ವಂತೆ ನನ್ನ ಈ ಕೃತಿಯನ್ನು ಅವರಿಗೆ ಅರ್ಪಿಸಲು ಇಚ್ಛಿಸಿದಾಗ ನನ್ನ ಮೇಲಿನ ಅಭಿ ಮಾನದಿಂದ ಒಪ್ಪಿದ್ದಾರೆ. ಅವರ ಶಿಷ್ಯತ್ವ ಒಂದು ಸೊಗಸಾದ ಅನುಭವ. ಅವರಿಗೆ ಕೃತಜ್ಞಳಾಗಿರುವುದು ನನ್ನ ಪಾಲಿನ ಸಂತೋಷವಾಗಿದೆ.

ಹಿರಿಯರಾದ ಡಾ. ರಂ. ಶ್ರೀ. ಮುಗಳಿಯವರು ನನ್ನ ಪ್ರೌಢಪ್ರಬಂಧವನ್ನು ಕೂಲಂಕಷವಾಗಿ ಓದಿ ಹಲವು ಸಲಹೆಗಳನ್ನಿತ್ತಿದ್ದಾರೆ, ನನ್ನ ಬಗೆಗೆ ಭರವಸೆಯ, ಪ್ರೀತಿಯ ನುಡಿಗಳಿಂದ ತುಂಬಿದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಅವರ ಉಪಕಾರ ಮರೆಯಲಾಗದುದು.

ಮುಂಬಯಿನ 'ತಾತಾ ಫಂಡಮೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್'ನ ಗ್ರಂಥಪಾಲ ರಾದ ಡಾ. ಶ್ರೀನಿವಾಸ ಹಾವನೂರರು ಪುಟ್ಟಣ್ಣನವರನ್ನು ಕುರಿತ ಹಲವು ಮಾಹಿತಿ ಗಳನ್ನು ದೊರಕಿಸಿಕೊಟ್ಟಿದ್ದಾರೆ. ದುರ್ಲಭವಾಗಿದ್ದ ಹಲವು ಗ್ರಂಥಗಳನ್ನು, ಲೇಖನ ಗಳನ್ನು ನಾನು ಕೇಳಿದಷ್ಟು ಕಾಲ ಕೊಟ್ಟಿದ್ದಾರೆ. ನನ್ನ ಪ್ರೌಢಪ್ರಬಂಧದ ಹಸ್ತಪ್ರತಿ ಯನ್ನು ಓದಿ ಹಲವು ಸಲಹೆಗಳನ್ನು ಕೊಟ್ಟಿದ್ದಾರೆ. ಅವರಿಗೆ ನಾನು ಋಣಿ ಯಾಗಿದ್ದೇನೆ.

ಎಂ. ಎಸ್. ಪುಟ್ಟಣ್ಣನವರನ್ನು ಕುರಿತಂತೆ ಸಾಮಗ್ರಿ ಸಂಗ್ರಹಣಕಾರ್ಯದಲ್ಲಿ ನಾನು ಕೋರಿದ ಎಲ್ಲ ಸಹಕಾರವನ್ನು ಪುಟ್ಟಣ್ಣನವರ ಮಕ್ಕಳು, ಮೊಮ್ಮಕ್ಕಳು ಹಾಗೂ ಬಂಧುಗಳು ನೀಡಿದ್ದಾರೆ. ಅವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಅದ ರಲ್ಲೂ ಶ್ರೀ ಎಂ. ಪಿ. ಕೃಷ್ಣಸ್ವಾಮಿ, ಶ್ರೀ ಎಸ್. ಎಲ್. ಸಿಂಹ, ಶ್ರೀ ಎಂ. ಎಸ್. ಜಯಸಿಂಹ, ಶ್ರೀಮತಿ ಲಕ್ಷ್ಮಮ್ಮ, ಶ್ರೀಮತಿ ಸರಸ್ವತಮ್ಮ, ಶ್ರೀಮತಿ ವಿಮಲಾ- ಶಾಸ್ತ್ರಿ, ಶ್ರೀಮತಿ ಇಂದಿರಾಶಾಸ್ತ್ರಿ, ಶ್ರೀಮತಿ ಶ್ಯಾಮಲಾ ಬಾಪುಸೀತಾರಾಮ್, ಶ್ರೀಮತಿ ಪದ್ಮಾರಾವ್ ಹಾಗೂ ಶ್ರೀ ವಾಸುದೇವರಾವ್ ಇವರುಗಳ ಸಹಾಯವಿಲ್ಲ ದಿದ್ದರೆ ನನ್ನ ಪ್ರೌಢಪ್ರಬಂಧದ ಮೊದಲ ಅಧ್ಯಾಯ ತನ್ನ ಪ್ರಕೃತಸ್ವರೂಪವನ್ನು ಹೊಂದಿರುತ್ತಿರಲಿಲ್ಲ. ಇವರೆಲ್ಲರೂ ನಾನು ಕೇಳಿದ, ಪುಟ್ಟಣ್ಣನವರನ್ನು ಕುರಿತ, ಉಪಲಬ್ಧವಾದ ಎಲ್ಲ ವಿವರಗಳನ್ನೂ ಒದಗಿಸಿದ್ದಾರೆ. ಅವರುಗಳ ಮನೆಗಳಲ್ಲಿದ್ದ ಗ್ರಂಥರಾಶಿ ನನ್ನದು ಎಂಬ ಅನಿಸಿಕೆ ನನಗೆ ಬರುವಂತೆ ನಡೆದುಕೊಂಡಿದ್ದಾರೆ. ಇವರು ಗಳಿಗೆ ನಾನು ಬಹಳವಾಗಿ ಋಣಿಯಾಗಿದ್ದೇನೆ. ಲಂಡನ್ನಿನಲ್ಲಿ ನೆಲೆಸಿದ್ದ ಶ್ರೀ ಎಂ. ಪಿ. ಎಸ್. ರಾವ್ (ಈಗ ದಿವಂಗತರು) ಹಲವು ಮಾಹಿತಿಗಳನ್ನು ದೊರಕಿಸಿಕೊಟ್ಟದ್ದನ್ನೂ ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಪುಸ್ತಕ ಪ್ರಕಟಣೆಯ ಪರಿಶ್ರಮದ ಸವಿ ಬಲ್ಲವರಿಗೆಲ್ಲ ವೇದ್ಯವಾದುದೇ. ಇಂಥ ಕಠಿಣಕಾರ್ಯವನ್ನು ಕೈಗೊಂಡು ಐಬಿಎಚ್ ಪ್ರಕಾಶನದವರು ಪುಸ್ತಕವನ್ನು ಅಂದ ವಾಗಿ ಹೊರತಂದಿದ್ದಾರೆ. ಹೊಸಬರಿಗೆ ಅವರು ನೀಡುವ ಇಂಥ ಪ್ರೋತ್ಸಾಹ ಈ ದಿನಗಳಲ್ಲಿ ಅತಿವಿರಳವಾದುದು. ಇದಕ್ಕಾಗಿ ಶ್ರೀ ಜಿ. ಕೆ. ಅನಂತರಾಮ್ ಅವರಿಗೆ ನಾನು

ಕೃತಜ್ಞಳು. ಮುದ್ರಣಕಾರ್ಯದಲ್ಲಿ ಶ್ರೀ ಎಚ್. ಎಸ್. ನಾರಾಯಣರಾಯರು ವಿಶೇಷಗಮನವನ್ನು ಕೊಟ್ಟಿದ್ದಾರೆ. ಕರಡುತಿದ್ದುವ ಕಾರ್ಯದಲ್ಲಿ ಐಬಿಎಚ್ ಕಾರ್ಯಾಲಯದ ಶ್ರೀ ಆರ್. ಎಸ್. ರಾಮರಾಯರ ಸಹಾಯವನ್ನು ಪಡೆದಿದ್ದೇನೆ. ಇವರಿಬ್ಬರ ಸಹಕಾರವನ್ನು ಮರೆಯುವಂತಿಲ್ಲ. ಅಂಥಾದ್ದರಲ್ಲೂ ಉಳಿದಿರುವ ಮುದ್ರಣದೋಷಗಳಿಗೆ [ಬೆರಗೊಳಿಸುವ (ಬೆರಗುಗೊಳಿಸುವ) ಪು. 104, ಇಪ್ಪಾದರೂ (ಇಷ್ಟಾದರೂ) ಪು. 189, ವಿಧ್ಯಾಭ್ಯಾಸದ (ವಿದ್ಯಾಭ್ಯಾಸದ) ಪು. 316 ಮುಂತಾದುವು] ನಾನೇ ಹೊಣೆಯಾಗಿದ್ದೇನೆ.

ಬೆಂಗಳೂರಿನ ಎಂ.ಎಸ್. ಸ್ಟುಡಿಯೋದವರೂ ಶ್ರೀ ಎಚ್. ಎಸ್. ಪ್ರಭಾಕರ್ ಅವರೂ ಅಗತ್ಯವಾದ ಚಿತ್ರಗಳನ್ನು ತೆಗೆದುಕೊಟ್ಟಿದ್ದಾರೆ. ಇವರುಗಳಿಗೆ ನಾನು ಆಭಾರಿಯಾಗಿದ್ದೇನೆ.

ನಾನು ಸಂಶೋಧನೆಯನ್ನು ಪ್ರಾರಂಭಿಸಿದಾಗಿನಿಂದ ಈ ಕೃತಿಯ ಪ್ರಕಟಣೆಯವರೆಗೆ ಎಲ್ಲ ರೀತಿಯ ಪ್ರೋತ್ಸಾಹವನ್ನು ನೀಡುತ್ತಾ ಬಂದಿರುವ ನನ್ನ ಪತಿ ಶ್ರೀ ಎಸ್. ಎಂ. ರಮಾನಂದ ಶೆಟ್ಟಿ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ಕೇವಲ ಸಾಂಪ್ರದಾಯಿಕವಾದ ಕಾರ್ಯವಾಗಿಲ್ಲ. ಅವರ ನೆರವಿಲ್ಲದೆ ಹೋಗಿದ್ದರೆ ಈ ಕಾರ್ಯ ನೆರವೇರುತ್ತಿರಲಿಲ್ಲ ಎಂದಷ್ಟೇ ಹೇಳಬಲ್ಲೆ.

**ಎಚ್. ಎಸ್. ಸುಜಾತಾ**

53, 'ಸುಹಾಸ', 6 ನೇ ಬ್ಲಾಕ್
ತೊಣಚಿಕೊಪ್ಪಲ್ ಲೇ ಔಟ್
ಮೈಸೂರು – 570009

ಮೇ 7,1981




# ಸಂಕ್ಷಿಪ್ತಾಕ್ಷರಗಳು

## ಗ್ರಂಥಗಳು

| | | |
|---|---|---|
| ಅ | — | ಅವರಿಲ್ಲದೂಟ |
| ಇ. ಸಂ. ಚ. | — | ಇಕ್ಕೇರಿ ಸಂಸ್ಥಾನದ ಚರಿತ್ರೆ |
| ಕ. ಒಂ. ಪು. | — | ಕನ್ನಡ ಒಂದನೆಯ ಪುಸ್ತಕವು |
| ಕ. ಲೇ. ಲ. | — | ಕನ್ನಡ ಲೇಖನ ಲಕ್ಷಣ |
| ಕಾಂ. ಚ. | — | ಕಾಂಪೂಷನ ಚರಿತ್ರೆ |
| ಕು. ರಾ. ಚ. | — | ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ |
| ಗು. ಪಾ. ಪಾ. | — | ಗುಮ್ಮನಾಯಕನ ಪಾಳಯದ ಪಾಳಯಗಾರರು |
| ಚಿ. ಪಾ. | — | ಚಿತ್ರದುರ್ಗದ ಪಾಳಯಗಾರರು |
| ಛ. ಶಿ. ಮ. | — | ಛತ್ರಪತಿ ಶಿವಾಜಿ ಮಹಾರಾಜ |
| ಜ. ಚ. | — | ಜಯಸಿಂಹರಾಜ ಚರಿತ್ರೆ |
| ನೀ. ಚಿಂ. | — | ನೀತಿಚಿಂತಾಮಣಿ |
| ಪಾ. | — | ಪಾಳಯಗಾರರು |
| ಪು. ಹೇ. ಕ. | — | ಪುಟ್ಟಣ್ಣ ಹೇಳಿದ ಕಥೆಗಳು |
| ಪೇ. ಮಾ. | — | ಪೇಟೆಮಾತೇನಜ್ಜಿ |
| ಮ. ಗ. ಚ. | — | ಮಹಮೂದ್ ಗವಾನನ ಚರಿತ್ರೆ |
| ಮಾ. ಮ. | — | ಮಾಡಿದ್ದುಣ್ಣೋ ಮಹಾರಾಯ |
| ಮು. ತೆ. ಮಾ. | — | ಮುಸುಗ ತೆಗೆಯೇ ಮಾಯಾಂಗನೆ |
| ಸ. ಜಂ. ಚ. | — | ಸರ್ ಸಾಲಾರ್ ಜಂಗನ ಚರಿತ್ರೆ |
| ಸು. ಮ. ಚ. | — | ಸುಮತಿ ಮದನಕುಮಾರರ ಚರಿತ್ರೆ |
| ಹಾ. ಪಾ. | — | ಹಾಗಲವಾಡಿ ಪಾಳಯಗಾರರು |
| ಹಾ. ತಾ. | — | ಹಾತಿಂ ತಾಯ್ |
| ಹಿಂ. ಚ. ದ. 1 | — | ಹಿಂದೂ ಚರಿತ್ರ ದರ್ಪಣ (ಭಾಗ 1) |
| ಹಿಂ. ಚ. ದ. 2 | — | ಹಿಂದೂ ಚರಿತ್ರ ದರ್ಪಣ (ಭಾಗ 2) |
| ಹಿಂ. ಚ. ಸಂ. | — | ಹಿಂದೂ ಚರಿತ್ರ ಸಂಗ್ರಹ |
| ಹೇ. ವಿ. | — | ಹೇಮಚಂದ್ರರಾಜ ವಿಲಾಸ |
| ಹೇ. | — | ಹೇಮಲತ |

**ಪತ್ರಿಕೋದ್ಯಮ**

ಹಿ. ಮಾ. — ಹಿತಬೋಧಿನಿ ಮಾಸಪತ್ರಿಕೆ

**ಲೇಖನಗಳು**

ಅ. ಶಿ. — ಅಪ್ರಶಿಖ
ಇ.ವಿ.ದಿ.ಮಾ.ಹು.— ಇನಾಂ ಗ್ರಾಮಗಳ ವಿಷಯದಲ್ಲಿ ದಿವಾನರವರು ಮಾಡಿದ ಹುಕ್ಕುಂ
ಎ. ಪು. — ಎರಡನೇ ಪುಲಿಕೇಶಿ
ಕ. ಕೆ. ವಿ. — ಕನ್ನಡ : ಕೆಲವು ವಿಚಾರಗಳು
ಕ.ಮಾ.ಯಂ.ಜಾ. — ಕಲಾಪತ್ತು ಮಾಡುವ ಯಂತ್ರ ಮಾಡಿದವನು ಜಾನ ಹೀತ ಕೇಟನು
ಗು. ಶಿ. ಸಂ. — ಗುರು ಶಿಷ್ಯ ಸಂಬಂಧ
ಗ್ರಾ. ಪಾ. — ಗ್ರಾಮಪಾಥೇಯ
ಚಂ. — ಚಂದ್ರಗುಪ್ತ
ಜೇ. ವಾ. — ಜೇಮ್ಸ್ ವಾಟ್
ದಿ. ರಂ. — ದಿವಾನ ರಂಗಾಚಾರ್ಲು
ನಂ. ರೇ. — ನಂಜನಗೂಡು ರೇಲ್ ರಸ್ತೆ
ನ. ಮ. ದೀ. — ನರಕಚತುರ್ದಶಿ ಮತ್ತು ದೀಪಾವಳಿ
ನ. — ನವರಾತ್ರಿ
ನಿ. ಪ್ರ. — ನಿರಂಕುಶಪ್ರಭುತ್ವ
ಪ. — ಪದವಿಯುಳ್ಳವರು
ಪಿ. ಅ. — ಪಿಸುಣನಾದ ಅಧಿಕಾರಿ
ಪೀ. — ಪೀಲ್
ಪು. ವ. — ಪುಷ್ಯಮಿತ್ರ – ವಸುಮಿತ್ರ
ಪ್ಯಾ. ಜ. ಚ. — ಪ್ಯಾಲಿಸ್ಸಿಯ ಜನ್ಮಚರಿತೆ
ಪ್ರ. ಸ. — ಪ್ರಜಾಪ್ರತಿನಿಧಿ ಸಭೆ
ಮಿ. ಕು. — ಮಿತ್ರರನ್ನು ಕುರಿತು
ಮು. ಒ. ಬಿ. — ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ ಬಿಲ್ಲುಗಾರಿಕೆ
ಮೈ. ಪ್ರ. ಸ. — ಮೈಸೂರು ಪ್ರಜಾಪ್ರತಿನಿಧಿಗಳ ಸಭೆ
ಮೈ.ಸೀ.ನ.ವೃ. — ಮೈಸೂರು ಸೀಮೆಯಲ್ಲಿ ನಶಿಸಿಹೋದ ವೃತ್ತಿಗಳು
ರೇ. ಅ. — ರೇಲ್ವೇ ಅಭಿವೃದ್ಧಿ

| | | |
|---|---|---|
| ಲಂ. | — | ಲಂಚ |
| ವಿ. ಮ. ಚ. | — | ವಿಲಿಯಂ ಮರಡಾಕನ ಚರಿತ್ರೆ |
| ಪ. ಸ್ವ. ಮ್ಯೂ. | — | ಪಹರುಗಳ ಸ್ವತಂತ್ರಾಡಳಿತ, ಅಥವಾ ಮ್ಯೂನಿಸಿ ಪ್ಯಾಲಿಟಿ |
| ಸ. | — | ಸಮುದ್ರಗುಪ್ತ |
| ಸ. ನಿ. ಭಾ. | — | ಸರಕಾರದ ನಿಬಂಧನೆಗಳ ಭಾಷಾಂತರ |
| ಸ್ಕಾಂ. | — | ಸ್ಕಾಂದಗುಪ್ತ |
| ಹ. 1 | — | ಹಣ |
| ಹ. 2. | — | ಹರ್ಷ |
| ಹಿ. | — | ಹಿತಬೋಧಿನಿ |
| ಹಿ. ಮಂ. | — | ಹಿಮ, ಮಂಜು |
| h. k. t. | — | A hunter killing a tiger |
| A. L. A. M. | — | Aliya Lingaraja Arasu of Mysore |
| D. V. N. | — | Dodda Vasantha Naik |
| G. B. | — | Gangabai Badami |
| G. | — | Gudagatti |
| H.M.N.h.b. | — | Hiri Medakeri Naik as a hero in battles |
| K. N. | — | Kadarappa Naik |
| M.S.R.k.t. | — | Meer Meeran Srinivasa Rau killing a tiger |
| R. S. | — | Ranabir Singh |
| C. O. K. | — | The Condition of Our Kannada |
| G. A. S. | — | The Great Athlet of Srirangapattana |
| L. h. T. S. | — | The Last hour of Tippu Sultan |
| H. V. N. | — | The late Mr. H. V. Nanjundayya C.I.E. |
| T. N. C. | — | Thimmanna Naik of chitradurg |
| V. C. | — | Vobavva of Chitradurg. |



# ಪರಿವಿಡಿ

ನೌಕರಿಗಳ ನಡುವಿನ ಪರಸ್ಪರ ಪ್ರಭಾವ, ಪರಿಣಾಮಗಳು ಯಾವುವು, ಅವರ ಸಾಧನೆ ಹಾಗೂ ಮಿತಿಗಳ ಸ್ವರೂಪ ಎಂಥದು ಎಂಬ ವಿಚಾರಗಳನ್ನು ದೃಷ್ಟಿಯಲ್ಲಿ ಇರಿಸಿಕೊಂಡು ಈ ಅಧ್ಯಯನವನ್ನು ನಡೆಸಲಾಗಿದೆ.

ಪುಟ್ಟಣ್ಣನವರನ್ನು ಹೊಸಗನ್ನಡದ ಮಹತ್ತ್ವದ ಬರಹಗಾರರೆಂದು ವಿಮರ್ಶಕರು ಗುರುತಿಸಿದ್ದರೂ ಅವರನ್ನು ಕುರಿತ ಪೂರ್ಣ ಪ್ರಮಾಣದ ಅಧ್ಯಯನ ಇಲ್ಲಿಯವರೆಗೂ ನಡೆದಿಲ್ಲ. ಇಲ್ಲಿನ ಅಧ್ಯಯನ ಆ ಕೊರತೆಯನ್ನು ತುಂಬಲು ಶ್ರಮಿಸಿದ ಒಂದು ಪ್ರಯತ್ನ.

# ಜೀವನ

ಎಂ. ಎಸ್. ಪುಟ್ಟಣ್ಣನವರ ತಾತ ಲಕ್ಷ್ಮೀಕಾಂತಭಟ್ಟರು ಚೆನ್ನಪಟ್ಟಣದ ನಾಗವಾರ ಗ್ರಾಮದಲ್ಲಿ ಕೆಲವು ಕಾಲ ನೆಲೆಸಿದ್ದು ಹಲವು ವರ್ಷಗಳ ಅನಂತರ ಚೆನ್ನಪಟ್ಟಣಕ್ಕೆ ಬಂದು ನೆಲೆಸಿದವರು. ಅವರು ವೇದಶಾಸ್ತ್ರಗಳಲ್ಲಿ ಪಾರಂಗತರಾಗಿದ್ದುದಲ್ಲದೆ, ಧರ್ಮದ ಮೂಲಸೂತ್ರಗಳನ್ನು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತಂದವರು. ಜ್ಯೋತಿಷದಲ್ಲಿ ಅದ್ವಿತೀಯ ಪಂಡಿತರೆನ್ನಿಸಿಕೊಂಡವರು. ಆಗಿನ ಮೈಸೂರು ಮಹಾರಾಜರು ಇವರ ವಿದ್ವತ್ತನ್ನು ಮೆಚ್ಚಿ ಇಪ್ಪತ್ತು ಎಕರೆ ಜಮೀನನ್ನು ಬಹುಮಾನವಾಗಿ ಕೊಟ್ಟಿದ್ದರು. ರಾಜಮರ್ಯಾದೆ ದೊರೆತ ಮೇಲೂ ಲಕ್ಷ್ಮೀಕಾಂತಭಟ್ಟರು ತಮ್ಮ ವಿನಯ, ಸೌಶೀಲ್ಯಗಳಿಗೆ ಯಾವ ಕೊರೆಯೂ ಬಾರದಂತೆ ನೋಡಿಕೊಂಡರು. ದಾನಧರ್ಮಗಳಿಗೆ ಹೆಸರಾದ ಇವರ ಮನೆಯಲ್ಲಿ ಅತಿಥಿ ಅಭ್ಯಾಗತರು ಯಾವಾಗಲೂ ತುಂಬಿರುತ್ತಿದ್ದರು. ಪ್ರತಿನಿತ್ಯ ಪರಸ್ಥಳದವರಿಗೆ ಊಟೋಪಚಾರಗಳು ನಡೆಯುತ್ತಿದ್ದವು. ತಮ್ಮ ನೀತಿಯುತ ನಡವಳಿಕೆಯಿಂದ ಸುತ್ತಮುತ್ತಲಿನ ಜನರಿಗೆಲ್ಲ ಬೇಕಾಗಿದ್ದ ಲಕ್ಷ್ಮೀಕಾಂತಭಟ್ಟರ ಬಳಿ ಸಲಹೆ ಕೇಳಲು ಆಗಿನ ಅನೇಕ ರಾಜಮನೆತನದ ಅಧಿಕಾರಿಗಳು ಬರುತ್ತಿದ್ದರು.

ಲಕ್ಷ್ಮೀಕಾಂತಭಟ್ಟರಿಗೆ ಇಬ್ಬರು ಗಂಡುಮಕ್ಕಳು, ನರಹರಿಭಟ್ಟರು, ಸೂರ್ಯನಾರಾಯಣ ಭಟ್ಟರು. ಇಬ್ಬರೂ ವೈದಿಕವೃತ್ತಿಯನ್ನು ಅವಲಂಬಿಸಿದವರು. ಜ್ಯೋತಿಷ, ಪೂರ್ವಾಪರಪ್ರಯೋಗಗಳಲ್ಲಿ ತಂದೆಯಷ್ಟಲ್ಲದಿದ್ದರೂ ತಕ್ಕಮಟ್ಟಿಗೆ ಪ್ರಖ್ಯಾತರಾಗಿದ್ದವರೇ. ತಂದೆಯಂತೆಯೇ ಸ್ವತಂತ್ರ ಜೀವನದಲ್ಲಿ ನಂಬಿಕೆಯಿಟ್ಟು ಅದರಂತೆ ನಡೆದುಕೊಂಡರು. ಸೂರ್ಯನಾರಾಯಣ ಭಟ್ಟರ ಒಬ್ಬನೇ ಮಗ, ಎಂ.ಎಸ್. ಪುಟ್ಟಣ್ಣನವರು.

ಎಂ. ಎಸ್. ಪುಟ್ಟಣ್ಣನವರು 21–11–1854 ರಲ್ಲಿ (ಆನಂದನಾಮ ಸಂವತ್ಸರದ ಬಲಿಪಾಡ್ಯಮಿ) ತಾಯಿಯ ತವರಾದ ಮೈಸೂರಿನಲ್ಲಿ ಜನಿಸಿದರು. ಹುಟ್ಟಿದ ಹತ್ತುದಿನಗಳ ಒಳಗೆ, ಇನ್ನೂ ಪ್ರಸೂತಿಗೃಹದಲ್ಲಿ ಇದ್ದಾಗಲೇ ಇವರ ತಾಯಿ ಕಣ್ಣು ಮುಚ್ಚಿದರು. ಮುಂದೆ ಇವರ ಸೋದರಮಾವ (ತಾಯಿಯ ಅಣ್ಣ) ಪೇಟೆ ಅಣ್ಣಯ್ಯಶಾಸ್ತ್ರಿಗಳು ಇವರನ್ನು ಸಾಕಿದರು. ಅಜ್ಜಿಯ ಪಾಲನೆಯಲ್ಲಿ, ವಿಧವೆಯಾಗಿದ್ದ ಸೋದರತ್ತೆಯ ಮಮತೆಯ ಮಡಿಲಲ್ಲಿ ಪುಟ್ಟಣ್ಣನವರು ಬೆಳೆದರು. ಕೆಲವು ದಿನಗಳ ಮೇಲೆ ಎರಡನೇ ಮದುವೆ ಮಾಡಿಕೊಂಡ ತಂದೆಗೂ ಬಾಲಕ ಪುಟ್ಟಣ್ಣನಿಗೂ ಹೆಚ್ಚಿನ ಸಂಪರ್ಕ ಉಂಟಾಗಲೇ ಇಲ್ಲ. ಪುಟ್ಟಣ್ಣನವರ ತಂದೆಗೆ ಸಾಂಸಾರಿಕ ಸುಖದ ಯೋಗವಿರಲಿಲ್ಲ. ಎರಡನೇ ಹೆಂಡತಿಯೂ ಸತ್ತು, ಆಕೆಯಲ್ಲಿ ಜನಿಸಿದ್ದ ಒಬ್ಬ ಹೆಣ್ಣುಮಗಳು

ಹೊಳೆಯಲ್ಲಿ ಮುಳುಗಿ ಸತ್ತಮೇಲೆ ಮೊದಲ ಮಗನ ವಾಂಛಲ್ಯ ಕೈ ಬೀಸಿ ಕರೆಯಿತು. ಆದರೆ ಹನ್ನೆರಡು ವರುಷದ ಬಾಲಕ ಪುಟ್ಟಣ್ಣ ಮಾತ್ರ ಯಾರು ಎಷ್ಟೇ ತಿಳಿಹೇಳಿದರೂ ತಂದೆಯ ಬಳಿ ಹೋಗಲೊಪ್ಪದೆ ಚಂಡಿಹಿಡಿದು ಅಜ್ಜಿ, ಸೋದರಮಾವ ಮತ್ತು ಅತ್ತೆ ಇವರ ಅಕ್ಕರೆಯ ನೆರಳಿನಲ್ಲೇ ಉಳಿದ. ಯಾವ ಮಮತೆಯ ಬಂಧನವೂ ಇಲ್ಲದ ತಂದೆಗೆ ಮಾತ್ರ ಇದು ಸಹಿಸಲಾಗದ ಪೆಟ್ಟಾಯಿತು. ಸಂಸಾರಕ್ಕೆ ಹೇಸಿ, ಎಲ್ಲವನ್ನೂ ದಾನಮಾಡಿ, ಕಾಶಿಗೆ ಹೊರಟುಹೋದರು. ಅವರ ಒಬ್ಬ ತಂಗಿಯೂ ಅಣ್ಣನೊಡನೆ ಕಾಶಿಗೆ ತೆರಳಿದರು. ಮತ್ತೆ ಇಡೀ ಜೀವನದಲ್ಲಿ ತಂದೆಯ ಮುಖದರ್ಶನ ಮಗನಿಗೆ ಆಗಲಿಲ್ಲ. ಕಾಶಿಯಲ್ಲಿ ತಂದೆ ಸನ್ಯಾಸ ಸ್ವೀಕರಿಸಿದರೆಂಬ ಸುದ್ದಿ ಮಾತ್ರ ತಿಳಿಯಿತು.

ಎಂ. ಎಸ್. ಪುಟ್ಟಣ್ಣನವರ ನಿಜವಾದ ನಾಮಧೇಯ ಲಕ್ಷ್ಮೀನರಸಿಂಹ ಶಾಸ್ತ್ರೀ. ಎಳೆವರೆಯದಲ್ಲಿ ಬೆಳ್ಳಗೆ ಮುದ್ದಾಗಿದ್ದ ಚುರುಕುಗಣ್ಣುಗಳ ತಬ್ಬಲಿ ಮಗುವನ್ನು ನೋಡಿದವರೆಲ್ಲ ಪ್ರೀತಿಯಿಂದ 'ಪುಟ್ಟಣ್ಣ', 'ಪುಟ್ಟಣ್ಣ' ಎಂದು ಕರೆದು ಆ ಹೆಸರೇ ರೂಢಿಗೆ ಬಂತು. ಪುಟ್ಟಣ್ಣನವರ ಬಾಲ್ಯ ಬಹು ಸುಗಮವಾಗಿ ಇಲ್ಲದಿದ್ದರೂ ತಾಪತ್ರಯದಿಂದ ಕೂಡಿದ್ದಾಗಿರಲಿಲ್ಲ. ಸುತ್ತಲಿನ ಜನಕ್ಕೆ ತಬ್ಬಲಿ ಎಂಬ ಕನಿಕರವಿದ್ದರೂ ತಪ್ಪು ಮಾಡಿದಾಗ ಒಡನೆಯೇ ಶಿಕ್ಷೆ ಕಾದಿರುತ್ತಿತ್ತು. ಅಂತಹ ಹೊತ್ತಿನಲ್ಲಿ ಪುಟ್ಟಣ್ಣನವರ ಸೋದರತ್ತೆ ಅಮ್ಮಣ್ಣತ್ತೆ ಹುಡುಗನನ್ನು ಮಡಿಲಲ್ಲಿ ಕೂರಿಸಿಕೊಂಡು ಅನೇಕ ಪುರಾಣ ಪುಣ್ಯ ಕತೆಗಳನ್ನು ಹೇಳುವರು, ಲಾಲಿಸಿ ಸಮಾಧಾನ ಮಾಡುವರು. ತಾಯ ಮಮತೆಯನ್ನು ಬಯಸುತ್ತಿದ್ದ ಮಗು ಆಡಿಸಿದವರ ಕೈ ಕೂಸಾಗಿ, ಮನೆಯವರೆಲ್ಲರ ಕನಿಕರ, ಮೆಚ್ಚುಗೆ, ಪ್ರೀತಿಗಳಿಗೆ ಪಾತ್ರವಾಯಿತು. ಸುಮಾರು 125 ವರ್ಷಗಳ ಹಿಂದಿನ ಮಡಿಹುಡಿ, ಆಚಾರ ವಿಚಾರಗಳ ಬಗೆಗೆ ಕಟ್ಟುನಿಟ್ಟಿನ ವಾತಾವರಣವಿದ್ದ ಸಂಪ್ರದಾಯನಿಷ್ಠ ಸಮಾಜದ ನಡುವೆ ಹೆಚ್ಚುಕಡಿಮೆ ಅಂತರ್ಮುಖಿಯಾಗಿ ಅವರ ಬಾಲ್ಯ ಕಳೆಯಿತು.

ಪ್ರಾರಂಭದಲ್ಲಿ ಪಂತರ ಖಾಸಗಿ ಮಠಗಳಲ್ಲಿ ಪುಟ್ಟಟ್ಟನವರ ವಿದ್ಯಾಭ್ಯಾಸ ನಡೆಯಿತು. ಆಗ ರೂಢಿಯಲ್ಲಿದ್ದ ಪಂತರ ಶಾಲೆಗಳಲ್ಲಿ ಮರಾಠಿಯನ್ನು ಹೇಳಿಕೊಡುತ್ತಿದ್ದರು. ಮೈಸೂರು ಅರಮನೆಯಲ್ಲಿ ಕೂಡ ಮರಾಠಿ ವಿದ್ವಾಂಸರು ತುಂಬಿದ್ದರು. ಸಿಪಾಯಿದಂಗೆಗೆ ಕೆಲವು ವರುಷಗಳ ಮೊದಲು ಮೈಸೂರನ್ನು ಮರಾಠರು ಆಕ್ರಮಿಸುವರೆಂದು ಕೆಲವು ಜನರ ಭಾವನೆಯಾಗಿತ್ತು. ಶಾಲೆಗಳಲ್ಲಿ ಮರಾಠಿ ಕಲಿಯುವುದು ಬಳಕೆಯ ಮಾತಾಗಿತ್ತು. ಅನಂತರ ರಾಜಾಸ್ಕೂಲಿನಲ್ಲಿ (ಈಗ ಅದು ಮಹಾರಾಜಾ ಕಾಲೇಜು) ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದರು. ಬಿ.ಎ. ಪರೀಕ್ಷೆಯ ವ್ಯಾಸಂಗವನ್ನು ಪ್ರಾರಂಭಿಸಿದ್ದರು. ಅಷ್ಟರಲ್ಲಿ ಧಾತು–ಈಶ್ವರ ಸಂವತ್ಸರಗಳ ಕ್ಷಾಮ ಬಂದಿತು. ಮುಂದಿನ ವ್ಯಾಸಂಗ ಆ ಪರಿಸ್ಥಿತಿಯಲ್ಲಿ ಕಷ್ಟಕರವೆನಿಸಿದುದರಿಂದ, ವ್ಯಾಸಂಗವನ್ನು ನಿಲ್ಲಿಸಿ ಉದ್ಯೋಗವನ್ನು ಹುಡುಕಬೇಕಾಯಿತು. ಪುಟ್ಟಣ್ಣನವರ ಸೋದರಮಾವ ಆ ವೇಳೆಗೆ ದಿವಂಗತರಾದುದರಿಂದ ಸಂಸಾರದ ಹೊಣೆ ಪೂರ್ತಿಯಾಗಿ ಅವರ ಮೇಲೆ ಬಿತ್ತು.

ಆ ವೇಳೆಗೆ ಬೆಳಗಾಂ ಪ್ರೌಢಶಾಲೆಯಲ್ಲಿ ಅವರನ್ನು ಸಹಾಯೋಪಾಧ್ಯಾಯರಾಗಿ

ನೇಮಿಸಿದ್ದಾಗಿ ಬೊಂಬಾಯಿ ಸರ್ಕಾರದಿಂದ ಕೆಲಸದ ಆಜ್ಞೆ ಬಂದಿತ್ತು. ಮೈಸೂರು ಬೆಂಗಳೂರುಗಳಿಗೆ ಕೂಡ ರೈಲುಮಾರ್ಗ ಇಲ್ಲದಿದ್ದ ಆ ಕಾಲದಲ್ಲಿ ಬೆಳಗಾಂ ಎಂದರೆ ಪರದೇಶ ಎಂಬ ಭಾವನೆ ಇತ್ತು. ಹೀಗಾಗಿ ಪುಟ್ಟಣ್ಣನವರು ಕೂಡಲೇ ಒಪ್ಪಿಗೆ ಕೊಡಲಿಲ್ಲ. ಅಷ್ಟರಲ್ಲಿ ಅವರಿಗೆ ಕೋಲಾರದ ಪ್ರೌಢಶಾಲೆಯಲ್ಲಿ ಸಹಾಯೋಪಾಧ್ಯಾಯರಾಗಿ ನೇಮಿಸಿದ ಮೈಸೂರು ಸರ್ಕಾರದ ಆಜ್ಞೆ ಬಂದಿತು. ಹೀಗೆ ಪುಟ್ಟಣ್ಣನವರ ವೃತ್ತಿ ಜೀವನವು ಕೋಲಾರದ ಪ್ರೌಢಶಾಲೆಯಲ್ಲಿ 1878ರಲ್ಲಿ ಪ್ರಾರಂಭವಾಯಿತು. ಒಂದೆರಡು ವರ್ಷಗಳು ಕಳೆದ ಮೇಲೆ ತಾವೇ ಓದಿದ್ದ ರಾಜಾಸ್ಕೂಲಿಗೆ ವರ್ಗವಾಗಿ ಬಂದರು.

ಆ ವೇಳೆಗೆ ಅವರ ವಿವಾಹವಾಗಿ ಹಲವು ವರ್ಷಗಳು ಕಳೆದಿದ್ದುವು. (ಅವರಿಗೆ ಹದಿನಾರನೆಯ ವರ್ಷಕ್ಕೇ ಮದುವೆಯಾಗಿತ್ತು.) ಆದರೆ ದಾಂಪತ್ಯ ಫಲಿಸಿರಲಿಲ್ಲ. ಕೊರತೆ ಅದೊಂದೇ ಆಗಿರಲಿಲ್ಲ. ಗಂಡಹೆಂಡಿರ ನಡುವೆ ಸಾಮರಸ್ಯ ಏರ್ಪಟ್ಟಿರಲಿಲ್ಲ. ಸ್ವಭಾವತಃ ವಿಪರೀತ ಶಿಸ್ತಿನವರಾಗಿದ್ದ ಪುಟ್ಟಣ್ಣನವರಿಗೆ ಎಲ್ಲವೂ ಕ್ರಮಬದ್ಧವಾಗಿ, ನೇರವಾಗಿ, ನೀತಿಯುತವಾಗಿ ಇರಬೇಕಿತ್ತು. ಮದುವೆಯಾದ ಹತ್ತುವರ್ಷಗಳ ನಂತರ ದಾಂಪತ್ಯ ಇನ್ನು ಹೊಂದಲಾರದ ರೀತಿಯಲ್ಲಿ ಬಿರುಕುಬಿಟ್ಟಿತು. ಪತ್ನಿಯ ಶೀಲ ಶಂಕೆಯವರೆಗೂ ಪತಿಯು ಮನಸ್ಸು ವಿಮುಖಗೊಂಡ ಮೇಲೆ ಹಾಗಾಗದೆ ವಿಧಿಯಿರಲಿಲ್ಲ. ಅವರ ವೈಯಕ್ತಿಕ ಜೀವನದ ಒಂದು ಕಹಿ ಅಧ್ಯಾಯ ಮುಗಿಯಿತು.[1]

ಎರಡನೆಯ ಮದುವೆ ಮಾಡಿಕೊಳ್ಳಲು ಹೇಳುತ್ತಿದ್ದ ಮಿತ್ರರ, ಬಂಧುಗಳ ಒತ್ತಾಯ ಬಲವಾಗಿತ್ತು. ಆದರೆ ಬೇರೆ ಯಾರ ಆಯ್ಕೆಯಲ್ಲೂ ಅವರಿಗೆ ನಂಬಿಕೆ ತಪ್ಪಿ ಹೋಗಿತ್ತು. ಅಂತಸ್ತು, ದುಡ್ಡು ಎಂಬ ಜಂಭಕ್ಕೆ ಬಲಿ ಬೀಳದೆ ಸಂಪ್ರದಾಯ ಶೀಲೆಯೂ ಗುಣವಂತೆಯೂ ಆದ ಹುಡುಗಿಯನ್ನು ಆರಿಸುವ ಜವಾಬ್ದಾರಿಯನ್ನು ತಾವೇ ಹೊತ್ತುಕೊಂಡರು.

ಎಲ್ಲ ರೀತಿಯಲ್ಲೂ ತಮಗೆ ಮೆಚ್ಚುಗೆಯಾದ ಒಂದು ಬಡಕುಟುಂಬದ ಚಿಕ್ಕ ಹುಡುಗಿಯನ್ನು ಆರಿಸಿದರು. ಯಳಂದೂರು ತಾಲ್ಲೂಕಿನ ಅಗರ ಎಂಬ ಹಳ್ಳಿಯ ತಿಮ್ಮಣ್ಣ ಜೋಯಿಸರು, ಸುಬ್ಬಮ್ಮನವರ ಐದು ಜನ ಹೆಣ್ಣು ಮಕ್ಕಳಲ್ಲಿ ನಾಲ್ಕನೆಯ ಹುಡುಗಿ ಗೌರಮ್ಮ. ಜೋಯಿಸರಿಗೆ ಗಂಡುಮಕ್ಕಳಿರಲಿಲ್ಲ. ಪುಟ್ಟಣ್ಣನವರು ತಾವೇ ಹೋಗಿ ಕನ್ಯೆಯನ್ನು ಕೇಳಿದರು. ಈ ಬಯಸದ ಭಾಗ್ಯ ಮನೆಯ ಬಾಗಿಲಿಗೆ ಬಂದದ್ದು ಕಂಡು ಮೂಕವಿಸ್ಮಿತರಾದ ಆ ಬಡಕುಟುಂಬದ ಮೇಲೆ ಯಾವ ಹೊಣೆಯನ್ನೂ ಹಾಕಲು ಇಚ್ಛಿಸದೆ ತಾವೇ ಎಲ್ಲ ಖರ್ಚುಗಳನ್ನೂ ವಹಿಸಿಕೊಂಡು ಮದುವೆಯಾದರು.

ಗಂಡನ ಮನೆಗೆ ಬಂದ ಮೇಲೆ ಕೆಲವು ವರುಷಗಳ ಕಾಲ ಪುಟ್ಟಣ್ಣನವರು ತಮ್ಮ ಎಳೆಯ ವಯಸ್ಸಿನ ಹೆಂಡತಿಯನ್ನು ತಮ್ಮ ವಿದ್ಯಾರ್ಥಿನಿಯಾಗಿ ಮಾತ್ರ ಕಂಡರು. ಒಂದು ವೇಳಾಪಟ್ಟಿಯನ್ನು ತಯಾರಿಸಿ ಅದರ ಪ್ರಕಾರ ಪ್ರತಿದಿನವೂ ಸಂಸ್ಕೃತ, ಇಂಗ್ಲಿಷ್‌ಗಳನ್ನು ಹೇಳಿಕೊಡಲಾರಂಭಿಸಿದರು. ಸ್ವಲ್ಪ ಕಾಲದ ನಂತರ ಎರಡೂ ಭಾಷೆಗಳಿಗೆ ಬೇರೆ ಬೇರೆ ಉಪಾಧ್ಯಾಯರನ್ನಿರಿಸಿ ಪಾಠ ಮುಂದುವರಿಯುವಂತೆ ಮಾಡಿದರು. ಕರ್ಣಾಟಕ

ಸಂಗೀತ ಪಾಠಕ್ಕೂ ಏರ್ಪಾಡು ಮಾಡಿದರು. ಒಬ್ಬ ಐರೋಪ್ಯ ಮಹಿಳೆಯ ಮೂಲಕ ಪಿಯಾನೋ ಪಾಠ ಹೇಳಿಸಿದರು. ವ್ಯವಹಾರಕ್ಕೆ ಅಗತ್ಯವಾದ ಲೆಕ್ಕವನ್ನು ಹೇಳಿ ಕೊಟ್ಟರು. ತಮ್ಮ ಜೀವನಸಂಗಾತಿಯನ್ನು ತಾವೇ ಆರಿಸಿಕೊಂಡುದರ ಜೊತೆಗೆ, ತಮ್ಮ ಕಾರ್ಯಗಳಲ್ಲಿ ಹೆಗಲೆಣೆಯಾಗಿ ನಿಂತು ತಮ್ಮ ಇಷ್ಟಾನಿಷ್ಟಗಳನ್ನು ಅರಿತು ಪೂರೈಸುವಂತೆ ಮಡದಿಯ ವ್ಯಕ್ತಿತ್ವವನ್ನು ಪ್ರತಿಹಂತದಲ್ಲೂ ತಾಳ್ಮೆಯಿಂದ ರೂಪಿಸಿದರು. ಅವರ, ಎಲ್ಲೂ ಕಂಡು ಕೇಳರಿಯದ ಈ ವಿಚಿತ್ರವನ್ನು, ಮನೆಯ ಹಿರಿಯರು ಮೌನವಾಗಿ ನೋಡುತ್ತಿದ್ದರು. ಬಂಧುವರ್ಗದವರು ಕುತೂಹಲದಿಂದ ವೀಕ್ಷಿಸುತ್ತಿದ್ದರು. ಸ್ನೇಹಿತರು ಆಪ್ತರು ಒಳ್ಳೆಯದನ್ನು ಹಾರೈಸುತ್ತಿದ್ದರು. ಪುಟ್ಟಣ್ಣನವರು ತಾವು ಕೈಹಿಡಿದ ಕಾರ್ಯದಲ್ಲಿ ಜಯಶಾಲಿಯಾದುದನ್ನು ಕಂಡ ಮೇಲೆ, ಬೇರೆಯವರ ಕುಹಕ ವ್ಯಂಗ್ಯಗಳೂ ಅಪಸ್ವರಗಳೂ ತಾವಾಗಿಯೇ ನಿಂತುಹೋದವು. ಎಡವಿ ಬಿದ್ದಾರೆಂಬ ನಿರೀಕ್ಷೆಯಿಂದ ಇದ್ದವರು ನಗುವುದಿರಲಿ, ಬಾಯನ್ನೇ ಮುಚ್ಚಿಕೊಳ್ಳಬೇಕಾಯಿತು. ಪುಟ್ಟಣ್ಣನವರ ಛಲ, ಹಟಮಾರಿತನ, ಖಂಡಿತವಾದಿತನಗಳೇನೋ ಇದರಿಂದ ಇನ್ನಷ್ಟು ಪ್ರಕಾಶಮಾನವಾಗಿ ಬೆಳಗಿದವು. ಪುಟ್ಟಣ್ಣನವರ ಹೆಂಡತಿ ಮುಂದೆ ಬಹುಕಾಲ ಬಾಳಿ ಮಕ್ಕಳು ಮೊಮ್ಮಕ್ಕಳನ್ನು ಪಡೆದು ಗಂಡನ ಮನೆಮನಗಳನ್ನು ತುಂಬಿದರು.

ಪುಟ್ಟಣ್ಣನವರು ಮೈಸೂರಿನಲ್ಲಿ ಉಪಾಧ್ಯಾಯರಾಗಿದ್ದಾಗ ಕನ್ನಡದ ಪುನರುಜ್ಜೀವನ ಹುರುಪಿನಿಂದ ಸಾಗಿತ್ತು. ಕನ್ನಡದಲ್ಲಿ ಸ್ವತಂತ್ರವಾದ ಗ್ರಂಥರಚನೆ, ಹೊಸ ರೀತಿಗೆ ಒಲಿಯುತ್ತಿದ್ದ ಭಾಷೆಯ ಸಂಕಲೆಗಳನ್ನು ಕಳಚುವ ಉತ್ಸಾಹ, ಇವುಗಳಿಗೆ ಮೈಸೂರು ಅರಮನೆಯ ರಾಜಾಶ್ರಯ ದೈವದತ್ತ ಕೃಪೆಯಾಗಿ ಒದಗಿ ಬಂದಿತ್ತು. 1881ರಲ್ಲಿ ಪುಟ್ಟಣ್ಣನವರು ತಮ್ಮ ಆಪ್ತಸ್ನೇಹಿತರಾದ ಎಂ.ಬಿ. ಶ್ರೀನಿವಾಸಯ್ಯಂಗಾರರೊಡನೆ, ಷೇಕ್ಸ್‌ಪಿಯರನ 'ಸಿಂಬಿಲೈನ್' ನಾಟಕದ ಕಥನ ರೂಪ 'ಜಯಸಿಂಹರಾಜ ಚರಿತ್ರೆ'ಯನ್ನು ಬರೆದರು. ಆಗ ಮೈಸೂರಿನ ದಿವಾನರಾಗಿದ್ದ ಸಿ. ರಂಗಾಚಾರ್ಲು ಮತ್ತು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಲೂಯಿರೈಸ್ ಅವರ ಕೋರಿಕೆಯಂತೆ ಪುಟ್ಟಣ್ಣನವರು ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ 'ಹಿಂದೂಚರಿತ್ರ ದರ್ಪಣ' (1882) ಎಂಬ ಎರಡು ಭಾಗವುಳ್ಳ ಚರಿತ್ರೆಯ ಪಠ್ಯವನ್ನು ರಚಿಸಿದರು. 1883ರಲ್ಲಿ ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆಯೇ 'ಹಿತಬೋಧಿನಿ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಇವರಿಬ್ಬರ ಸಹಕರ್ತೃತ್ವದಿಂದ 1884ರಲ್ಲಿ 'ನೀತಿಚಿಂತಾಮಣಿ'ಯ ರಚನೆ ನಡೆಯಿತು. 1884ರಲ್ಲಿ ತಮ್ಮ ಬಿ. ಎ. ವ್ಯಾಸಂಗವನ್ನು ಪೂರ್ಣಗೊಳಿಸುವ ಉದ್ದೇಶದಿಂದ ಮದರಾಸಿಗೆ ಹೋದರು. ಆ ಕಾಲದಲ್ಲಿ ತಮ್ಮ ನೆಚ್ಚಿನ 'ಹಿತಬೋಧಿನಿ'ಯನ್ನು ತಮ್ಮ ಆಪ್ತ ಸ್ನೇಹಿತರಾದ ಎಂ. ವೆಂಕಟಕೃಷ್ಣಯ್ಯನವರಿಗೆ ಒಪ್ಪಿಸಿದರು. ಬಿ. ಎ. ಪರೀಕ್ಷೆಗೆ ಚೆನ್ನಾಗಿ ಸಿದ್ಧತೆ ನಡೆಸಿದ್ದರೂ, ಆ ವರುಷ ಕಣ್ಣುನೋವಿನಿಂದ ಪರೀಕ್ಷೆಗೆ ಕೂಡಲಾಗಲಿಲ್ಲ. ಪೂರ್ಣಕಾಲದ ಅಧ್ಯಯನ ಸಾಧ್ಯವಾಗದುದರಿಂದ, ಗಣಿತಶಾಸ್ತ್ರದಲ್ಲಿ ಆಸಕ್ತಿಯಿದ್ದರೂ ಅದರ ಆಸೆಯನ್ನು ಬಿಡ

ಬೇಕಾಯಿತು. ಮರುವರುಷ 1885ರಲ್ಲಿ ತರ್ಕ ಮತ್ತು ನೀತಿಧರ್ಮಗಳಲ್ಲಿ ಬಿ. ಎ. ಪದವಿಯನ್ನು ಪಡೆದರು. ಮೈಸೂರಿಗೆ ಹಿಂತಿರುಗಿದ ಮೇಲೆ ತಾವು ಮೊದಲಿದ್ದ ಕೆಲಸದಲ್ಲೇ ಮುಂದುವರಿದರು. ಮುಂದಿನ ವರ್ಷವೇ ಆಗ ಮಹಾರಾಜಾ ಕಾಲೇಜಿನ ಮುಖ್ಯೋಪಾಧ್ಯಾಯರಾಗಿದ್ದ ಎಚ್. ಜೆ. ಭಾಭಾರವರಿಗೂ ಪುಟ್ಟಣ್ಣನವರಿಗೂ ಭಿನ್ನಾಭಿಪ್ರಾಯವುಂಟಾಗಿ, ತಮ್ಮ ನಿಲುವು ಧೋರಣೆಗಳಲ್ಲಿ ಬಲವಾದ ನಂಬಿಕೆಯಿದ್ದು, ಒಪ್ಪಂದ ರಾಜಿ ಮುಂತಾದವುಗಳಲ್ಲಿ ಆಸಕ್ತಿ ಇಲ್ಲದ ಪುಟ್ಟಣ್ಣನವರು ತಮ್ಮ ಉಪಾಧ್ಯಾಯ ವೃತ್ತಿಗೆ 1886ರಲ್ಲಿ ರಾಜೀನಾಮೆ ಕೊಟ್ಟರು. ಅನಂತರ ಕೆಲವು ದಿನಗಳ ಮೇಲೆ ಬೆಂಗಳೂರಿನ ಚೀಫ್‌ಕೋರ್ಟಿನಲ್ಲಿ (ಈಗಿನ ಹೈಕೋರ್ಟ್) ಭಾಷಾಂತರಕಾರರಾದರು. 1897ರವರೆಗೆ ಇದೇ ಕೆಲಸದಲ್ಲಿ ಮುಂದುವರೆದರು.

ಮೊದಲು ಬರೆದಿದ್ದ 'ಹಿಂದೂ ಚರಿತ್ರ ದರ್ಪಣ'ದ ಎರಡು ಭಾಗಗಳ ಸಂಗ್ರಹ ರೂಪ 'ಹಿಂದೂ ಚರಿತ್ರ ಸಂಗ್ರಹ' 1887ರಲ್ಲಿ ರಚಿತವಾಯಿತು. ಎಂ. ಬಿ. ಶ್ರೀನಿವಾಸಯ್ಯಂಗಾರರ ಸಹಕರ್ತೃತ್ವ ಈ ಕೃತಿಗೆ ಮುಖ್ಯಾಯವಾಯಿತು. ಐದು ವರುಷಗಳ ನಂತರ ಪುಟ್ಟಣ್ಣನವರು 'ಕಾಂಪೂಷನ ಚರಿತ್ರೆ'ಯನ್ನು 1892ರಲ್ಲಿ ರಚಿಸಿದರು. ವಿದ್ಯಾಭ್ಯಾಸದ ಇಲಾಖೆಗಾಗಿ 'ಕನ್ನಡ ಒಂದನೆಯ ಪುಸ್ತಕವು' 1895ರಲ್ಲಿ ರಚಿತವಾಯಿತು. 1897ರಲ್ಲಿ 'ಸುಮತಿ ಮದನಕುಮಾರರ ಚರಿತ್ರೆ' ರಚಿತವಾಯಿತು.

1890–91 ಹಾಗೂ 1891–92 ಈ ಎರಡು ವರ್ಷಗಳಲ್ಲಿ ಪುಟ್ಟಣ್ಣನವರು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಪರೀಕ್ಷಕರಾಗಿದ್ದರು. ಮೈಸೂರಿನ ಅಪ್ಪರ್ ಮತ್ತು ಲೋಯರ್ ಸೆಕೆಂಡರಿ ಪರೀಕ್ಷೆಗಳಿಗೆ ಹತ್ತು ವರ್ಷಗಳ ಕಾಲ ಕನ್ನಡ ಹಾಗೂ ಚರಿತ್ರೆಯ ಪರೀಕ್ಷಕರಾಗಿದ್ದರು. 1892ರಲ್ಲಿ ಭಾಷೆಯ ಸಾಧು–ಅಸಾಧು ರೂಪಗಳನ್ನು ಚರ್ಚಿಸಲು ನೇಮಿಸಲ್ಪಟ್ಟ ಸ್ಪೆಷಲ್ ಸಬ್‌ಕಮಿಟಿಯಲ್ಲಿ ಪುಟ್ಟಣ್ಣನವರೂ ಒಬ್ಬರು. ಮೈಸೂರಿನ ಟೆಕ್ಸ್ಟ್‌ಬುಕ್ ಕಮಿಟಿಯ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದರು.

ಆ ಕಾಲದಲ್ಲಿ ರೆವಿನ್ಯೂ ಇಲಾಖೆಯಲ್ಲಿ ಪದವೀಧರರು ಹೆಚ್ಚಾಗಿ ಇರಲಿಲ್ಲ. ಹಲವು ವೃತ್ತಿಗಳಿಗೆ ಪದವಿ ಪಡೆದ ನುರಿತ ಕೆಲಸಗಾರರು ಕೂಡಲೇ ಬೇಕಾಗಿದ್ದರು. ಆದ್ದರಿಂದ ಸರ್ಕಾರದ ಬೇರೆ ಬೇರೆ ಇಲಾಖೆಗಳಲ್ಲಿದ್ದ ಪದವೀಧರರಿಗೆ ತರಬೇತಿ ಕೊಡಿಸಿ ಅವರನ್ನು ಅಮಲ್ದಾರರನ್ನಾಗಿ ನೇಮಿಸಿಕೊಂಡರು. ಈ ತಂಡದಲ್ಲಿ ಪುಟ್ಟಣ್ಣನವರೂ ಒಬ್ಬರು. 1897 ರಲ್ಲಿ ಪುಟ್ಟಣ್ಣನವರು ಚಿತ್ರದುರ್ಗದ ಅಮಲ್ದಾರರಾದರು.

1890–1900 ಈ ಕಾಲಾವಧಿಯಲ್ಲಿ ಸ್ವತಃ ಕಾಶಿಗೆ ಹೋಗಿ ಸನ್ಯಾಸಿಯಾಗಿದ್ದ ತಮ್ಮ ತಂದೆಯ ಮುಖದರ್ಶನವನ್ನಾದರೂ ಮಾಡಬೇಕೆಂದು ಪುಟ್ಟಣ್ಣನವರು ಯೋಚಿಸುತ್ತಿದ್ದರು. ಆ ವೇಳೆಗೆ ತಂದೆ ಸಿದ್ಧಿ ಹೊಂದಿದರೆಂಬ ಸುದ್ದಿ ತಲುಪಿತು.

ಪುಟ್ಟಣ್ಣನವರು ಅಮಲ್ದಾರರಾದ ಮೇಲೆ ತಮ್ಮ ಲೇಖನ ವ್ಯವಸಾಯವನ್ನು

ಮೊದಲಿನಷ್ಟು ವೇಗವಾಗಿ ನಡೆಸಲಾಗಲಿಲ್ಲ. ನೌಕರಿಯ ಒತ್ತಡ ಹಾಗೂ ಸಾಂಸಾರಿಕ ಹೊರೆ, ಹೊಣೆಗಳ ನಡುವೆ ಅವರಿಗೆ ಬಿಡುವು ಸಿಗಲಿಲ್ಲ. ಆದರೂ ಈ ಅವಧಿಯಲ್ಲಿ ಷೇಕ್ಸ್‌ಪಿಯರನ 'ಕಿಂಗ್‌ಲಿಯರ್' ನಾಟಕದ ಅನುವಾದ 'ಹೇಮಚಂದ್ರರಾಜ ವಿಲಾಸ' (1899) ಬಂದಿತು. ದೊರೆತ ಬಿಡುವಿನ ಕಾಲದಲ್ಲಿ ತಮ್ಮ ಅನುಭವದ ಪರಿಧಿಯೊಳಗೆ ಬಂದ ವಿಷಯಗಳ ಟಿಪ್ಪಣಿಗಳನ್ನು ಬರೆದಿಡುತ್ತಿದ್ದರು. ಚಿತ್ರದುರ್ಗದಲ್ಲಿದ್ದಾಗ ಅಲ್ಲಿನ ಶ್ರೀಮಂತ ಐತಿಹಾಸಿಕ ವಿವರಗಳಿಂದ ಆಕರ್ಷಿತರಾದ ಪುಟ್ಟಣ್ಣನವರು ಚಿತ್ರದುರ್ಗದ ಪಾಳಯಗಾರರ ವಂಶಸ್ಥರ ಬಳಿ ಇದ್ದ ಓಲೆಗರಿಯ ಪ್ರತಿಗಳು, ಸ್ಥಳಪುರಾಣ, ಐತಿಹಾಸಿಕವಾದ ಇತರ ವಿವರಗಳು ಇವನ್ನೆಲ್ಲ ಸಂಗ್ರಹಿಸಿದರು. ಅವರ ಆಸಕ್ತಿ ಇತರ ಪಾಳಯಗಾರರ ಕಡೆಗೂ ತಿರುಗಿತು.

ಪುಟ್ಟಣ್ಣನವರ ಅಮಲ್ದಾರವೃತ್ತಿಯಲ್ಲಿ ತಿಂಗಳಿಗೆ ಹತ್ತು ದಿನ ಸಂಚಾರಕ್ಕೆ ಮೀಸಲಾಗಿದ್ದುದರಿಂದ ಕನ್ನಡ ನಾಡಿನ ಜನಜೀವನವನ್ನು ನೋಡುವ, ಅದರ ನಾಡಿ ಮಿಡಿತವನ್ನು ಅರಿಯುವ ಅವಕಾಶಗಳು ಅವರಿಗೆ ಹೇರಳವಾಗಿ ಲಭಿಸಿದವು. ಚಿತ್ರದುರ್ಗ, ನೆಲಮಂಗಲ, ಚಾಮರಾಜನಗರ, ಬಾಗೇಪಲ್ಲಿ, ಮುಳಬಾಗಿಲು, ಹೊಸದುರ್ಗಗಳಲ್ಲಿ ಪುಟ್ಟಣ್ಣನವರು ಅಮಲ್ದಾರರಾಗಿದ್ದರು. ಅತ್ಯಂತ ಆಸಕ್ತಿಯಿಂದ ಟಿಪ್ಪಣಿ ಬರೆಯುವ ಉದ್ಯೋಗವನ್ನು ಈ ಎಲ್ಲ ಕಡೆ ಮುಂದುವರಿಸಿದರು. ತಮ್ಮ ವೃತ್ತಿಜೀವನದಲ್ಲಿ ಎದುರಾಗುತ್ತಿದ್ದ ಅಡ್ಡಿ ಆತಂಕಗಳ ನಡುವೆಯೂ ಆಸಕ್ತಿಯುತವಾದ ಬರವಣಿಗೆಗೆ ವಿಷಯವಾಗುವ ವಿಚಾರಗಳ ಸಂಗ್ರಹ ನಡೆದೇ ಇತ್ತು.

ಅತ್ಯಂತ ಕಟ್ಟುನಿಟ್ಟಿನ ಜೀವನ, ಋಜುಮಾರ್ಗದಲ್ಲಿ ಪ್ರವೃತ್ತಿ ಇವುಗಳಲ್ಲಿ ನಂಬಿಕೆಯಿದ್ದ ಪುಟ್ಟಣ್ಣನವರಿಗೆ ತಮ್ಮ ತತ್ತ್ವಗಳಿಂದ ತೊಂದರೆಯಾದರೂ ಎಂತಹ ಕಷ್ಟದ ಅವಧಿಯಲ್ಲೂ ತಮ್ಮ ಸರಿಯಾದ ನಿಲುವನ್ನು ಬಿಡುತ್ತಿರಲಿಲ್ಲ. ಅವರಿಗೆ ಮುಖ್ಯವಾಗಿದ್ದುದು ಸರಕಾರದ ಸೇವೆ, ತನ್ಮೂಲಕ ಪ್ರಜೆಗಳ ಅಭಿವೃದ್ಧಿ. ಇಂಥ ನಿಸ್ಪೃಹರಾದ ಧೈರ್ಯಶಾಲಿಗಳು ಜಾರುದಾರಿಯಲ್ಲಿ ಮನಸ್ಸು ನೆಟ್ಟವರಿಗೆ ಮುಳ್ಳಿನಂತೆ. ಆದುದರಿಂದ ಅಂಥ ಬೇರೆ ರೀತಿಯ ಜನಗಳಿಂದ ಉಂಟಾದ ತೊಂದರೆ ವಿರೋಧಗಳು ತಡೆಯಲಸಾಧ್ಯವಾದಾಗಲೂ ತಾವು ಅವರ ದಾರಿಗೆ ಹೊರಳಲೊಪ್ಪದೆ 1908 ರಲ್ಲಿ ರಾಜೀನಾಮೆ ನೀಡಿದರು. ಸರಕಾರ ಎಂದರೆ ಪುಟ್ಟಣ್ಣನವರಿಗೆ ದೇವರು ಎಂಬ ಭಾವನೆ ಇದ್ದಾಗ, ಅವರ ಕೆಲಸದ ಅವಧಿ ವಿಸ್ತರಣೆ ಇರಲಿ, ಪೂರ್ಣಾವಧಿ ಕೆಲಸವನ್ನೂ ಮಾಡದೆ ರಾಜೀನಾಮೆ ಕೊಟ್ಟದ್ದು ಒಂದು ವ್ಯಂಗ್ಯ. ರಾಜೀನಾಮೆ ಕೊಟ್ಟ ಮೇಲೂ ಬಹಳ ದಿನ ತಮಗೆ ಸಲ್ಲಬೇಕಾದ ಪಿಂಚನಿ ಹಣವನ್ನೂ ತೆಗೆದುಕೊಳ್ಳಲಿಲ್ಲ. ಅವರ ಮನಸ್ಸು ಎಲ್ಲದರಿಂದಲೂ ವಿಮುಖವಾಗಿತ್ತು. ಹಲವರ ಒತ್ತಾಯದ ನಂತರ ಒಟ್ಟಿಗೇ ತೆಗೆದುಕೊಂಡರು.

ನಿವೃತ್ತರಾದ ಮೇಲೆ ಕೆಲವು ಕಾಲ ವಕೀಲರಾಗಿದ್ದರು. ಪ್ರಾರಂಭದಲ್ಲಿ ತಮ್ಮ ಹಳೆಯ ಗೆಳೆಯರೊಬ್ಬರಲ್ಲಿ ದುಡಿದರು. ಅನಂತರ ತಾವೇ ಬೇರೆಯಾಗಿ ವಕೀಲ

ವೃತ್ತಿಯನ್ನು ಮುಂದುವರಿಸಿದರು. ತಮ್ಮ ಹಿರಿಯ ಮಗ ಸೋಮಶೇಖರರಾಯರು ಎಲ್‌ಎಲ್. ಬಿ. ಪದವಿ ಪಡೆದು ತಮ್ಮೊಡನೆ ದುಡಿಯುವವರೆಗೂ ಅವರೊಬ್ಬರೇ ಇದ್ದರು. ಅನಂತರ ನಿಧಾನವಾಗಿ ತಮ್ಮ ವೃತ್ತಿಯ ಎಲ್ಲ ಹೊಣೆಯನ್ನೂ ತಮ್ಮ ಮಗನಿಗೇ ವಹಿಸಿಕೊಟ್ಟರು.

ವೃತ್ತಿಯ ಹೊಣೆಗಳಿಂದ ಕಳಚಿಕೊಳ್ಳುತ್ತಾ ಬಂದ ಪುಟ್ಟಣ್ಣನವರು ಎಲ್ಲ ಕಾಲವನ್ನೂ ಮುಂದೆ ತಮ್ಮ ಪ್ರವೃತ್ತಿಯ ಕಾರ್ಯಗಳ ಕಡೆಗೇ ಮೀಸಲಿರಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪನೆಗೆ ದುಡಿದ ಅವರು ಕೆಲವು ಕಾಲ ಪರಿಷತ್ತಿನ ಕಾರ್ಯದರ್ಶಿಯೂ ಆಗಿದ್ದರು. ಬೆಂಗಳೂರಿನ ತೆರಿಗೆದಾರರ ಸಂಸ್ಥೆಯನ್ನು ಬಹುಕಾಲ ಶ್ರದ್ಧೆಯಿಂದ ನಡೆಸಿದರು. ಇತರ ಹಲವು ಸಂಘಸಂಸ್ಥೆಗಳಿಗೆ ಅಹರ್ನಿಶಿ ದುಡಿದರು. ನಿವೃತ್ತರಾದ ಮೇಲೆಯೇ ಅವರ ಬರವಣಿಗೆಗೆ ಮೊದಲಿಲ್ಲದ ವೇಗ ಸೇರಿಕೊಂಡಿತು. 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' (1910), 'ಮಾಡಿದ್ದುಣ್ಣೋ ಮಹಾರಾಯ' (1915), 'ಕನ್ನಡ ಲೇಖನ ಲಕ್ಷಣ' (1915), 'ಸರ್ ಸಾಲಾರ್‌ಜಂಗನ ಚರಿತ್ರೆ' (1917), 'ಮಹಮೂದ್‌ಗವಾನನ ಚರಿತ್ರೆ' (1922), 1922 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ಪಾಳಯಗಾರರ ಬಗೆಗೆ ಕೊಟ್ಟ ಐದು ಉಪನ್ಯಾಸಗಳ ನಂತರ 'ಪಾಳಯಗಾರರು' (1923), 'ಚಿತ್ರದುರ್ಗದ ಪಾಳಯಗಾರರು' (1924), 'ಗುಮ್ಮನಾಯಕನ ಪಾಳಯದ ಪಾಳಯಗಾರರು' (1926), 'ಪೇಟೆ ಮಾತೇನಜ್ಜಿ' (1927), 'ಮುಸುಗ ತೆಗೆಯೇ ಮಾಯಾಂಗನೆ' (1928) ಮುಂತಾದುವು ರಚಿತವಾದುವು. ತಮ್ಮ ವೇಳೆಯ ಬಹು ಭಾಗವನ್ನು ವ್ಯಾಸಂಗಕ್ಕೂ, ಬರವಣಿಗೆಗೂ ಮೀಸಲಿಟ್ಟರು. ಮಿಕ್ಕ ಭಾಗ ಸಾರ್ವಜನಿಕ ಚಟುವಟಿಕೆಗಳಿಗೆ ಮೀಸಲಾಯಿತು.

ಪುಟ್ಟಣ್ಣನವರಿಗೂ ಅವರ ಧರ್ಮಪತ್ನಿ ಗೌರಮ್ಮನವರಿಗೂ ಮೂವರು ಗಂಡು ಮಕ್ಕಳು, ಮೂವರು ಹೆಣ್ಣುಮಕ್ಕಳು. ಮಕ್ಕಳ ಶಿಕ್ಷಣ, ಮದುವೆ ಮುಂತಾದ ಹೊಣೆಗಳನ್ನು ಪುಟ್ಟಣ್ಣನವರು ದಕ್ಷತೆಯಿಂದ ನಿರ್ವಹಿಸಿದರು. ಹಲವು ಮೊಮ್ಮಕ್ಕಳನ್ನು ಕಂಡ ಪುಟ್ಟಣ್ಣನವರಿಗೆ ಕೌಟುಂಬಿಕವಾದ ಪ್ರೀತಿ ವಿಶ್ವಾಸಗಳನ್ನು ಮನಸಾರೆ ಸವಿಯುವ ಭಾಗ್ಯವಿತ್ತು. ತಮ್ಮ ವಿಶ್ರಾಂತ ಜೀವನ–ಈ ಪದ ಒಂದು ಅಪಪ್ರಯೋಗ–ದಲ್ಲಿ ವಯಸ್ಸಾಗಿ ಶಕ್ತಿಗುಂದುತ್ತಿದ್ದರೂ ಕಡೆಯವರಿಗೂ ತಮ್ಮ ಬಿಡುವಿಲ್ಲದ ಕಾರ್ಯಗೌರವಗಳಲ್ಲಿ ದುಡಿಯಲು ಅಗತ್ಯವಾದ ನೆಮ್ಮದಿ ಈ ಕೌಟುಂಬಿಕವಾದ ತೃಪ್ತಿ, ವಿಶ್ವಾಸಗಳಿಂದ ಒದಗುತ್ತಿತ್ತು.

ಪುಟ್ಟಣ್ಣನವರ ಅಂತ್ಯ ಬಹಳ ಅನಿರೀಕ್ಷಿತವಾಗಿತ್ತು. ಒಂದು ದಿನ ಬೆಳಗ್ಗೆ ಎಂದಿನಂತೆ ತಿರುಗಾಟಕ್ಕೆ ಹೊರಟರು. ತಮ್ಮ ಸ್ನೇಹಿತರಾದ ಆರ್ಮುಗಂ ಮೊದಲಿಯಾರರ (ಹೆಸರಾದ ವೈದ್ಯರು) ಮನೆಯ ಬಳಿ ಬರುವಾಗ ಹತ್ತಿರದಲ್ಲಿ ಹುಲ್ಲುಗಾಡಿ

ಮಾರಾಟಕ್ಕಾಗಿ ಹೋಗುತಿತ್ತು. ಹುಲ್ಲು ಕೊಳ್ಳಲು ಈಚೆಗೆ ಬಂದ ಮೊದಲಿಯಾರರು ಸಹಜವಾಗಿ "ಪುಟ್ಟಣ್ಣನವರೇ, ಹುಲ್ಲಿನವನನ್ನು ಸ್ವಲ್ಪ ಕೂಗಿ" ಎಂದರು. ಉತ್ತರ ಬರಲಿಲ್ಲ. ಹತ್ತಿರ ಬಂದು ನೋಡಿದರೆ ತಲೆ ಸುತ್ತಿದಂತಾಗಿ ಪುಟ್ಟಣ್ಣನವರು ಬೀದಿಯ ಬಳಿಯಿದ್ದ ಕಲ್ಲುಹಾಸಿನ ಮೇಲೆ ಕೂತುಬಿಟ್ಟಿದ್ದರು. ಆರ್ಮುಗಂ ಮೊದಲಿಯಾರರ ಅಳಿಯ ಶೇಷಾಚಲಂ ಅವರು ಕೂಡ ವೈದ್ಯರು. ಇಬ್ಬರೂ ಪರೀಕ್ಷಿಸಿದರು. ಪುಟ್ಟಣ್ಣನವರಿಗೆ ಲಘುವಾದ ಪಾರ್ಶ್ವವಾಯು ಆಗಿತ್ತು. ಕೆಲವೇ ದಿನಗಳ ಹಿಂದೆ ಪುಟ್ಟಣ್ಣನವರಿಗೆ ಅಪ್ರಿಯವಾದ ಒಂದು ಸುದ್ದಿ ತಿಳಿದುಬಂದಿತ್ತು. ವಿದೇಶದಲ್ಲಿದ್ದ ಅವರ ಎರಡನೆಯ ಮಗ ಆ ದೇಶದ ಹೆಣ್ಣನ್ನೇ ಮದುವೆಯಾಗಲಿದ್ದ ಸಂಗತಿ ಅದು. ಮಾನಸಿಕವಾದ ದೈಹಿಕವಾದ ಈ ಜೋಡಿ ಪೆಟ್ಟಿನಿಂದ ಚೇತರಿಸಿಕೊಳ್ಳಲಾಗದೆ ಪುಟ್ಟಣ್ಣನವರು ಮುಂದೆ ಮೂರು ನಾಲ್ಕು ದಿನಗಳಲ್ಲಿ 11-4-1930 ರಲ್ಲಿ ಕಡೆಯುಸಿರೆಳೆದರು.

ಹಸ್ತಪ್ರತಿಯಲ್ಲಿ ಉಳಿದಿದ್ದ 'ಹಾಗಲವಾಡಿ ಪಾಳಯಗಾರರು' ಮತ್ತು 'ಇಕ್ಕೇರಿ ಸಂಸ್ಥಾನದ ಚರಿತ್ರೆ' ಗಳನ್ನು ಪುಟ್ಟಣ್ಣನವರ ಹಿರಿಯಮಗ ಎಂ. ಪಿ. ಸೋಮಶೇಖರ ರಾಯರು ಮರುವರ್ಷ (1931) ಪ್ರಕಟಗೊಳ್ಳುವಂತೆ ಮಾಡಿದರು. 'ಅವರಿಲ್ಲದೂಟ' ಪುಟ್ಟಣ್ಣನವರು ತೀರಿಕೊಂಡ ಇಪ್ಪತ್ತೊಂಬತ್ತು ವರ್ಷಗಳ ನಂತರ 1959 ರಲ್ಲಿ ಪ್ರಕಟವಾಯಿತು. ಹಸ್ತಪ್ರತಿಯಲ್ಲಿ ಉಳಿದಿದ್ದ ಕೆಲವು ಕಥೆಗಳು, ಬೇರೆಡೆಗಳಲ್ಲಿ ಪ್ರಕಟಗೊಂಡಿದ್ದ ಇತರ ಕೆಲವು ಕಥೆಗಳು 'ಪುಟ್ಟಣ್ಣ ಹೇಳಿದ ಕಥೆಗಳು' ಎಂಬ ಹೆಸರಿನಲ್ಲಿ ಒಟ್ಟುಗೂಡಿ ಪ್ರಕಟಣೆಯನ್ನು ಕಾಣಲಿರುವುದು ಸಂತೋಷದ ಸಂಗತಿ. ಪುಟ್ಟಣ್ಣನವರು ಬರೆದಿದ್ದ ಇಂಗ್ಲಿಷ್ ಲೇಖನಗಳ ಭಾಷಾಂತರಗಳೂ, ಕನ್ನಡ ಲೇಖನಗಳೂ 1976 ರಿಂದ ಕ್ರಮವಾಗಿ 'ಪ್ರಬುದ್ಧ ಕರ್ಣಾಟಕ'ದ ಸಂಚಿಕೆಗಳಲ್ಲಿ ಬೆಳಕು ಕಂಡವು.

ಪುಟ್ಟಣ್ಣನವರ 'ಹಾತಿಂತಾಯಿ' ಕಥಾನಕ 'ಹೇಮಲತ' (ಷೇಕ್ಸ್‌ಪಿಯರ್‌ನ 'ಹ್ಯಾಮ್ಲೆಟ್' ಭಾಷಾಂತರ) ನಾಟಕ ಹಾಗೂ 'ಛತ್ರಪತಿ ಶಿವಾಜಿ ಮಹಾರಾಜ' ಜೀವನ ಚರಿತ್ರೆ ಈ ಮೂರು ಕೃತಿಗಳು ಹಸ್ತಪ್ರತಿಯಲ್ಲಿ ಉಳಿದಿವೆ.

ಬೆಂಗಳೂರಿನ ಬಸವನಗುಡಿಯಲ್ಲಿ ಪುಟ್ಟಣ್ಣನವರು ವಾಸವಾಗಿದ್ದ ಬೀದಿ ಇಂದು ಪುಟ್ಟಣ್ಣನವರ ಹೆಸರನ್ನು ಹೊತ್ತುಕೊಂಡಿದೆ.

## ವ್ಯಕ್ತಿತ್ವ

### ಕೆಲವು ಸಾಂಸಾರಿಕ ಘಟನೆಗಳು

ಪುಟ್ಟಣ್ಣನವರು ತಮ್ಮ ಎರಡನೆಯ ಮದುವೆಯನ್ನು ಮಾಡಿಕೊಂಡ ಘಟನೆ ಇಂದಿಗೆ ಒಂದು ಕಥೆಯೋ ಎಂಬಂತೆ ಭಾಸವಾಗುತ್ತದೆ. ಕನ್ಯಾವೀಕ್ಷಣೆಗಾಗಿ ಪುಟ್ಟಣ್ಣ

ನವರೇ ಯಳಂದೂರು ತಾಲ್ಲೂಕಿನ ಅಗರಕ್ಕೆ ಹೋದರು. ಹೋದದ್ದು ಒಂಟಿಯಾಗಿ, ಕುದುರೆಯ ಮೇಲೆ. ಅಲ್ಲಿ ಇವರ ಮಾವನವರದು ಒಟ್ಟು ಕುಟುಂಬದ ಸಾಕಷ್ಟು ದೊಡ್ಡದಾದ ಮನೆ. ಇವರು ಒಳಗೆ ಹೋದಾಗ ಅನೇಕ ಹುಡುಗಿಯರು ಕವಡೆ ಆಡುತ್ತಾ ಕುಳಿತಿದ್ದರು. ಪುಟ್ಟಣ್ಣನವರು ಅಲ್ಲೇ ನಿಂತು ಹತ್ತು ನಿಮಿಷ ನೋಡಿ ಒಳಗೆ ಹೋಗಿ ತಾನು ಯಾರೆಂದು ತಿಳಿಸಿದರು. ಕೂಡಲೇ ಯಾರೋ ಅಧಿಕಾರಿಗಳು ಬಂದರು ಎಂದು ಸಡಗರ, ಗಾಬರಿ ಕಂಡುಬಂದಿತು. ಹೆಣ್ಣು ಕೇಳಲು ಬಂದವರು ವರ ತಾನೇ ಎಂದು ತಿಳಿಸಿ, ತಮ್ಮ ವಿಚಾರವನ್ನು ತಿಳಿಸಿದರು. ಅನಂತರ "ಗೊಬ್ಬಳಿ ಹೂವನ್ನು ಮುಡಿದಿರುವ ಹುಡುಗಿಯನ್ನು ಮದುವೆ ಮಾಡಿಕೊಡುತ್ತೀರಾ ?" ಎಂದು ಕೇಳಿದರು. ಮನೆಯಲ್ಲಿದ್ದ ಹೆಂಗಸರು "ಗಂಡಸರು ಬರಲಿ" ಎಂದರು. ಸ್ವಲ್ಪ ಹೊತ್ತಿಗೆ ಹುಡುಗಿಯ ದೊಡ್ಡಪ್ಪ, ಚಿಕ್ಕಪ್ಪ ಇಬ್ಬರೂ ಬಂದರು. ತಂದೆ ಇನ್ನೂ ಬಂದಿರಲಿಲ್ಲ. ಅವರು ಮೂರು ಜನ ಅಣ್ಣತಮ್ಮಂದಿರು. ಮಧ್ಯದವರ ಮಗಳೇ ಈ ಹುಡುಗಿ. ಮನೆಗೆ ಬಂದ ಗಂಡಸರು "ಎಷ್ಟಾದರೂ ಹುಡುಗಿಯ ತಂದೆಯನ್ನು ಕೇಳಬೇಕು" ಎಂದರು. "ಇರಲಿ, ನಿಮ್ಮ ಅಂದಾಜೇನು ತಿಳಿಸಿ" ಎಂದರು ಪುಟ್ಟಣ್ಣ ನವರು. "ಆಗಬಹುದು, ಅವರು ಬಡವರು, ನೀವು ಶ್ರೀಮಂತರು, ದೊಡ್ಡವರು. ಇಂಥಾ ಸಂಬಂಧ ಸಿಗುವಾಗ ಬೇಡ ಎನ್ನಲಾರರು" ಎಂದರು. ಜಾತಕಾನುಕೂಲ ಆಗುತ್ತದೆಯೇ ಎಂಬ ಮಾತು ಬಂತು. ಜ್ಯೋತಿಷದಲ್ಲಿ ನಿಪುಣರಾದ, ಅಣ್ಣತಮ್ಮಂದಿ ರಲ್ಲಿ ಕಿರಿಯರಾದ ವೆಂಕಟೇಶ ಜೋಯಿಸರು 'ದಿವ್ಯವಾಗಿದೆ' ಎಂದರು. ಬೇರೆ ಹುಡುಗಿಯರ ಪ್ರಸ್ತಾಪ ಬಂದಾಗ, "ಕೊಟ್ಟರೆ ಆ ಹುಡುಗಿ, ಬೇರೆ ಬೇಡ" ಎಂದರು. ಹುಡುಗಿಯ ತಂದೆಯೂ ಬಂದು ಎಲ್ಲವೂ ನಿಷ್ಕರ್ಷೆಯಾಯಿತು. 'ಊಟಕ್ಕೇಳಿ' ಎಂದರೆ, "ನಿಮ್ಮ ಮನೆಯಲ್ಲಿ ನಾನು ಊಟ ಮಾಡಬೇಕಾದ ಆಗತ್ಯವೇನಿಲ್ಲ, ಆದರೆ ನೀವು ಹೆಣ್ಣು ಕೊಡಲು ಒಪ್ಪಿರುವುದರಿಂದ ಮಾಡ್ತೀನಿ. ಇಲ್ಲದಿದ್ರೆ ಮಾಡ್ತಿರಲಿಲ್ಲ" ಎಂದರು. ವೆಂಕಟೇಶ ಜೋಯಿಸರ ಹೆಂಡತಿ, ಹುಡುಗಿಯ ಚಿಕ್ಕಮ್ಮ "ನೀನು ಇವ ರನ್ನು ಮದುವೆ ಮಾಡ್ಕೋತೀಯೇನೆ ಮಗು?" ಎಂದು ಕೇಳಿದರೆ, "ಓ" ಎಂದಳಂತೆ ಆ ಎಂಟುವರ್ಷದ ಹುಡುಗಿ. ಪುಟ್ಟಣ್ಣನವರೂ ಹುಡುಗಿಯನ್ನು ಕೇಳಿದರು. "ಮದುವೆಯಾದ ಮೇಲೆ ತವರಿಗೆ ಬರುವ ಹಾಗಿಲ್ಲ. ನನ್ನ ಜೊತೇಲೇ ಇರಬೇಕು. ವಿದ್ಯೆ ಕಲೀಬೇಕು. ಇದಕ್ಕೆಲ್ಲಾ ಒಪ್ಪಿಗೆ ಇಲ್ಲದಿದ್ದರೆ ಈಗಲೇ ಹೇಳಿಬಿಡಬೇಕು." ಹುಡುಗಿಗೆ ಏನು ಅರ್ಥವಾಯಿತೋ, ಎಲ್ಲಕ್ಕೂ ಒಪ್ಪಿದಳು. ಮನೆಯವರಿಗೆ ಇನ್ನೊಂದು ಪರತ್ತು ಕಾದಿತ್ತು. "ಧಾರೆಯಾದ ಕೂಡಲೇ ನನ್ನೊಡನೆ ಕಳಿಸಬೇಕು" ಎಂದರು. "ದೊಡ್ಡೋಳಾಗುವವರೆಗೂ ನಮ್ಮಲ್ಲಿ ಇರಲಿ" ಎಂದುದಕ್ಕೆ "ಆಮೇಲೆ ವಿದ್ಯೆ ಹತ್ತೋಲ್ಲ" ಎಂಬ ಉತ್ತರ ಬಂತು. "ಸಮಾಧಾನವಿಲ್ಲದಿದ್ದರೆ ಈ ಪ್ರಸ್ತಾಪ ಇಲ್ಲೇ ನಿಲ್ಲಲಿ. ಯಾವುದಕ್ಕೂ ಯೋಚನೆ ಮಾಡಿ ಹೇಳಿ. ನೀವೆಲ್ಲ ಮದುವೆಗೆ ಒಪ್ಪಿ ದರೆ ಇನ್ನೆಂಟು ದಿನಕ್ಕೆ ಧಾರೆ ಆಗಿಬಿಡಬೇಕು" ಎಂದು ಇನ್ನೊಂದು ನಿಬಂಧನೆಯನ್ನು

ಸೇರಿಸಿದರು. "ನಾವು ಬಡವರು. ಅಷ್ಟರಲ್ಲಿ ಏನು ಸಿದ್ಧತೆ ಸಾಧ್ಯ ?" ಎಂದು ಅವರು ಕಳವಳದಿಂದ ಕೇಳಿದರೆ, "ನಾನು ಕೇಳಿದ್ದು ಹೆಣ್ಣು. ಮುಖ್ಯ ಅದನ್ನು ಕೊಡ್ತೀರಿ. ಅದಕ್ಕಿಂತ ಇನ್ನೇನು ಬೇಕು? ಪಶ್ಚಿಮವಾಹಿನೀಲಿ ಮದುವೆ ಆಗಲಿ. ನೀವು ಪ್ರತಿಯೊಬ್ಬರೂ ಬರಬೇಕು. ಖರ್ಚಿಗೆ ನಿಮಗೆ ಯೋಚನೆ ಬೇಡ" ಎಂದು ಮುನ್ನೂರು ರೂಪಾಯಿ ಕೊಟ್ಟರು. ಹೆಣ್ಣಿನವರಿಗೆ ಮದುವೆಯೆಂದು ಬಿಡಿಕಾಸೂ ಖರ್ಚಿಲ್ಲ. ಎಂಟು ದಿನದಲ್ಲಿ ಲಗ್ನ ಎಂದು ನಿಶ್ಚಯವಾಯಿತು. ಹೆಣ್ಣಿನ ಕಡೆಯವರಾಗಿ ತಾವು ಏನೂ ಖರ್ಚು ಮಾಡಲಿಲ್ಲ ಎಂದು ತಿಮ್ಮಣ್ಣಜೋಯಿಸರು ಥಾರೆಯಾದ ಮೇಲೆ ನೊಂದುಕೊಂಡಾಗ, "ಕನ್ಯಾದಾನ ಮಾಡಿದಿರಿ. ಅದಕ್ಕಿಂತ ಇನ್ನೇನು ಬೇಕು? ನಾನು ಬೇರೆಯೋನಲ್ಲ" ಎಂದು ಪುಟ್ಟಣ್ಣನವರು ಸಮಾಧಾನ ಪಡಿಸಿದರು. ಹೆಣ್ಣನ್ನು ಅಲ್ಲಿಂದ ತಮ್ಮ ಜೊತೆಯಲ್ಲೇ ಕರೆದುಕೊಂಡು ಬಂದುಬಿಟ್ಟರು. ಪುನಃ ತವರಿಗೆ ಕಳಿಸಲಿಲ್ಲ. ಆ ಹುಡುಗಿ ಗೌರಮ್ಮ ಗಂಡನ ಮನೆಗೆ ಬಂದಾಗ ತೀರಾ ಅಪ್ರಬುದ್ಧೆ. ಮನೆಯಲ್ಲಿ ಹೊಸ ವಾತಾವರಣ. ಸುತ್ತಲೂ ಅಪರಿಚಿತ ಜನರು. ವಯಸ್ಸಾಗಿದ್ದ ಹಿರಿಯರ ಮಡಿಮೈಲಿಗೆಗಳ ಹಾರಾಟ, ಆರ್ಭಟ. ಪ್ರಾರಂಭದಲ್ಲಿ ವಿಪರೀತ ಕಷ್ಟಪಟ್ಟ ಗೌರಮ್ಮ ಮುಂದೆ ಅದರ ನೂರರಷ್ಟು ಸುಖವುಂಡರು.

ಮದುವೆಯಾಗಿ ನೇರವಾಗಿ ಗಂಡನ ಮನೆಗೆ ಬಂದ ಗೌರಮ್ಮ ಅನಂತರ ತವರಿಗೆ ಹೆರಿಗೆ ಬಾಣಂತನಗಳಿಗೆ ಹೋಗಲಿಲ್ಲ. ಹೆಂಡತಿಯನ್ನು ದೂರ ಕಳಿಸಲಿಚ್ಛಿಸದೆ, ಆ ಬಡ ಸಂಸಾರದ ಮೇಲೆ ಹೊರೆ ಹಾಕಲಿಚ್ಛಿಸದೆ ಪುಟ್ಟಣ್ಣನವರು ಎಲ್ಲ ಖರ್ಚುಗಳನ್ನೂ ತಾವೇ ನಿಭಾಯಿಸಿದರು.

ಪುಟ್ಟಣ್ಣನವರು ಚಾಮರಾಜನಗರಕ್ಕೆ ಅಮಲ್ದಾರರಾಗಿ ಬಂದಾಗ ಅಗರಕ್ಕೆ ಹೋಗಿ ಬರಬೇಕಾದ ಪ್ರಸಂಗ ಒಮ್ಮೆ ಬಂದಿತು. ತಮ್ಮ ಮಾವನವರ ಮನೆಗೆ ಹೋಗಿ ಬೀದಿ ಬಾಗಿಲಿನಲ್ಲಿ ನಿಂತು "ಚೆನ್ನಾಗಿದ್ದೀರಾ ಜೋಯಿಸರೇ ?" ಎಂದು ತಮ್ಮ ಚಿಕ್ಕ ಮಾವನವರನ್ನು ಮಾತನಾಡಿಸಿದರು. "ಒಳಗೆ ಬನ್ನಿ" ಎಂದು ಅವರು ಕರೆದರೆ, "ನನಗೆ ಹೆಣ್ಣು ಕೊಟ್ಟಿದ್ದರಲ್ಲ, ಅದಕ್ಕೆ ಮೊದಲೇ ಬಂದಿದ್ದೇನಲ್ಲ" ಎಂದರು. ಸ್ವಲ್ಪ ತಡೆದು "ಬೇಕಾದರೆ ನಿಮ್ಮ ಮಗಳನ್ನು ಮೂರು ದಿವಸದ ಮಟ್ಟಿಗೆ ಕಳಿಸುತ್ತೇನೆ" ಎಂದು ಅದರಂತೆ ಕೇವಲ ಮೂರುದಿವಸಗಳ ಮಟ್ಟಿಗೆ ಹೆಂಡತಿಯನ್ನು ಕಳಿಸಿದರು. ಇನ್ನೆಂದೂ ಆಕೆ ತವರನ್ನು ನೋಡಲಿಲ್ಲ. ಯಾವ ಸಾವುನೋವಿಗೂ ಆಕೆ ತವರಿನವರ ಬಳಿಗೆ ಬರಲಿಲ್ಲ. ಆದರೆ ಪುಟ್ಟಣ್ಣನವರು ತನ್ನ ಹೆಂಡತಿಗೆ ತವರನ್ನು ತೊರೆಸಲಿಲ್ಲ. ಆಕೆ ಯಾರನ್ನಾದರೂ ನೋಡಬೇಕೆಂದರೆ, ತವರಿನವರು ಆಕೆಯನ್ನು ನೋಡಬೇಕೆಂದರೆ ಹೋಗಿಬರುವ ಪ್ರಯಾಣದ ವೆಚ್ಚವನ್ನು ಕೊಟ್ಟು ಕರೆಸಿಕೊಳ್ಳುತ್ತಿದ್ದರು.

ಗೌರಮ್ಮನ ತಂದೆ ತಿಮ್ಮಣ್ಣ ಜೋಯಿಸರು ಮೃತರಾದಾಗ ಮುನ್ನೂರು ರೂಪಾಯಿಗಳನ್ನು ಕೊಟ್ಟು ಕರ್ಮಾಂತರಗಳನ್ನು ಸಾಂಗವಾಗಿ ಮಾಡಲು ಹೇಳಿದರು. ಅಲ್ಲದೆ ಅವರ ಹಲವು ಸಾಲಗಳನ್ನು ತೀರಿಸಿದರು. ಗೌರಮ್ಮನವರ ತಾಯಿ ಸುಬ್ಬಮ್ಮ

ನವರಿಗೆ ತಿಂಗಳಿಗೆ ಇಪ್ಪತ್ತು ರೂಪಾಯಿಗಳಂತೆ ಆಕೆ ಎಲ್ಲಿದ್ದರೂ ಕಳಿಸುತ್ತಿದ್ದರು. ಅನೇಕ ಬಾರಿ ಆಕೆಯನ್ನು ಕರೆಸಿ ತಮ್ಮಲ್ಲೇ ಇಟ್ಟುಕೊಂಡಿರುತ್ತಿದ್ದರು. ಆಗಲೂ ಆಕೆಗೆ ಕೊಡುವ ಇಪ್ಪತ್ತು ರೂಪಾಯಿಗಳನ್ನು ತಪ್ಪಿಸುತ್ತಿರಲಿಲ್ಲ.

ತಮ್ಮ ಮದುವೆಗೆ ಜಾತಕ ನೋಡಿ "ದಿವ್ಯವಾಗಿದೆ" ಎಂದ ಚಿಕ್ಕ ಮಾವನವರು ವೆಂಕಟೇಶ ಜೋಯಿಸರು ತಮ್ಮ ಪತ್ನಿ ಮಗ ಇವರೊಂದಿಗೆ ರಾಮೇಶ್ವರಕ್ಕೆ ಹೋಗಿ ಬಂದಾಗ ಒಂದು ತಿಂಗಳು ಪುಟ್ಟಣ್ಣನವರ ಮನೆಯಲ್ಲಿ ಇದ್ದರು. "ಇವರಿಂದಲೇ ನೀನು ಈ ಮನೆಗೆ ಕಾಲಿಟ್ಟೆ. ಇವರನ್ನು ಹೇಗೆ ನೋಡಿಕೋಬೇಕೋ ಅದನ್ನು ನಾನು ನಿನಗೆ ಹೇಳಬೇಕಿಲ್ಲ" ಎಂದು ಪುಟ್ಟಣ್ಣನವರು ತಮ್ಮ ಪತ್ನಿಗೆ ಹೇಳಿದರು. ಆಗ ಪುಟ್ಟಣ್ಣನವರು ಸುಣ್ಣಕಲ್ಲುಪೇಟೆಯಲ್ಲಿದ್ದರು. ಹಿರಿಯ ಮಗಳು ಲಕ್ಷ್ಮಮ್ಮ ಮದುವೆಯ ವಯಸ್ಸಿಗೆ ಬಂದಿದ್ದರು. "ಮನೆ ಕಟ್ಟಲೋ, ಮದುವೆ ಮಾಡಲೋ" ಎಂದು ಪುಟ್ಟಣ್ಣನವರು ವೆಂಕಟೇಶ ಜೋಯಿಸರನ್ನು ಕೇಳಿದಾಗ "ಮನೆ ಕಟ್ಟಿಸಿ, ಎಲ್ಲಾ ಅನುಕೂಲವಾಗುತ್ತೆ. ಹೊಸ ಮನೇಲೆ ಧಾರೆ" ಎಂದರು. ಅದರಂತೆ ಬಸವನಗುಡಿ ವಿಸ್ತರಣದಲ್ಲಿ ಪುಟ್ಟಣ್ಣನವರು ಮನೆ ಕಟ್ಟಿಸಿ ಅನಂತರ ಅಲ್ಲೇ ಮಗಳ ಮದುವೆಯನ್ನು ಮಾಡಿದರು.

ಇಚ್ಛೆಯನರಿವ ಮಡದಿ ಗೌರಮ್ಮ ಪುಟ್ಟಣ್ಣನವರಿಗೆ ಅವರ ಜೀವನದಲ್ಲಿ ದೊರೆತ ಸೌಭಾಗ್ಯಗಳಲ್ಲಿ ಒಂದು. ಗೌರಮ್ಮನವರಿಗೆ ಗಂಡನಲ್ಲಿ ಅಪಾರ ಗೌರವ, ಕೃತಜ್ಞತೆಗಳಿದ್ದವು. ಹಳ್ಳಿಯ ಹುಡುಗಿಯಾಗಿದ್ದ ತನ್ನನ್ನು ವರಿಸಿ, ವಿದ್ಯೆಯನ್ನು ಹೇಳಿಕೊಟ್ಟು ಇಷ್ಟರ ಮಟ್ಟಿಗೆ ಮಾಡಿದರೆಂಬ ಅರಿವು ಆಕೆಯಲ್ಲಿ ಯಾವಾಗಲೂ ಎಚ್ಚರವಾಗಿತ್ತು. ತನ್ನ ಪತಿ ಬೆಂಕಿಯಂತೆ ಕೋಪಿಷ್ಠರು. ಅದರಂತೆಯೇ ಚಿನ್ನದಂಥವರನ್ನು ಆಳೆಯುವವರು, ಪರಿಶುದ್ಧತೆಯನ್ನು ಪರೀಕ್ಷಿಸುವವರು ಎಂದು ಆಕೆ ಬಲ್ಲವರಾಗಿದ್ದರು.

ಆಕೆ ಶ್ಯಾಮವರ್ಣದವರು, ಪುಟ್ಟಣ್ಣನವರು ಶುಭ್ರ ಬಿಳಿಯ ಬಣ್ಣದವರು. ಅವರಿಬ್ಬರಿಗೂ ವಯಸ್ಸಿನ ವ್ಯತ್ಯಾಸವೂ ಇತ್ತು. ಆಕೆಗೆ ವೇದಾಂತದಲ್ಲಿ ಆಸಕ್ತಿ. ಪುಟ್ಟಣ್ಣನವರಿಗೆ ಅನಾಸಕ್ತಿ ಇಲ್ಲದಿದ್ದರೂ ಅದಕ್ಕೆ ಅವರು ಮನಸ್ಸು ತೆತ್ತವರಲ್ಲ. ಆದರೂ ಹೆಂಡತಿಗೆ ಅವರು ಯಾವುದಕ್ಕೂ ಅಡ್ಡಿ ಮಾಡಲಿಲ್ಲ. ಪೂಜೆ ಪುನಸ್ಕಾರ, ವ್ರತ ನಿಯಮಗಳಲ್ಲಿ ಆಕೆ ಮನಸ್ಸಿಟ್ಟಿದ್ದರು. ಉಳುಕುಮಂತ್ರ ಮೊದಲಾದುವನ್ನು ಕಲಿತಿದ್ದರು. ಸುತ್ತಮುತ್ತಲಿನ ಜನಕ್ಕೆ ಬೇಕಾದವರಾಗಿದ್ದರು. ಸ್ವಭಾವತಃ ಆಕೆಯದು ದೊಡ್ಡಗುಣ. ಯಾರಾದರೂ ಏನಾದರೂ ಯಾಚನೆ ಮಾಡಿದರೆ ಇಲ್ಲ ಎನ್ನದವರು, ಬಹಳ ನಿಧಾನದ ಸ್ವಭಾವ, ತತ್ತ್ವನಿಷ್ಠರು. ಕಡೆಕಡೆಗೆ ತನ್ನ ಕೈಗೇ ಯಜಮಾನಿಕೆ ಬಂದಾಗಲೂ ಆಕೆ ಆದರಣೆಯನ್ನು ಕೈಬಿಡದೆ ಗಾಂಭೀರ್ಯದಿಂದ ನಡೆದುಕೊಂಡರು. ಒಳ್ಳೆಯ ನೆಮ್ಮದಿವಂತ ಮನಸ್ಸು. ಆಕೆ ಚೆನ್ನಾಗಿ ಹಾಡುವರು. ಪುಟ್ಟಣ್ಣನವರಿಗೂ ಸಂಗೀತದ ಆಸಕ್ತಿ ಇತ್ತು. ಸ್ವತಃ ಕೆಲವು ಮಟ್ಟುಗಳನ್ನು ಹಾಕಿ ಇದು ಹೀಗೆ ಎಂದು ಹೇಳಿಕೊಟ್ಟು ಹಾಡಿಸುತ್ತಿದ್ದರು. ಕಸೂತಿಯ ಕೈ ಚಳಕವನ್ನು ಆಕೆ ತೋರಿಸಿದಾಗ ಅದಕ್ಕೂ ಪ್ರೋತ್ಸಾಹಿಸುತ್ತಿದ್ದರು.

ಗೌರಮ್ಮನವರ ತಂಗಿ ಗುಂಡಮ್ಮ ಅಕ್ಕನ ಮನೆಯಲ್ಲೇ ಹೆಚ್ಚು ಕಡಮೆ ಅವರ ಜೊತೆಯಲ್ಲೇ ಬೆಳೆದರು. ಮುಂದೆ ಪುಟ್ಟಣ್ಣನವರ ಸಂಬಂಧಿಯೊಡನೆ ಆಕೆಯ ಮದುವೆ ಆಯಿತು. ಆತ ಒಳ್ಳೆಯ ಸ್ವಭಾವದವನಲ್ಲ. ಪುಟ್ಟಣ್ಣನವರ ಜೇಬಿನಿಂದಲೇ ದುಡ್ಡು ಹಾರಿಸುವ ಕೈಂಕರ್ಯವನ್ನು ಹಲವು ಬಾರಿ ಮಾಡುತ್ತಿದ್ದ. ಇದರ ಮೇಲೆ ಗುಂಡಮ್ಮನ ಬಾಯಿ ಜೋರಿನದು. ಗಂಡಹೆಂಡಿರ ಸಂಬಂಧ ಒಡೆದದ್ದು ಅನಿರೀಕ್ಷಿತ ವಾಗಿರಲಿಲ್ಲ. ಮುಂದೆ ಗುಂಡಮ್ಮ ಅವರ ಮಗಳು ಲಕ್ಷ್ಮೀನರಸಮ್ಮ ಇಬ್ಬರೂ ಪುಟ್ಟಣ್ಣನವರ ಆಶ್ರಯದಲ್ಲೇ ಉಳಿದರು. ಆಕೆಯೂ ಇವರೆಲ್ಲರಿಗೆ ಚೆನ್ನಾಗಿ ಹೊಂದಿ ಕೊಂಡಿದ್ದರು. ಗೌರಮ್ಮನವರ ಬಸಿರುಬಾಣಂತನಗಳಲ್ಲಿ, ಮಿಕ್ಕಂತೆ ಮನೆಗೆಲಸ ಅಡಿಗೆ ಎಲ್ಲದರಲ್ಲಿ ಆಕೆ ದುಡಿಯುತ್ತಿದ್ದರು. ಆಕೆ ಪುಟ್ಟಣ್ಣನವರ ಮನೆಯಲ್ಲಿ ಒಬ್ಬರಾಗಿ ನಡೆದುಕೊಂಡರು. ಆಕೆಯ ಮಗಳ ಮದುವೆಯನ್ನು ತನ್ನ ಹೆಣ್ಣುಮಕ್ಕಳ ಮದುವೆ ಯಂತೆಯೇ ಪುಟ್ಟಣ್ಣನವರು ಮಾಡಿದರು. ಆ ಮಗಳ ಹೆರಿಗೆ ಬಾಣಂತನಗಳೂ ಪುಟ್ಟಣ್ಣನವರ ಮನೆಯಲ್ಲೇ ನಡೆದುವು. ಜೀವನದಲ್ಲಿ ಅನೇಕ ಪೆಟ್ಟುಗಳನ್ನು ತಿಂದ ಗುಂಡಮ್ಮನ ಬಾಯಿ ವಿಚಿತ್ರವಾದ ಜೋರನ್ನು, ಕಟಕಿಯನ್ನು ಸಂಪಾದಿಸಿತ್ತು. ಅಂತಹ ಹೊತ್ತಿನಲ್ಲಿ ಅನ್ನಿಸಿಕೊಂಡವರು ಬೇಸರಪಡುವುದು ಸಹಜವಾಗಿತ್ತು. "ಸಂಕಟ, ನೋವು ಆಕೆಯನ್ನು ಹೀಗೆ ಆಡಿಸುತ್ತಿದೆ. ಆಕೆಯ ನಿರಾಶೆ ಕಡಿಮೆಯಾದದ್ದಲ್ಲ. ಸದ್ಯ, ಬಾಯಿ ಮಾತ್ರ ತಾನೇ ಮಾಡುವುದು. ನೀವೆಲ್ಲಾ ಸುಖವಾಗಿದ್ದೀರಿ. ಸ್ವಲ್ಪ ತಾಳ್ಮೆ ಯಿಂದಿರಿ. ಅದೇ ನೀವು ಮಾಡಬಹುದಾದ ಉಪಕಾರ" ಎನ್ನುತ್ತಿದ್ದರು ಪುಟ್ಟಣ್ಣ ನವರು.

ಪುಟ್ಟಣ್ಣನವರಿಗೆ ತಮ್ಮ ಮೊದಲ ಸೊಸೆ ಪಾರ್ವತಮ್ಮನನ್ನು ಕಂಡರೆ ಬಲು ಮೆಚ್ಚುಗೆ. "ಪಾರ್ವತೀ ದೇವಿ ಬೇರೆ ಅಲ್ಲ, ನನ್ನ ಸೊಸೆ ಬೇರೆ ಅಲ್ಲ" ಎನ್ನುತ್ತಿದ್ದರು. ಪಾರ್ವತಮ್ಮನವರ ಕೊನೆಯ ಹೆರಿಗೆ ಸುಲಭವಾಗಿ ಆಗಲಿಲ್ಲ. ಆಕೆ ಅನುಭವಿಸುತ್ತಿದ್ದ ವೇದನೆ ನೋಡಿ ಎಲ್ಲರಿಗೂ ಕಳವಳ. ಪುಟ್ಟಣ್ಣನವರಿಗೆ ಕಣ್ಣಲ್ಲಿ ನೀರು ತುಂಬಿತ್ತು. "ನನ್ನ ಸೊಸೆ ಹಿಂದೆ ಬರುತ್ತಾಳೋ ಇಲ್ಲವೋ" ಎಂದು ಕಳವಳಪಡುತ್ತಿದ್ದರಂತೆ. ಮದುವೆಯೇ ಬೇಡ ಎನ್ನುತ್ತಿದ್ದ ಮಗನನ್ನು ಸಂಸಾರಕ್ಕೆ ಕಟ್ಟಿಹಾಕಿದ ಈ ಸೊಸೆ ಯನ್ನು ಕಂಡರೆ ಪುಟ್ಟಣ್ಣನವರಿಗೆ ಮಮತೆ ಬಹಳವಾಗಿತ್ತು.

ತಾವು ಶ್ರೀಮಂತರಾದರೂ ಬಡವರ ಮನೆಗೆ ಮಗಳನ್ನು ಕೊಡಲು ಹಿಂಜರಿಯ ಲಿಲ್ಲ. ಹಿರಿಯ ಮಗಳು ಲಕ್ಷ್ಮಮ್ಮನನ್ನು ಅನಾಥಾಲಯದಲ್ಲಿ ಬೆಳೆದ ಶಂಕರಯ್ಯ ಎಂಬ ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಿದರು. ಕಡೆಯವರೆಗೂ ಈ ಮಾವ ಅಳಿಯಂದಿರಲ್ಲಿ ಅನ್ಯೋನ್ಯವಾದ ಪ್ರೀತಿ ವಿಶ್ವಾಸಗಳಿದ್ದುವು.

ದುಡ್ಡಿನ ಮೋಹ ಮಾತ್ರವಲ್ಲದೆ ಇತರ ಅನೇಕ ಮೋಹಗಳಿಂದಲೂ ಅವರು ಮುಕ್ತರಾಗಿದ್ದರು. ವಿದ್ಯೆ ಕೂಡ ನಿಜವಾದ ಯೋಗ್ಯತೆಯ ಒರೆಗಲ್ಲು ಅಲ್ಲ ಎಂದು ಅವರು ತಿಳಿದಿದ್ದರು. ಸುಂದರಿಯೂ ಜಾಣೆಯೂ ಆದ ತಮ್ಮ ಎರಡನೆಯ ಮಗಳನ್ನು

ಅಯ್ಯಾಶಾಸ್ತ್ರಿಗಳ ಎರಡನೆಯ ಮಗ ರಾಮಸ್ವಾಮಿ ಶಾಸ್ತ್ರಿಗಳಿಗೆ ಕೊಡುವ ನಿಶ್ಚಯ ಮಾಡಿದರು. ಈ ರಾಮಸ್ವಾಮಿ ಶಾಸ್ತ್ರಿ ಪ್ರತಿಪರೀಕ್ಷೆಯಲ್ಲೂ ನಪಾಸು. ಮೇಲಾಗಿ ಶ್ರೀಮಂತನಲ್ಲ. ಆದರೆ ಯೋಗ್ಯ ಅಹುದೇ ಅಲ್ಲವೇ ಎಂಬ ಪರೀಕ್ಷೆಯಲ್ಲಿ ಆತ ಉತ್ತೀರ್ಣನಾದ ಮೇಲೆ ಮಿಕ್ಕ ವಿಚಾರಗಳನ್ನು ಪುಟ್ಟಣ್ಣನವರು ಸಡ್ಡೆಗೈಯಲಿಲ್ಲ.

ಅವರ ಕೊನೆಯ ಮಗಳು ಸರಸ್ವತಮ್ಮನಿಗೆ ಎಂಟು ವರುಷಕ್ಕೇ ಮದುವೆ ಮಾಡಿದರು. "ನನಗೆ ವಯಸ್ಸಾಯಿತು, ನಾನು ನನ್ನ ಮಗಳನ್ನು ಬೇರೆಯವರ ಕೈಗೆ ಕೊಡಬಾರದು" ಎಂಬುದೇ ಅವರ ನಿತ್ಯಪಲ್ಲವಿ. ಈ ಮಗಳ ಮದುವೆಯಲ್ಲಿ ಒಂದು ಸ್ವಾರಸ್ಯವಾದ ಘಟನೆ ನಡೆಯಿತು. ವರ ಲಕ್ಷ್ಮೀನರಸಿಂಹಯ್ಯ ಬಿ. ಇ. ಓದುವಾಗ ಪುಟ್ಟಣ್ಣನವರ ಮನೆಯಲ್ಲೇ ಇದ್ದವನು. ಆ ಮದುವೆಗೆ ಇನ್ನೊಬ್ಬ ಬೀಗರಾದ ಅಯ್ಯಾಶಾಸ್ತ್ರಿಗಳೂ ಬಂದಿದ್ದರು. ಅವರ ಮಗ ಎಸ್. ಜಿ. ಶಾಸ್ತ್ರಿಗಳು ಆಗ ಇಂಗ್ಲೆಂಡಿಗೆ ಹೋಗಿದ್ದರು. ಆಗ ವಿದೇಶಕ್ಕೆ ಹೋಗಿ ಬಂದವರನ್ನು ಲಂಡನ್‌ಪಾರ್ಟಿ ಎನ್ನುತ್ತಿದ್ದರು. ಅವರನ್ನು ದೂರವಿರಿಸುತ್ತಿದ್ದರು. ಮದುವೆಯ ಚಪ್ಪರದಲ್ಲಿದ್ದ ಅಯ್ಯಾಶಾಸ್ತ್ರಿಗಳು ಹೊರಗೆ ಹೋಗುವವರೆಗೂ ತಾನು ಹಸೆಯ ಮೇಲೆ ಬರುವುದಿಲ್ಲ ಎಂದರು, ವರನ ತಂದೆಯಾದ ಸುಬ್ಬರಾಯರು. ಪುಟ್ಟಣ್ಣನವರು ಟೊಳ್ಳು ಸಂಪ್ರದಾಯಗಳನ್ನು ಕುರಿತು ಒಂದು ಚಿಕ್ಕ ಉಪನ್ಯಾಸ ಮಾಡಿದರು, ಫಲಕಾರಿಯಾಗಲಿಲ್ಲ. "ಹಾಗೂ ನಿಮಗೆ ನಂಬಿಕೆಯಿದ್ದಲ್ಲಿ, ಒಂದು ಮಾತು, ಇನ್ನೂ ಎಸ್. ಜಿ. ಶಾಸ್ತ್ರಿಗಳು ಹಿಂದಿರುಗಿ ಬಂದೂ ಇಲ್ಲವಲ್ಲ" ಎಂದರು. ಆದರೆ ಸುಬ್ಬರಾಯರು ಒಪ್ಪಲಿಲ್ಲ. ಪುಟ್ಟಣ್ಣನವರ ತಾಳ್ಮೆ ಹಾರಿಹೋಯಿತು. ಹಾಗೆ ನೋಡಿದರೆ, ಇದುವರೆಗೆ ಅವರು ತಡೆದದ್ದೇ ಹೆಚ್ಚು. ಎದುರಿಗೆ ಬಂದು ನಿಂತು ಸ್ಪಷ್ಟವಾಗಿ ಹೇಳಿದರು, "ಅಯ್ಯಾಶಾಸ್ತ್ರಿಗಳು ನನಗೆ ಈಗಾಗಲೇ ಬೀಗರು. ಅವರೊಡನೆ ಬಾಂಧವ್ಯ ಬೆಳೆಸಿ ಆಗಿಹೋಗಿದೆ. ನಿಮ್ಮೊಡನೆ ಆಗಿಲ್ಲ. ನಾನು ಅಯ್ಯಾಶಾಸ್ತ್ರಿಗಳಿಗೆ ಹೋಗೆಂದು ಹೇಳುವುದೂ ಇಲ್ಲ. ನೀವು ಹಸೆಮಣೆಯ ಮೇಲೆ ಬರುವುದೂ ಬೇಡ. ನಿಮ್ಮ ಮನೆಗೆ ನನ್ನ ಮಗಳು ಸೊಸೆಯಾಗುವುದೂ ಬೇಡ." ಒಳಗೆ ಕೊಠಡಿಯಲ್ಲಿ ನಡೆಯುತ್ತಿದ್ದ ಚರ್ಚೆ ಈ ವೇಳೆಗೆ ಹೊರಗೂ ತಲುಪಿತ್ತು. ಸುಬ್ಬರಾಯರು ಪುಟ್ಟಣ್ಣನವರ ಖಾರವಾದ ಮಾತಿಗೆ ಉತ್ತರಿಸುವ ಮೊದಲೇ ಹೊರಗೆ ನಿಂತುಕೊಂಡಿದ್ದ ಅಯ್ಯಾಶಾಸ್ತ್ರಿಗಳು ಒಳಗೆ ಬಂದರು. ಅವರು ಲೋಕವನ್ನು ಬಲ್ಲವರು, ಸಹೃದಯಿಗಳು. ನೇರವಾಗಿ ಪುಟ್ಟಣ್ಣನವರ ಬಳಿ ಬಂದು ಹೇಳಿದರು, "ನೋಡಿ, ನಾನು ಇರುವಷ್ಟು ಮಾತ್ರಕ್ಕೆ ಮದುವೆ ನಿಲ್ಲುವುದು ಬೇಡ. ನಿಮ್ಮ ಮನಸ್ಸು ನನಗೆ ಗೊತ್ತು. ನಾನೇನೂ ತಪ್ಪು ತಿಳಿಯುವುದಿಲ್ಲ. ಮದುವೆ ನಿರ್ವಿಘ್ನವಾಗಿ ನಡೆಯಲಿ. ನನಗೆ ಇನ್ನು ಎಲೆಅಡಿಕೆ ಕೊಡಿ" ಎಂದು ತಾಂಬೂಲ ಸ್ವೀಕರಿಸಿ ತಾವಾಗಿ ಹೊರಬಂದರು. ಮದುವೆ ಸುಮುಖವಾಗಿ ನಡೆಯಿತು.

ಯಾವ ಹೆಣ್ಣುಮಗಳ ಮದುವೆಯನ್ನೂ ತಾನು ಅಮಲ್ದಾರ ಎಂಬ ಜಂಭದಿಂದ ಪುಟ್ಟಣ್ಣನವರು ಮಾಡಲಿಲ್ಲ. ಬಿಗುಮಾನವಿಲ್ಲದೆ ತಾವೇ ಯೋಗ್ಯ ವರನನ್ನು ಆರಿಸುತ್ತಿದ್ದರು. ಮನೆತನ, ತಾಯಿತಂದೆ, ಗುಣ ಇವನ್ನು ನೋಡುತ್ತಿದ್ದರೇ ಹೊರತು ದುಡ್ಡು, ಅಂತಸ್ತು, ಸ್ಥಾನಮಾನ ನೋಡಲಿಲ್ಲ. ತಮ್ಮ ಹಿರಿಯಮಗನ ಮದುವೆಯಲ್ಲಿ ಕೂಡ ಅವರು ಅತ್ಯಂತ ವಿನೀತರಾಗಿದ್ದರು. ಗಂಡಿನ ತಂದೆ, ಸರ್ಕಾರಿ ಹುದ್ದೆಯಲ್ಲಿರುವವರು ಎಂಬ ಅಂಶಗಳು ಯಾವುವೂ ಅವರನ್ನು ನೋಡಿದರೆ ತಿಳಿಯುತ್ತಿರಲಿಲ್ಲ. ಮದುವೆಯ ಊಟೋಪಚಾರಗಳಲ್ಲಿ ಅವರಿಗೆ ಬೇರೆಯಾಗಿ ಮೊದಲ ಮಣೆಯನ್ನು ತೋರಿಸಿದರೆ, "ಗಂಡಿನ ತಂದೆ ಎಂಬ ಜಂಭ ನನಗಿಲ್ಲ. ಎಲ್ಲರ ಜೊತೆ ಕುಳಿತುಕೊಳ್ಳುತ್ತೇನೆ" ಎನ್ನುತ್ತಿದ್ದರು.

ಹೆಚ್ಚಿನ ಮಂದಿ ನೆಂಟರನ್ನು ಕಂಡರೆ ಅವರಿಗೆ ಅಸಂತೃಪ್ತಿ. ಯಾರನ್ನೂ ಹೆಚ್ಚಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಬಹಳ ದಿನ ಇರಿಸಿಕೊಳ್ಳುತ್ತಲೂ ಇರಲಿಲ್ಲ. ಕೆಲಸವಿಲ್ಲದೆ ಅವರು ಇವರ ಬಳಿ ಬಂದರೆ ಎಷ್ಟೋ ಅಷ್ಟು ಮಾತಿನಲ್ಲಿ ಮುಗಿಸಿ ಕಳಿಸಿಬಿಡುವರು. ಹಾಗೂ ಮೊಂಡರಾಗಿ ನಿಂತರೆ ಗಾಡಿ ತಂದು ನಿಲ್ಲಿಸಿ ಹೊರಡಲು ಹೇಳಲೂ ಹಿಂದೆಗೆಯದ ಕಟ್ಟುನಿಟ್ಟಿನ ಮನುಷ್ಯರಾಗಿದ್ದರು. ಆದರೆ ತಮ್ಮಿಂದಾಗುವ ಕೆಲಸವಾದರೆ, ವಿದ್ಯಾರ್ಥಿಗಳಿಗೆ ಸಹಾಯ ಮಾಡುವ ವಿಷಯವಾದರೆ, ಆದರದಿಂದ ತಮ್ಮಲ್ಲೇ ಇರಿಸಿಕೊಳ್ಳುವರು. ಅವರ ಉಸ್ತುವಾರಿ ಕೂಡ ನೋಡಿಕೊಳ್ಳುವರು.

### ವೃತ್ತಿಜೀವನದ ಕೆಲವು ಘಟನೆಗಳು

ಪುಟ್ಟಣ್ಣನವರು ತಮ್ಮ ವೃತ್ತಿಜೀವನದಲ್ಲಿ ಅತ್ಯಂತ ಪರಿಶುದ್ಧರಾಗಿದ್ದರು. ಮೃದುವಾದ ಅಂತರಂಗವಿದ್ದರೂ ಖಂಡಿತವಾದಿಗಳಾಗಿದ್ದರು. ಲಂಚ ರುಷುವತ್ತು ಎಂದರೆ ಸಾಕು ಉರಿದುಬೀಳುತ್ತಿದ್ದರು. ಪ್ರಾಮಾಣಿಕತೆ ಅವರ ಜೀವನದ ಒಂದು ಬಹುಮುಖ್ಯ ಅಂಗವಾಗಿತ್ತು. ಅವರು ಎಷ್ಟು ಸತ್ಯನಿಷ್ಠರಾಗಿದ್ದರೆಂಬುದನ್ನು ಈ ಕೆಳಗಿನ ಕೆಲವು ಘಟನೆಗಳು ತೋರಿಸುತ್ತವೆ.

ಅವರು ತಿಂಗಳಿಗೆ ಹತ್ತುದಿನ ಸಂಚಾರಕ್ಕೆ ಹೋಗಬೇಕಾಗಿತ್ತು. ಹೋದ ಕಡೆಗೆಲ್ಲಾ ಒಂದು ಸೆಟ್ ಪಾತ್ರೆ, ಅಡಿಗೆಗೆ ಬೇಕಾಗುವ ಅಕ್ಕಿ, ಬೇಳೆ, ಸಾಂಬಾರ ವಸ್ತುಗಳು, ಒಂದು ಕಬ್ಬಿಣದ ಮಡಿಸುವ ಮಂಚ ತೆಗೆದುಕೊಂಡು ಹೋಗುತ್ತಿದ್ದರು. ಯಾವ ರೀತಿಯ ಮಾಮೂಲನ್ನೂ ಅವರು ಸ್ವೀಕರಿಸುತ್ತಿರಲಿಲ್ಲವಷ್ಟೇ ಅಲ್ಲ, ಕೊಡಲು ಬಂದವರನ್ನು ಚೆನ್ನಾಗಿ ಬೈದು ಕಳಿಸುತ್ತಿದ್ದರು. ಸಾಮಾನ್ಯವಾಗಿ ಅಡಿಗೆಯವನನ್ನು ಕರೆದುಕೊಂಡು ಹೋಗುತ್ತಿದ್ದರು. ಇಲ್ಲದಿದ್ದರೆ ಹಳ್ಳಿಯವರಿಂದ ಹಾಲು, ಬಾಳೆಹಣ್ಣು ಮೊದಲಾದುವನ್ನು ಕೊಂಡು ತಿನ್ನುತ್ತಿದ್ದರು. ಗ್ರಾಮವಾಸಿಗಳು ಎಷ್ಟು ಒತ್ತಾಯ ಮಾಡಿದರೂ ಅವರು ತರುತ್ತಿದ್ದ ತರಕಾರಿ, ಹಾಲು, ಹಣ್ಣು, ಬೆಣ್ಣೆ, ತುಪ್ಪ ಮೊದಲಾದುವನ್ನು ಮುಟ್ಟುತ್ತಿರಲಿಲ್ಲ. ಹಾಗೆ ಬೇಕಾದರೆ ದುಡ್ಡು

ಕೊಟ್ಟು ಕೊಳ್ಳುತ್ತಿದ್ದರು. ಪುಕ್ಕಟೆ ಎಂದಿಗೂ ಬೇಡ ಎನ್ನುತ್ತಿದ್ದರು. ಒಂದು ಸಲ ಗ್ರಾಮಸ್ಥರು ಅಮಲ್ದಾರರಿಗೆ ಪದಾರ್ಥಗಳನ್ನು ಬೆಲೆಗೆ ಕೊಡಬಾರದು ಎಂದು ನಿಶ್ಚಯಿಸಿದರು. ಪುಟ್ಟಣ್ಣನವರು ಜಗ್ಗಲಿಲ್ಲ, ತಮ್ಮ ಅಧಿಕಾರವನ್ನೂ ಚಲಾಯಿಸ ಲಿಲ್ಲ, ತಮ್ಮ ನಂಬಿಕೆಗೆ ಊನವನ್ನೂ ತಂದುಕೊಳ್ಳಲಿಲ್ಲ. ಬೆಳಿಗ್ಗೆಯಿಂದ ಸಂಜೆಯ ವರೆಗೂ ಉಪವಾಸವೇ ಇದ್ದು ಕೆಲಸ ಮುಗಿಸಿ ಹೋದರು. ಅವರ ತಾಲ್ಲೂಕಿಗೆ ಬೇರೆ ಮೇಲಧಿಕಾರಿಗಳು ಬಂದರೆ ಅವರಿಗೂ ಇದೇ ರೀತಿ. ಊಟ ಉಪಚಾರಗಳಿಗೆ ಗ್ರಾಮಸ್ಥರಿಂದ ವಸೂಲು ಮಾಡಿದ್ದಕ್ಕೆಲ್ಲಾ ಆಯಾ ಪದಾರ್ಥಗಳ ಬೆಲೆಯನ್ನು ರಸೀತಿ ಕೊಟ್ಟು ಮೇಲಧಿಕಾರಿಗಳಿಂದ ದುಡ್ಡು ತೆಗೆದುಕೊಂಡು ಆಯಾ ಗ್ರಾಮಸ್ಥರಿಗೆ ಕೊಡಿಸುತ್ತಿದ್ದರು. ಯಾರ ಹಂಗಿಗೂ ಸಿಲುಕದೆ ಇದ್ದರೆ ಮಾತ್ರ ಪ್ರಾಮಾಣಿಕವಾಗಿ ಬಾಳುವುದು ಸಾಧ್ಯ ಎಂಬ ತರ್ಕ ಸದಾ ಅವರ ಗಮನದಲ್ಲಿರುತ್ತಿತ್ತು.

ಜಮಾಬಂದಿಗೆ ಹೋದಾಗ ಲೆಕ್ಕಾಚಾರ ಸರಿಯಾಗಿದ್ದರೆ ಸರಿ, ಇಲ್ಲವಾದರೆ ಗ್ರಹಚಾರ ಬಿಡಿಸುತ್ತಿದ್ದರು. "ನನಗೆ ಬೇಕಾದ್ದು ಜಮಾಬಂದಿ ಮಾತ್ರ" ಎನ್ನುತ್ತಿ ದ್ದರು. ಯಾವ ದಾಕ್ಷಿಣ್ಯಕ್ಕಾಗಲೀ ಹೊರ ಹೊಳಪಿಗಾಗಲೀ ಡೌಲಿಗಾಗಲೀ ಸೋಲುತ್ತಿರಲಿಲ್ಲ. ಎಲ್ಲವೂ ಸರಿಯಾಗಿದ್ದರೆ ಮಿತವಾದ ಮುಗುಳ್ನಗೆಯೊಡನೆ ಪ್ರಸಂಗ ಮುಗಿಸುತ್ತಿದ್ದರು.

ಇನ್ನೊಂದು ಬಾರಿ ಅವರು ಮನೆಗೆ ಬಂದಾಗ ಎರಡು ಬಾಳೆಗೊನೆಗಳು ಕಂಡವು. ಎಲ್ಲಿಯದೆಂದು ಇವರು ಯೋಚಿಸುತ್ತಿರುವಾಗ ತಿನ್ನಲೆಂದು ಇವರಿಗೂ ಎರಡು ಹಣ್ಣು ತಟ್ಟೆಯಲ್ಲಿ ಬಂತು. ಹಣ್ಣನ್ನು ಮುಟ್ಟಲೂ ಇಲ್ಲ. ಎಲ್ಲಿಯದು ಎಂಬ ಮಾಮೂಲಿನ ಪ್ರಶ್ನೆ ಕೇಳಿದರು. ಆಗ ತಾನೇ ಉರಿಬಿಸಿಲಿನಲ್ಲಿ ಬಂದ ಅವರ ಮುಖ, ನಡೆದಿರಬಹುದಾದ್ದನ್ನು ಊಹಿಸಿಕೊಂಡೋ ಏನೋ, ಕ್ರಮಕ್ರಮೇಣ ಕಾಪೇರುತ್ತಿತ್ತು. ವಿಚಾರ ತಿಳಿದು ಆರು ಮೈಲಿಗಳ ದೂರದಲ್ಲಿದ್ದ ರೈತನ ಮನೆಗೆ ಅದನ್ನು ಹಿಂದಿರುಗಿಸಿದ್ದಲ್ಲದೆ, ಆವರೆಗೆ ಖರ್ಚಾಗಿದ್ದ ಇಪ್ಪತ್ತೈದು ಹಣ್ಣುಗಳ ಬೆಲೆ ಯನ್ನು ಕಳಿಸಿಕೊಟ್ಟರು. ಯಾರೇ ಆಗಲಿ, ಏನು ತಂದುಕೊಟ್ಟರೂ ಸ್ವೀಕರಿಸುತ್ತಿರ ಲಿಲ್ಲ. "ಮೊದಲು ತಗೊಂಡು ಹೊರಡಿ" ಎನ್ನುತ್ತಿದ್ದರು. ಲಂಚ ಯಾವುದೇ ರೂಪದಲ್ಲಿರಲಿ ಅದರ ಸಂಪರ್ಕ ತಮ್ಮೊಡನೆ ಬಾರದಂತೆ ಎಚ್ಚರವಾಗಿರುತ್ತಿದ್ದರು.

ಒಂದು ಸಾರಿ ಸಂಚಾರಕ್ಕೆ ಹೋಗಿದ್ದಾಗ ಅಡಿಗೆಯವನು ಯಾರ ಬಳಿ ಯಿಂದಲೋ ಸಂಡಿಗೆಯನ್ನು ತಂದ. ಪುಟ್ಟಣ್ಣನವರು ಅದನ್ನು ತಿನ್ನುವುದರ ಬದಲು ಅಡಿಗೆಯವನು ಬೈಗಳನ್ನು ಚೆನ್ನಾಗಿ ತಿನ್ನಬೇಕಾಯಿತು.

ಒಮ್ಮೆ ಅವರ ಪಕ್ಕದ ಮನೆಯವರು ಮನೆ ಖಾಲಿ ಮಾಡಿ ಹೋದರು. ಇವರ ಮನೆ ಪಕ್ಕದ ಮನೆ ಎರಡೂ ಸರ್ಕಾರದವರು ಇಲಾಖೆಯವರಿಗಾಗಿ ಕಟ್ಟಿಸಿಕೊಟ್ಟವು. ಪುಟ್ಟಣ್ಣನವರ ಹೆಂಡತಿ ಆ ಹೊತ್ತಿಗೆ ಅವಶ್ಯವೆನಿಸಿದ್ದರಿಂದಲೂ ಮನೆಯಲ್ಲಿ ಇಲ್ಲದೆ ಹೋದುದರಿಂದಲೂ ಸಾರಿನ ಮೆಣಸಿನಪುಡಿಗೆ ಬೇಕಿದ್ದ ಕರಿಬೇವನ್ನು ಅಲ್ಲಿಂದ ಕಿತ್ತು

ತಂದಿರಿಸಿದರಂತೆ. ಅದನ್ನು ಪುಟ್ಟಣ್ಣನವರು ದೂರದಿಂದ ಕಂಡರು. ಆ ದಿನ ಹೊಸ ಮೆಣಸಿನಪುಡಿ ಹಾಕಿದ ಸಾರನ್ನು ತಿನ್ನಲಿಲ್ಲ. ಕರಿಬೇವು ಹಾಕಿದ್ದ ಮಜ್ಜಿಗೆಯನ್ನು ಮುಟ್ಟಲಿಲ್ಲ. ಉಪ್ಪಿನಕಾಯೊಡನೆ, ಊಟದ ಶಾಸ್ತ್ರ ಮುಗಿಸಿದರು. ಎಂದಿನಂತೆ ಕೋರ್ಟಿಗೆ ಹೋದರು. ಅಲ್ಲಿಂದ ಹೆಂಡತಿಗೆ ಸಮನ್ಸ್ ಬಂದಿತು. ಇದ್ದಹಾಗೇ ಬರಬೇಕೆಂಬ ಆಜ್ಞೆ, ಹೆಂಡತಿ ಗಾಬರಿಯಾಗಿ ಕೋರ್ಟಿಗೆ ಹೋದರು. ಅಲ್ಲಿ ಒಂದು ರೂಪಾಯಿ ದಂಡ ಅಥವಾ ಬೆಳಿಗ್ಗೆಯಿಂದ ಸಂಜೆಯವರಿಗೆ ಕೋರ್ಟಿನಲ್ಲಿ ಇರಬೇಕು ಎಂದು ಪುಟ್ಟಣ್ಣನವರು ತೀರ್ಪುಕೊಟ್ಟರು. ಆಕೆಯ ಬಳಿ ಒಂದು ರೂಪಾಯಿ ಎಲ್ಲಿಂದ ಬರಬೇಕು ? ಆಳುಗಳು ಕೊಟ್ಟು ಬಿಡಿಸಿಕೊಂಡು ಬಂದರಂತೆ. ಮನೆಗೆ ಬಂದ ಮೇಲೆ ಆಳುಗಳು ಖರ್ಚುಮಾಡಿದ್ದ ಆ ಒಂದು ರೂಪಾಯನ್ನು ಪುಟ್ಟಣ್ಣನವರು ಆಳು ಗಳಿಗೆ ಕೊಟ್ಟು ದಂಡವನ್ನು ತಾವೇ ತೆತ್ತರು.

ನೆಲಮಂಗಲದಲ್ಲಿದ್ದಾಗ ಒಮ್ಮೆ ನೀರಿನ ಒಂದು ಕಟ್ಟೆಗೆ "ಇಲ್ಲಿ ಸ್ನಾನ ಮಾಡ ಬಾರದು. ಇದು ಕುಡಿಯುವ ನೀರು" ಎಂದು ಒಂದು ಫಲಕವನ್ನು ಹಾಕಿಸಿದರು. ಒಬ್ಬ ಕಾವಲುಗಾರನೂ ಇದ್ದ. ಯಾರೂ ಇವರ ಅಪ್ಪಣೆ ಉಲ್ಲಂಘಿಸುವ ಸಾಹಸ ಮಾಡಲಿಲ್ಲ. ಒಮ್ಮೆ ಪುಟ್ಟಣ್ಣನವರ ಹೆಂಡತಿಯೇ ಹಾಗೆ ಮಾಡಿದರು. ಅಮಲ್ದಾ ರರ ಹೆಂಡತಿ ಎಂದು ಕಾವಲುಗಾರ ಸುಮ್ಮನಾದ. ಪುಟ್ಟಣ್ಣನವರಿಗೆ ವಿಷಯ ತಿಳಿ ಯಿತು. ಕಾವಲುಗಾರನನ್ನು ಕರೆಸಿ ಕೇಳಿದರು, ಆತ ಒಪ್ಪಿಕೊಂಡ, "ನಿಮ್ಮ ಹೆಂಡತಿ ಎಂದು ಸುಮ್ಮನಾದೆ" ಎಂದು ಸೇರಿಸಿದ. ಕರ್ತವ್ಯ ಸರಿಯಾಗಿ ಮಾಡಿಲ್ಲ ಎಂದು ಅವನಿಗೆ ದಂಡ ಹಾಕಿದರು. ಆಜ್ಞೆ ಉಲ್ಲಂಘನೆ ಮಾಡಿದ್ದಕ್ಕಾಗಿ ಹೆಂಡತಿಗೆ ದಂಡ ಹಾಕಿ, ಎಂದಿನಂತೆ ತಾವೇ ತೆತ್ತರು.

ಪುಟ್ಟಣ್ಣನವರ ಮಾವನವರ ತಮ್ಮ ವೆಂಕಟೇಶ ಜೋಯಿಸರ ಅಳಿಯ ದಾಸಪ್ಪಯ್ಯ ಆಲೂರಿನ ಶಾನುಭೋಗರಾಗಿದ್ದರು. ಅನುಕೂಲವಂತರು, ಗದ್ದೆ ತೋಟ ಬೇಕಾದ ಹಾಗಿತ್ತು. ಅವರು ಪದೇ ಪದೇ ದೀರ್ಘರಜೆ ಹಾಕುತ್ತಿದ್ದರು. ಬಹು ದಿನ ಕೆಲಸದ ಕಡೆ ಗಮನ ಕೊಡಲಿಲ್ಲ. ಮನೆಗೇ ಹೇಳಿಕಳಿಸಿದರೆ ಕೂಡ ಬರು ತ್ತಿರಲಿಲ್ಲ. ಇವರ ಗೈರುಹಾಜರಿಯಲ್ಲಿ ಕೆಲಸ ಮಾಡುತ್ತಿದ್ದಾತ ಇವರಿಗಿಂತಲೂ ಚೆನ್ನಾಗಿ ಕೆಲಸ ನಿಭಾಯಿಸುತ್ತಿದ್ದ. ತಮ್ಮ ಸಂಬಂಧಿಯನ್ನು ವಜಾಮಾಡಿ ಆತನನ್ನೇ ನೇಮಿಸಲು ಪುಟ್ಟಣ್ಣನವರು ನಿಶ್ಚಯಿಸಿದರು. ಈ ವಿಷಯ ವೆಂಕಟೇಶ ಜೋಯಿಸ ರಿಗೂ ತಿಳಿಯಿತು. ಹೇಗೇ ಆಗಲಿ, ಸರ್ಕಾರಿ ಕೆಲಸ ಯಾಕೆ ಬಿಡಬೇಕು ಎನ್ನುವ ಧೋರಣೆಯಿಂದ ವೆಂಕಟೇಶ ಜೋಯಿಸರು ಪುಟ್ಟಣ್ಣನವರ ಬಳಿಗೆ ಬಂದು ವಿಚಾರಿಸಿ ದರು. "ನೋಡಿ, ನಿಮ್ಮ ಅಳಿಯ ಇಷ್ಟು ದಿನದಿಂದಲೂ ಬಂದಿಲ್ಲ. ಇನ್ನು ಅವರು ಬರುವವರೂ ಅಲ್ಲ. ಇಲ್ಲಿನ ಕೆಲಸ ಈಗ ಮಾಡುತ್ತಿರುವವರು ಚೆನ್ನಾಗಿ ಖಾತೆ ಕಿರ್ದಿ ನೋಡಿಕೋತಿದಾರೆ. ಕೆಲಸ ಬೇಕಾದರೆ ನಿಮ್ಮ ಅಳಿಯ ಈಗಲೇ ಬಂದು ಸರಿ

ಯಾದ ರೀತಿಯಲ್ಲಿ ಕ್ಷಮಾಪಣೆ ಕೇಳಬೇಕು. ಇನ್ನು ಮೇಲೆ ಕಿಂಚಿತ್ತೂ ತಪ್ಪದೆ ಕೆಲಸ ಮಾಡಬೇಕು. ಈಗ ಅಂದ್ರೆ ಈಗ" ಎಂದರು, ಪುಟ್ಟಣ್ಣನವರು. ವೆಂಕಟೇಶ ಜೋಯಿಸರು ತೋಟಿ ತಳವಾರರ ಮೂಲಕ ಹುಡುಕಿಸಿದರೆ ಅಳಿಯ ಅವಿತುಕೊಂಡರು. ಆತನಿಗೆ ಕಚೇರಿಗೆ ಬಂದರೆ ಪುಟ್ಟಣ್ಣನವರ ಕೈಯಲ್ಲಿ ಬಯ್ಯಿಸಿಕೊಳ್ಳಬೇಕು ಎಂಬ ಬಿಗುಮಾನ. ಅವರ ಆರ್ಭಟ ಯಾರು ತಡೀತಾರೆ ಎಂಬ ಬೇಸರ. ಸರ್ಕಾರಿ ಕೆಲಸದಿಂದಲೇ ಜೀವಿಸಬೇಕಾದ ಅಗತ್ಯವೂ ಇರದುದರಿಂದ ಆತ ಸುಲಭವಾಗಿ ತಪ್ಪಿಸಿಕೊಂಡರು. ಪುಟ್ಟಣ್ಣನವರು ಸ್ಪಷ್ಟವಾಗಿ ಚಿಕ್ಕಮಾವನವರಿಗೆ ಹೇಳಿದರು – "ಗ್ರಾಮದ ಕೆಲಸ ಯಾರು ನೋಡಿಕೋಬೇಕು ಹೀಗಾದರೆ ? ಕೆಲಸ ಮಾಡ್ದೋನಿಗೇ ಬರಾವರ್ದು. ಬದಲಿ ಕೆಲಸ ಮಾಡ್ತಿದಾರಲ್ಲ ಅವರಿಗೇ ಇನ್ನು ಕೆಲಸ ಎಂದು ಖಾಯಂ ಮಾಡ್ತೀನಿ. ನೀವು ಯಾವ ಕೋರ್ಟಿಗೆ ಹೋಗಿಯೂ ಪ್ರಯೋಜನವಿಲ್ಲ. ಸುಮ್ಮನೆ ಅಲೀಬೇಡಿ. ಅಲೆದು ನನ್ನ ಹೊತ್ತೂ ಹಾಳು ಮಾಡಬೇಡಿ."

ಪುಟ್ಟಣ್ಣನವರ ಬೀಗರು ಅಯ್ಯಾಶಾಸ್ತ್ರಿಗಳ ಅಳಿಯ ವೆಂಕಟನಾರಣಪ್ಪ ಸ್ಯಾನಿಟರಿ ಇನ್ಸ್‌ಪೆಕ್ಟರ್ ಆಗಿದ್ದರು. ಅಮಲ್ದಾರರಾಗಿದ್ದ ಪುಟ್ಟಣ್ಣನವರು ಒಮ್ಮೆ ಇನ್ಸ್‌ಪೆಕ್ಷನ್‌ಗೆ ಹೋದರು. ಆಗ ಸ್ಯಾನಿಟರಿ ಇನ್ಸ್‌ಪೆಕ್ಟರು ಕೂಡ ಕುದುರೆ ಇಟ್ಟುಕೊಳ್ಳಬೇಕಾಗಿತ್ತು. ಅದಕ್ಕೆ ಸರ್ಕಾರದ ಭತ್ಯವೂ ಸಿಗುತ್ತಿತ್ತು. ವೆಂಕಟನಾರಣಪ್ಪನವರ ಬಳಿ ಕುದುರೆ ಇರಲಿಲ್ಲ. "ಸರ್ಕಾರದ ಭತ್ಯ ತಿಂತೀರಿ, ಕುದುರೆ ಮಾತ್ರ ಇಟ್ಟಿಲ್ಲ. ನಿಮಗೆ ಕೆಲಸವೂ ಇಲ್ಲ" ಎಂದರು ಪುಟ್ಟಣ್ಣನವರು. ವೆಂಕಟನಾರಣಪ್ಪನವರ ಕೆಲಸ ಹೋಯಿತು.ಅವರು ಒಂಬತ್ತು ತಿಂಗಳ ಕಾಲ ಕೆಲಸವಿಲ್ಲದೆ ಓಡಾಡುತ್ತಿದ್ದರು. ಮುಂದೆ ಕುದುರೆಕೊಂಡು ಪುಟ್ಟಣ್ಣನವರ ಬಳಿ ಬಂದರು. ಆಗ ಅವರನ್ನು ಪುನಃ ಕೆಲಸಕ್ಕೆ ತೆಗೆದುಕೊಂಡರು. ಪುಟ್ಟಣ್ಣನವರದು ಸರಕಾರವನ್ನು ಉಳಿಸುವ ರೀತಿ. ಸರಕಾರಕ್ಕೆ ಯಾವ ರೀತಿಯ ಮೋಸವೂ ಆಗಬಾರದು ಎಂಬುದು ಅವರ ನಿಯಮ. ತಮ್ಮ ಮಗಳೇ ಅಯ್ಯಾಶಾಸ್ತ್ರಿಗಳ ಸೊಸೆ, ಅಲ್ಲಿ ಆಕೆಗೇನಾದರೂ ಕಷ್ಟವಾದೀತು ಎಂಬುದೂ ಅವರ ಶಿಸ್ತಿಗೆ ಭಂಗ ತರಲಿಲ್ಲ. ಅಯ್ಯಾಶಾಸ್ತ್ರಿಗಳೂ ಸ್ವತಃ ತುಂಬ ದೊಡ್ಡಮನುಷ್ಯರು. ಅವರು ಈ ಯಾವ ಸಂಗತಿಯನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಲೂ ಇಲ್ಲ.

ನಾಲ್ವಡಿ ಕೃಷ್ಣರಾಜ ಒಡೆಯರು ಒಮ್ಮೆ ಮುಳುಬಾಗಿಲ ತಾಲ್ಲೂಕಿಗೆ ಬಂದಿದ್ದರು. ಆಗ ಪುಟ್ಟಣ್ಣನವರ ಸಂಬಂಧಿಗಳಾದ ಡಿ. ವೆಂಕಟನಾರಣಪ್ಪನವರು ಕೊಟ್ಟ ರಜೆಯ ಚೀಟಿ ಸಕಾಲಕ್ಕೆ ತಲುಪಲಿಲ್ಲವೆಂದು, ಅವರ ಗೈರುಹಾಜರಿ ಅಸಮರ್ಥನೀಯ ಎಂದು ಅವರನ್ನು ಪುಟ್ಟಣ್ಣನವರು ಕೆಲಸದಿಂದ ಸಸ್ಪೆಂಡ್ ಮಾಡಿದರಂತೆ. ಸರಿಯಾದ ಪುರಾವೆ ಒದಗಿಸಿದ ಮೇಲೆ ಅವರನ್ನು ಕೆಲಸಕ್ಕೆ ತೆಗೆದುಕೊಂಡರಂತೆ.

ಸರಕಾರದ ಆಳುಗಳು ಮನೆಯಲ್ಲಿ ಯಾವಾಗಲೂ ಇರುತ್ತಿದ್ದರು. ಅವರಿಗೆ

ಬರಿಯ ಕಂಬ ಸುತ್ತುವ ಕೆಲಸ ಅಷ್ಟೆ. ಸರಕಾರದ ಕೆಲಸವನ್ನು ಆಗಿಂದಾಗಲೇ ಮುಗಿಸುತ್ತಿದ್ದರು. ಮನೆಯ ಕೆಲಸ ಹೇಳುತ್ತಿರಲಿಲ್ಲ. ಮನೆ ಕೆಲಸಕ್ಕೆ ಬೇರೆ ಆಳುಗಳಿದ್ದರು. ಯಾವುದೋ ಇಕ್ಕಟ್ಟಿನ ಹೊತ್ತಿನಲ್ಲಿ ಸರ್ಕಾರದ ಆಳೊಬ್ಬನಿಗೆ ಮನೆಯ ಕೆಲಸವನ್ನು ಹೇಳಿದರೆಂದು ಗೌರಮ್ಮ ಮತ್ತೊಮ್ಮೆ ದಂಡ ತೆರಬೇಕಾಯಿತು.

ಹೊನ್ನಿನ, ಮಣ್ಣಿನ ಆಶೆಗೆ ಸಿಲುಕದ ಈ ಅಧಿಕಾರಿಯನ್ನು ಹೇಗಾದರೂ ಮಾಡಿ ಒಲಿಸಿಕೊಂಡು ತಮ್ಮ ಸ್ವಹಿತವನ್ನು ಸಾಧಿಸಿಕೊಳ್ಳಬೇಕೆಂಬ ಸ್ವಾರ್ಥಿಗಳೂ ಇಲ್ಲದಿರಲಿಲ್ಲ. ಒಮ್ಮೆ ಪುಟ್ಟಣ್ಣನವರು ಸಂಚಾರದಲ್ಲಿದ್ದಾಗ ಒಬ್ಬ ಹೆಣ್ಣನ್ನು ಇವರ ಬಳಿ ಕಳಿಸಿದರು. ಪುಟ್ಟಣ್ಣನವರು ಆಕೆಯನ್ನು ಕಣ್ಣೆತ್ತಿಯೂ ನೋಡಲಿಲ್ಲ. ಆದರೆ ಜಾಗರೂಕರಾಗಿರಬೇಕೆಂದು ಅವರ ಸದಸದ್ವಿವೇಕ ತಿಳಿಸಿತು. ನಿಧಾನವಾಗಿ ಉಪಾಯವಾಗಿ ಮಾತನಾಡಿ ಹಿಂದಕ್ಕೆ ಕಳಿಸಿದರು. ಅಂದಿನಿಂದ ಮೊದಲ ಎರಡರಷ್ಟು ಎಚ್ಚರವಾಗಿರುತ್ತಿದ್ದರಂತೆ.

ತಾವು ಅಮಲ್ದಾರರಾಗಿದ್ದಾಗಲೂ ಯಾವ ಮೇಲಧಿಕಾರಿಯನ್ನೂ ನೋಡುತ್ತಿರಲಿಲ್ಲ. ತಮ್ಮ ಕೆಲಸವನ್ನು ಕರಾರುವಾಕ್ಕಾಗಿ ಮಾಡಿ ಮುಗಿಸುತ್ತಿದ್ದರು. ಇರಬೇಕಾದ್ದಕ್ಕಿಂತ ಸ್ವಲ್ಪ ಹೆಚ್ಚೇ ನಿಯಮಪಾಲನೆ ಕಾಣುತ್ತಿತ್ತು. ಮೇಲಧಿಕಾರಿಗಳನ್ನು ಮನೆಗೂ ಕರೆದೊಯ್ಯುತ್ತಿರಲಿಲ್ಲ. ಕೆಲಸವಿದ್ದರೆ ಮಾತ್ರ ಕಚೇರಿಯಲ್ಲಿ ಭೇಟಿ. ಕಚೇರಿಯ ಕೆಲಸವಲ್ಲದೆ ಬೇರೇನನ್ನೂ ಕಚೇರಿಯಲ್ಲಿ ಮಾಡುತ್ತಿರಲಿಲ್ಲ. ಮೇಲಧಿಕಾರಿಗಳ ಮಾತನ್ನು ಮನಸ್ಸಿಗೊಪ್ಪದಿದ್ದರೆ ಖಂಡಿಸಲು ಹಿಂದೆಗೆಯುತ್ತಿರಲಿಲ್ಲ. ಒಂದು ಸಂದರ್ಭದಲ್ಲಿ ಬ್ರಿಟಿಷ್ ಸೈನ್ಯದ ತುಕಡಿಯೊಂದರ ಊಟೋಪಚಾರಗಳಿಗೆಂದು ಮೀಸಲಾಗಿದ್ದ ಆಹಾರವಸ್ತುಗಳಲ್ಲಿ ಸ್ವಲ್ಪಭಾಗ ಮಿಕ್ಕುಹೋಯಿತು. ಸಂಬಂಧಪಟ್ಟ ಉಸ್ತುವಾರಿಯಲ್ಲಿದ್ದ ಇವರೊಡನೆ, ಸರ್ಕಾರದ ಮೇಲಧಿಕಾರಿಯೊಬ್ಬರು ಆ ವಸ್ತುಗಳನ್ನು ತಾವಿಬ್ಬರೂ ಹಂಚಿಕೊಳ್ಳೋಣ ಎಂದು ಸೂಚಿಸಲು ಪುಟ್ಟಣ್ಣನವರು ಕಿಡಿಕಿಡಿಯಾಗಿ, "ಸ್ವಾಮಿ, ಪ್ರಾಮಾಣಿಕತೆಯ ಸಂಹಿತೆಯನ್ನು ತಮ್ಮಿಂದ ನಾನು ಕಲಿಯಬೇಕಿಲ್ಲ" ಎಂದರಂತೆ.

ಪುಟ್ಟಣ್ಣನವರಿಗೆ ಕಾನೂನುವಿಧಿಗಳ ಪಾಲನೆಯ ಬಗೆಗೆ ಗಮನ. ಅವರದು ನಿರ್ದಾಕ್ಷಿಣ್ಯ ಸ್ವಭಾವ, ನಿಖರವಾದ ಮಾತು. ಅವರೇ ಬೆಂಚ್ ಮ್ಯಾಜಿಸ್ಟ್ರೇಟ್ ಕೂಡ ಆಗಿದ್ದುದರಿಂದ ಪ್ರಾಮಾಣಿಕರ ಕೈಗೆ ಅಧಿಕಾರ ಸಿಕ್ಕರೆ ಎಷ್ಟು ಒಳ್ಳೆಯದಾದೀತು ಎಂಬುದಕ್ಕೆ ಉದಾಹರಣೆಯಂತಿದ್ದರು. ಯಾವ ಹಿಂಜರಿಕೆಯೂ ಇಲ್ಲದೆ ತಮ್ಮ ಹಕ್ಕನ್ನು ಚಲಾಯಿಸಿ ಪರಿಸ್ಥಿತಿಯನ್ನು ಹದಕ್ಕೆ ತರುತ್ತಿದ್ದರು.

ಪುಟ್ಟಣ್ಣನವರ ಕಾಲದಲ್ಲಿ ಕಂದಾಯ ವಸೂಲಿ ಬಲುಬೇಗ ಆಗುತ್ತಿತ್ತು. ಅಮಲ್ದಾರರ ಮುಖ ಕಂಡರೆ ಸಾಕು, ಎಂಥವರೂ ಕೂಡ ಬಾಕಿ ಇದ್ದ ಕಂದಾಯವನ್ನು ತಂದೊಪ್ಪಿಸುತ್ತಿದ್ದರು. ಅವರ ಕಾಲದಲ್ಲಿ ಬಡಜನರ ಸುಲಿಗೆ ನಿಂತೇ ಹೋಯಿತು.

ಎಲ್ಲೆಲ್ಲಿದ್ದ ಅಸ್ವಚ್ಛತೆಗಳು ತಾನಾಗಿ ಅಲ್ಲಲ್ಲೇ ಸರಿಯಾದುವು. ಅನೇಕ ರೀತಿಯ ಪುಂಡತನಗಳು ಸದ್ದಿಲ್ಲದೆ ಅಡಗಿದವು. ಅಧಿಕಾರಿಗಳೇ ಬೆಂಬಲಿಗರಾಗಿ ನಡೆಸುತ್ತಿದ್ದ ದುರ್ವ್ಯಾಪಾರಗಳು ತಣ್ಣಗಾದುವು. ಸುಲಿಗೆ ಲೂಟಿಗಳು ಹೇಳಹೆಸರಿಲ್ಲದೆ ಮಾಯವಾಗಿ ಹೋದುವು. ಆದರೆ ಜೊತೆಯ ಅಧಿಕಾರಿಗಳಲ್ಲಿ ಹಲವರಿಗೆ ಪುಟ್ಟಣ್ಣನವರನ್ನು ಕಂಡರೆ ಅಷ್ಟಕಷ್ಟೇ. ಪುಟ್ಟಣ್ಣನವರಿಗೆ ಮುಳಬಾಗಿಲಿನಿಂದ ವರ್ಗವಾದಾಗ, ಮುಳಬಾಗಿಲಿನ ಕಚೇರಿಯ ಸಿಬ್ಬಂದಿ "ತಾನೂ ತಿನ್ನ, ಪರರಿಗೂ ಬಿಡ. ಅಂಥಾ ಶನಿ ನಿಮ್ಮ ಕಚೇರಿಗೆ ಬರುತ್ತೆ" ಎಂದು ಬರೆಸಿ ಹಾಕಿದ್ದರಂತೆ. ಪುಟ್ಟಣ್ಣನವರಂಥ ನಿಸ್ಪೃಹರು ಬಲು ಅಪರೂಪ. ಎದುರು ನಿಲ್ಲಲಾಗದ ಅಸಾಮರ್ಥ್ಯಕ್ಕೋ, ಯಾವುದೇ ದಾಕ್ಷಿಣ್ಯಕ್ಕೋ, ಬೇರೇನೋ ಪ್ರತ್ಯಾಶೆಗೋ, ಯಾರೂ ಹೇಗಾದರೂ ಹಾಳಾಗಲಿ ಎಂಬ ಔದಾಸೀನ್ಯಕ್ಕೋ ಪುಟ್ಟಣ್ಣನವರು ಎಂದಿಗೂ ಒಳಗಾಗಲಿಲ್ಲ. ಅವರನ್ನು ಅರ್ಥಮಾಡಿಕೊಂಡವರು ಅಧಿಕಾರ ವಲಯದಲ್ಲಿ ಕಡಿಮೆ ಜನ ಇದ್ದರೂ ಬಡಪ್ರಜೆಗಳು ಅವರನ್ನು ತಮ್ಮ ಪಾಲಿನ ದೇವರೆಂದು ಭಾವಿಸಿಕೊಂಡಿದ್ದರು.

ಸಹಜವಾದ ಕಾರ್ಯದಲ್ಲಿ ಅವರಿಗೆ ಅಸಹ್ಯವಾಗಲೀ, ಹಿಂಜರಿಕೆಯಾಗಲೀ ಇರಲಿಲ್ಲ. ನೆಲಮಂಗಲದಲ್ಲಿ ಒಮ್ಮೆ ಪ್ಲೇಗ್ ಆದಾಗ ಅನಾಥ ಹೆಣಗಳನ್ನು ಒಂದುಗೂಡಿಸಿ ಸೀಮೆಎಣ್ಣೆ ಸುರಿದು ಸಂಸ್ಕಾರ ಮಾಡಿಸಿದ ಸಂಗತಿ ಇದನ್ನು ಸ್ಪಷ್ಟಪಡಿಸುತ್ತದೆ.

ಚಾಮರಾಜನಗರಕ್ಕೆ ಯಾವುದೋ ಪುಣ್ಯಬಲದಿಂದ ಪುಟ್ಟಣ್ಣನವರ ಸೇವೆ ಸಂದಿತೆಂದು ಹೇಳಬೇಕು. ಅಲ್ಲಿಗೆ ಅಮಲ್ದಾರರಾಗಿ ಬಂದಾಗ ಪುಟ್ಟಣ್ಣನವರಿಗೆ ಪ್ರಾಯದ ಕಾಲ. ಕೆಲಸ ಮಾಡುವ ಆಸಕ್ತಿಯೂ, ಉಕ್ಕೂ, ಉತ್ಸಾಹವೂ ಹೆಚ್ಚಾಗಿತ್ತು. ಹಾಗೆ ಕೆಲಸ ಮಾಡಲು ಅವಕಾಶಗಳೂ ಹೇರಳವಾಗಿ ಅವರಿಗೆ ದೊರಕಿದವು.

ಚಾಮರಾಜನಗರಕ್ಕೆ ಬಂದಾಗ ಅವರು ಅಲ್ಲಿ ರೈತರ ಕಷ್ಟಗಳನ್ನು ಕಣ್ಣಾರೆ ಕಂಡರು. ಅವರ ಅಹವಾಲುಗಳನ್ನು ಕೇಳಿದರು. ಕೃಷಿಗೆ ಉತ್ತೇಜನ, ಸಹಾಯ ಕೊಡದ ಹೊರತು ರೈತರ ಆರ್ಥಿಕ ಸ್ಥಿತಿಯಾಗಲೀ ಸಂಪತ್ತಾಗಲೀ ಊರ್ಜಿತವಾಗದು ಎಂಬುದನ್ನು ಅರಿತಿದ್ದ ಪುಟ್ಟಣ್ಣನವರು ತಮ್ಮ ಅಧಿಕಾರ ಪರಿಧಿಯಲ್ಲಿ ಸಾಧ್ಯವಾದಷ್ಟು ಕೃಷಿಗೆ ಉತ್ತೇಜನ ಕೊಟ್ಟರು. ತಕಾವಿ ಕಾಲದಲ್ಲಿ ದುಡ್ಡು ಸಾಲದೆ ಬಂದರೆ, ರೈತರಿಗೆ ಹಣವನ್ನು ಸಾಲವಾಗಿ ಕೊಡಿಸಿ ಆ ಹಣ ನಿಧಾನವಾಗಿ ಪಾವತಿಯಾಗುವಂತೆ ಮಾಡುತ್ತಿದ್ದರು. ಚೆಂಬು, ತಪ್ಪಲೆಗಳನ್ನು ಹರಾಜು ಹಾಕಿಸಿ ಕ್ರೂರವಾಗಿ ವಸೂಲಿ ಮಾಡುತ್ತಿರಲಿಲ್ಲ.

ಜಮಾಬಂದಿ ಎಂದರೆ ಆಗ ಏಳೆಂಟು ದಿನಗಳು ನಡೆಯುತ್ತಿತ್ತು. ಆಗ ರೈತರ ಅಹವಾಲುಗಳನ್ನು ನಿಧಾನವಾಗಿ ಕೇಳಿಕೊಳ್ಳುತ್ತಿದ್ದರು. ನ್ಯೂನತೆಗಳನ್ನು ನಿವಾರಿಸುತ್ತಿದ್ದರು. ಇಂದಾ–ಗೆ, ಲೆಕ್ಕಪತ್ರಗಳು ಎಲ್ಲವನ್ನೂ ಪರಿಶೀಲಿಸುತ್ತಿದ್ದರು. ಒಂದು ಕಾಸೂ ಹೆಚ್ಚು ಕಡಿಮೆ ಆಗಬಾರದು, ನಿಧಾನವಾಗಿ ಸಂದರ್ಭದ ಒಳಗುಟ್ಟನ್ನು ತಿಳಿದು ಪರಿಸ್ಥಿತಿಯನ್ನು ಸರಿಪಡಿಸುತ್ತಿದ್ದರು, ನ್ಯಾಯ ದೊರಕಿಸುತ್ತಿದ್ದರು.

ಚಾಮರಾಜನಗರದಲ್ಲಿ ಉಪ್ಪಲಿಗರು, ತೊರೆಯರು ಎಂಬ ಎರಡು ಬಣಗಳಿಗೆ ಹತ್ತಿದ ಜಗಳ ಹರಿಯದು ಎನ್ನುವ ಪರಿಸ್ಥಿತಿ ಇತ್ತು. ಪುಟ್ಟಣ್ಣನವರು ತಮ್ಮ ಅಧಿಕಾರದ ಬಲದಿಂದ ಅದನ್ನು ಬಹುಮಟ್ಟಿಗೆ ದಮನ ಮಾಡಿದರು. ಎರಡೂ ಕಡೆಯ ಪುಂಡರಿಗೆ, ಶಾಂತಿಭಂಗ ಮಾಡಿದವರಿಗೆ ಕಠಿಣಸಜೆ, ಜುಲ್ಮಾನೆ ಹಾಕಿ, ಹೆದರಿಕೆ ಹುಟ್ಟಿಸಿ ಗಲಭೆಯನ್ನು ಅಡಗಿಸಿದರು. ಶಾಂತಿ ನೆಲೆಸುವವರೆಗೆ ಅವರಿಬ್ಬರೂ ಸೇರಿಕೊಂಡ ಹಾಯುತ್ತಿದ್ದುದನ್ನು ನಿಲ್ಲಿಸಿ ನಿಮ್ಮ ನಿಮ್ಮ ಮನೆಗಳ ಮಟ್ಟಿಗೆ ನಿಮ್ಮ ಆಚಾರ ಪದ್ಧತಿಗಳನ್ನು ಮಾಡಿಕೊಳ್ಳಿ ಎಂದು ವಿಧಿಸಿದರು, ನಗರಶಾಂತಿಗಾಗಿ ಆದಷ್ಟು ಪ್ರಯತ್ನ ಮಾಡಿದರು.

ಆಗ ಚಾಮರಾಜನಗರದಲ್ಲಿ ಹೆಚ್ಚು ಕಡಿಮೆ ಎಲ್ಲ ಕಡೆಗಳಿಂದ ಬ್ರಾಹ್ಮಣರಿಗೆ ಮಾತ್ರ ವಿದ್ಯೆಯ ದಾರಿ ಸುಗಮವಾಗಿತ್ತು. ಬ್ರಾಹ್ಮಣೇತರರಿಗೆ ಅದರಲ್ಲೂ ಕೆಳವರ್ಗದವರು ಎನ್ನಿಸಿಕೊಂಡವರಿಗೆ ಹಾದಿ ಮುಚ್ಚಿತ್ತು. ಸರಕಾರದ ಧನಸಹಾಯಕ್ಕೆ ಕೈ ಚಾಚದೆ, ಪ್ರತಿಬೀದಿಗಳಲ್ಲೂ ಚಾವಡಿಕಟ್ಟೆ, ಅಶ್ವತ್ಥಕಟ್ಟೆ, ಮಂಟೇಸ್ವಾಮಿಯ ಗುಡಿ ಇತ್ಯಾದಿ ಜನ ಸೇರುವೆಡೆಯಲ್ಲೆಲ್ಲಾ ಅಕ್ಷರಾಭ್ಯಾಸ ನಡೆಯುವಂತೆ ವಿದ್ಯಾಭ್ಯಾಸದ ಯೋಜನೆಗಳನ್ನು ತಯಾರಿಸಿದರು. ದುಡ್ಡಿನ ಅವಶ್ಯಕತೆ ಕಂಡುಬಂದಾಗ, ತಾವೇ ತುಂಬುವಷ್ಟು ತುಂಬಿ, ಆಯಾಬೀದಿಯ ಜನರಲ್ಲಿ ಚಂದಾ ಎತ್ತಿ ಕೆಲಸ ಸಾಗಿಸಿದರು. ಎಲ್ಲರಿಗೂ ಕನ್ನಡ ಭಾಷೆ ಓದಿ ಬರೆಯಲು ಬರಬೇಕು, ಮಾತು ಶುದ್ಧವಾಗಿರಬೇಕು, ಜನ ಸ್ವಚ್ಛವಾಗಿರಬೇಕು ಎಂಬ ಅರಿವನ್ನು ಜನರಲ್ಲಿ ಮೂಡಿಸಲು ಯತ್ನಿಸಿದರು. ಪುಟ್ಟಣ್ಣನವರ ಕಾಲದಲ್ಲಿ ಚಾಮರಾಜನಗರದ ಸಂಸ್ಕೃತ ಪಾಠಶಾಲೆ ಬಹುವಾಗಿ, ಹಿಂದೆಂದೂ ಇಲ್ಲದಷ್ಟು, ಅಭಿವೃದ್ಧಿ ಪಡೆಯಿತು.

ಆ ಕಾಲದಲ್ಲಿ ಗಿರಿಜಾ ಕಲ್ಯಾಣ, ಧಾತ್ರೀಹವನ ಮುಂತಾದುವುಗಳಿಗೆ ಸರಕಾರದ ಧನಸಹಾಯದ ಸೌಲಭ್ಯವಿತ್ತು. ಈ ಕಾರ್ಯಗಳು ನಡೆಯುತ್ತಿದ್ದುದು ಅಮಲ್ದಾರರ ಮೇಲ್ವಿಚಾರಣೆಯಲ್ಲಿ. ಆ ಕಾಲದಲ್ಲಿ ಊರಿನವರೆಲ್ಲರಿಗೂ ಊಟ ನಡೆಯುತ್ತಿತ್ತು. ಅಂತಹ ಕಾಲದಲ್ಲಿ ಜಾತಿಭೇದಗಳು ತಲೆಯೆತ್ತದಂತೆ ವಿಪರೀತ ಎಚ್ಚರಿಕೆ ವಹಿಸುತ್ತಿದ್ದರು. ಸರಕಾರದ ಧನಸಹಾಯದ ಪ್ರತಿಕಾಸಿಗೂ ಲೆಕ್ಕವಿಡುತ್ತಿದ್ದರು. ಸಾಲದುದನ್ನು ತಮ್ಮ ಕೈಯಿಂದ ತುಂಬಿ ಘನವಾಗಿ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಪ್ರತಿವರ್ಷವೂ ನಡೆಯುತ್ತಿದ್ದ ಪುರಾಣ ಪುಣ್ಯಕಥೆಗಳ ಜೊತೆಗೆ ಸ್ಥಳೀಯರಿಂದ ಜಾನಪದ ಕಲಿಕೆಗಳ ಪ್ರದರ್ಶನಗಳನ್ನೂ ಸೇರಿಸಿದರು. ಮನರಂಜನೆ ವಿದ್ಯಾಭ್ಯಾಸಗಳೂ ಕೈ ಕೈ ಹಿಡಿದು ಸಾಗುವಂತೆ ಮಾಡಿದರು. ಜನಸಾಮಾನ್ಯರಲ್ಲಿ ಒಂದು ತಿಳುವಳಿಕೆ, ಸಾಮಾಜಿಕವಾದ ಒಂದು ಎಚ್ಚರ ತಾನಾಗಿ ಉಂಟಾಗುವಂತೆ ಮಾಡಿದರು.

ಅವರು ದೇವಸ್ಥಾನಕ್ಕೂ ಆಗಾಗ ಬರುತ್ತಿದ್ದುದುಂಟು. ಆದರೆ ದೇವರ ದರ್ಶನಕ್ಕೆಂದಲ್ಲ, ಅಲ್ಲಿನ ಸಿಬ್ಬಂದಿ ಹೇಗೆ ಕೆಲಸ ಮಾಡುತ್ತಿದ್ದರೆಂಬುದನ್ನು ನೋಡಲು,

ಸರಕಾರದ ಕೆಲಸ ಅವರಿಗೆ ದೇವರ ಕೆಲಸ ಆಗಿತ್ತು. ಆಗ ಅವರ ಅಧಿಕಾರದಲ್ಲಿ ದೇವಸ್ಥಾನಗಳ ಆಡಳಿತವೂ ಇತ್ತು. ಪುಟ್ಟಣ್ಣನವರ ಕಾಲದಲ್ಲಿ ರಾಮದೀಕ್ಷಿತರೆಂಬುವರು ಶಾಲೆ ಹಾಗೂ ದೇವಸ್ಥಾನಗಳೆರಡರ ಕೆಲಸವನ್ನೂ ಮಾಡುತ್ತಿದ್ದರು. ಶಾಲೆಯ ಕೆಲಸದ ಒತ್ತಡದಿಂದ ದೇವಸ್ಥಾನದ ಋಗ್ವೇದ ಸ್ತೋತ್ರಪಾಠ ಸರಿಯಾಗಿ ನಡೆಯುತ್ತಿರಲಿಲ್ಲ. ಪುಟ್ಟಣ್ಣನವರು ಮತ್ತು ರಾಮದೀಕ್ಷಿತರು ಬಹಳ ಸ್ನೇಹಿತರು, ಆಪ್ತರು. ಒಬ್ಬರ ಮನೆಗೆ ಒಬ್ಬರು ಬಂದು ಹೋಗುತ್ತಿದ್ದರು. ಇಬ್ಬರಲ್ಲೂ ಚೆನ್ನಾಗಿ ಬಳಕೆ ಇತ್ತು. ಪುಟ್ಟಣ್ಣನವರು ಒಮ್ಮೆ "ಎರಡೂ ಕಡೆ ಕೆಲಸವನ್ನು ಹೇಗೆ ನಿಭಾಯಿಸುತ್ತೀರಿ ?" ಎಂದರು. "ಹೇಗೋ ಮಾಡ್ತೀನಿ" ಎಂದು ದೀಕ್ಷಿತರು ಹಾರಿಕೆಯ ಉತ್ತರ ಕೊಟ್ಟರು. ಪುಟ್ಟಣ್ಣನವರು ಮರುಮಾತಾಡಲಿಲ್ಲ. ದೇವಸ್ಥಾನದ ಕೆಲಸದಿಂದ ದೀಕ್ಷಿತರನ್ನು ಸಸ್ಪೆಂಡ್ ಮಾಡಿದರು. ಆದರೆ ತಮ್ಮ ಸ್ನೇಹಕ್ಕೆ ಚ್ಯುತಿ ಬಂದಿಲ್ಲವೆಂದೇ ನಡೆದುಕೊಂಡರು. ಅಧಿಕಾರದ ಹೊಣೆ,ಸ್ನೇಹ ದಾಕ್ಷಿಣ್ಯಗಳ ನಡುವೆ ನಿಷ್ಠುರವಾದ ಗೆರೆಯೆಳೆದಿದ್ದರು. ಎರಡನ್ನೂ ವಿಲೀನಗೊಳಿಸಿ ಎರಡನ್ನೂ ಹಾಳುಮಾಡಿಕೊಳ್ಳುವ ಅವ್ಯಾವಹಾರಿಕತನವನ್ನು ಮಾಡಲಿಲ್ಲ.

ಪುಟ್ಟಣ್ಣನವರ ಕಾಲದಲ್ಲಿ ಚಾಮರಾಜೇಶ್ವರ ದೇವಸ್ಥಾನದ ಸಿಬ್ಬಂದಿಗೆ ಸಂಬಳ ಹೆಚ್ಚಾಯಿತು. ಸಿಬ್ಬಂದಿಗೆ ಸಹಜವಾಗಿ ಉತ್ಸಾಹ ತಲೆದೋರಿತು. ಆ ಅವಕಾಶವನ್ನು ಪುಟ್ಟಣ್ಣನವರು ಬಿಡಲಿಲ್ಲ, ಇಂತಿಂಥ ಕೆಲಸಗಳನ್ನು ಇಂತಿಂಥವರೇ ಮಾಡಬೇಕೆಂದು ವಿಧಿಸಿದರು. ತಪ್ಪಿಲ್ಲದಿದ್ದರೆ ಶಿಕ್ಷೆ ಇಲ್ಲ. ತಪ್ಪಿದ್ದರೆ ಶಿಕ್ಷೆ ತಪ್ಪಿದ್ದೂ ಇಲ್ಲ, ಎಂಬುದನ್ನು ತಿಳಿಯಪಡಿಸಿದರು. ತಪ್ಪುನಡೆದವರಿಗೆ ಜುಲ್ಮಾನೆ ಹಾಕಿದರು. ದೇವಸ್ಥಾನದ ಎಲ್ಲ ವಹಿವಾಟುಗಳೂ ಚೆನ್ನ ಆಗಲು ಬಹುವಾಗಿ ಶ್ರಮಿಸಿದರು. ದೇವಸ್ಥಾನದಲ್ಲಿ ಪಡಿಯ ಅಕ್ಕಿಯನ್ನು ಕದಿಯುವ ಜನರಿದ್ದರು. ಅನ್ನ ಮಾಡಿದಾಗ ಕಮ್ಮಿಯಾಗುತ್ತಿತ್ತು. ಮರು ಬಾರಿಯಿಂದ ಎದುರಿಗೇ ನಿಂತು ಸರಿಮಾಡಿಸಿದರು. ಅಕ್ಕಿಯನ್ನು ಅಳತೆಮಾಡಿ ಅನಂತರ ಅನ್ನವನ್ನೂ ಅಳತೆಮಾಡುವ ಪದ್ಧತಿಯನ್ನು ಆರಂಭಿಸಿದರು ಬೇರೆ ಬೇರೆ ರೀತಿಯ ಅಂದರೆ ಮೂರು ನಾಲ್ಕು ಬಗೆಯ ಅಕ್ಕಿಯ ಅನ್ನ ಮಾಡುವಾಗ, ಪ್ರತಿಯೊಂದು ರೀತಿಯ ಅಕ್ಕಿಯನ್ನೂ ಅಳೆಸಿ, ಇಂತಿಂಥ ಅಕ್ಕಿ ಒಂದು ಸೇರಿಗೆ ಇಷ್ಟಿಷ್ಟು ಅನ್ನ ಆಗುತ್ತದೆ ಎಂಬುದನ್ನು ಗೊತ್ತುಮಾಡಿ ಗುರುತು ಹಾಕಿದರು. ಅನ್ನವನ್ನು ಅಳತೆಯ ಬಟ್ಟಲಿಗೆ ಹಾಕಿ ಕೈಯಲ್ಲಿ ತಟ್ಟಿ ಅದನ್ನು ನೇರವಾಗಿ ಸವರಿ ಆ ಅಳತೆಯನ್ನು ನಿಗದಿಮಾಡಿ ಎಲ್ಲರಿಗೂ ಕೊಡುವ ಪದ್ಧತಿಯನ್ನು ಪ್ರಾರಂಭಿಸಿದರು. ಯಾರಿಗೂ ಹೆಚ್ಚಿಲ್ಲ, ಯಾರಿಗೂ ಕಮ್ಮಿ ಇಲ್ಲ, ಒಂದೇ ಸಮ ಎಲ್ಲರಿಗೂ. ಆಗ ದೇವಸ್ಥಾನದಲ್ಲಿ ಪುರೋಹಿತರಿಂದ ವಾದ್ಯದವರನ್ನು ಸೇರಿಸಿ ಅರವತ್ತನಾಲ್ಕುಜನ ಇದ್ದರು. ದಿನ ಒಂದಕ್ಕೆ ಒಂದು ಪಲ್ಲ ಅಕ್ಕಿ ಖರ್ಚಾಗುತ್ತಿತ್ತು. ಬೇರೆ ಬೇರೆ ದೇವರುಗಳಿಗೆ ಬೇರೆ ಬೇರೆಯಾಗಿ ನೈವೇದ್ಯ ಆಗುತ್ತಿತ್ತು. ಪ್ರತಿದೇವರಿಗೂ ಇಷ್ಟಿಷ್ಟು ಬಟ್ಟಲು ಅನ್ನ, ಅನಂತರ ಸಿಬ್ಬಂದಿಯವರಿಗೆ ವಿನಿಯೋಗ. ದೇವಸ್ಥಾನದ ಉತ್ಪತ್ತಿ ಮತ್ತು ವೆಚ್ಚ ಯಾವಾಗಲೂ

ಸರಿದೂಗುವಂತೆ ಮಾಡಿದರು. ವಿನಾಕಾರಣ ಬಿಗಿ ಹಿಡಿದು ದುಡ್ಡು ಮಿಗಿಸಲಿಲ್ಲ, ಹಾಗೆಂದು ನಷ್ಟ ಆದದ್ದೂ ಇಲ್ಲ. ನಿಖರವಾದ ವ್ಯವಸ್ಥೆಯನ್ನು ಏರ್ಪಡಿಸುತ್ತಿದ್ದರು. ಇದರ ಮೇಲೆ ಯಾರಾದರೂ ಯಾವುದೇ ಪದಾರ್ಥವನ್ನು ಕಳ್ಳತನದಿಂದ ಉಪಯೋಗಿಸಿಕೊಂಡರೆ ಜುಲ್ಮಾನೆ ಹಾಕಿ ಸಂಬಳದಲ್ಲಿ ಹಿಡಿಯುತ್ತಿದ್ದರು.

ಅವರಿಗೆ ಅಪಾರವಾದ ಕನಿಕರ, ತಾಳ್ಮೆಗಳಿದ್ದುವು. ತಪ್ಪಿ ನಡೆದರೂ ಕೂಡಲೇ ಶಿಕ್ಷೆಗೆ ಗುರಿಮಾಡದೆ, ಅಪರಾಧಿಯ ಆಶೆ ಸಂಕಟಗಳನ್ನು, ಅಪರಾಧ ಮಾಡಲು ಕಾರಣವಾದ ಸನ್ನಿವೇಶವನ್ನು ಸರಿಯಾಗಿ ಕಂಡುಹಿಡಿಯುತ್ತಿದ್ದರು. ಅವರು ಚಾಮರಾಜನಗರದಲ್ಲಿದ್ದಾಗ ನಡೆದ ಒಂದು ಘಟನೆ ಇದಕ್ಕೆ ಸಾಕ್ಷಿಯಾಗಿದೆ. ಪುಟ್ಟಣ್ಣನವರ ಕೈಕೆಳಗಿನ ಒಬ್ಬ ಅಧಿಕಾರಿಯ ಮನೆಯಲ್ಲಿ ಸುತ್ತುಗೆಲಸ ಮಾಡಿಕೊಂಡಿದ್ದ ಒಬ್ಬ ಬಡ ಹೇಗಸು ಆಸೆಗೆ ಬಲಿಬಿದ್ದು ಅಧಿಕಾರಿಯ ಪತ್ನಿ ಸ್ನಾನಕ್ಕೆಂದು ಹೋದಾಗ ತೆಗೆದಿರಿಸಿದ್ದ ಒಡವೆಗಳನ್ನು ಕದ್ದರು. ಎಲ್ಲರಿಗೂ ಈಕೆಯ ಮೇಲೆಯೇ ಗುಮಾನಿ. ವಿಚಾರಣೆ ಪುಟ್ಟಣ್ಣನವರ ಬಳಿ ಬಂತು. ಮುಂದಿನ ವಾರ ತೀರ್ಪು ಎಂದಾಯಿತು. ಈಕೆ ಕೋರ್ಟು ಪ್ರಾರಂಭವಾಗುವ ವೇಳೆಗೆ ಬಂದಿರಬೇಕೆಂದು ಹುಕುಂ ಮಾಡಿದರು. ತೀರ್ಪಿನ ದಿನ ಆಕೆಯ ವಿಚಾರಣೆಯ ತೀರ್ಪನ್ನು ಕಡೆಯದಾಗಿ ಕೊಟ್ಟರು. ಆ ವೇಳೆಗೆ ಬೆಳಗ್ಗೆಯಿಂದ ಕಾದೂ ಕಾದೂ ಆಕೆ ಹಣ್ಣಾಗಿದ್ದರು. "ಆಸೆಗೆ ಸೋತು, ಮಾಡಬಾರದ ಕೆಲಸ ಮಾಡಿದ್ದು ಹೌದು. ಆದರೆ ಪಶ್ಚಾತ್ತಾಪ, ಭಯಗಳಿಂದ ಆಕೆ ಈಗಾಗಲೇ ಸೋತಿದ್ದಾರೆ. ಕೋರ್ಟು ಏಳುವವರೆಗೆ ಸಜಾ" ಎಂದರಂತೆ. ಮನೆಗೆ ಬಂದಾಗ ಗೌರಮ್ಮನವರು, "ಆಕೆ ಮಕ್ಕಳೊಂದಿಗಿತ್ತಿ, ಪಾಪ" ಎಂದು ಪರಿತಾಪ ತೋರಿದಾಗ "ನೀನೂ ಮಕ್ಕಳೊಂದಿಗಿತ್ತಿಯೇ. ಆದರೆ ನೀನು ಹಾಗೆ ಮಾಡಿದರೆ ನಿನಗೆ ಹೆಚ್ಚು ಶಿಕ್ಷೆ ಖಂಡಿತ" ಎಂದರಂತೆ ಪುಟ್ಟಣ್ಣನವರು. ತಲೆಗೆಲ್ಲಾ ಒಂದೇ ಮಂತ್ರ ಎಂಬ ಹುಚ್ಚು ನ್ಯಾಯಪೀಠದಲ್ಲಿರುವವರಿಗೆ ಅಂಟಬಾರದು ಎಂದು ಬಲ್ಲವರಾಗಿದ್ದರು ಅವರು.

ಅವರದು ಅಸಾಮಾನ್ಯವಾದ ಧೈರ್ಯ. ಯಾರೂ ಮಾಡದ ಕೆಲಸವನ್ನು ತಾವು ಮಾಡಲು ಹಿಂಜರಿಯುತ್ತಿರಲಿಲ್ಲ. ಚಾಮರಾಜನಗರದಲ್ಲಿದ್ದಾಗ ಒಮ್ಮೆ ಬೇರೆ ಯಾವುದೋ ಕಡೆಗೆ ಹೋಗಿ ಜಮಾಬಂದಿ ಮುಗಿಸಿಕೊಂಡು ಹಿಂದಿರುಗಲಿದ್ದಾಗ, ರಾತ್ರಿ ಹೊತ್ತು ಕಳ್ಳರ ಕಾಟ, ಈಗ ಹೋಗುವುದು ಬೇಡ ಎಂದು ಯಾರು ಹೇಳಿದರೂ ಕೇಳದೆ, "ನನ್ನ ಕೆಲಸ ಮುಗಿಯಿತು. ನಾನೇಕೆ ಇಲ್ಲಿ ಇರಬೇಕು ?" ಎಂದು ಹಠದಿಂದ ರಾತ್ರಿಯಲ್ಲೇ ಗಾಡಿ ಕಟ್ಟಿಸಿಕೊಂಡು ಹೊರಟರು. ಚಾಮರಾಜನಗರದ ಸುತ್ತಮುತ್ತ ಆಗ ಕಳ್ಳರ ಕಾಟ ಜಾಸ್ತಿ. ದಾರಿಯಲ್ಲಿ ಅಮಾಸೆ ಎಂಬ ಕಳ್ಳ ಅವರಿಗೆ ಅಡ್ಡಹಾಕಿದ. ಎಲ್ಲವನ್ನೂ ದೋಚಲು ಬಂದಿದ್ದಾಗಿಯೂ ಅಡ್ಡಿಮಾಡಿದರೆ ತಲೆ ಒಡೆಯುವುದಾಗಿಯೂ ಕೈಲಿದ್ದ ಆಯುಧವನ್ನು ತೋರಿಸಿದ. ಪುಟ್ಟಣ್ಣನವರು ಹೆದರಲಿಲ್ಲ. "ಏನು ಬೇಕಾದರೂ ತೊಗೋ. ಆದರೆ ಇಂಥಾ ಕೆಲಸ ಯಾಕೆ

ಮಾಡ್ತೀಯ ? ದುಡಿದು ತಿನ್ನೋಕೆ ಆಗೋದಿಲ್ವಾ ? ನೋಡಿದರೆ ಗಟ್ಟಿಮುಟ್ಟಾಗಿದ್ದೀಯ" ಎಂದರು. "ಯಾಕೆ ಮಾಡ್ತೀನಿ ಅಂದರೆ ಹೊಟ್ಟೆಗಾಗಿ, ಕೆಲಸ ಯಾರು ಕೊಡ್ತಾರೆ ?" ಎಂದ ಅವನು. "ಹಾಗಾದ್ರೆ ಇಂಥಾ ದಿನ ಇಷ್ಟು ಹೊತ್ತಿಗೆ ಬಾ ನನ್ನ ಹತ್ತಿರ. ಕೆಲಸ ಕೊಡ್ತೀನಿ. ಶಿಕ್ಷೆ ಅಲ್ಲ" ಎಂದರು. ಚಾಮರಾಜನಗರಕ್ಕೆ ಅವನನ್ನು ಕರೆಸಿಕೊಂಡರು. ಕುಪ್ರಸಿದ್ಧನಾಗಿದ್ದ ಆ ಪ್ರಾಯದ ಕಳ್ಳ ಮನೆಯಲ್ಲಿ ಪ್ರವೇಶ ಮಾಡುತ್ತಿದ್ದಾನೆಂದು ತಿಳಿದ ಕೂಡಲೇ ಪುಟ್ಟಣ್ಣನವರ ನಾದಿನಿ ಉಗ್ರಾಣದಲ್ಲಿ ಅವಿತುಕೊಂಡುಬಿಟ್ಟರಂತೆ. ಅಮಾಸೆ ಹೇಳಿದ ಹೊತ್ತಿಗೆ ಬಂದ, ಕೆಲಸಕ್ಕೆ ಸೇರಲು ಸಿದ್ಧನಾಗಿ ಬಂದ. ಮಕ್ಕಳನ್ನು ಎತ್ತಿಕೊಳ್ಳುವ ಕೆಲಸ, ಇತರ ಸಣ್ಣ ಪುಟ್ಟ ಕೆಲಸಗಳನ್ನು ಆವನು ಮಾಡುವಂತೆ ನಿಯಮಿಸಿಕೊಂಡರು. ಚಾಮರಾಜನಗರದಲ್ಲಿ ಪುಟ್ಟಣ್ಣನವರು ಇರುವವರೆಗೂ ನಿಯತ್ತಿನಿಂದ ಕೆಲಸ ಮಾಡಿದ. "ಕಳ್ಳನನ್ನು ಮನೇಲಿಟ್ಕೊಂಡು ಇಷ್ಟ ಧೈರ್ಯವಾಗಿದ್ದೀರಲ್ಲ ?" ಎಂದು ಎಲ್ಲರೂ ಹೇಳುತ್ತಿದ್ದರು.

ಇಂಥದೇ ಇನ್ನೊಂದು ಸಂಗತಿ, ಕುಳ್ಳಸಿದ್ದಣ್ಣ ನಂಜಶೆಟ್ಟಿ ಎಂಬುವವನದು. ಇವನು ಮಾಡುತ್ತಿದ್ದ ಹಾನಿ ಮೆದೆಗಳಿಗೆ ಬೆಂಕಿ ಹಾಕುವುದು. ಒಮ್ಮೆ ಸಿಕ್ಕಿಬಿದ್ದಾಗ ಪುಟ್ಟಣ್ಣನವರು ಚಾತುರ್ಯದಿಂದ ಆತನನ್ನು ತಮ್ಮ ಅಂತರಂಗಕ್ಕೆ ತೆಗೆದುಕೊಂಡರು. ಅದೊಂದೇ ದಾರಿ ಉಳಿದದ್ದು. ಅವನು ಆ ಹಾದಿಗೆ ಹೋಗದಂತೆ ನಯಭಯಗಳಿಂದ ತಿಳಿಸಿ, ಒಪ್ಪಿಸಿ ತಮ್ಮ ಬಳಿಯೇ ಇಟ್ಟುಕೊಂಡರು. ಒಮ್ಮೆ ಮಾದಾಪುರದಲ್ಲಿ (ಆಗ ಹಂಡರಕಳ್ಳಿ) ಮೆದೆಗೆ ಬೆಂಕಿ ಬಿತ್ತು. ಈತ ಆಗ ಪುಟ್ಟಣ್ಣನವರ ಬಳಿಯೇ ಇದ್ದುದರಿಂದ ಈತ ಆ ಕೃತ್ಯಕ್ಕೆ ಕಾರಣನಲ್ಲ ಎಂದು ತಿಳಿದಿತ್ತು. ಕಡೆಗೆ ಅವನ ಸಹಾಯದಿಂದಲೇ ಈ ಕೆಲಸ ಮಾಡಿದವನನ್ನು ಪುಟ್ಟಣ್ಣನವರು ಕಂಡುಹಿಡಿದರು.

ಅಪಾಯಕ್ಕೆ ಹೆದರದ ಗುಂಡಿಗೆಯೂ, ಸಲ್ಲದ ಮಾರ್ಗದಲ್ಲಿ ತೊಡಗಿರುವವನನ್ನು ತಮ್ಮ ಹಾದಿಗೆ ಎಳೆದುಕೊಳ್ಳುವ ಚಾತುರ್ಯವೂ ಪುಟ್ಟಣ್ಣನವರಿಗೆ ಇದ್ದಿತಾದುದರಿಂದ ಸದ್ದಿಲ್ಲದೆ ಇಂಥ ಅನೇಕ ಕಾರ್ಯಗಳನ್ನು ಮಾಡಿದರು. ನಗರದ ಶಾಂತಿಸ್ಥಾಪನೆಗೆ ಅವರು ಮಾಡಿದ ಇಂಥ ಹಲವು ಸಂಗತಿಗಳು ಕಾರಣವಾದುವು ಇದಲ್ಲದೆ ಯಾರು ಏನು ಚಟುವಟಿಕೆಗಳಲ್ಲಿ ತೊಡಗಿದ್ದಾರೋ ಎಂದು ಕಂಡುಹಿಡಿಯಲು ವೇಷ ಬದಲಾಯಿಸಿಕೊಂಡು ಅಲ್ಲಲ್ಲಿ ರಾತ್ರಿ ವೇಳೆ ಗಸ್ತು ಹೊಡೆದು ಗುಮಾನಿ ಬಂದ ಕಡೆ ಹೊಂಚು ಹಾಕಿ ಕೇಳಿ ತಮ್ಮ ಸಿಬ್ಬಂದಿಯ ನೆರವಿನಿಂದ ಅನೇಕ ಅಪರಾಧಗಳನ್ನು ಬಯಲಿಗೆಳೆದರು. ಆಗಿನ ಹಲವು ಜನ ಅಮಲ್ದಾರರು ಇಂಥ ಸಾಹಸಪ್ರವೃತ್ತಿಯನ್ನುಳ್ಳವರಾಗಿದ್ದರಂತೆ. ಕಳ್ಳರಂತೆ ತಾವೂ ನಟಿಸಿ, ಮುಸುಕು ಬೀರಿ ನಡೆಯುತ್ತಾ, ಕಳ್ಳರು ಸಿಕ್ಕಿದರೆ ಮಾತನಾಡಿಸಿ, ಅವರ ಹಿಂದೆಯೇ ಹೋಗಿ ಅವರ ಠಾಣ್ಯಗಳನ್ನು ತಿಳಿದು ಮುಂದಿನ ಕ್ರಮ ಜರುಗಿಸುತ್ತಿದ್ದರು.

ದೇವಸ್ಥಾನದ ತೋಟಕ್ಕೆ ಸೇರಿದ ಬಾಳೆಗೊನೆಯನ್ನು ತರಿಸಿದರೆಂದು ಪುಟ್ಟಣ್ಣ

ನವರು ಹೆಂಡತಿಗೆ ಒಮ್ಮೆ ಜುಲ್ಮಾನೆಯನ್ನು ಚಾಮರಾಜನಗರಕ್ಕೆ ಬಂದ ಹೊಸದರಲ್ಲಿ ವಿಧಿಸಿದ್ದರಂತೆ. ಇನ್ನೊಮ್ಮೆ ಸಬ್ ಡಿವಿಜನ್ ಅಧಿಕಾರಿಗಳೊಬ್ಬರು ತಮಗೆ ಸಾಮಾನು ಸರಬರಾಜು ಮಾಡಲು ಪುಟ್ಟಣ್ಣನವರಿಗೆ ಹೇಳಿದರು. ಅವರು ಹೇಳಿದ ಎಲ್ಲ ಸಾಮಾನುಗಳನ್ನೂ ಸರಿಯಾಗಿ ಒಪ್ಪಿಸಿ, ಜೊತೆಗೆ ಬೆಲೆಯ ಪಟ್ಟಿಯನ್ನೂ ಕೊಟ್ಟರು, ಪುಟ್ಟಣ್ಣನವರು. ಈ ಸಾಮಾನುಗಳಿಗೂ ಬೆಲೆಯನ್ನು ತನ್ನಂಥ ದೊಡ್ಡ ಅಧಿಕಾರಿಯೂ ಕೊಡಬೇಕೋ ಎಂದು ಮೇಲಧಿಕಾರಿ ಸಿಟ್ಟು ಮಾಡಲು, ಪುಟ್ಟಣ್ಣನವರು ಶಾಂತವಾಗಿಯೇ, "ತಮ್ಮ ಖರ್ಚಿಗೆಂದು ತಾನೇ ಸರ್ಕಾರ ಸಂಬಳ, ಭತ್ಯ ಕೊಡುವುದು ?" ಎಂದರಂತೆ. ಹೆಂಡತಿಯೆಂದು ಬಿಡದೆ, ಮೇಲಧಿಕಾರಿಯೆಂದು ಹೆದರದೆ ನ್ಯಾಯವಾಗಿ ನಡೆದದ್ದು ಜನರಲ್ಲಿ ದಿಗ್ಭ್ರಮೆ, ಎಚ್ಚರಗಳನ್ನೂ ಹುಟ್ಟಿಸಿತು. ನಡೆಯುತ್ತಿದ್ದ ಹಲವು ಅನ್ಯಾಯಗಳು ಅಲ್ಲಲ್ಲೇ ಅಡಗಿಹೋದುವು.

### ನಿರ್ಭಯತೆ

ಪುಟ್ಟಣ್ಣನವರಿಗೆ ರಕ್ತಗತವಾಗಿದ್ದ ಇನ್ನೊಂದು ಗುಣ ಎಂದರೆ ನಿರ್ಭಯತೆ. ಯಾವುದನ್ನೇ ಆಗಲಿ ನೇರವಾಗಿ ಹೇಳುವ ಗುಣ. ಸತ್ಯವನ್ನೇ ಆಗಲಿ, ಸಕ್ಕರೆ ಲೇಪನ ಕೊಟ್ಟು ಹೇಳುವುದು ಅವರಿಗೆ ಎಂದಿಗೂ ಒಗ್ಗದಿದ್ದ ರೀತಿ. ಇದರಿಂದ ಅವರ ವೃತ್ತಿ ಜೀವನದಲ್ಲಿ ಅನೇಕರನ್ನು ತಮ್ಮ ಶತ್ರುಗಳಾಗಿಸಿಕೊಳ್ಳಬೇಕಾಯಿತು.

ಒಮ್ಮೆ ದಿವಾನ್ ರಂಗಾಚಾರ್ಯರು ವೆಂಕಟಕೃಷ್ಣಯ್ಯನವರನ್ನು ಕೆಲವು ಅರಸು ಮಕ್ಕಳುಗಳಿಗೆ ಪಾಠ ಹೇಳಲು ಯಾರನ್ನಾದರೂ ಗೊತ್ತುಮಾಡಿಕೊಡಲು ಹೇಳಿದರು. ಪ್ರವೃತ್ತಿಯಲ್ಲಿ ನಿಷ್ಠ ಉಪಾಧ್ಯಾಯರಾದ, ಆದರೆ ಕೋಪಿಷ್ಠರೂ, ಜಗಳಗಂಟ ಸ್ವಭಾವದವರೂ ಆದವರೊಬ್ಬರು ನನಗೆ ಗೊತ್ತು ಎಂದು ಪುಟ್ಟಣ್ಣನವರನ್ನು ಆ ಕೆಲಸಕ್ಕೆ ವೆಂಕಟಕೃಷ್ಣಯ್ಯನವರು ನೇಮಿಸಿದರು. ಆ ಮಕ್ಕಳ ಕೆಟ್ಟ ಚಟಗಳನ್ನೂ ಬಿಡಿಸಬೇಕೆಂದು ರಂಗಾಚಾರ್ಯರಿಂದ ತಿಳಿದುಕೊಂಡ ಪುಟ್ಟಣ್ಣನವರು ಅತ್ಯಂತ ಕಠಿಣವಾದ ಶಿಸ್ತನ್ನು ಜಾರಿಗೆತಂದು ತಮ್ಮ ಕೆಲಸವನ್ನು ನಿರ್ವಹಿಸುತ್ತಿದ್ದರು. ಈ ಪ್ರಯೋಗದಲ್ಲಿ ಒಬ್ಬ ವಿದ್ಯಾರ್ಥಿಗೆ ಮನೆಯಲ್ಲಿದ್ದ ಭೋಗಜೀವನದ ಛಾಯೆ ಬೀಳಬಾರದೆಂಬ ಉದ್ದೇಶದಿಂದ ಆತನಿಗೆ ಪ್ರತ್ಯೇಕ ವಸತಿಯನ್ನು ಏರ್ಪಡಿಸಿದರು. ಆ ವಿದ್ಯಾರ್ಥಿಯ ತಂದೆ ರಂಗಾಚಾರ್ಯರಿಗೆ ದೂರು ಕೊಟ್ಟಾಗ, ರಂಗಾಚಾರ್ಯರು ಪುಟ್ಟಣ್ಣನವರನ್ನು ಕರೆಸಿ "ನಿಮ್ಮ ಶಿಕ್ಷಣದಿಂದ ನಿಮಗೆ ಶೀಲ ದೊರಕಲಿಲ್ಲ" ಎಂದುಬಿಟ್ಟರು. ಪುಟ್ಟಣ್ಣನವರು ಕ್ರುದ್ಧರಾಗಿ "ತಮಗಾದರೂ ಅಷ್ಟೇ" ಎಂದು ಪ್ರತ್ಯುತ್ತರ ಕೊಟ್ಟರು. ಕೆಲವು ದಿನಗಳಾದ ಮೇಲೆ ರಂಗಾಚಾರ್ಯರು ತಮ್ಮದೇ ತಪ್ಪೆಂದು ಒಪ್ಪಿಕೊಂಡರಂತೆ.[2]

ಇನ್ನೊಮ್ಮೆ ದಿವಾನ್ ಶೇಷಾದ್ರಿ ಅಯ್ಯರ್ ಅವರಿಗೂ ಇನ್ನೊಬ್ಬರಿಗೂ ಮನಸ್ತಾಪ ಬಂದಿತ್ತು. ತಮ್ಮದೇ ತಪ್ಪು ಎಂದು ತಿಳಿದ ಮೇಲೆ ದಿವಾನರು ಕ್ಷಮೆ ಕೇಳಿದರು. ಈ ಘಟನೆ ನಡೆದ ಕೆಲವು ದಿನಗಳ ಮೇಲೆ ಶೇಷಾದ್ರಿ ಅಯ್ಯರ್ ಅವರೂ,

ವೆಂಕಟಕೃಷ್ಣಯ್ಯನವರೂ, ಪುಟ್ಟಣ್ಣನವರೂ ಗಾಡಿಯಲ್ಲಿ ಎಲ್ಲಿಗೋ ಹೋಗುತ್ತಿದ್ದಾಗ ಮೇಲಿನ ಘಟನೆಯು ಪ್ರಸ್ತಾಪ ಸುಳಿಯಿತು. "ದಿವಾನರು ಅಂದರೆ ನೀವು ದಿವಾನರು. ತಪ್ಪು ಯಾರದೆಂದು ತಿಳಿದ ಮೇಲೆ ಕ್ಷಮೆ ಕೇಳಿದ್ದು ಸರಿ" ಎಂದು ಪುಟ್ಟಣ್ಣನವರು ಹೇಳಿದರು. ಅನಂತರ ತಾವು ಇಳಿಯಬೇಕಿದ್ದ ಜಾಗ ಬಂದ ಕೂಡಲೇ ಇಳಿದು ಹೋದರು. ಬಹುದಿನಗಳ ಕೆಳಗೆ ವೆಂಕಟಕೃಷ್ಣಯ್ಯನವರು ಪುಟ್ಟಣ್ಣನವರ ಬಗೆಗೆ ಮಾತಾಡುತ್ತಾ ಅವರು ಬಹು ಯೋಗ್ಯರೆಂದೂ, ಅಮಲ್ದಾರ ಪದವಿ ಅವರಿಗೆ ಕಡಿಮೆ ಎಂದೂ ಕಡೆಯ ಪಕ್ಷ ಅವರನ್ನು ಅಸಿಸ್ಟೆಂಟ್ ಕಮಿಷನರನ್ನಾಗಿಯಾದರೂ ಮಾಡ ಬೇಕೆಂದು ಹೇಳಿದ್ದು ದಿವಾನರ ನೆನಪಿಗೆ ಬಂದು "ಇಂಥೋರನ್ನ, ದಿವಾನರಿಗೂ ಮರ್ಯಾದೆ ಕೊಡದೋರನ್ನ ಅಸಿಸ್ಟೆಂಟ್ ಕಮೀಷನರನ್ನಾಗಿ ಮಾಡಲಾಗುತ್ತದೆಯೋ?" ಎಂದರಂತೆ.

"ಚೀಫ್ ಕೋರ್ಟಿನಲ್ಲಿ ಮ॥ ಪುಟ್ಟಣ್ಣನವರು ಭಾಷಾಂತರಕಾರರಾಗಿದ್ದಾಗ ಜಡ್ಜಿಗಳ ಜೊತೆ ಜಗಳವಾಡದ ದಿನವೇ ಇಲ್ಲ. ಅವರು ಉದ್ಯೋಗದಲ್ಲಿರುವವರೆಗೂ ಅವರಿಗೂ, ಅವರ ಮೇಲ್ಪಟ್ಟ ಅಧಿಕಾರಿಗಳಿಗೂ ಜಗಳಗಳು ನಡೆಯುತ್ತಲೇ ಇದ್ದವು. ಹೀಗಾಗದಿದ್ದರೆ, ಅವರು ಖಂಡಿತ ಮೈಸೂರಿನ ದಿವಾನರಾಗುತ್ತಿದ್ದರು. ನಿಸ್ಪೃಹತೆ ಯಿಂದ ಕೆಲಸ ಮಾಡಿದ್ದರಿಂದ ಅಮಲ್ದಾರರ ಪದವಿಗೆ ಬರುವುದೇ ಎಷ್ಟೋ ಕಷ್ಟ ವಾಯಿತು."[3]

ತಮ್ಮ ಇಬ್ಬರು ಗಂಡುಮಕ್ಕಳು ಮೈಸೂರಿನಲ್ಲಿ ಓದುತ್ತಿದ್ದಾಗ, ಅವರ ಮೇಲೆ ವಿನಾಕಾರಣ ಕಳವಿನ ಆಪಾದನೆ ಹೊರಿಸಿ, ಅವರನ್ನು ಹಿಂಸಿಸಿದವರಿಗೆ ಶಿಕ್ಷೆಯಾಗ ಬೇಕೆಂದು ಕೋರ್ಟಿಗೆ ಹೋಗಿದ್ದಲ್ಲದೆ, ತಪ್ಪಿತಸ್ಥರು ಕ್ಷಮಾಪಣೆ ಕೇಳುವ ಹಾಗಾಗುವ ವರೆಗೂ ಪುಟ್ಟಣ್ಣನವರು ಬಿಡಲಿಲ್ಲ. ಇನ್ನೊಮ್ಮೆ ಯಾವುದೋ ಮದುವೆಗಾಗಿ ರೈಲಿ ನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಒಬ್ಬ ಪೋಲೀಸ್ ಪೇದೆ ಮರ್ಯಾದೆ ಮೀರಿ ಮಾತ ನಾಡಿದನೆಂದು ಐ ಜಿ ಪಿ. ವರೆಗೂ ದೂರು ಒಯ್ದಿದ್ದರು, ಮುಖ್ಯಾಧಿಕಾರಿಗಳೇ ಬಂದು ಶಾಂತವಾತಾವರಣವನ್ನು ಏರ್ಪಡಿಸಬೇಕಾಯಿತು. ಇನ್ನೊಬ್ಬರ ಅಕಾರಣವಾದ ವ್ಯಂಗ್ಯ ಅವಹೇಳನಗಳನ್ನು ಅವರು ಎಂದಿಗೂ ಸಹಿಸುತ್ತಿರಲಿಲ್ಲ.

### ನೇರ ವ್ಯವಹಾರ

ಪುಟ್ಟಣ್ಣನವರಿಗೆ ಮಾತಾಗಲೀ ಕೃತಿಯಾಗಲೀ ನೇರವಾಗಿರಬೇಕು. ಯಾವುದೇ ವ್ಯವಹಾರದಲ್ಲಿ ಮರೆಮೋಸ, ಕೊಂಕು, ಕುಟಿಲತೆಗಳನ್ನು ಕಂಡರೆ ಆಗುತ್ತಿರಲಿಲ್ಲ. ಎಲ್ಲ ಕೆಲಸಗಳೂ ಚಟಪಟನೆ ಆಗಬೇಕು. ಅಚ್ಚುಕಟ್ಟಾಗಿಯೂ ಇರಬೇಕು. ಬರವಣಿಗೆ ಸಂಬಂಧಿಸಿದಂತೆ ಮುದ್ರಣಶಾಲೆಯ ಕೆಲಸವನ್ನು ಅವರೇ ಮಾಡಿಕೊಳ್ಳುತ್ತಿದ್ದರು. ಅಲ್ಲಿ ಪ್ರತಿಯೊಂದನ್ನೂ ವಿವರವಾಗಿ ನೋಡುತ್ತಿದ್ದರು. ಅವರ ಅನೇಕ ಕೃತಿಗಳು 'ನೀತಿ ಚಿಂತಾಮಣಿ' ಯೂ ಸೇರಿದಂತೆ ಚಿಕ್ಕಪೇಟೆಯ ಪವರ್ ಪ್ರಿಂಟಿಂಗ್ ಪ್ರೆಸ್‌ನಲ್ಲಿ

ಮುದ್ರಿತವಾದುವು. ಅಚ್ಚುಕೂಟದ ಮಾಲೀಕರು ದಿವಾನ್ ಟಿ. ಆನಂದರಾಯರ ಮನೆತನದವರಾದ ಎನ್. ಕೃಷ್ಣಸ್ವಾಮಿರಾವ್ ಅವರು.

ತಮ್ಮ ಪುಸ್ತಕ ಮುದ್ರಣಗೊಳ್ಳುವಾಗ ಪುಟ್ಟಣ್ಣನವರು ಆಗಾಗ ಅಲ್ಲಿಗೆ ಬಂದ ರೆಂದರೆ ಅಲ್ಲಿನ ಕೆಲಸಗಾರರಿಗೆ ನಡುಕ ಬರುತ್ತಿತ್ತು. ಪುಟ್ಟಣ್ಣನವರಿಗೆ ಯಾವ ಕೆಲಸವೂ ಅಡ್ಡಾದಿಡ್ಡಿಯಾಗಬಾರದು. ಪುಟದ ಹಿಂಭಾಗ ಮುಂಭಾಗಗಳ ಸಾಲುಗಳು ಒಂದರ ಮೇಲೆ ಒಂದು ಸರಿಯಾಗಿರಬೇಕು. ಒಂದರ ಮಧ್ಯೆ ಇನ್ನೊಂದು ಬಂದು ಕಣ್ಣು ಕುಕ್ಕು ವಂತೆ ಅಸ್ಪಷ್ಟವಾಗಿರಬಾರದು. ಒಂದು ಪುಟದಲ್ಲಿ ಎಷ್ಟು ಸಾಲಿರಬೇಕೋ ಅಷ್ಟೇ ಸಾಲಿರಬೇಕು. ಒಂದು ಸಾಲು ಹೆಚ್ಚಾಗಬಾರದು, ಒಂದು ಸಾಲು ಕಡಿಮೆಯಾಗ ಬಾರದು. ಸಾಮಾನ್ಯವಾಗಿ ಇಪ್ಪತ್ತೆರಡು ಸಾಲು ಇರುತ್ತಿತ್ತು. ಒಂದು ಪದಕ್ಕೂ ಇನ್ನೊಂದು ಪದಕ್ಕೂ ನಡುವಿನ ಅಂತರ ಸರಿಯಾಗಿರಬೇಕು. ವಿನಾಕಾರಣ ಒಂದು ಪುಟವೂ ಹೆಚ್ಚಾಗಬಾರದು, ವ್ಯರ್ಥವಾಗಬಾರದು. ಸ್ವಲ್ಪ ಹೆಚ್ಚು ಕಡಮೆ ಆದರೆ ನೇರವಾಗಿ ಮಾಲೀಕರಾದ ಕೃಷ್ಣಸ್ವಾಮಿರಾಯರ ಬಳಿಗೇ ದೂರು ಕೊಂಡೊಯ್ಯುತ್ತಿದ್ದರು. ಪುಟ್ಟಣ್ಣನವರು ಕರಡು ತಿದ್ದಲು ಬಂದರೆಂದರೆ ಅಲ್ಲಿನ ಕೆಲಸಗಾರರು ತಾವೇ ಒಮ್ಮೆ ಕರಡು ತಿದ್ದಿ ಅನಂತರ ಕೊಡುತ್ತಿದ್ದರಂತೆ. ಅಕಸ್ಮಾತ್ತಾಗಿ ಹೆಚ್ಚು ತಪ್ಪಿದ್ದರೆ, ಬೈಗುಳ ಕಡಿಮೆಮಾಡಿಕೊಳ್ಳಲೆಂದು. ಪುಟ್ಟಣ್ಣನವರು ಸಾಮಾನ್ಯವಾಗಿ ಅಚ್ಚುಕೂಟ ದಲ್ಲೇ ಕುಳಿತು ಕರಡು ತಿದ್ದುವರು. ಒಂದೊಂದು ಬಾರಿಗೆ ಹನ್ನೆರಡು ಪುಟಗಳಂತೆ ತಿದ್ದಿ ಹಿಂದಕ್ಕೆ ಕೊಡುತ್ತಿದ್ದರು.

'ನೀತಿ ಚಿಂತಾಮಣಿ' ವಿದ್ಯಾ ಇಲಾಖೆಯಿಂದ ಮಂಜೂರಾಗಿದ್ದ ಪುಸ್ತಕ, ಇದು ಚಿಕ್ಕ ಹುಡುಗರಿಗೆ ಎಂದೇ ಇದ್ದುದರಿಂದ ಹದಿನಾಲ್ಕು ಪಾಯಿಂಟು ಅಕ್ಷರಗಳನ್ನು ಮುದ್ರಿಸುತ್ತಿದ್ದರು. ಮಿಕ್ಕ ಪುಸ್ತಕಗಳಿಗೆ ಹನ್ನೆರಡು ಪಾಯಿಂಟು ಅಕ್ಷರಗಳು. ಸಾಮಾನ್ಯವಾಗಿ ಟಿ. ಎನ್. ಶ್ರೀನಿವಾಸಶೆಟ್ಟಿ, ಸರಸ್ವತಿ ರತ್ನಾಕರ ಡಿಪೋ, ಚಿಕ್ಕಪೇಟೆ; ಕೆ. ಸಿ. ಚೌರಪ್ಪ ಎಂಡ್ ಸನ್ಸ್, ಅವಿನ್ಯೂ ರೋಡ್ ; ಕೆ. ಮುನಿಸ್ವಾಮಪ್ಪ ಎಂಡ್ ದಾಸಪ್ಪ ಇವರುಗಳು ಪುಟ್ಟಣ್ಣನವರ ಮಾಮೂಲಿನ ಪುಸ್ತಕ ವ್ಯಾಪಾರಿಗಳು. ಪವರ್ ಪ್ರಿಂಟಿಂಗ್ ಪ್ರೆಸ್‌ನ ಮಾಲೀಕರಾದ ಕೃಷ್ಣಸ್ವಾಮಿಯವರು ತಾವೇ ಪೂರ್ಣ ಖರ್ಚು ಹಾಕಿ ಮುದ್ರಿಸುವರು. ಪುಸ್ತಕ ವ್ಯಾಪಾರಿಗಳು ಸಾಮಾನ್ಯವಾಗಿ ಪುಟ್ಟಣ್ಣನವರ ಬಳಿ ಕಡಿಮೆ ಎಂದರೆ ಐನೂರು ಪ್ರತಿಗಳನ್ನು ಕೊಳ್ಳುವರು. ಇಂತಿಂಥ ವ್ಯಾಪಾರಿಗಳಿಗೆ ಇಷ್ಟಿಷ್ಟು ಪ್ರತಿಗಳನ್ನು ಇಂಥ ದಿನ ತಲುಪಿಸಬೇಕೆಂದು ಅಚ್ಚುಕೊಟದ ಮಾಲೀಕರಿಗೇ ಪುಟ್ಟಣ್ಣನವರು ಹೇಳುತ್ತಿದ್ದರು. ಒಟ್ಟು ಲಾಭದಲ್ಲಿ $12\frac{1}{2}$ (ಶೇಕಡಾ) ಯಷ್ಟು ಪುಸ್ತಕ ವ್ಯಾಪಾರಿಗಳಿಗೆ. ಮಿಕ್ಕದ್ದರಲ್ಲಿ ಅರ್ಧ ಪ್ರೆಸ್‌ನವರಿಗೆ, ಅರ್ಧ ಪುಟ್ಟಣ್ಣನವರಿಗೆ. ಇಂದಿನ (1976) ಇಪ್ಪತ್ತು ರೂಪಾಯಿಗಳ ಕಾಗದ ಅಂದು ಹದಿನಾಲ್ಕು ಆಣೆಗೆ ದೊರೆಯುತ್ತಿತ್ತು. ಅಪರೂಪಕ್ಕೆ ಪುಟ್ಟಣ್ಣನವರಿಗೆ ಶೇಕಡಾ ನಲವತ್ತರಂತೆಯೂ ಸಿಗುತ್ತಿತ್ತು. ಆಗಿನ ಬೆಲೆ ನೀತಿ ಚಿಂತಾಮಣಿಯ ಒಂದನೆಯ ಭಾಗಕ್ಕೆ ನಾಲ್ಕು ಆಣೆ,

ಭಾಗ ಎರಡನೆಯದಕ್ಕೆ ಎರಡೂವರೆ ಆಣೆ, ಮೂರನೆಯ ಭಾಗಕ್ಕೆ ನಾಲ್ಕೂವರೆ ಆಣೆ. ಆ ದಿನಗಳಲ್ಲಿ ಅದೇ ಬೆಲೆ ಜಾಸ್ತಿ ಎಂಬ ಮಾತಿಗೆ ಗುರಿಯಾಗಿತ್ತು. ಪ್ರತಿಭಾಗವೂ ಕಡಿಮೆ ಎಂದರೆ ಐನೂರು ಪ್ರತಿಗಳಷ್ಟು ಖರ್ಚಾಗುತ್ತಿತ್ತು. ಮಾರನೆಯ ದಿನ ಪುಟ್ಟಣ್ಣನವರ ಪುಸ್ತಕಗಳು ಸಿದ್ಧವಾಗಬೇಕಿದ್ದು, ಕೆಲಸ ಮುಗಿಯದಿದ್ದರೆ ಇಡೀ ರಾತ್ರಿ ಕೂತು ಕೆಲಸ ಸಾಗಿಸಿ ಬೈಂಡಿಂಗ್ ಮಾಡುತ್ತಿದ್ದರು. ಪುಸ್ತಕ ವ್ಯಾಪಾರಿಗಳೂ ಕೂಡ ಅದೇ ನಯ ಭಯಗಳಿಂದ ನಡೆದುಕೊಳ್ಳುತ್ತಿದ್ದರು. ಕೂಡಲೇ ದುಡ್ಡು ಎಣಿಸಿ ಕೊಟ್ಟುಬಿಡು ತ್ತಿದ್ದರು. ಅದರಲ್ಲಿ ಅರ್ಧ ಭಾಗವನ್ನು ಅಚ್ಚುಕೂಟದವರಿಗೆ ಪುಟ್ಟಣ್ಣನವರು ತಕ್ಷಣವೇ ತಲುಪಿಸುತ್ತಿದ್ದರು. ಹಣದ ವ್ಯವಹಾರ ಕಟ್ಟುನಿಟ್ಟು, ಆದರೆ ಸೌಹಾರ್ದಯುತವಾದ ನಡವಳಿಕೆ. ಇದರ ಮೇಲೆ ಅಚ್ಚುಕೂಟಕ್ಕೆ ಒಳ್ಳೆಯ ಆದಾಯ 'ನೀತಿ ಚಿಂತಾಮಣಿ' ಯಂಥ ಕೃತಿಗಳಿಂದ ಸಿಗುತ್ತಿತ್ತು. ಗಣ್ಯರೆಂದು ಹೆಸರು ಪಡೆದ ಪುಟ್ಟಣ್ಣನವರಂಥವರು ತಮ್ಮಲ್ಲಿ ಬರುತ್ತಾರೆಂದು ಅಚ್ಚುಕೂಟದವರಿಗೆ ಬಹಳ ಹೆಮ್ಮೆ.

## ಮಿತ್ರವರ್ಗ

ಪುಟ್ಟಣ್ಣನವರ ಮಿತ್ರವರ್ಗ ಯಾರಿಗಾದರೂ ಮೆಚ್ಚುಗೆಯನ್ನು ಅಲ್ಲವಾದರೆ ಅಸೂಯೆಯನ್ನು ತರುವಂಥದು. ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಉಪ ಕುಲಪತಿಗಳಾಗಿದ್ದ ಎಚ್. ವಿ. ನಂಜುಂಡಯ್ಯನವರು ಮತ್ತು ವೃದ್ಧ ಪಿತಾಮಹ ಎಂ. ವೆಂಕಟಕೃಷ್ಣಯ್ಯನವರು ಪುಟ್ಟಣ್ಣನವರ ಬಾಲ್ಯಸ್ನೇಹಿತರು. ವಿದ್ಯಾಭ್ಯಾಸದ ಇಲಾಖೆಯ ಇನ್ಸ್‌ಪೆಕ್ಟರ್ ಜನರಲ್ ಆಗಿದ್ದ ಎಂ. ಶಾಮರಾಯರು ಕಾಲೇಜಿನ ದಿನ ಗಳಿಂದ ಸ್ನೇಹಿತರು. ಮಲ್ಲೇಶ್ವರದ ಲಾಯರ್ ಡಿ. ವೆಂಕಟರಾಮಯ್ಯ, ಸಬ್‌ಜಡ್ಜ್ ಲಕ್ಷ್ಮೀನಾರಣಪ್ಪ, ಆರ್. ರಘುನಾಥರಾವ್, ಎಂ. ಜಿ. ಶ್ರೀನಿವಾಸರಾವ್, ಆರ್ಮುಗಂ ಮೊದಲಿಯಾರ್, ಸೋಮಶೇಖರ ಗೌಡ, ಬಾಪು ಸುಬ್ಬರಾವ್ ಇವರು ಪುಟ್ಟಣ್ಣ ನವರ ಆಪ್ತವರ್ಗಕ್ಕೆ ಸೇರಿದವರು. ಆಸ್ಥಾನಕವಿ ಬಸವಪ್ಪಶಾಸ್ತ್ರಿಗಳು, ಜಯಾಚಾರ್ಯರು, ನಂಜನಗೂಡು ಸುಬ್ಬಾಶಾಸ್ತ್ರಿಗಳು ಇವರು ಕನ್ನಡದಲ್ಲಿ ಪುಟ್ಟಣ್ಣನವರ ಬರವಣಿಗೆ ಪ್ರಾರಂಭವಾದ ಮೇಲೆ ಆಪ್ತರಾದವರು. ದಿವಾನ್ ರಂಗಾಚಾರ್ಲು ಅವರಲ್ಲಿ ಪುಟ್ಟಣ್ಣ ನವರಿಗೆ ಬಹಳ ಬಳಕೆ, ಗೌರವಗಳಿದ್ದುವು. ದಿವಾನರು ಹಲವು ಬಾರಿ ಪುಟ್ಟಣ್ಣನವರ ಸಲಹೆಗಳನ್ನು ಸಾರ್ವಜನಿಕ ವಿಚಾರಗಳಲ್ಲಿ ಕೇಳುವರು. ಪುಟ್ಟಣ್ಣನವರು ಸೂಕ್ತ ಸಲಹೆ ಗಳನ್ನು ಕೊಡುವುದರ ಜೊತೆಗೆ ಹಲವು ಬಾರಿ ದಿವಾನರ ಅಭಿಪ್ರಾಯವನ್ನು ಸ್ಪಷ್ಟ ವಾಗಿ ವಿರೋಧಿಸುತ್ತಿದ್ದರು. ಪುಟ್ಟಣ್ಣನವರ ಖಚಿತ ಅಭಿಪ್ರಾಯಗಳಲ್ಲಿ, ಸತ್ಯಪ್ರಿಯತೆ ಯಲ್ಲಿ ದಿವಾನರಿಗೆ ಅಪಾರ ನಂಬಿಕೆಯಿತ್ತು.

ಚಿಕ್ಕವಯಸ್ಸಿನವರಾದರೂ, ಪುಟ್ಟಣ್ಣನವರು ಅನೇಕರನ್ನು ತಮ್ಮ ಸ್ನೇಹಿತರಂತೆ ಭಾವಿಸಿದ್ದರು. ಅವರಲ್ಲಿ ಬಿ. ಎಂ. ಶ್ರೀ ಮತ್ತು ಡಿ. ವಿ. ಜಿ. ಮೊದಲಾದವರು ಮುಖ್ಯರು.

### ಕಿರಿಯರಿಗೆ ಪ್ರೋತ್ಸಾಹ

ಪುಟ್ಟಣ್ಣನವರದು ಪೂರ್ಣ ಕಾಲದ ಸಾಹಿತ್ಯ ಸೇವೆ ಅಲ್ಲ. ಬಿಡುವಿನ ಕಾಲದಲ್ಲಿ ಆತ್ಮಾನಂದಕ್ಕಾಗಿ ಮಾಡುತ್ತಿದ್ದ ಈ ಕಾರ್ಯ ನಿವೃತ್ತಿಯ ನಂತರ ಸಾರ್ವಜನಿಕ ಸೇವೆ ಯೊಡನೆ ಸೇರಿಕೊಂಡಿತು. ಅವರ ಕಾಲದಲ್ಲಿ ಬರವಣಿಗೆಗೆ ಯಾವ ಪ್ರೋತ್ಸಾಹವೂ ಇರಲಿಲ್ಲ. ಮೆಚ್ಚುಗೆಯಾಗಲೀ, ಸಹಾನುಭೂತಿಯಾಗಲೀ ದುರ್ಲಭವಾಗಿತ್ತು. ಒಂದು ಬಗೆಯ ಒಂಟಿತನ ಅವರನ್ನು ಹಲವು ಬಾರಿ ಕಾಡುತ್ತಿತ್ತು.

ಈ ರೀತಿಯ ಪ್ರೋತ್ಸಾಹದ ಅರಕೆ ತಮ್ಮ ಮುಂದಿನ ಬರಹಗಾರರಿಗಾದರೂ ತಪ್ಪಲಿ ಎಂದು ಅವರ ಆಸೆಯಾಗಿತ್ತು. 1917ರಲ್ಲಿ 'ಮಧುರವಾಣಿ'ಯಲ್ಲಿ ಮಾಸ್ತಿ ಯವರ ಕಥೆಗಳು ಪ್ರಕಟವಾದಾಗ ತಾವೇ ಮಾಸ್ತಿಯವರನ್ನು ಹುಡುಕಿಕೊಂಡು ಹೋಗಿ ತಮ್ಮ ಸಂತೋಷವನ್ನು ತಿಳಿಸಿದ್ದಲ್ಲದೆ ತಮ್ಮ 'ಮುಸುಗ ತೆಗೆಯೇ ಮಾಯಾಂಗನೆ'ಯ ಹಸ್ತಪ್ರತಿಯನ್ನು ತಂದು ಅವರ ಬಳಿ ಪೂರ್ಣವಾಗಿ ಓದಿದರು. ಮಾಸ್ತಿಯವರು ಆ ಕೃತಿಯನ್ನು ಕುರಿತು ಹೇಳಿದ ಮಾತುಗಳಿಗೆ ಸಂತೋಷಿಸಿದರಂತೆ. ಡಿ. ವಿ. ಜಿ. ಯವರು ಜಾನ್ ಸ್ಟ್ಯುವರ್ಟ್‌ಮಿಲ್‌ನ 'On Liberty' ಪ್ರಬಂಧವನ್ನು ಕನ್ನಡಕ್ಕೆ ಅನುವಾದಿಸುವಾಗ ಪುಟ್ಟಣ್ಣನವರೇ ತಮ್ಮನ್ನು ಹುಡುಕಿಕೊಂಡು ಬಂದು ಪ್ರೋತ್ಸಾಹ ಕೊಟ್ಟಿದ್ದನ್ನು ಡಿ. ವಿ. ಜಿ. ಯವರು ಕೃತಜ್ಞತೆಯಿಂದ ತಮ್ಮ ಜ್ಞಾಪಕ ಚಿತ್ರಶಾಲೆಯ 'ಸಾಹಿತ್ಯೋಪಾಸಕರು' ಸಂಪುಟದಲ್ಲಿ ಸ್ಮರಿಸಿದ್ದಾರೆ.

ಕನ್ನಡದಲ್ಲಿ ಹೊಸದಾಗಿ ಬರೆಯಲು ಪ್ರಾರಂಭಿಸಿದ್ದ ಕಿರಿಯರ ಬಗೆಗೆ ಅವರು ಬಹಳ ಅಭಿಮಾನ ತಾಳಿದ್ದರು. ಬೆನ್ನುತಟ್ಟಿ ಪ್ರೋತ್ಸಾಹಕೊಟ್ಟರು. ತಮ್ಮ ವಾಸ ಪತ್ರಿಕೆ 'ಹಿತಬೋಧಿನಿ'ಯ ಮೂಲಕವೇ ಆ ಕೆಲಸಕ್ಕೆ ಪ್ರಾರಂಭಿಸಿದ್ದರು. 'The condition of our Kannada' ಲೇಖನದಲ್ಲಿ ಕನ್ನಡದಲ್ಲಿ ಬರಹಗಾರರನ್ನು ಪ್ರೋತ್ಸಾಹಿಸುವ ರೀತಿಯನ್ನು ಕುರಿತು ಹೇಳಿದ್ದಾರೆ.

ಬಿ. ಎಂ. ಶ್ರೀ. ಯವರು ಕನ್ನಡಕ್ಕೆ ದುಡಿಯುತ್ತಿದ್ದಾಗ, ಅದನ್ನು ಕಂಡು ನಿರ್ಮತ್ಸರದ ಆನಂದವನ್ನು ಪಟ್ಟವರಲ್ಲಿ ಪುಟ್ಟಣ್ಣನವರೂ ಒಬ್ಬರು. ಪರಸ್ಪರ ಸೌಹಾರ್ದ, ಸಹಕಾರಗಳಿಲ್ಲದೆ ಯಾವ ಕಾಯಕವೂ ಸಾಧ್ಯವಿಲ್ಲ ಎಂದು ಅವರು ಅರಿತಿದ್ದರು.

### ಮಾತುಕತೆ

ಪುಟ್ಟಣ್ಣನವರ ಮಾತು ಕಡಿಮೆ. ಆಡುವ ವಿಷಯ ಇದ್ದರೆ ಎರಡು ಮಾತು. ಇಲ್ಲವಾದರೆ ತುಟಿ ಎರಡು ಮಾಡುತ್ತಿರಲಿಲ್ಲ. ಎದುರಿಗಿದ್ದ ವ್ಯಕ್ತಿ ತಲೆಬೇಸರ ಬಂದೇ ಎದ್ದು ಹೋಗಬೇಕು. ಕಾಲವ್ಯಯವನ್ನು ಪುಟ್ಟಣ್ಣನವರು ಸ್ವಲ್ಪವೂ ಸಹಿಸುತ್ತಿರಲಿಲ್ಲ. ಆದರೆ ಅಪರೂಪಕ್ಕೆ ಸ್ವಾರಸ್ಯವಾದ ಸಂಭಾಷಣೆ ನಡೆಯುತ್ತಿದ್ದರೆ, ಮಾತು ಮೇರೆ ಮೀರದಂತೆ ಭಾಗವಹಿಸುವರು. ಆಗ ಹಾಜರಿದ್ದವರಿಗೆ ತಿಳಿಯುತ್ತಿತ್ತು, ಪುಟ್ಟಣ್ಣ

ನವರು ಸೊಗಸಾದ ಮಾತುಗಾರರೆಂದು, ಮಾತಿನ ಮಾಧುರ್ಯವನ್ನು ಬಲ್ಲವರೆಂದು. ಇನ್ನೊಬ್ಬರ ಅಭಿಪ್ರಾಯವನ್ನು ಒಪ್ಪದಿದ್ದಾಗಲೂ ಅವರು ಜಗಳ ತಂದುಕೊಳ್ಳದೆ, ಇಕ್ಕಟ್ಟಿಗೆ ಸಿಲುಕದೆ, ರಾಜಿಮಾಡಿಕೊಳ್ಳದೆ ನೇರವಾಗಿ ಮಾತಾಡುವರು. ಮಾತು ಹಲವು ಬಾರಿ ಕೋಪದ ಅಂಚಿಗೆ ಬರುವ ಸಂದರ್ಭಗಳೂ ಇದ್ದವು. ಅಂತಹ ಹೊತ್ತಿನಲ್ಲಿ ಕೋಪ ಬಹು ಹೊತ್ತು ಇರುತ್ತಿರಲಿಲ್ಲ.[4]

ಅರ್ಥಗರ್ಭಿತವಾದ ಮಾತನ್ನು ನಗುನಗುತ್ತಲೇ ಹೇಳುವುದರಲ್ಲಿ, ತಮ್ಮ ಸ್ಪಷ್ಟ ಅಭಿಮತವನ್ನು ತಿಳಿಸುವುದರಲ್ಲಿ ಅವರು ಯಾರಿಗೂ ಸೋಲುತ್ತಿರಲಿಲ್ಲ. ಒಮ್ಮೆ ಒಂದು ಸಮಿತಿಯಲ್ಲಿ ಒಂದು ಸೂಚನೆಗೆ ಅಧ್ಯಕ್ಷರು ಒಪ್ಪುತ್ತಾರೋ ಇಲ್ಲವೋ ಎಂದು ಬೆಳ್ಳಾವೆ ವೆಂಕಟನಾರಣಪ್ಪನವರು ಅನುಮಾನಿಸಿದಾಗ ಪುಟ್ಟಣ್ಣನವರು ತಟಕ್ಕನೆ, "You can so put the point that he is obliged to sign" ಎಂದರಂತೆ. ಇನ್ನೊಮ್ಮೆ ಟಿ. ಎಸ್. ವೆಂಕಣ್ಣಯ್ಯನವರು "ಮೆಜಾರಿಟಿ ಒಪ್ಪಿದರೆ ಈ ಪುಸ್ತಕವನ್ನು ಪಠ್ಯಪುಸ್ತಕವನ್ನಾಗಿಸಬಹುದು" ಎಂದುದಕ್ಕೆ, ಪುಟ್ಟಣ್ಣನವರು "ಆ 'ಮೆಜಾರಿಟಿ' ಈ ಪುಸ್ತಕವನ್ನು ಬರೆಯಬಲ್ಲರೇ ? ನೀವು ಅವರಿಗೆ ಸರಿಯಾಗಿ ತಿಳಿಸಿ ಹೇಳಬೇಕು. ಹಾಗೆ ಮಾಡಲು ನೀವು ಶಕ್ತರಲ್ಲ ಎಂದು ನಾನು ನಂಬಲಾರೆ" ಎಂದರಂತೆ. ಎದುರಾಳಿಗಳೂ ತಮ್ಮ ನಿಲುವನ್ನು ಒಪ್ಪುವಂತೆ ಮಾಡುತ್ತಿದ್ದರು.

ಅವರ ಗ್ರಹಣ ಶಕ್ತಿ ಬಹಳ ಸೂಕ್ಷ್ಮವಾಗಿತ್ತು. ಹೇಳಿದ್ದನ್ನು ಕೂಡಲೇ ಗ್ರಹಿಸುತ್ತಿದ್ದರು. ರಗಳೆಯ ಮಾತಿಲ್ಲ. ಆದರೆ ಯಾವುದಾದರೂ ವಿಷಯದ ಧ್ಯಾನದಲ್ಲಿ ಇದ್ದರೆ ಎದುರಿಗೆ ಯಾರು ಬಂದು ಮಾತಾಡಿಸಿದರೂ ಗಮನವಿಲ್ಲ. ಅದೇ ರೀತಿ ಬೇರೆ ಯಾರಾದರೂ ಪರಧ್ಯಾನದಲ್ಲಿದ್ದರೆ ಅವರ ಆಲೋಚನೆಗೆ ಭಂಗ ತರುತ್ತಿರಲಿಲ್ಲ, ತಪ್ಪು ತಿಳಿಯುತ್ತಿರಲಿಲ್ಲ.

ಭಾಷಣ ಮೊದಲಾದುವುಗಳಿಗೆ ಒಪ್ಪುತ್ತಿರಲಿಲ್ಲ. "ನಾನು ಖಡಾಖಂಡಿತವಾಗಿ ಹೇಳುವ ಮಾತನ್ನು ಅಲ್ಲಿನ ಜನ ಸಂತೋಷದಿಂದೇನೂ ಸ್ವಾಗತಿಸುವುದಿಲ್ಲ. ಕರೆದವರಿಗೆ ಮುಜುಗರ, ಕೇಳಿದವರಿಗೆ ಅಪ್ರಿಯ. ಆದ್ದರಿಂದ ಭಾಷಣಕ್ಕೆ ಒಪ್ಪೋಲ್ಲ ಎಂದು ಮುಂದೇ ಬೈಯಿರಿ, ಭಾಷಣ ಮಾಡಿಸಿ ಹಿಂದೆ ಬೈಬೇಡಿ" ಎನ್ನುತ್ತಿದ್ದರು. ಆದರೆ ಸಾರ್ವಜನಿಕ ಸಭೆಗಳಲ್ಲಿ ಒಪ್ಪಿಗೆಯಾಗದ ಅಂಶಗಳನ್ನೂ ನಿರ್ಭಯದಿಂದ ಚರ್ಚೆಗೆ ತರುತ್ತಿದ್ದರು. ಒಟ್ಟಿನಲ್ಲಿ ಭಾಷಣಗಳೆಂದರೆ ಮಾತ್ರ ಅವರು ವಿಮುಖರಾಗಿದ್ದರು.[5]

ಮದುವೆ ಮೊದಲಾದ ಸಮಾರಂಭಗಳಿಗೆ ಬಹಳ ಕಡಿಮೆ ಪುಟ್ಟಣ್ಣನವರ ಭೇಟಿ. ಮನೆಯಲ್ಲಿ ಬೇರೆಯವರು ಹೋದರೆ ಅಡ್ಡಿ ಮಾಡುತ್ತಿರಲಿಲ್ಲ. ತಾವು ಹೋಗಲೇ ಬೇಕಾಗಿ ಬಂದಾಗ ಹೆಚ್ಚು ಹೊತ್ತಿರುತ್ತಿರಲಿಲ್ಲ. ಬೇರೆ ಯಾರದಾದರೂ ಮನೆಗೆ ಹೋಗುವಾಗಲೂ ಕೆಲಸ ಮುಗಿಸಿಕೊಂಡು ಬರುತ್ತಿದ್ದರು. ಆಗ ಕೆಲಸ ಸಾಧ್ಯವಾಗದು ಎಂದು ತಿಳಿದರೆ ಕೂಡಲೇ ಹಿಂದಿರುಗುತ್ತಿದ್ದರು. ಒಮ್ಮೆ ಎ. ಎನ್. ನರಸಿಂಹಯ್ಯನವರ ಮನೆಗೆ ಮೆಟ್ಟಿಲು ಹತ್ತಿ ಹೋಗುವಾಗಲೇ "ಏನು ಸಮಯ ?" ಎಂದುಕೊಂಡು

ಬಂದರು. ಮನೆಯವರು, "ಪೂಜೆಗೆ ಕುಳಿತಿದ್ದಾರೆ, ಬನ್ನಿ, ಕೂತುಕೊಳ್ಳಿ" ಎಂದರೆ, "ಹಾಗಾದ್ರೆ ಆಮೇಲೆ ಬರ್ತೀನಿ. ಇಲ್ಲದಿದ್ದರೆ ನನ್ನ ಮೇಲೆ ಧ್ಯಾನ ಆಗತ್ತೆ" ಎಂದು ಹೊರಟೇ ಹೋದರು. ಇನ್ನೊಮ್ಮೆ ಎ. ಎನ್. ನರಸಿಂಹಯ್ಯನವರು ಬೆಂಗಳೂರಿನ ಲಾಲ್‌ಬಾಗಿನ ಬಳಿ ಸಿಕ್ಕಿದಾಗ ಇವರು ವಂದಿಸಿ "ಹೇಗಿದ್ದೀರಿ ಪುಟ್ಟಣ್ಣೋರೆ?" ಎಂದ ರಂತೆ. "ನಿಮಗೆ ಒಂದು ಕಥೆ ಹೇಳ್ತೀನಿ. ಚಾಮರಾಜನಗರದಿಂದ ನಾನು ವರ್ಗವಾಗಿ ಬರುವಾಗ ಸರ್ವೀಸ್ ರಿಜಿಸ್ಟರ್‌ನಲ್ಲಿ ಒಬ್ಬನ ಹೊರತು ಎಲ್ಲರ ಬಗೆಗೂ ಬರೆದೆ. ಅವ ನಿಗೆ ಮಾಡಬಹುದಾದ ಉಪಕಾರ ಎಂದರೆ ಸುಮ್ಮನಿರಬಹುದಾದ್ದು. ಆದರೆ ಅವನು ಬಿಡಲಿಲ್ಲ. ಗಾಡಿ ಹತ್ತುವವರೆಗೂ ಕಾಡಿಸಿದ. ಕಡೆಗೆ 'ಹಾಗೂ ಹೀಗೂ ಕೆಲಸ ದಬ್ಬು ತ್ತಿರುತ್ತಾನೆ' ಎಂದು ಬರೆದೆ. ಈಗ ನನ್ನ ಉತ್ತರ ತಿಳಿಯಿತೇ ?" ಎಂದು ಹೇಳಿದರು, ಪುಟ್ಟಣ್ಣನವರು. "ಗೊತ್ತಾಯಿತು, ಹಾಗೂ ಹೀಗೂ ಜೀವನ ದಬ್ಬುತ್ತಿದ್ದೀರಿ ಅಂತ ಅಲ್ವೇ" ಎಂದರು ನರಸಿಂಹಯ್ಯನವರು. ಈ ಮಾತು ಹೇಳಿದಾಗ ಪುಟ್ಟಣ್ಣನವರಿಗೆ ಇಳಿವಯಸ್ಸು.

**ಆಹಾರ, ಉಡುಪು, ದಿನಚರಿ**

ಪುಟ್ಟಣ್ಣನವರು ಬೆಳಿಗ್ಗೆ ಬಹುಬೇಗ ಏಳುವರು. ಪ್ರಾತಃ ವಿಧಿಗಳಾದ ಮೇಲೆ ಮುಖ ತೊಳೆದು ಹಾಲು ಕುಡಿದು, (ಹೆಣ್ಣುಮಕ್ಕಳು ಯಾರಾದರೂ ಬಲವಂತ ಮಾಡಿಕೊಟ್ಟರೆ ಮಾತ್ರ) ಜಮೀನಿನ ಕಡೆ ಹೋಗಿ ಹತ್ತುಗಂಟೆಗೆ ಬಂದು ಸ್ನಾನ ದೇವರಪೂಜೆಗಳನ್ನು ಮುಗಿಸಿ ಊಟ ಮಾಡುವರು. ಅನಂತರ ಬರವಣಿಗೆ ಕೆಲಸ. ನಾಲ್ಕು–ಐದು ಗಂಟೆಗೆ ಏನಾದರೂ ಹಣ್ಣು ತಿನ್ನುವರು. ಪುನಃ ರಾತ್ರಿಗೆ ಊಟ. ಹೆಚ್ಚಿನ ದಿನಗಳಲ್ಲಿ ದಿನಕ್ಕೆ ಎರಡು ಊಟ ಮಾತ್ರ. ಕಾಫಿ ಮುಂತಾದ ಪಾನೀಯ ಗಳನ್ನು ಎಂದೂ ಸೇವಿಸಿದವರಲ್ಲ. ಇದು ಅವರು ನಿವೃತ್ತರಾದ ಮೇಲಿನ ದಿನಚರಿ. ಕೆಲಸದಲ್ಲಿದ್ದಾಗ ಹೊತ್ತಿಗೆ ಮುಂಚೆ ಕಚೇರಿಗೆ ಹೋಗುವುದು. ಅಲ್ಲಿ ಒಂದು ಕ್ಷಣವೂ ಕಾಲ ಕಳೆಯದೆ ದುಡಿಯುವುದು ಅವರ ಪರಿಪಾಠ. ಪ್ರತಿನಿತ್ಯ ಬೆಳಿಗ್ಗೆ ಸಂಜೆ ತಿರು ಗಾಟ, ತಣ್ಣೀರು ಸ್ನಾನ ಇವೆರಡನ್ನೂ ಯಾವಾಗಲೂ ಪರಿಪಾಲಿಸಿದರು.

ಅವರಿಗೆ ಸರಳವಾದ ಆಹಾರ ಇಷ್ಟ. ಹಾಲು, ಹಣ್ಣು, ತರಕಾರಿ ಮೊದಲಾದ ನೈಸರ್ಗಿಕವಾದ ಆಹಾರಗಳನ್ನು ಇಷ್ಟದಿಂದ ಸೇವಿಸುತ್ತಿದ್ದರು. ಅತಿಯಾದ ಸಂಬಾರ ಪದಾರ್ಥಗಳಿದ್ದರೆ ಮುಟ್ಟುತ್ತಲೂ ಇರಲಿಲ್ಲ. ಮೆಣಸಿನ ಸಾರು, ಸೀಸಾರು, ಗೊಡ್ಡು ಸಾರು ಮೊದಲಾದುವು ಪ್ರಿಯ. ರಾಗಿಮುದ್ದೆ ಬಹಳ ಇಷ್ಟ. ಬೇಲದ ಹಣ್ಣು ಎಂದರೆ ಆಸೆ ಬಹಳ. ಯಾವುದೇ ರೀತಿಯ ಪಾಯಸ ಅವರಿಗೆ ಬಹಳ ಇಷ್ಟ. ದೊಡ್ಡ ಪಾತ್ರೆ ಯಲ್ಲಿ ಪಾಯಸ ಮಾಡಬೇಕು. ಮನೆಯಲ್ಲಿ ಎಲ್ಲರೂ ಚೆನ್ನಾಗಿ ತಿನ್ನಬೇಕು. ಎಲ್ಲರಿಗೂ ಆಗುತ್ತದೆಯೇ ಎಂದು ಪದೇ ಪದೇ ವಿಚಾರಿಸುತ್ತ ಊಟ ಮಾಡುವರು.

ಅವರ ಉಡುಪು ಕೂಡ ಸರಳ. ಕಚ್ಚೇಪಂಚೆ, ಬಗಲುಬಂದಿ ಅಥವಾ ಕವಚ.

ಕಪ್ಪು ಬಣ್ಣದ ಉದ್ದನೆಯ ಕೋಟು, ಅದಕ್ಕೆ ಕತ್ತಿನವರೆಗೆ ಗುಂಡಿಗಳು. ರುಮಾಲು, ಶಲ್ಯ, ಪೇಟ. ಕಾಲರ್, ಟೈ ಇತ್ಯಾದಿ ಇಲ್ಲ. ಕೈಯಲ್ಲಿ ಊರುಗೋಲು, ಕಾಲಿಗೆ ಪೂನಾ ಚಪ್ಪಲಿ. ಇದಿಷ್ಟು ಹೊರಗೆ ಹೋಗುವಾಗಿನ ಉಡುಪು. ಮನೆಯಲ್ಲಿದ್ದರೆ ಕಚ್ಚೇಪಂಚೆ, ಬಗಲುಬಂದಿ. ಹಣೆಯಲ್ಲಿ ಗಂಧಾಕ್ಷತೆ ಸದಾ ಇರುತ್ತಿತ್ತು.

ಎಲ್ಲಾದರೂ ಹೋಗಿ ಬರುವಾಗ ಅವರಿಗೆ ನಡೆದು ಹೋಗುವುದು ಅಭ್ಯಾಸ. ಬರವಣಿಗೆಯ ಹವ್ಯಾಸದಿಂದ ಅಚ್ಚುಕೂಟದ ಓಡಾಟ, ಜಮೀನಿನ ಉಸ್ತುವಾರಿ ಎಲ್ಲಕ್ಕೂ ಕಾಲುಬಲವನ್ನೇ ನೆಚ್ಚಿದ್ದರು. ಗಂಡು ಮಕ್ಕಳು ದೊಡ್ಡವರಾದ ಮೇಲೆ ಪುಟ್ಟಣ್ಣನವರು ಹೊರಡುವಾಗ ಬಾಗಿಲಲ್ಲಿ ಕಾರು ತಂದು ನಿಲ್ಲಿಸುವರು. ಪುಟ್ಟಣ್ಣ ನವರು ಕಾರಿನಲ್ಲಿ ಬರಲು ಒಪ್ಪುತ್ತಿರಲಿಲ್ಲ. "ನೀವು ಈಗಿನ ಕಾಲದವರು. ನಿಮಗೆ ಷೋಕಿ ಚೆನ್ನ. ನಾನು ಹಳೆಯ ಕಾಲದವನು. ನನಗೆ ಇದೆಲ್ಲ ಬೇಡ" ಎನ್ನುತ್ತಿದ್ದರು. ಪ್ರತಿನಿತ್ಯವೂ ಅವರು ಮೈಲುಗಟ್ಟಲೆ ಓಡಾಡುತ್ತಿದ್ದರು.

ಅವರದು ಕಟ್ಟುನಿಟ್ಟಿನ ನಿಯಮಬದ್ಧ ನಡವಳಿಕೆಯಾದುದರಿಂದ ಅದರ ಫಲ ವಾದ ಪೂರ್ಣಾರೋಗ್ಯವನ್ನೂ ಅವರು ಅನುಭವಿಸಿದರು. ಅವರ ಮುಪ್ಪಿನ ಕಾಲದಲ್ಲಿ ಕೂಡ ಅವರನ್ನು ಯಾವ ವ್ಯಾಧಿಗಳೂ ಬಾಧಿಸಲಿಲ್ಲ. ತಮ್ಮ ತಾಯಿಯ ತಿಥಿಯಲ್ಲಿ ವಾಯಸಪಿಂಡ ನೀಡಲು ಮನೆಗೆ ಹೊರ ಗೋಡೆ ಇಲ್ಲದುದರಿಂದ ಮನೆಯ ಮೇಲೆ ಇಡೋಣ ಎಂದು ಅನಾಯಾಸವಾಗಿ ಮೇಲೆ ಹತ್ತಿಹೋಗಿ ಇಳಿಯುವಾಗ ಏಣಿ ಜಾರಿ ಕೆಳಗೆ ಬಿದ್ದು ತಲೆಗೆ ವಿಪರೀತ ಪೆಟ್ಟಾಗಿ ರಕ್ತ ಬಹಳ ಹರಿದು, ಆ ಸಂದರ್ಭದಲ್ಲಿ ಆಸ್ಪತ್ರೆಯಲ್ಲಿ ಮೂರು-ನಾಲ್ಕು ತಿಂಗಳು ಇದ್ದರು. ಮಧ್ಯೆ ಗಾಯ ನಂಜಾಗಿ ರೋಗ ಉಲ್ಬಣವಾಯಿತು. ಅವರ ಆಪ್ತಮಿತ್ರರಾದ ಆರ್ಮುಗಂ ಮೊದಲಿಯಾರರು ಮುತು ವರ್ಜಿ ವಹಿಸಿ ನೋಡಿಕೊಂಡರು. ನಿಧಾನವಾಗಿ ಗುಣವಾಯಿತು. ಇದೊಂದು ಸಂದರ್ಭ ಬಿಟ್ಟರೆ ಅವರು ಆಸ್ಪತ್ರೆಗೆ ತಮಗಾಗಿ ಎಂದೂ ಹೋಗಲಿಲ್ಲ.

**ಆಚಾರ ನಿಯಮಗಳು**

ಹಿಂದೂಧರ್ಮದಲ್ಲಿ ಅವರದು ಅಪರಿಮಿತವಾದ ನಂಬಿಕೆ. ಅವರ ಆಲೋಚನೆ, ಮಾತುಕತೆ, ಬರವಣಿಗೆ ಎಲ್ಲದರಲ್ಲೂ ಇದರ ಮುದ್ರೆ ಕಾಣುತ್ತಿತ್ತು. ಜನಾಂಗಗಳ ಭೇದವಾಗಲೀ, ಜಾತಿಯ ಭೇದವಾಗಲೀ ಅವರ ಕಣ್ಣಿಗೆ ಪರೆಯಾಗಿರಲಿಲ್ಲ. ಅವರ ದೃಷ್ಟಿ ನಿಚ್ಚಳ, ನೇರ. ಆದರೆ ಮತಾಂತರವನ್ನು ಒಪ್ಪುತ್ತಿರಲಿಲ್ಲ. ಕ್ರೈಸ್ತ ಧರ್ಮದ ಬಗೆಗೆ ಮಾತು ಬಂದಾಗ "ಏಸುಕ್ರಿಸ್ತ ಮಹಾನುಭಾವ. ಅವನ ಅನುಯಾಯಿಗಳು ಮತಾಂತರ ಒಂದನ್ನು ಬಿಟ್ಟರೆ ಮತ್ತೆಲ್ಲ ಸರಿ" ಎನ್ನುತ್ತಿದ್ದರು.

ದೇವಸ್ಥಾನಗಳಿಗೆ ಹೋಗುವುದು, ತೀರ್ಥಯಾತ್ರೆ ಯಾವುದೂ ಇಲ್ಲ, ಮನೆ ಯಲ್ಲಿ ಎರಡು ಹೊತ್ತೂ ಸಂಧ್ಯಾವಂದನೆ, ಒಂದು ಹೊತ್ತು ದೇವರ ಪೂಜೆ ಮಾಡುತ್ತಿದ್ದರು. ಶ್ರೀಸೂಕ್ತ, ಪುರುಷಸೂಕ್ತ, ರುದ್ರಾಚಮೆ ಮೊದಲಾದುವುಗಳ

ಪಠಣೆಯಲ್ಲಿ ವಿಶೇಷ ಆಸಕ್ತಿಯಿತ್ತು. ಬೇರೆಯವರಿಗೆ ನೀವೂ ಮಾಡಿ ಎಂದು ಒತ್ತಾಯ ಮಾಡುತ್ತಿರಲಿಲ್ಲ. ನೇಮ ಏನಿದ್ದರೂ ತಮ್ಮ ಮಟ್ಟಿಗೆ. ಯಾರದಾದರೂ ಮನೆಗೆ ಶೃಂಗೇರಿ ಸ್ವಾಮಿಗಳು ಬಂದಿದ್ದಾರೆಂದರೆ ಅಲ್ಲಿಗೆ ಹೋಗಿ ಬರುವ ಪರಿಪಾಠ ಇಟ್ಟು ಕೊಂಡಿದ್ದರು.

ಆಗಿನ ಕಾಲದಲ್ಲಿ ವಿದೇಶಗಳಿಗೆ ಹೋಗಿ ಬಂದರೆ ಅಂಥವರನ್ನು ಲಂಡನ್ ಪಾರ್ಟಿ ಎಂದು ಹೆಸರಿಟ್ಟು ಅವರಿಗೆ ಬಹಿಷ್ಕಾರ ಹಾಕುತ್ತಿದ್ದರು. ಬೇರೆ ಯಾರಾ ದರೂ ಅತ್ಯಾವಶ್ಯಕವಾಗಿ 'ಲಂಡನ್ ಪಾರ್ಟಿ'ಯವರ ಮನೆಗೆ ಹೋಗಿಬರಬೇಕಾದರೆ ಬಂದ ಕೂಡಲೇ ಸ್ನಾನ ಮಾಡಬೇಕಿತ್ತು. ಇಂಥಾದ್ದರಲ್ಲಿ ಪುಟ್ಟಣ್ಣನವರಿಗೆ ನಂಬಿಕೆ ಇರಲಿಲ್ಲ. ಅವರು ಪರದೇಶ ಗಮನಕ್ಕೆ ಪ್ರೋತ್ಸಾಹ ಕೊಟ್ಟರು. ತಮ್ಮ ಸಂಪ್ರದಾಯ ಗಳಲ್ಲಿ ಪುಟ್ಟಣ್ಣನವರಿಗೆ ಆದರ ಮಾತ್ರ ಇತ್ತು. ವಿದ್ಯಾರ್ಥಿಗಳು ಬರಿಯ ಹಣೆಯಲ್ಲಿ ದ್ದರೆ "ಲಲಾಟಶೂನ್ಯರಾಗಿ ಓಡಾಡುತ್ತಾರೆ" ಎಂದು ಮುಜುಗರ ಪಟ್ಟುಕೊಳ್ಳು ತ್ತಿದ್ದರು. ಹಣೆಯಲ್ಲಿ ಬೊಟ್ಟಿಟ್ಟುಕೊಂಡಿದ್ದ ವಿದ್ಯಾರ್ಥಿಗಳನ್ನು ಕಂಡರೆ ಸಂತೋಷ ಪಡುತ್ತಿದ್ದರು.

ಜಾತಿಮತಗಳ ಬಗೆಗೆ ಅವರದು ಬಹುಸುಂದರವಾದ ದೃಷ್ಟಿ. ಯಾವುದಕ್ಕೇ ಆಗಲಿ ಪರಿಗಣಿಸಬೇಕಾದದ್ದು ಯೋಗ್ಯತೆಯನ್ನು, ಜಾತಿಮತವನ್ನಲ್ಲ ಎಂಬುದು ಅವರ ನಿಲುವು. ಹುದ್ದೆಗಳ ನೇಮಕದಲ್ಲಿ ಕೂಡ ಅವರು ತಮ್ಮ ಈ ನಿಯಮಕ್ಕೆ ಚ್ಯುತಿ ಬರ ದಂತೆ ನಡೆದುಕೊಂಡು ಅರ್ಹತೆಯ ಆಧಾರದ ಮೇಲೆ ತಮ್ಮ ಬಂಧುಗಳನ್ನೂ ಸ್ವಜನ ರನ್ನೂ ಬಿಟ್ಟು ಬೇರೆಯವರಿಗೆ ಸಹಾಯ ಮಾಡಿದ್ದುಂಟು. ಇಂತಹ ಹೊತ್ತಿನಲ್ಲಿ ಅವರು ಹಲವರಿಂದ ತೀವ್ರವಾದ ವಿರೋಧವನ್ನು ಅನುಭವಿಸಬೇಕಾಗಿಬರುತ್ತಿತ್ತು. ಅವರು ಅದನ್ನೆಲ್ಲ ಗಮನಿಸಲಾರದಷ್ಟು ತಮ್ಮ ಕರ್ತವ್ಯದಲ್ಲಿ ಮುಳುಗಿಹೋಗಿದ್ದರು. ಎರಡನೆಯ ~~ಮೊದಲನೆಯ~~ ಜಾಗತಿಕ ಯುದ್ಧ ಮುಗಿದ ಮೇಲೆ ಅವರು ಕೆಲವರು ಹರಿಜನ ಯೋಧರನ್ನು ಕರೆಸಿ ಬಹುಮಾನಗಳನ್ನು ಕೊಟ್ಟರು. ಅದಕ್ಕೂ ಅವರಿಗೆ ಕುಲಕ್ಕೆ ಮೃತ್ಯು ಎಂಬ ಬಿರುದು ಸಿಕ್ಕಿತು. ತಮ್ಮ ಸತ್ಯಪ್ರಿಯತೆಯಿಂದ ಅವರು ಹಲವರು ಸ್ವಜನರಿಗೆ ನ್ಯಾಯವಾಗಿಯೇ ದೊರಕಬಹುದಾಗಿದ್ದ ಉದ್ಯೋಗಾವಕಾಶಗಳು ಕೂಡ ಬೇರೆಯವರಿಗೆ ದಕ್ಕುವಂತೆ ಮಾಡಿದ್ದುಂಟು. ವೆಂಕಣ್ಣಶ್ರೌತಿ ಎಂಬಾತನಿಗೆ ಚೀಫ್ ಕೋರ್ಟಿನ ಒಂದು ಸಹಾಯಕ ಹುದ್ದೆ ಇನ್ನೇನು ಸಿಗಲಿದ್ದಾಗ ಆತ ಮೇಲುಜಾತಿಯವ ನೆಂಬ ಅಂಶ ಅನುದ್ದೇಶಿತವಾಗಿ ಪುಟ್ಟಣ್ಣನವರಿಂದ ಬಹಿರಂಗವಾಯಿತು. ವೆಂಕಣ್ಣ ಶ್ರೌತಿಯ ಅವಕಾಶ ತಪ್ಪಿಹೋಯಿತು. ಆತ ಶಿವಮೊಗ್ಗದಲ್ಲಿ ಡೆಪ್ಯೂಟಿ ಕಮಿಷನರಾಗಿದ್ದ ಎಚ್. ವಿ. ನಂಜುಂಡಯ್ಯನವರಲ್ಲಿ ತನ್ನ ಸಂಕಟವನ್ನು ಹೇಳಿಕೊಂಡ. ನಂಜುಂಡಯ್ಯ ನವರು ಪುಟ್ಟಣ್ಣನವರನ್ನು ಟೀಕಿಸಿ ಲೇವಡಿ ಮಾಡಿ ಪತ್ರ ಬರೆದರು.[6]

ಪುಟ್ಟಣ್ಣನವರು ಬ್ರಾಹ್ಮಣ್ಯದ ಬಗೆಗೆ ಗೌರವವನ್ನು ಹೊಂದಿದ್ದರು. ಆದರೆ ಯಾವುದೇ ಒಂದು ಪಂಗಡದವರು ಇತರರನ್ನು ಬಿಟ್ಟು ತಾವು ಮಾತ್ರ ಅಭಿವೃದಿ

ಹೊಂದುವುದರಲ್ಲಿನ ಅಪಾಯವನ್ನು ಅವರು ಅರಿತಿದ್ದರು. ಅಂತಹ ಸಂದರ್ಭಗಳಲ್ಲಿ ಉಂಟಾಗುವ ಕಂದರವನ್ನು ಅವರು ತಮ್ಮ 'ಕನ್ನಡ : ಕೆಲವು ವಿಚಾರಗಳು'[7] ಲೇಖನ ದಲ್ಲಿ ಸೂಚಿಸಿದ್ದಾರೆ. ತಾವು ಅಮಲ್ದಾರರಾಗಿ ಸೇವೆ ಸಲ್ಲಿಸಿದೆಡೆಗಳಲ್ಲೆಲ್ಲಾ, ವಿಶೇಷ ವಾಗಿ ಚಾಮರಾಜನಗರದಲ್ಲಿ, ಅವರು ಬ್ರಾಹ್ಮಣೇತರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟರು.

**ಋಜು ಜೀವನ**

ಪ್ರತಿಯೊಬ್ಬನಿಗೂ ಯಾವುದಾದರೊಂದು ಅತಿರೇಕ ಇದ್ದೇ ಇದೆ ಎಂಬ ಹೇಳಿಕೆ ಯಿದೆ. ಅದನ್ನು ಅನ್ವಯಿಸಿ ನೋಡಿದರೆ ಪುಟ್ಟಣ್ಣನವರಿಗೆ ಇದ್ದ ಅತಿರೇಕ ಎಂದರೆ ಋಜುಜೀವನದಲ್ಲಿಯ ಆಸಕ್ತಿ ಎನಿಸುತ್ತದೆ. ಎಷ್ಟೋಬಾರಿ ಇದರಿಂದ ಅವರಿಗೇ ತೊಂದರೆಯಾಗುತ್ತಿತ್ತು. ಅವರು ಅದನ್ನು ಲೆಕ್ಕಿಸುತ್ತಿರಲಿಲ್ಲ. ಅವರು ಅಮಲ್ದಾರ ರಾಗಿದ್ದಾಗ ಕನ್ನಡನಾಡಿನ ಜನಜೀವನವನ್ನು ನಿಕಟವಾಗಿ ನೋಡುವ ಸಂದರ್ಭ ಸಿಕ್ಕಿತು. ಏನೊಂದು ವಿಲಕ್ಷಣ ಅಂಶ ಸಿಕ್ಕಿದರೂ ಅವರು ಅದನ್ನು ಗುರುತು ಹಾಕಿಕೊಳ್ಳುತ್ತಿ ದ್ದರು. ಹಾಗೆ ಮಾಡುತ್ತಿದ್ದುದು ಬಿಡುವಿನ ವೇಳೆಯಲ್ಲಿ, ಸ್ವಂತ ಕಾಗದದ ಮೇಲೆ.

ಪುಟ್ಟಣ್ಣನವರು ಚಿತ್ರದುರ್ಗದ ಅಮಲ್ದಾರರಾಗಿದ್ದಾಗ ಒಮ್ಮೆ ತಿರುಗಾಟಕ್ಕೆಂದು ಹೋಗಿದ್ದಾಗ ನೆಲವನ್ನು ಅಗೆದ ಜನರಿಗೆ ಚಿನ್ನದ ನಾಣ್ಯವೊಂದು ಸಿಕ್ಕಿದ್ದು ತಿಳಿದು, ಅಲ್ಲಿ ನೆಲವನ್ನು ಅಗೆಸಿದರು. ಒಂದು ಕುಡಿಕೆಯ ತುಂಬ ಚಿನ್ನದ ನಾಣ್ಯಗಳು ದೊರಕಿ ದವು. ತಾವೇ ಮುಂದೆ ನಿಂತು ಆ ನಿಕ್ಷೇಪವನ್ನು ಸರಕಾರಕ್ಕೆ ಒಪ್ಪಿಸಿದರು.

ರೈತರಿಂದಾಗಲೀ, ಬೇರೆಯವರಿಂದಾಗಲೀ ಏನನ್ನೂ ಸ್ವೀಕರಿಸದೆ ಇದ್ದುದರ ಒಂದು ಕಾರಣ ತಾವು ಅವರ ಹಂಗಿಗೆ ಸಿಲುಕಿದರೆ, ತಮ್ಮಲ್ಲಿರುವ ಅಧಿಕಾರದ ದುರು ಪಯೋಗಕ್ಕೆ ಅವರು ಪ್ರೇರೇಪಿಸಿ, ಒತ್ತಾಯ ಮಾಡುತ್ತಾರೆ ಎಂಬುದು. ಸರ್ಕಾರದ ಅಧಿಕಾರಿಗಳು ಕಾನೂನು ಒಪ್ಪದ ಕಾರ್ಯಗಳಿಗೆ ಕೈಯಿಡಬಾರದೆಂದು ಅವರು ಹೇಳುತ್ತಿ ದ್ದರು. 'ಲಂಚ'[8] ಎಂಬ ತಮ್ಮ ಲೇಖನದಲ್ಲಿ ಅವರು ಇದನ್ನು ಅತಿಸೂಕ್ಷ್ಮವಾಗಿ ವಿವೇಚಿಸಿದ್ದಾರೆ.

ಒಮ್ಮೆ ತಮ್ಮ ಅಳಿಯನೊಡನೆ ಎಲ್ಲಿಗೋ ಹೋಗುವಾಗ ಎದುರಿಗೆ ಒಬ್ಬ ದೊಡ್ಡಮನುಷ್ಯರು ಬರುತ್ತಿರುವುದು ಕಾಣಿಸಿ ತಟಕ್ಕನೆ ತಿರುಗಿ ಪಕ್ಕದ ಹಾದಿಯಲ್ಲಿ ಸಾಗಿದರು. ಅಳಿಯ ಏಕೆಂದು ಕೇಳಿದಾಗ ಆ ದೊಡ್ಡ ಮನುಷ್ಯರ ಮಗ ಕುಳಿತಿದ್ದ ಪರೀಕ್ಷೆಗೆ ತಾವೂ ಪರೀಕ್ಷಕರಾಗಿದ್ದರೆಂದೂ ಖಂಡಿತವಾಗಿಯೂ ಆತ ತಮ್ಮಲ್ಲಿ ಸಹಾಯ ನಿರೀಕ್ಷಿಸುವರೆಂದೂ, ಅಂತಹುದಕ್ಕೆ ತಾವು ಒಪ್ಪಲು ಸಾಧ್ಯವಿಲ್ಲವೆಂದೂ, ಜಗಳ, ವೈಮನಸ್ಯ, ಬೇಡವೆಂದು ಹಾಗೆ ಮಾಡಿದ್ದಾಗಿಯೂ ಅಳಿಯನಿಗೆ ವಿವರಿಸಿದರು.

ಪುಟ್ಟಣ್ಣನವರಿಗೆ ಕಚೇರಿಯ ಕೆಲಸ ಮನೆಗೆ ಬರಬಾರದು. ಮನೆಯ ಕೆಲಸ ಕಚೇರಿಗೆ ಬರಬಾರದು. ಕಚೇರಿಯ ಕೆಲಸದ ವಿಚಾರವಾಗಿ ಕೂಡ ಗುಮಾಸ್ತರು

ಮನೆಗೆ ಬರಬಾರದು. ಪುಟ್ಟಣ್ಣನವರು ಈಚಲು ಮರದ ಕೆಳಗೆ ಮಜ್ಜಿಗೆ ಕುಡಿಯುವ ಅವ್ಯಾವಹಾರಿಕತನವನ್ನು ಎಂದೂ ಮಾಡಲಿಲ್ಲ.

ಪುಟ್ಟಣ್ಣನವರು ಅಮಲ್ದಾರರಾಗಿದ್ದಾಗ ವಿದ್ಯಾರ್ಥಿಗಳಾಗಿದ್ದ ಅವರ ಮಕ್ಕಳಿಗೆ, ತಪ್ಪು ಮಾಡಿದರೆಂದು ಅವರ ಶಿಕ್ಷಕರು ಶಿಕ್ಷೆ ವಿಧಿಸಿದರಂತೆ. ಅನಂತರ ಅಮಲ್ದಾರರ ಮಕ್ಕಳು ಎಂದು ವಿಷಯ ತಿಳಿಯಿತು. ಅಮಲ್ದಾರರಿಗೂ ವಿಷಯ ತಿಳಿಯಿತು. "ತಪ್ಪು ಮಾಡಿದವರು ಶಿಕ್ಷೆ ಅನುಭವಿಸಲೇ ಬೇಕು. ಅನುಭವಿಸಲಿ" ಎಂದು ಹೇಳಿ ಕಳಿಸಿದರು.

ಎಂ. ವೆಂಕಟಕೃಷ್ಣಯ್ಯನವರು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದ ಮೇಲೆ ಅವರಿಗೂ ಅರಮನೆಯ ಅಧಿಕಾರಿಗಳಿಗೂ ಹಲವು ಬಾರಿ ಭಿನ್ನಾಭಿಪ್ರಾಯಗಳು ಉಂಟಾದವು. ಈ ವಿಚಾರವನ್ನು ವೆಂಕಟಕೃಷ್ಣಯ್ಯನವರ ಆಪ್ತಸ್ನೇಹಿತರಾದ ಪುಟ್ಟಣ್ಣನವರು ಗಮನಿಸದೆ ಇರಲಿಲ್ಲ. ಆದರೂ ವೆಂಕಟಕೃಷ್ಣಯ್ಯನವರಲ್ಲಿ ಇದ್ದ ತಮ್ಮ ಸ್ನೇಹಕ್ಕೆ ಚ್ಯುತಿ ತರಲಿಲ್ಲ, ರಾಜಮನೆತನದವರಲ್ಲಿ ಅತಿವಿನಯವನ್ನು ತೋರಿಸಲಿಲ್ಲ, ಅರಮನೆಯ ಅಧಿಕಾರಿಗಳನ್ನು ಓಲೈಸಲಿಲ್ಲ. ಈ ಕಾರಣದಿಂದ ಅರಮನೆಯ ಅಧಿಕಾರವರ್ಗದಲ್ಲಿ ಕಡೆ ಕಡೆಗೆ ಪುಟ್ಟಣ್ಣನವರಿಗೆ ಮೊದಲಿನ ಆದರ ಗೌರವಗಳು ಉಳಿಯಲಿಲ್ಲ. ಕಾರಣ ತಿಳಿದರೂ ಪುಟ್ಟಣ್ಣನವರು ತಮ್ಮ ಸ್ನೇಹವನ್ನೂ ಬಿಡಲಿಲ್ಲ, ನಿಯಮವನ್ನೂ ತ್ಯಜಿಸಲಿಲ್ಲ. ಪರಿಣಾಮವನ್ನು ತಿಳಿದೇ ಕಾರ್ಯದಲ್ಲಿ ಉದ್ಯುಕ್ತರಾಗುತ್ತಿದ್ದುದರಿಂದ ಅವರಿಗೆ ಅರಮನೆಯ ಅಧಿಕಾರಿಗಳಲ್ಲಿ ಬೇಸರ ಹುಟ್ಟಲಿಲ್ಲ. ರಾಜಾಸ್ಥಾನದಲ್ಲಿ ಭಕ್ತಿ ಕಡಿಮೆಯಾಗಲಿಲ್ಲ.

ಪ್ರೌಢಶಾಲೆಯಲ್ಲಿ ಸಹಾಯೋಪಾಧ್ಯಾಯರಾಗಿ, ನ್ಯಾಯಾಲಯದಲ್ಲಿ ಭಾಷಾಂತರಕಾರರಾಗಿ, ರೆವಿನ್ಯೂ ಇಲಾಖೆಯಲ್ಲಿ ಅಮಲ್ದಾರರಾಗಿ, ರಾಜೀನಾಮೆಯ ನಂತರ ವಕೀಲರಾಗಿ, ಕನ್ನಡದ ಪುನರುಜ್ಜೀವನ ಕಾಲದ ಲೇಖಕರಾಗಿ ಹಲವು ರೀತಿಯ ಶ್ರೀಮಂತ ಅನುಭವಗಳನ್ನು ಪಡೆದ ಪುಟ್ಟಣ್ಣನವರು ಪ್ರಾಮಾಣಿಕತೆಯನ್ನು ತಮ್ಮ ಜೀವನದ ಅವಿಭಾಜ್ಯ ಅಂಗವನ್ನಾಗಿಸಿಕೊಂಡಿದ್ದರು.

**ಅಂತಃಕರಣ, ಸಹಾನುಭೂತಿ**

ಪುಟ್ಟಣ್ಣನವರಿಗೆ ಮಕ್ಕಳನ್ನು ಕಂಡರೆ ಬಲು ಪ್ರೇಮ. ಮಕ್ಕಳು ತಪ್ಪು ಮಾಡಿದರೆ ನಯವಾದ ಮಾತಿನಲ್ಲಿ ತಿದ್ದುವರು. ಬೇರೆ ಯಾರಾದರೂ ಮಕ್ಕಳನ್ನು ಹೊಡೆದರೆ ಅವರನ್ನು ಹಿಡಿದು ಹೊಡೆಯುತ್ತಿದ್ದರು. ಮಾತಿನ ದಂಡನೆ, ಬೆತ್ತದ ಪ್ರಯೋಗಗಳಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಮಕ್ಕಳ ಕುಸುಮ ಕೋಮಲ ಮನಸ್ಸಿಗೆ ಯಾವ ಶಾಖವೂ ತಟ್ಟಬಾರದೆಂದು ಅವರು ಸದಾ ಹೇಳುತ್ತಿದ್ದರು. ಮಕ್ಕಳ ಚೇಷ್ಟೆಯಿಂದ ದೊಡ್ಡವರಿಗೆ ಶ್ರಮವಾದರೂ ಮಕ್ಕಳಿಗೆ ತಿಳುವಳಿಕೆ ಅಂಗಪುಷ್ಟಿಗಳು ಹೆಚ್ಚಾಗುವುದರಿಂದ ಅಂಥ ಹೊತ್ತಿನಲ್ಲಿ ಶಿಕ್ಷೆ ಮಾಡುವುದು ಸರಿಯಲ್ಲ. ಮಕ್ಕಳು ಅಪಾಯವನ್ನು

ತಂದುಕೊಳ್ಳದ ಹಾಗೆ ನೋಡಿಕೊಳ್ಳುವುದಕ್ಕಿಂತ ಹೆಚ್ಚಾಗಿ ಮಕ್ಕಳ ಗೋಜಿಗೆ ದೊಡ್ಡವರು ಹೋಗಬಾರದು ಎಂದು ಅಭಿಪ್ರಾಯಪಡುತ್ತಿದ್ದರು.

ಮಕ್ಕಳನ್ನು ನೋಡಬೇಕೆಂದರೆ ನಿದ್ದೆ ಹೋದಾಗ ಎಂದು ಹೇಳುತ್ತಿದ್ದರು. ಆ ಅಕೃತ್ರಿಮ, ನಿಷ್ಕಲಂಕ ಮುಖಗಳನ್ನು ಆಪ್ಯಾಯಮಾನತೆಯಿಂದ ವೀಕ್ಷಿಸುತ್ತಿದ್ದರು. ಆ ಕಾಲದಲ್ಲಿ ಬಹು ಪ್ರಿಯವಾಗಿದ್ದ ಜೆಮ್ ಬಿಸ್ಕತ್ತುಗಳನ್ನು ತುಂಬ ಕೊಂಡುತಂದು ಮನೆಯಲ್ಲಿ ಇಟ್ಟುಕೊಂಡಿರುತ್ತಿದ್ದರು. ಮೊಮ್ಮಕ್ಕಳಿಗೆ ಹಂಚುವಾಗ "ಯಾರು ದಾಂಧಲೆ ಮಾಡದೆ ಸುಮ್ಮನಿರುತ್ತಾರೋ ಅವರಿಗೆ ಎರಡರಷ್ಟು ಕೊಡುತ್ತೇನೆ" ಎನ್ನುತ್ತಿದ್ದರು. ಸಾಮಾನ್ಯವಾಗಿ ಅವರ ಹಿರಿಯ ಮೊಮ್ಮಗಳು ಈ ಮಾತು ಕೇಳಿದ ಕೂಡಲೇ ಸುಮ್ಮನೆ ದೂರ ನಿಲ್ಲುತ್ತಿದ್ದಳು. "ಎಲಾ ಪದ್ಮೀ, ನೀ ಬಲು ಘಾಟಿ ಕಣೆ" ಎಂದು ಮೊಮ್ಮಗಳ ಬೆನ್ನುತಟ್ಟಿ, ಮೆಚ್ಚುಗೆ ಸೂಸಿ ಎರಡು ಕೈತುಂಬ ಬಿಸ್ಕತ್ತನ್ನು ಕೊಡುತ್ತಿದ್ದರು. ಅಕಸ್ಮಾತ್ತಾಗಿ ಯಾವುದೇ ಮಗು ಅವರು ಮನೆಗೆ ಬಂದಕೂಡಲೇ "ತಾತ, ಬಿಸ್ಕತ್ತು" ಎಂದು ಹತ್ತಿರ ಬಂದು ಕೇಳಿದರೆ, ತಮ್ಮ ಮೇಜಿನ ಡ್ರಾಯರಿನಲ್ಲಿ ಇಲ್ಲದಿದ್ದರೆ, ಉರಿಬಿಸಿಲಿನಲ್ಲಿ ಮನೆಗೆ ಬಂದಿರಲಿ, ಪುನಃ ಅಂಗಡಿಗೆ ಹೋಗಿ ಬಿಸ್ಕತ್ತನ್ನು ತಂದುಕೊಡುವರು.

ಪುಟ್ಟಣ್ಣನವರು ಸ್ವಭಾವತಃ ಉದಾರ ಸ್ವಭಾವದವರು, ಅಂತಃಕರಣಿಗಳು. ಒಮ್ಮೆ ಎಲ್ಲಿಗೋ ಅವಸರವಾಗಿ ಹೋಗಬೇಕಿತ್ತು. ಜಟಕಾಗಾಡಿಯಲ್ಲಿ ಹೊರಟರು. ಮುಂದೆ ನಡೆಯಲೊಲ್ಲದ ಕುದುರೆಗೆ ಗಾಡಿ ಹೊಡೆಯುವವನು ವಿಪರೀತ ಹೊಡೆದುದನ್ನು ಕಂಡು ಹೊಡೆಯಬೇಡ ಎಂದು ಮೂರು ನಾಲ್ಕು ಬಾರಿ ಹೇಳಿದರು. ಅವನು ಹೊಡೆಯುವುದನ್ನು ನಿಲ್ಲಿಸದೆ ಮುಂದುವರೆಸಿದಾಗ, ತಮ್ಮ ಊರುಗೋಲಿಂದ ಅವನ ಬೆನ್ನನ್ನು ತಿವಿದರು. ನೋವಿನಿಂದ ಅವನು ಹೊರಳಿದಾಗ "ಒಂದು ಬಾರಿ ಚುಚ್ಚಿದಾಗ ನಿನಗೆ ನೋವಾದಂತೆ, ಬಾಯಿಲ್ಲದ ಮಾತ್ರಕ್ಕೆ ಆ ಬಡಪ್ರಾಣಿಗೆ ನೋವಿಲ್ಲವೆ ?" ಎಂದು ಗದರಿಸಿದರು. "ನನ್ನ ಹೊಟ್ಟೆಪಾಡಿಗೆ ಸ್ವಾಮಿ" ಎಂದು ಅವನು ತನ್ನ ಕಷ್ಟವನ್ನು ಹೇಳಿಕೊಂಡಾಗ ಮಾತಾಡಿದ ಎರಡರಷ್ಟು ಬಾಡಿಗೆ ತೆತ್ತು – ಆ ವೇಳೆಗೆ ಅವರು ಗಾಡಿಯಲ್ಲಿ ಕೇವಲ ಹತ್ತು ಮಾರು ದೂರ ಹೋಗಿದ್ದರು– ಕೆಳಗಿಳಿದು ವೇಗವಾಗಿ ನಡೆದುಕೊಂಡೇ ಹೊರಟರು. ಅಂದಿನಿಂದ ಪ್ರಾಣಿಗಳನ್ನು ಹೂಡಿರುವ ಗಾಡಿಯಲ್ಲಿ ಎಂದೂ ಕೂಡಲಿಲ್ಲ.

ಅವರ ಸ್ನೇಹಿತರಾದ ವೆಂಕಟರಾಮಯ್ಯನವರು ನಿವೃತ್ತರಾದ ಮೇಲೆ, ಅವರ ಮನೆಯಲ್ಲಿದ್ದ ಕುದುರೆಗಳನ್ನು ತಮ್ಮ ಮನೆಗೆ ತಂದು ಸಾಕುತ್ತಿದ್ದದೂ ಇಂಥದೇ ಉದಾಹರಣೆ.

ಇನ್ನೊಮ್ಮೆ ದಾರಿಯಲ್ಲಿ ಒಂದು ಎತ್ತನ್ನು ಯಾರೋ ಗಾಡಿಯವನು ಹೊಡೆಯುತ್ತಿದ್ದಾಗ ಹೊಡೆಯಬೇಡ ಎಂದರೂ ಕೇಳದಿದ್ದಾಗ ಅವನ ಕೈಲಿದ್ದ ಚಾಟಿಯನ್ನು ಕಿತ್ತುಕೊಂಡು ಅವನಿಗೆ ಬಲವಾಗಿ ಬಾರಿಸಿದರು. ಅನಂತರ ಎತ್ತಿಗೆ ಹುಲ್ಲುಕೊಳ್ಳಲು ಅವನಿಗೆ ಸ್ವಲ್ಪ ದುಡ್ಡುಕೊಟ್ಟರು.

ಇನ್ನೊಮ್ಮೆ ಹುಡುಗನೊಬ್ಬ ಒಂದು ನಾಯಿಗೆ ಹೊಡೆದುದನ್ನು ಕಂಡು ಪುಟ್ಟಣ್ಣನವರು ಆ ಹುಡುಗನಿಗೇ ಎರಡೇಟು ಬಿಗಿದರಂತೆ. ಆ ಹುಡುಗನ ಜೊತೆಯವರೆಲ್ಲಾ ಒಟ್ಟು ಸೇರಿ ಪುಟ್ಟಣ್ಣನವರನ್ನು ಅಟ್ಟಿಸಿಕೊಂಡು ಬಂದಾಗ, ಅವರು ಓಡಿ ತಪ್ಪಿಸಿಕೊಳ್ಳಬೇಕಾಯಿತು.

ಅಲಸೂರಿನ ಮುಖ್ಯ ಬೀದಿಯಲ್ಲಿ ನಡೆದು ಬರುತ್ತಿದ್ದಾಗ ಒಂದು ಸಾರಿ ಒಬ್ಬ ಹೆಂಗಸು ತನ್ನ ಮಗ ಒಂದಾಣೆಯನ್ನು ಕಳೆದದ್ದಕ್ಕಾಗಿ ಮೈಮುರಿಯ ಹೊಡೆಯುತ್ತಿದ್ದಳು. "ಮಗುವಿನ ಪ್ರಾಣಕ್ಕೇ ಅಪಾಯ, ಹೊಡೆಯಬೇಡ ನಿಲ್ಲಿಸು ನಿಲ್ಲಿಸು" ಎಂದರೂ ಹೊಡೆತ ಬೀಳುತ್ತಿದ್ದುದನ್ನು ಕಂಡು ತಮ್ಮ ಊರುಗೋಲಿನಿಂದ ನಾಲ್ಕೈದು ಬಾರಿ ಬಾರಿಸಿ ಅವಳಿಗೂ ಏಟಿನ ರುಚಿ ತೋರಿಸಿದರು. ಅವಳು ಎದುರುಬಿದ್ದಳು. "ನಾನು ನಿನಗೆ ಹೊಡೆದಾಗ ಎದುರುಬಿದ್ದೆ. ಆ ಮಗು ಎದುರುಬೀಳದೆಂದಲ್ಲವೇ ನೀನು ಅಷ್ಟು ಹೊಡೆದದ್ದು ?" ಎಂದು ಕೇಳಿದರು. "ಮಗು ತಿಳಿಯದೆ ಕಳೆಯಿತು. ಒಂದಾಣೆ ನಿನಗೆ ಅಷ್ಟು ಮುಖ್ಯವಾದರೆ ಅರಿಯದ ಮಗುವಿನ ಕೈಲೇಕೆ ಕೊಟ್ಟೆ ?" ಎಂದು ಬೈದು ಬುದ್ಧಿ ಹೇಳಿ ಅವಳ ಕೈಯಲ್ಲಿ ಸ್ವಲ್ಪ ಹಣವನ್ನು ಕೊಟ್ಟು "ಮಗುವಿಗೆ ಏನಾದರೂ ತೆಗೆದುಕೊಟ್ಟು ಮೊದಲು ಸಮಾಧಾನ ಮಾಡು"ಎಂದರು.

ಇನ್ನೊಮ್ಮೆ ಅಲಸೂರಿನಲ್ಲೇ ನಡೆದು ಬರುವಾಗ ಒಬ್ಬ ಪೂರ್ಣ ಗರ್ಭಿಣಿ ಹೆಂಗಸು ರಸ್ತೆಯಲ್ಲಿ ನಡೆಯುತ್ತಿದ್ದವಳು ಇದ್ದಕ್ಕಿದ್ದಂತೆ ಮಗುವನ್ನು ಪ್ರಸವಿಸಿದಳು. ನಾಚಿಕೆ, ಸಂಕಟ ಎಲ್ಲವೂ ಸೇರಿ ಆಕೆಗೆ ಅರ್ಧ ಪ್ರಜ್ಞೆ ತಪ್ಪಿದಂತಾಯಿತು. ಪುಟ್ಟಣ್ಣನವರು ಅಲ್ಲಿಯೇ ಹೋಗುತ್ತಿದ್ದವರು ಆಕೆಯ ಬಳಿ ಧಾವಿಸಿ ತಾವು ಹೊದ್ದಿದ್ದ ಉತ್ತರೀಯವನ್ನು ಬಿಚ್ಚಿ ಆಕೆಗೆ ನೆರಳೂ ಮರೆಯೂ ಆಗುವಂತೆ ಅಡ್ಡ ಹಿಡಿದು ಆಕೆಗೆ ತಕ್ಕ ಸಹಾಯ ಒದಗುವವರೆಗೂ ನಿಂತಿದ್ದರಂತೆ.

ಅವರ ಮೊಮ್ಮಗ ನಾಗರಾಜ್‌ಗೆ ಪಿತ್ತಕೋಶದ ತೊಂದರೆಯಾಗಿ ವೈದ್ಯರ ಬಳಿ ಹೋದಾಗ, "ಹತ್ತು ತಿಂಗಳ ಮಗು, ಬದುಕಿಸಲು ಯತ್ನಿಸೋಣ, ಹೇಗಾದರೆ ಹಾಗಾಗಲಿ, ಅಂಥಾದ್ದೇನು?" ಎಂದ ಮಾತಿಗೆ ಪುಟ್ಟಣ್ಣನವರು ಕಿಡಿಕಿಡಿಯಾದರು. "ಹತ್ತು ತಿಂಗಳಿನದೇ ಮುಂದೆ ನೂರುವರ್ಷದ್ದು ಆಗುವುದು. ನಿಮಗೆ ಸಾಧ್ಯವಾದರೆ ಔಷಧ ಕೊಡಿ. ಇಲ್ಲದಿದ್ದರೆ ಬೇರೆ ಕಡೆ ಹೋಗುತ್ತೇನೆ" ಎಂದು ಕೂಗಾಡಿದರಂತೆ.

ತಮ್ಮ ಹೆಣ್ಣುಮಕ್ಕಳಲ್ಲಿ ಬಹಳ ವಿಶ್ವಾಸವಿತ್ತು. ಅಂತಃಕರಣಕ್ಕೆ ಬೇಗ ಸೋತು ಹೋಗುತ್ತಿದ್ದರು. ಆದರೆ ಅಷ್ಟೇ ಶಿಸ್ತು, ಬಿಗಿ ಇತ್ತು. ಬೀದಿಬಾಗಿಲಲ್ಲಿ ನಿಲ್ಲಬಾರದು, ಕಿಟಕಿಯಲ್ಲಿ ನೋಡಬಾರದು, ಹರಟೆ, ಚೆಲ್ಲುಮಾತು ಆಡಬಾರದು. ತಾಯಿಯ ಜೊತೆ ಯಾರದಾದರೂ ಮನೆಗೆ ಹೋಗುವುದೇ ಅವರಿಗೆ ಮನೆಯ ಹೊರಗೆ ಹೋಗುವ ಸಂದರ್ಭ. ತಂದೆಗೆ ವರ್ಗವಾದಾಗ ಊರಿನ ಬದಲಾವಣೆ. ಹೆಣ್ಣುಮಕ್ಕಳ ಶಿಕ್ಷಣ, ಸಂಗೀತಾಭ್ಯಾಸಗಳಿಗೆ, ಕಸೂತಿ, ಹೊಲಿಗೆ ಮೊದಲಾದವುಗಳಿಗೆ ಪ್ರೋತ್ಸಾಹ ಕೊಟ್ಟರು. ಯಾವ ಮಕ್ಕಳನ್ನೂ ಎಂದೂ ಬೈಯಲಿಲ್ಲ, ಕೋಪಿಸಲಿಲ್ಲ.

ಅಪರೂಪಕ್ಕೆ ಹೆಂಡತಿಯ ಮೇಲೆ ಕೋಪಿಸಿಕೊಂಡಿದ್ದುಂಟು. ಇದು ತಪ್ಪು, ಇದು ಸರಿ, ಹೀಗಲ್ಲ ಹೀಗೆ ಎಂದು ಮುಂಚಿತವಾಗಿಯೇ ತಿಳಿಸಿಬಿಡುತ್ತಿದ್ದುದರಿಂದ ಮನೆಯವರು ಯಾರೂ ತಪ್ಪು ಮಾಡುವ ಅವಕಾಶವೇ ಇರುತ್ತಿರಲಿಲ್ಲ. ಹೆಚ್ಚಿನ ಮಟ್ಟಿಗೆ ಯಾರೂ ಅವರೆದುರಿಗೆ ನಿಂತು ಮಾತಾಡುತ್ತಲೂ ಇರಲಿಲ್ಲ. ಹಾಗೆ ಮಾತಾಡುವಾಗಲೂ ಒಂದು ಗೌರವದ ಗೆರೆಯೂ ಮರ್ಯಾದೆಯ ಅಂತರವೂ ಪಾಲಿಸಲ್ಪಡುತ್ತಿತ್ತು. ಇತರರು "ನೀವು ಹೇಳಿದಿರಲ್ಲಾ" ಎನ್ನರು, "ಹಾಗೆ ಹೇಳಲಿಲ್ಲವೇ ?" ಎನ್ನುವರು, ಪುಟ್ಟಣ್ಣನವರೊಂದಿಗೆ ಮಾತಾಡುವಾಗ.

ಮನೆಯಲ್ಲಿ ವಾರದ ಹುಡುಗರು, ಒಡಬಂಧುಗಳು ಯಾವಾಗಲೂ ಇರುತ್ತಿದ್ದರು. ತಮ್ಮ ಮಕ್ಕಳಲ್ಲಾಗಲೀ, ವಾರದ ಹುಡುಗರಲ್ಲಾಗಲೀ ಭೇದವಿಲ್ಲ. ಊಟ, ತಿಂಡಿ, ಬಟ್ಟೆ ಪ್ರತಿಯೊಂದು ಒಂದೇ ರೀತಿ. ಒಂದು ದಿನವಾದರೂ ಉದ್ಧಾರಮಾಡಿದೆ ಎಂಬ ಉದ್ಗಾರವಿಲ್ಲ. ಅತಿಥಿ ಸತ್ಕಾರ ಅವರಿಗೆ ಹಿರಿಯರಿಂದ ಬಂದ ಒಂದು ಗುಣ. ಅದರಲ್ಲಿ ಇವರದು ಉದಾರವಾದ ಸ್ವಭಾವ. ಆ ಕಾಲದ ಅನೇಕ ಕ್ರೀಡಾಪಟುಗಳಿಗೆ ಪುಟ್ಟಣ್ಣನವರು ಅನ್ನದಾತರಾಗಿದ್ದರು. ಹಲವುಬಾರಿ ಅವರ ಬಟ್ಟೆಬರೆ ಇತರ ಖರ್ಚುಗಳನ್ನೂ ಅವರು ನಿಭಾಯಿಸಿದ್ದುಂಟು.

ಸ್ತ್ರೀಯರಲ್ಲಿ ಗೌರವ ಸಹಾನುಭೂತಿಗಳು ಇದ್ದವು. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಿಲ್ಲದ ಕಾಲದಲ್ಲಿ, ಅವರು ತಮ್ಮ ಹೆಂಡತಿಗೆ ವಿದ್ಯಾಭ್ಯಾಸ ಮಾಡಿಸಿದರು. ತಮ್ಮ ಹೆಣ್ಣುಮಕ್ಕಳಿಗೆ ಆ ಕಾಲಕ್ಕೆ ಹೆಚ್ಚು ಎನಿಸುವಷ್ಟು ವಿದ್ಯೆ ಕಲಿಸಿದರು. ಸ್ತ್ರೀಯರ ಏಳಿಗೆಯಿಂದ ದೇಶದ ಏಳಿಗೆ ಎನ್ನುತ್ತಿದ್ದರು.

## ಹಾಸ್ಯಪ್ರವೃತ್ತಿ

ಕಡಿಮೆ ಮಾತಿನವರು ಎಂದು ಹೆಸರಾಗಿದ್ದ ಪುಟ್ಟಣ್ಣನವರು ಅಪರೂಪಕ್ಕೆ ಆಡಿದ ಮಾತು ಮಿಂಚಿನಂಥದು. ಅವರದು ಒರಟು ಹಾಸ್ಯವಲ್ಲ, ಒನಕೆಸರಸವಲ್ಲ, ನವಿರು ಹಾಸ್ಯ. ನೋವು ಮಾಡದೆ ನಲಿವು ಬೀರುವ ಹಾಸ್ಯ, ನಗೆಯ ಬಗೆಗಳ ತಾರತಮ್ಯವನ್ನರಿತ ಹಾಸ್ಯ.

ಯಾವುದೋ ಮದುವೆಯಲ್ಲಿ ಯಾರಿಗೋ ಹಾರ ಹಾಕಿದರು. ಹಾಕಿಸಿಕೊಂಡವರಿಗೆ ಬಲು ಹಿಗ್ಗಾಯಿತು. ಅದನ್ನು ಗಮನಿಸಿದ ಪುಟ್ಟಣ್ಣನವರು ಕೂಡಲೇ ಹೇಳಿದರು, "ಆ ಹಾರ ಹಾಕಿಸಿಕೊಂಡೋರಿಗೆ ಆಹಾರ ಯಾಕೆ ಬೇಕು?" ಆ ಹಾರ, ಆಹಾರಗಳ ಶ್ಲೇಷೆಯನ್ನು ಗಮನಿಸಬೇಕು.

ಅವರ ಹಾಸ್ಯ ಚುಚ್ಚಿ ನೋಯಿಸುವಂಥದ್ದಲ್ಲ, ಅಣಕಿಸುವಂಥದ್ದೂ ಅಲ್ಲ. ಮಿತವಾದ ಮಾತಿನಲ್ಲಿ ಹಾಸ್ಯ ಹೊರಬೀಳುತ್ತಿತ್ತು. ಸ್ವತಃ ತಮ್ಮ ಬೇಸರವನ್ನೂ ಪುಟ್ಟಣ್ಣನವರು ಹಾಸ್ಯದ ಮುಸುಕಿನಲ್ಲಿ ಅಡಗಿಸಿಡುವರು. ಅವರ ಹಿರಿಯ ಮಗ ಬಹುಕಾಲ ಮದುವೆಯಾಗದಿದ್ದುದು ಅವರಿಗೆ ಬಹಳ ನೋವುಂಟು ಮಾಡಿದ ವಿಷಯ

ವಾಗಿತ್ತು. ಯಾರಾದರೂ ಪುಟ್ಟಣ್ಣನವರನ್ನು "ಇನ್ನು ಯಾಕೆ ನಿಮ್ಮ ಹಿರಿಯ ಮಗ ನಿಗೆ ಮದುವೆಯಿಲ್ಲ ?" ಎಂದು ಛೇಡಿಸುವ ಮಾತನಾಡಿದರೆ, "ಇಬ್ಬರಿಗೆ ಆಗಬೇಕು, ಆಂಜನೇಯ, ಗಣಪತಿ. ಆಮೇಲೆ ಇವನಿಗೆ" ಎನ್ನುತ್ತಿದ್ದರು.

ಆಗಿನ ಕಾಲದ ಮೆಟ್ರಿಕ್ಯುಲೇಷನ್ ಎಂದರೆ ಅದು ಬಹಳ ಕಷ್ಟಕರವಾದ ಪರೀಕ್ಷೆ. ಅದೊಂದನ್ನು ದಾಟಿದರೆ ಮಿಕ್ಕದ್ದನ್ನು ದಾಟಬಹುದೆಂಬ ಭಾವನೆ ಬರುವಷ್ಟು ಕಠಿಣ ವಾಗಿತ್ತು. "I am a graduate" ಎಂದರೆ "Are you a matriculate?" ಎನ್ನುತ್ತಿದ್ದರಂತೆ ಜನ. ವಿದ್ಯಾರ್ಥಿಗಳ ಪಾಡನ್ನು ನೋಡಿ ಪುಟ್ಟಣ್ಣನವರು, "ಮೆಟ್ರಿಕಟ್ ಮಾಡಿದಾರೆ" ಎನ್ನುತ್ತಿದ್ದರಂತೆ.

ಮನೆಯಲ್ಲಿ ಮಕ್ಕಳೆಲ್ಲ ತಾವಾಡುವ ಭಾಷೆಯು ಬೇರೆಯವರಿಗೆ ಅರ್ಥವಾಗದಿರ ಲೆಂದು ಪದಗಳ ಅಕ್ಷರಸರಣಿಯನ್ನು ಬದಲಾಯಿಸಿ ಮಾತನಾಡುತ್ತಿದ್ದರು. ಈ ತಲೆ ಕೆಳಗು ಭಾಷೆಗೆ ಪುಟ್ಟಣ್ಣನವರು ದೊಂಬರ ಭಾಷೆ ಎನ್ನುತ್ತಿದ್ದರು. "ಭಾವ ಬಂದರು" ಎನ್ನುವುದಕ್ಕೆ "ವಾಭ ದಂಬರು" ಎಂದು ಹೇಳಿದ ಕೂಡಲೇ "ದೊಂಬರು ಬಂದ ರೇನು?" ಎಂದು ಪುಟ್ಟಣ್ಣನವರು ನಗುತ್ತಿದ್ದರು.

ಅವರ ಹಾಸ್ಯ ಸಹೃದಯತೆಗೆ ಎಂದೂ ಹೊರತಾಗಲಿಲ್ಲ.

**ಭಾಷಾ ಪರಿಶ್ರಮ**

ಪುಟ್ಟಣ್ಣನವರಿಗೆ ಮರಾಠೀ ಭಾಷೆ ಚೆನ್ನಾಗಿ ಬರುತ್ತಿತ್ತು. ಮಗ್ಗಿ ಲೆಕ್ಕಾಚಾರ ಮನಸ್ಸಿನಲ್ಲೇ ಗುಣಿಸಿಕೊಳ್ಳುವುದು ಎಲ್ಲವೂ ಮರಾಠಿಯಲ್ಲೇ. ಮರಾಠಿ ಬಲ್ಲವ ರೊಡನೆ ಅದೇ ಭಾಷೆಯಲ್ಲಿ ಮಾತನಾಡಲು ಒತ್ತಾಯಿಸುತ್ತಿದ್ದರು. ಉರ್ದುಭಾಷೆ ಯಲ್ಲಿ ತಕ್ಕಷ್ಟು ಪರಿಶ್ರಮವಿತ್ತು. ಅದರ ಅಧ್ಯಯನವನ್ನೂ ಮಾಡುತ್ತಿದ್ದರು. ಇಂಗ್ಲಿಷ್ ಭಾಷೆಯನ್ನು ಅವರು ಕಲಿತದ್ದು ಬಹಳ ತಡವಾಗಿ, ಸುಮಾರು ಹದಿನಾಲ್ಕರ ವಯಸ್ಸಿಗೆ. ಆದರೂ ಬಲುಬೇಗ ಆ ಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿದರು. ಹಲವು ಇಂಗ್ಲೀಷ್ ಲೇಖನಗಳನ್ನು ಬರೆದರು. ಷೇಕ್ಸ್‌ಪಿಯರನ ನಾಟಕಗಳನ್ನು ಕನ್ನಡಕ್ಕೆ ತಂದರು. ಹಿಂದಿ, ತೆಲುಗು ಭಾಷೆಗಳನ್ನು ಚೆನ್ನಾಗಿ ಮಾತನಾಡುತ್ತಿದ್ದರು. ಅವರ ಸಂಸ್ಕೃತ ಪಾಂಡಿತ್ಯ ಕಡಿಮೆಯದಲ್ಲ. ಒಮ್ಮೆ ಚಾಮರಾಜನಗರದಲ್ಲಿ ಬೆಂಚ್ ಮ್ಯಾಜಿಸ್ಟ್ರೇಟ್ ಆಗಿದ್ದಾಗ ಪುಟ್ಟಣ್ಣನವರು ತಮ್ಮ ತೀರ್ಪನ್ನು ಪೂರ್ತಿಯಾಗಿ ಸಂಸ್ಕೃತ ದಲ್ಲಿ ಬರೆದಿಟ್ಟಿದ್ದರಂತೆ.

ಕನ್ನಡದ ಪದಗಳ ಬಗೆಗೆ ಅವರದು ನಿಷ್ಕೃಷ್ಟವಾದ ತಿಳುವಳಿಕೆ. ತಮಗೆ ಯಾವು ದಾದರೂ ಪದದ ಬಗೆಗೆ ಸಂದೇಹ ಬಂದರೆ ಪಂಡಿತರಿಂದ ಬಗೆಹರಿಸಿಕೊಳ್ಳುತ್ತಿದ್ದರು. ಕನ್ನಡ ಸಂಸ್ಕೃತಗಳಲ್ಲಿ ಪ್ರಕಾಂಡ ಪಂಡಿತರಾಗಿದ್ದ ತಮ್ಮ ದೊಡ್ಡಪ್ಪನವರಾದ ನರಹರಿಭಟ್ಟರ ಬಳಿ ಪದಗಳ ವ್ಯುತ್ಪತ್ತಿ, ಧಾತುಗಳ ಬಗೆಗೆ ಸಂದೇಹವಿರುವ ಸಂಗತಿ ಗಳು ಇವನ್ನೆಲ್ಲ ಚರ್ಚಿಸುತ್ತಿದ್ದರು, ತಿಳಿದುಕೊಳ್ಳುತ್ತಿದ್ದರು. ಶಂಕರಪುರದ ಒಬ್ಬ ಶಾಸ್ತ್ರಿಗಳಲ್ಲಿ ಕೂಡ ಈ ರೀತಿ ಸಂದೇಹಗಳನ್ನು ನಿವಾರಣೆ ಮಾಡಿಕೊಳ್ಳುತ್ತಿದ್ದರು.

ತಾವು ಕಾರ್ಯದರ್ಶಿಯಾಗಿದ್ದ ಬೆಂಗಳೂರು ತೆರಿಗೆದಾರರ ಸಂಘದ ಎಲ್ಲ ಕಾರ್ಯಕ್ರಮಗಳನ್ನೂ ಕನ್ನಡದಲ್ಲಿ ಬರೆದಿಟ್ಟದ್ದು ಆ ದಿನಗಳಲ್ಲಿ ಒಂದು ಸಾಧನೆ. ಇಂಥ ಹಟದ ಸಾಧನೆಯನ್ನು, ಶುದ್ಧ ಕನ್ನಡವನ್ನು ಮಾತಾಡುವ ಸಾಧನೆಯನ್ನು ನಡೆಸುತ್ತಿದ್ದ ಒಬ್ಬ ವ್ಯಕ್ತಿಯ ಉಲ್ಲೇಖ ಅವರ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿದೆ. ಸ್ವತಃ ಪುಟ್ಟಣ್ಣನವರಲ್ಲಿ ಇಂಥ ಹಟವಿದ್ದುದು ಗಮನಾರ್ಹವಾದ ಅಂಶವಾಗಿದೆ. ಹಲವು ಭಾಷೆಗಳನ್ನು ಬಲ್ಲವರಾಗಿದ್ದ ಪುಟ್ಟಣ್ಣನವರು ಕನ್ನಡದಲ್ಲಿ ಮಾತನಾಡುವಾಗ ಮೊದಲೇ ರೂಢಿಯಾಗಿದ್ದ ಅನ್ಯಭಾಷಾಪದಗಳನ್ನು ಬಿಟ್ಟರೆ, ತಾವಾಗಿ ಬೇರೆ ಭಾಷೆಗಳ ಪದಗಳನ್ನು ಬೆರಕೆ ಮಾಡಿದ್ದಿಲ್ಲ. ಮನೆಯಲ್ಲಿ ಬೇರೆಯವರೂ ಹಾಗೇ ಮಾಡಬೇಕೆಂದು ಒತ್ತಿ ಹೇಳುತ್ತಿದ್ದರು.

ಪುಟ್ಟಣ್ಣನವರು ಕ್ರಿಯಾಪದವನ್ನು ಎಚ್ಚರಿಕೆಯಿಂದ ಬಳಸುತ್ತಿದ್ದರು. ವೀಣೆಯನ್ನು 'ಬಾರಿಸು'ವುದಲ್ಲ, 'ನುಡಿಸು'ವುದು; ನೀರನ್ನು 'ಹಾಕು'ವುದಲ್ಲ 'ಹನಿಸು'ವುದು. ಭಾಷಾಸೌಂದರ್ಯದ ಗುಟ್ಟನ್ನು ಅರಿತಿದ್ದ ಅವರು ಯಾವುದೇ ರೀತಿಯ ವಿಲಕ್ಷಣತೆಯನ್ನು ಕೂಡಿಸಲಿಲ್ಲ.

### ಒಟ್ಟುನೋಟ

ಪುಟ್ಟಣ್ಣನವರ ವ್ಯಕ್ತಿತ್ವದಲ್ಲಿ ಹಲವು ಮಿತಿಗಳೂ ಇದ್ದವು. ಆದರೆ ಯಾವುದೇ ರೀತಿಯ ಬಿರುಕುಗಳು ಇರಲಿಲ್ಲ. ಪುಟ್ಟಣ್ಣನವರು ಖಂಡಿತವಾಗಿಯೂ ಜನಪ್ರಿಯ ವ್ಯಕ್ತಿಯಲ್ಲ. ಅವರನ್ನು ಕಂಡರೆ ಜನರಿಗೆ ಭಯಮಿಶ್ರಿತ ಭಕ್ತಿ. ಅದಕ್ಕೆ ಕಾರಣ ಅವರಿಗೆ ಮುಂಗೋಪ ಹೆಚ್ಚು, ಬೇಗನೆ ಕಿರಿಕಿರಿಗೊಳಗಾಗುತ್ತಿದ್ದರು. ಹೆಚ್ಚು ಮಾತು, ಕಡಿಮೆ ಕೆಲಸ, ಅತಿ ನಿಧಾನ, ಅಪ್ರಾಮಾಣಿಕತೆಗಳನ್ನು ಕಂಡರೆ ಬೆಂಕಿ ಕಾರುತ್ತಿದ್ದರು. ಇದರ ಮೇಲೆ ಅನುಮಾನ ಪ್ರಕೃತಿ. 'ಯಾಕೆ ? ಹೇಗೆ ? ಏನು ?' ಎಂದು ನೂರೆಂಟು ರೀತಿಯ ತನಿಖೆಗಳನ್ನು ಮಾಡುತ್ತಿದ್ದರು. ಉಪಚಾರ, ಬಲವಂತಗಳನ್ನು ಕಂಡರಾಗದು. ಖಂಡಿತವಾದಿಯಾಗಿದ್ದರು. ಎಲ್ಲವೂ ಕ್ರಮಬದ್ಧವಾಗಿರಬೇಕು, ಎಂದು ಶ್ರಮಿಸುತ್ತಿದ್ದರು. ತಾವು ನಿಷ್ಠುರರಾಗಿದ್ದಂತೆ ಎಲ್ಲರೂ ನಿಷ್ಠುರರಾಗಿರಬೇಕು ಎಂಬ ಅವರ ಮನೋಗತ ಹಲವು ಬಾರಿ ಫಲಿಸದೆ ಕಿನಿಸು ಉಂಟಾಗುತ್ತಿತ್ತು. ತಮಗಿಂತಲೂ ಹೆಚ್ಚಿನ ಗುಣ ಸಾಧಿಸಿದ್ದರೆ ಮೆಚ್ಚುವ ಔದಾರ್ಯವಿತ್ತು. ಸುಳ್ಳು, ಲಂಚ, ಇತ್ಯಾದಿ ಆಗದು. ರಾಜಿಯಾಗುವ ಸ್ವಭಾವದವರಲ್ಲ. ಈ ರೀತಿಯ ಹಲವಾರು ನಿಯಮಗಳಿಗೆ ಬದ್ಧರಾದುದರಿಂದಲೂ. ಸ್ವಭಾವತಃ ಅಂತರ್ಮುಖಿಗಳೂ ಏಕಾಂತಪ್ರಿಯರೂ ಆದುದರಿಂದಲೂ ಅವರಿಗೆ ಆತ್ಮೀಯರ ಸಂಖ್ಯೆ ಹೆಚ್ಚುವುದಿರಲಿ, ಶತ್ರುಗಳ ಸಂಖ್ಯೆ ಏರುತ್ತಲೇ ಇತ್ತು. ಅವರನ್ನು ಕಂಡರೆ ಭಕ್ತಿ ಗೌರವಗಳಿದ್ದವರಿಗೂ ಅವರ ಸಾಮೀಪ್ಯ ಬೇಕಿರಲಿಲ್ಲ. ಪುಟ್ಟಣ್ಣನವರಿಂದ ಒಳ್ಳೆಯ ಕೆಲಸ ಆಗುತ್ತದೆ, ಆಗಲಿ. ಆದರೆ ಅವರ ಸಹವಾಸ ಬೇಡ ಎನ್ನುವ ಪರಿಸ್ಥಿತಿ ಅವರ ಸುತ್ತಲೂ ಇದ್ದ ಜನರಿಗೆ.

ಇಂಥ ಪ್ರತಿಬಂಧಕಗಳ ನಡುವೆಯೂ ಬಂದ ಸಮಸ್ಯೆಗಳನ್ನು ಸ್ವಾಗತಿಸಿ, ಬಿಡಿಸಿ ಮುನ್ನಡೆಯುತ್ತಿದ್ದರು ಪುಟ್ಟಣ್ಣನವರು. ಸಾಮಾಜಿಕ ಮಾರ್ಪಾಟುಗಳ ಬಗೆಗೆ ಅವರಿಗೆ ಪೂರ್ಣವಾದ ಅರಿವಿತ್ತು. ಇನ್ನೊಂದು ಮಾರ್ಗದಲ್ಲಿ ಒಳ್ಳೆಯದು ಕಂಡರೆ ಅದನ್ನು ತಮ್ಮದನ್ನಾಗಿಸಿಕೊಳ್ಳುವ ಆಸೆಯೂ ಔದಾರ್ಯವೂ ಇತ್ತು. ಅದನ್ನು ದಮನ ಮಾಡುವ ಮೂರ್ಖತನವನ್ನಾಗಲೀ, ಎದುರು ಹಾಕಿಕೊಳ್ಳುವ ಅವ್ಯಾವಹಾರಿಕತೆಯಾಗಲೀ ಅವರಲ್ಲಿರಲಿಲ್ಲ. ಅವರಿಗೆ ಸಮಾಜದ ಪರಿಷ್ಕರಣದಲ್ಲಿ ಆಸಕ್ತಿ. ಡೊಂಕನ್ನು ಹೇಳುವಾಗಲೂ ಸಹಾನುಭೂತಿ ಇರುತ್ತಿತ್ತು. ಇನ್ನೊಬ್ಬರ ತಪ್ಪನ್ನು ಟೀಕಿಸುವಾಗಲೂ, ಬೈದು ತಿದ್ದುವಾಗಲೂ ಹೀಗಾಯಿತಲ್ಲಾ ಎಂಬ ಸಂಕಟವೂ ಪರಿತಾಪವೂ ಇರುತ್ತಿತ್ತು.

ಪುಟ್ಟಣ್ಣನವರ ವ್ಯಕ್ತಿತ್ವ ಅವರ ಕೃತಿಗಳಲ್ಲಿ ಅಲ್ಲಲ್ಲಿ ಮಿನುಗುತ್ತದೆ. ಅವರು ನಾಡುನುಡಿಗಳನ್ನು ಅತಿಶಯವಾಗಿ ಪ್ರೀತಿಸಿದವರು, ಪರಿಶುದ್ಧಶೀಲರು, ಸ್ನೇಹಪರರಾದರೂ ಖಂಡಿತವಾದಿಗಳು ಎಂಬ ಸಂಗತಿಗಳು ಹೊಳಹುದೋರುತ್ತವೆ. ಇವೆಲ್ಲಕ್ಕೂ ಕಿರೀಟವಿಟ್ಟಂತೆ ಪುಟ್ಟಣ್ಣನವರ ನಿಸ್ಪೃಹತೆ ವಿನಯಗಳು ಒಂದು ಸುಸೂಕ್ಷ್ಮವಾದ ಆತ್ಮೀಯತೆಯನ್ನು ಉಂಟುಮಾಡುತ್ತವೆ. ಪುಟ್ಟಣ್ಣನವರದು ನಿಸ್ಸಂಶಯವಾಗಿಯೂ ಪರಿಶುದ್ಧವಾದ ಜೀವನ, ಘನವಾದ ವ್ಯಕ್ತಿತ್ವ.

## ಟಿಪ್ಪಣಿಗಳು

1. ತಮ್ಮ ಹೆಂಡತಿ ತಪ್ಪು ಹೆಜ್ಜೆಯಿಟ್ಟಿದ್ದನ್ನು ಕಂಡುಹಿಡಿದು ಪುಟ್ಟಣ್ಣನವರೇ ಆಕೆಯನ್ನು ಆಕೆಯ ತಾಯಿತಂದೆಯರ ಬಳಿಗೆ ಕರೆದುಕೊಂಡು ಹೋಗಿ ಬಿಟ್ಟುಬಂದರೆಂದೂ, ಮುಂದೆ ಇಡೀ ಜೀವನದಲ್ಲಿ ಆಕೆಯ ಸಂಪರ್ಕ ತಮಗೆ ಬಾರದಿದ್ದಂತೆ ಎಚ್ಚರಿಕೆ ವಹಿಸಿದರೆಂದೂ, ಆ ವಿಷಯವನ್ನು ಬೇರೆಯವರೊಡನೆ ಮಾತಾಡಲೂ ಇಚ್ಛಿಸುತ್ತಿರಲಿಲ್ಲವೆಂದೂ, ರೋಷ ಅಭಿಮಾನಗಳಿಂದ ಒಳಗೊಳಗೇ ಕುದಿಯುತ್ತಿದ್ದರೆಂದೂ ಪುಟ್ಟಣ್ಣನವರ ಹಲವರು ಬಂಧುಗಳಿಂದ ಕೇಳಿದ್ದೇನೆ.

   ಮುಂದೆ ಎಂ. ವಿಶ್ವೇಶ್ವರಯ್ಯನವರ ಜೀವನದಲ್ಲಿ ಇಂಥದೇ ಅಪ್ರಿಯ ಘಟನೆ ನಡೆದು ಅವರು ಪುಟ್ಟಣ್ಣನವರ ಬಳಿ ಈ ವಿಚಾರವಾಗಿ ಪ್ರಸ್ತಾಪಿಸಿದಾಗ, ಪುಟ್ಟಣ್ಣನವರು ತಮ್ಮ ಅನುಭವವನ್ನೂ ತಾವು ನಡೆದುಕೊಂಡದ್ದನ್ನೂ ತಿಳಿಸಿ, ಆತ್ಮಸಾಕ್ಷಿಗೆ ವಿರುದ್ಧ ಹೋಗಬೇಕಾದದ್ದು ಅನಗತ್ಯವೆಂದು ತಿಳಿಸಿದುದಾಗಿಯೂ ಕೇಳಿದ್ದೇನೆ.
2. ಶ್ರೀಕಂಠತೀರ್ಥ ; (ಸಂ) ಎಂ. ಚಿದಾನಂದ ಮೂರ್ತಿ, ತೀ. ಶ್ರೀ. ನಾಗಭೂಷಣ, ತೀ. ನಂ. ಶಂಕರನಾರಾಯಣ ; ತೀ. ನಂ. ಶ್ರೀ. ಸಂಸಾರವರ್ಗ, ಜಯನಗರ, ಬೆಂಗಳೂರು 560011; 1976 ; ಎಂ. ಎಸ್. ಪುಟ್ಟಣ್ಣನವರು (ಲೇಖಕರು—ಎಂ. ವೆಂಕಟಕೃಷ್ಣಯ್ಯ), ಪು. 867.
3. ಅದೇ, ಪು. 868.

4. ಸಾಹಿತ್ಯೋಪಾಸಕರು ; ಡಿ.ವಿ. ಗುಂಡಪ್ಪ ; ಕಾವ್ಯಾಲಯ, ಮೈಸೂರು ; 1970 ; ಪು. 86.
5. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಥಮ ಸಾಹಿತ್ಯ ಸಮ್ಮೇಳನದಲ್ಲಿ ಪುಟ್ಟಣ್ಣನವರು ಒಂದು ಉಪನ್ಯಾಸ ಮಾಡಿದ್ದರು. ನೋಡಿ : ಕನ್ನಡ : ಕೆಲವು ವಿಚಾರಗಳು ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ ; ಪ್ರಬುದ್ಧ ಕರ್ಣಾಟಕ, ಸಂಪುಟ 60, ಸಂಚಿಕೆ 1 ; 1978 ; ಪು. 13–22.
6. ಸಾಹಿತ್ಯೋಪಾಸಕರು ; ಪೂರ್ವೋಕ್ತ, ಪು. 113–114.
7. ಕನ್ನಡ : ಕೆಲವು ವಿಚಾರಗಳು, ಪೂರ್ವೋಕ್ತ, ಪು. 19.
8. ಲಂಚ ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ; ಪ್ರಬುದ್ಧ ಕರ್ಣಾಟಕ, ಸಂಪುಟ 59, ಸಂಚಿಕೆ 3; 1977 ; ಪು. 15–26.

**ಪೀಠಿಕೆ**

ಎಂ. ಎಸ್. ಪುಟ್ಟಣ್ಣನವರು ಬದುಕಿ ಬಾಳಿದ ವಾತಾವರಣದ ಸ್ವರೂಪವನ್ನು ಅರಿತರೆ ಬರಹಗಾರರಾಗಿ ಪುಟ್ಟಣ್ಣನವರು ಎಂತಹ ಸಾಹಿತ್ಯಕ, ಸಾಮಾಜಿಕ ಹಾಗೂ ರಾಜಕೀಯ ವಾತಾವರಣದಲ್ಲಿ ಕಾರ್ಯಶೀಲರಾಗಿದ್ದರು, ಯಾವ ಬಗೆಯಲ್ಲಿ ಅಂದಿನ ಪರಿಸ್ಥಿತಿಗಳಿಗೆ ಸ್ಪಂದಿಸಿದರು, ಪ್ರತಿಕ್ರಿಯಿಸಿದರು ಮತ್ತು ಆ ಮೂಲಕ ಬೆಳೆದರು ಎಂಬುದು ತಿಳಿಯುತ್ತದೆ. ಬರಹಗಾರನ ಅರಿವಿದ್ದೋ ಅರಿವಿಲ್ಲದೆಯೋ ಆತನ ಕೃತಿಗಳಲ್ಲಿ ಸುತ್ತಲಿನ ಸಮಾಜದ ಪ್ರೇರೇಪಣೆ, ಪ್ರಚೋದನೆಗಳು ತಮ್ಮ ಮುದ್ರೆಯನ್ನು ಒತ್ತುತ್ತವೆ. ಇದು ತೀರ ಸಹಜ ಪ್ರಕ್ರಿಯೆ. ಈ ಬಗೆಯ ಅಧ್ಯಯನ ಕುತೂಹಲಕರವಷ್ಟೇ ಅಲ್ಲ, ಪುಟ್ಟಣ್ಣನವರ ಬದುಕು ಬರಹಗಳ ಮೌಲ್ಯಮಾಪನಕ್ಕೂ ಅತ್ಯಗತ್ಯವಾದ ವಿಚಾರವಾಗಿದೆ, ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನನಿರ್ಣಯಕ್ಕೂ ಈ ವಿಚಾರ ತೋರುಬೆರಳಾಗುತ್ತದೆ. ಪುಟ್ಟಣ್ಣನವರ ಹಾಗೂ ಅವರ ಸಮಕಾಲೀನರ ಇಂಥ ಮೌಲ್ಯಮಾಪನದಿಂದ ಆ ಕಾಲದ ಒಟ್ಟು ಪರಿಸ್ಥಿತಿಯ ಚಿತ್ರಣವೂ ಕಣ್ಣಿಗೆ ಕಟ್ಟುತ್ತದೆ. ಆಗ ಕಾರ್ಯೋದ್ಯುಕ್ತರಾಗಿದ್ದ ಬರಹಗಾರರ ಒಟ್ಟು ಸಮಸ್ಯೆಗಳು ಹಾಗೂ ಸವಾಲುಗಳು, ಅದನ್ನು ಅವರು ಪರಿಹರಿಸಿಕೊಂಡ ಬಗೆಗಳು, ಅಂದರೆ–ರಾಜಿಯಾದ, ಸೋತ ಅಥವಾ ಗೆದ್ದ (ಕೆಲವು ಬಾರಿ ಈ ಎಲ್ಲ ಬಗೆಗಳ ಮಿಶ್ರ ಪ್ರತಿಕ್ರಿಯೆ ಕಾಣುತ್ತದೆ) ವಿವರಣಾತ್ಮಕ ಅಂಶಗಳು ಹೊಸಗನ್ನಡ ಸಾಹಿತ್ಯದ ಚರಿತ್ರೆಯಲ್ಲಿ ನಿರ್ಣಾಯಕ ಅಂಶಗಳೂ ಆಗುತ್ತವೆ. ಕಾಲಾನುಕಾಲಕ್ಕೆ ಹೊಸ ವಿಮರ್ಶೆಯ ಸಿದ್ಧಾಂತಗಳ ಬೆಳಕಿನಲ್ಲಿ ನಡೆಯುವ ಇಂಥ ಪುನರ್ಮೌಲ್ಯಮಾಪನ ಐತಿಹಾಸಿಕ ಅಗತ್ಯವೂ ಆಗಿದೆ.

ಉಪಲಬ್ಧ ವಿವರಗಳ ಬೆಳಕಿನಲ್ಲಿ ಹಳೆಯ ಮೈಸೂರಿನಲ್ಲಿ ನಡೆದ ಇಂಥ ಪ್ರಯತ್ನವನ್ನು ಇಲ್ಲಿ ಗುರುತಿಸಲಾಗಿದೆ. ಕರ್ಣಾಟಕದ ಇತರ ಭಾಗಗಳಲ್ಲಿ ನಡೆದ ಪ್ರಯತ್ನವನ್ನು ಸಂಕ್ಷಿಪ್ತವಾಗಿ ಹೇಳಿದೆ.

**ರಾಜಾಶ್ರಯ ಹಾಗೂ ರಾಜ್ಯದ ಸರ್ವತೋಮುಖವಾದ ಅಭಿವೃದ್ಧಿ**

'ಕವಿರಾಜಮಾರ್ಗ'ದ ಕಾಲದಿಂದ ಕನ್ನಡ ಸಾಹಿತ್ಯಕ್ಕೆ ರಾಜಾಶ್ರಯ ದೊರೆತ ಅಂಶ ನಿಚ್ಚಳವಾಗಿ ಕಾಣುತ್ತದೆ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಮೈಸೂರರಸರ ಸಹಾಯ ಪ್ರಮುಖ ಪೋಷಣೆಯನ್ನು ಒದಗಿಸಿದೆ. ಇದೇ ನೆರವನ್ನು ಈಗ ವಿಶ್ವವಿದ್ಯಾನಿಲಯಗಳೂ ಕನ್ನಡ ಸಾಹಿತ್ಯ ಪರಿಷತ್ತೂ ನೀಡುತ್ತಿದ್ದರೂ ಈ ಸಂಸ್ಥೆಗಳು ಪ್ರಾರಂಭವಾದುದೇ ಮಹಾರಾಜರ ಬೆಂಬಲದಿಂದ ಎಂಬುದು ಗಮನಾರ್ಹವಾದ ಅಂಶ.

ಮುಮ್ಮಡಿ ಕೃಷ್ಣರಾಜ ಒಡೆಯರ ವಿದ್ಯಾಪಕ್ಷಪಾತ, ಕಲಾಭಿಮಾನಗಳು





ಮೈಸೂರು ಸಂಸ್ಥಾನದ ಹೊರಗೂ ಹಬ್ಬಿದ್ದುವು. ಅವರದು ಹಳತು ಹೊಸತುಗಳ ಸೇರುವೆಯ ಸಂಧಿಕಾಲ. ಅವರು ಸ್ವತಃ ಸಾಹಿತಿಗಳೂ ಆಗಿದ್ದುದು ಒಂದು ಸಂತಸದ ವಾತಾವರಣವನ್ನು ನಿರ್ಮಿಸಿತು. ರಾಜಕೀಯವಾಗಿ ದೌಲತ್ತು ಅವರ ಕೈ ತಪ್ಪಿದ್ದರೂ ಶ್ರೀ ಸಾಮಾನ್ಯನಿಗೆ ಅವರು ಮಹಾಪ್ರಭುಗಳೆಂಬ ವಿಶ್ವಾಸ ತಪ್ಪಲಿಲ್ಲ. ರಾಜರಿಗೆ ಕೃಪಾದೃಷ್ಟಿಯೂ ಪ್ರಜೆಗಳಲ್ಲಿ ಸಮರ್ಪಣಭಾವವೂ ಇದ್ದುದರಿಂದ ರಾಜಪ್ರಜಾ ಸಂಬಂಧ ಯಾಂತ್ರಿಕವಾಗಿಲ್ಲದೆ ಆತ್ಮೀಯವಾಗಿತ್ತು. ಇಂಥ ಸುವರ್ಣಶಕೆಯ ನಿರ್ಮಾಪಕರಾಗಿದ್ದ ಮುಮ್ಮಡಿಯವರ ಹೆಸರಿನಲ್ಲಿರುವ ಗದ್ಯಗ್ರಂಥಗಳ ವೈಪುಲ್ಯ ಗದ್ಯಸಾಹಿತ್ಯಕ್ಕೆ ಬಂದ ಹೊಸ ಮಹತ್ವದ ಗುರುತು. ಕೆಂಪುನಾರಾಯಣನ 'ಮುದ್ರಾಮಂಜೂಷ' ವನ್ನು ಲಾಲಿಸಿ ತೃಪ್ತರಾದ ಮುಮ್ಮಡಿಯವರು ಆ ಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ ನಗರದ ಮುಖ್ಯಬೀದಿಗಳಲ್ಲಿ ಮೆರವಣಿಗೆ ಮಾಡಿಸಿದರು [1] ಕೆಂಪುನಾರಾಯಣನ ಕೃತಿಗೆ ಲಭಿಸಿದ ಈ ಮಹತ್ತ್ವ ಗದ್ಯಕ್ಕೆ ಲಭಿಸಿದ ಮನ್ನಣೆ. ಹೀಗೆ ಕೃತಿ ರಚನೆ ಹಾಗೂ ಪೋಷಣೆ ಎರಡು ದೃಷ್ಟಿಗಳಿಂದಲೂ ಅವರು ಗದ್ಯ ಸಾಹಿತ್ಯ ಸಾಮ್ರಾಟರು. ಗದ್ಯಸಾಹಿತ್ಯಕ್ಕೆ ದೊರಕಿದ ಈ ಮನ್ನಣೆಗೆ ಕಾರಣರಾದ ಮುಮ್ಮಡಿಯವರು ಕನ್ನಡಿಗರ ಚಿರಕೃತಜ್ಞತೆಗೆ ಪಾತ್ರರಾಗಿದ್ದಾರೆ.

1831 ರಲ್ಲಿ ಲಾರ್ಡ್ ವಿಲಿಯಂ ಬೆಂಟಿಂಕನು ಮೈಸೂರು ಸಂಸ್ಥಾನದ ಆಡಳಿತ ನಿರ್ವಹಣವನ್ನು ಬ್ರಿಟಿಷ್ ಸರ್ಕಾರಕ್ಕೆ ಒಪ್ಪಿಸಿದ್ದು, 1881ರಲ್ಲಿ ಮೈಸೂರಿನ ರೆಂಡಿಷನ್ ಆಯಿತು. ಚಾಮರಾಜರ (1881–1894) ಆಳ್ವಿಕೆ ಪ್ರಾರಂಭವಾದಾಗ ಇಡೀ ಸಂಸ್ಥಾನ ಸಂತೋಷದಲ್ಲಿ ಮುಳುಗಿತು. ಐವತ್ತು ವರ್ಷಗಳು ಇಂಗ್ಲಿಷರ ಆಳ್ವಿಕೆಗೆ ಒಳಪಟ್ಟಿದ್ದ ಸಂಸ್ಥಾನವು ಮತ್ತೆ ಮೈಸೂರರಸರ ಕೈಗೆ ಬಂದಮೇಲೆ ಒಂದು ಸಂತಸದ ಆವರಣ ಸೃಜನೆಯಾಯಿತು. ಸರ್ವತೋಮುಖವಾದ ಏಳಿಗೆಗೆ ಬೇಕಾದ ಉತ್ಸಾಹ ಪುಟಿಯುತ್ತಿತ್ತು. ಪ್ರಾಚೀನ ಹಾಗೂ ಅರ್ವಾಚೀನ ಸಾಹಿತ್ಯಪ್ರಕಾರಗಳಿಗೆ ಪ್ರೋತ್ಸಾಹ ಸಿಕ್ಕಿತು. ಹಳಗನ್ನಡ ಕಾವ್ಯಗಳ ಪ್ರಕಟಣೆ ಪ್ರಾರಂಭವಾಯಿತು. ನಾಟಕ ಸಂಸ್ಥೆಗಳು ಪ್ರಾರಂಭವಾದುವು. ಅಂಗ್ಲಭಾಷೆಯಿಂದ ಭಾಷಾಂತರ. ರೂಪಾಂತರಗಳು ಬಂದವು.[2] ಗದ್ಯದ ಬೆಳೆ ಇನ್ನಷ್ಟು ಹುಲುಸಾಯಿತು.

ದಿವಾನ್ ರಂಗಾಚಾರ್ಲು[3] ಅವರಂತಹ ಕಾರ್ಯತತ್ಪರರ ಸೇವೆ ಲಭಿಸಿದ್ದು ನಾಡಿನ ಭಾಗ್ಯ. ರಾಜಕೀಯ ವಿಪ್ಲವಗಳು ಅಡಗಬೇಕಾದರೆ ರಾಜಾಪ್ರಜಾ ಸಂಬಂಧದಲ್ಲಿ ಸಾಮರಸ್ಯವಿರಬೇಕು ಎಂದು ರಂಗಾಚಾರ್ಲು ಅವರು ಮಹಾರಾಜರೊಡನೆ ಆಲೋಚಿಸಿದರು. ಮಹಾರಾಜರು ಅಧಿಕಾರ ಸ್ವೀಕಾರ ಮಾಡಿದ ವರ್ಷವೇ ನವರಾತ್ರಿಯಲ್ಲಿ ದರ್ಬಾರು ಸೇರಿದ್ದಾಗ ರಂಗಾಚಾರ್ಲು ಅವರು ನಿಯಮ ನಿಬಂಧನೆಗಳೇನೂ ಇಲ್ಲದೆ ಸ್ನೇಹ ಸಂಬಂಧದಂತೆ ಪ್ರಜಾಪ್ರಮುಖರ ಮಿತ್ರಕೂಟವೊಂದನ್ನು ನಡೆಸಿದರು. ಮುಂದೆ ಆದೇ ಪ್ರಜಾಪ್ರತಿನಿಧಿಸಭೆ[4] ಆಯಿತು. ಸರಕಾರ ಪ್ರಜೆಗಳ ದೂರ ಕಡಿಮೆಯಾಗಿ ಪರಸ್ಪರ ಸಹಕಾರ್ಯದಲ್ಲಿ ಗಮನ ತೊಡಗಿತು. ಪ್ರಜೆಗಳ ಪ್ರತಿನಿಧಿಗಳೊಡನೆ

ಸಮಾಲೋಚಿಸಿ ಅವರ ಒಪ್ಪಿಗೆಯಿಂದ ಕಾರ್ಯಕ್ರಮಗಳನ್ನು ನಡೆಸುವ ಸರಕಾರದ ಧೋರಣೆ ಜನಪ್ರಿಯವಾಗುವುದರಲ್ಲಿ ಅವರಿಗೆ ಸಂದೇಹವಿರಲಿಲ್ಲ. ಜೊತೆಗೆ ಸರ್ಕಾರದ ಭಾರ ಕಡಮೆಯಾಗಿ, ಜನತೆಯಲ್ಲಿ ಎಚ್ಚರ ಹರಡಿತು. ಆಗ ಇನ್ನೂ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ಕೂಡ ಸ್ಥಾಪಿತವಾಗಿರಲಿಲ್ಲ. ಆ ಹೊತ್ತಿನಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆ ಪ್ರಾರಂಭವಾದುದು ಸಂಸ್ಥಾನದ ಮುನ್ನಡೆಯನ್ನು ನಿಶ್ಚಯಿಸಿದ ಒಂದು ಮಹತ್ವದ ಸಂಗತಿಯಾಗಿ ಕಾಣುತ್ತದೆ.

1881ರಲ್ಲಿ ಮೈಸೂರು ನಗರದಲ್ಲಿ ಬಾಲಕಿಯರ ಪಾಠಶಾಲೆಯ ಸ್ಥಾಪನೆಯಾಯಿತು. ವಾಣಿವಿಲಾಸ ಸನ್ನಿಧಾನದವರ ಸಲಹೆಯ ಮೇರೆಗೆ ಇದನ್ನು ಪ್ರಾರಂಭಿಸಿದ್ದರಿಂದ ಅವರ ಹೆಸರನ್ನೇ ಇಡಲಾಯಿತು.[5] ಆಗಿನ ಕಾಲದ ಸಾಮಾಜಿಕ ಪ್ರತಿಕೂಲ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡರೆ ಈ ಕಾರ್ಯದ ಹಿಂದೆ ಇದ್ದ ಧೈರ್ಯ ಹಾಗೂ ದೀರ್ಘಾಲೋಚನೆಗಳು ಅರಿವಾಗುತ್ತವೆ. ಪ್ರಾಚ್ಯ ವಸ್ತು ಸಂಶೋಧನ ಕಾರ್ಯಾಲಯ 1884ರಲ್ಲಿ, ಕರ್ಣಾಟಕ ಭಾಷೋಜ್ಜೀವಿನೀ ಶಾಲೆ 1886ರಲ್ಲಿ ಸ್ಥಾಪನೆಗೊಂಡವು. ಓರಿಯಂಟಲ್ ಲೈಬ್ರರಿ 1887ರಲ್ಲಿ ಆರಂಭವಾಯಿತು. ಬಿ. ಎಲ್. ರೈಸರು ದೇಶದ ಶಿಲಾಶಾಸನಗಳನ್ನು ಸಂಗ್ರಹಿಸಿ ದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಾಯ ಮಾಡಿದರು. ಆರ್. ನರಸಿಂಹಾಚಾರ್ಯರ 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳು ಈ ದಿಕ್ಕಿನಲ್ಲಿ ಮಹತ್ತ್ವವಾದುವು. 19ನೇ ಶತಮಾನದ ಅಂತ್ಯದಲ್ಲಿ ಬಾಲೀವಾಲಾ ಎಂಬ ಪಾರ್ಸಿತಂಡ ಬಂದಾಗ ತಾವೂ ಒಂದು ನಾಟಕದ ತಂಡವನ್ನು ಸ್ಥಾಪಿಸುವ ಉತ್ಸಾಹವನ್ನು ಮಹಾರಾಜರು ಪ್ರಕಟಿಸಿದರಲ್ಲದೆ, ಅದನ್ನು ಕೂಡಲೇ ಕಾರ್ಯರೂಪಕ್ಕೆ ತಂದರು. ಹೊಸವಿಚಾರಗಳನ್ನು ಬರಮಾಡಿಕೊಳ್ಳುವುದರಲ್ಲಿ ಅವರದು ಅದ್ಭುತ ಆಸಕ್ತಿ. ಅದರ ಫಲವೇ 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ'ದ ಸ್ಥಾಪನೆ.

ಹೊಸ ರೈಲ್ವೇ ಮಾರ್ಗಗಳಾದವು. ಕೆರೆನಾಲೆಗಳ ಕಾಮಗಾರಿಗಳ ನೀರಾವರಿ ಕಾರ್ಯಗಳು, ಜಲಾಶಯ ನಿರ್ಮಾಣಗಳು ನಡೆದವು. ಸರ್ಕಾರಿ ವಿದ್ಯಾಸಂಸ್ಥೆಗಳ ಹಾಗೂ ಸರ್ಕಾರಿ ದ್ರವ್ಯಪೋಷಿತ ವಿದ್ಯಾಸಂಸ್ಥೆಗಳ ಸಂಖ್ಯೆ ಏರಿತು. ಸ್ಥಳ ಕೈಗಾರಿಕೆಗಳು ಪ್ರಾರಂಭವಾದುವು. 1884ರಲ್ಲಿ ಚೀಫ್ ಕೋರ್ಟಿಗೆ (ಈಗಿನ ಹೈಕೋರ್ಟು) ಮೂವರು ನ್ಯಾಯಾಧೀಶರು ನೇಮಕವಾದರು. 1885ರಲ್ಲಿ ಪೋಲೀಸು ಇಲಾಖೆ ಹಾಗೂ ಅರಣ್ಯ ಇಲಾಖೆಗಳಲ್ಲಿ ಇನ್ಸ್‌ಪೆಕ್ಟರ್ ಜನರಲ್ ಮತ್ತು ಕನ್ಸರ್ವೇಟರ್ ಎಂಬ ಮುಖ್ಯಾಧಿಕಾರಿಗಳ ನೇಮಕಗಳಾದವು. 1886ರಲ್ಲಿ ವ್ಯವಸಾಯದ ಇಲಾಖೆ ಪ್ರಾರಂಭವಾಯಿತು. ಕೋಲಾರದ ಚಿನ್ನದ ಗಣಿಯೂ 1886ರಲ್ಲೇ ಪ್ರಾರಂಭವಾಯಿತು. ಹತ್ತಿ ಉಣ್ಣೆ ಬಟ್ಟೆಗಳ ಗಿರಣಿಗಳು ಪ್ರಾರಂಭವಾದುವು. ವಿದ್ಯಾಭ್ಯಾಸದ ಇಲಾಖೆಯಲ್ಲಿ ಅನೇಕ ಸುಧಾರಣೆಗಳು ಏರ್ಪಟ್ಟವು. ಎಕ್ಸೈಜು ಇಲಾಖೆ, ಸೈನ್ಯದ ಇಲಾಖೆ, ಮುಜರಾಯಿ ಇಲಾಖೆ, ಗಣಿ ಇಲಾಖೆಗಳು ಏರ್ಪಟ್ಟವು. ಭೂ ಕಂದಾಯ ಪರಿಷ್ಕೃತ

ವಾಯಿತು. ಜೀವವಿಮೆ ಏರ್ಪಾಡು ಮೊದಲಾಯಿತು. 1891ನೇ ಇಸವಿಯಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆ ಏರ್ಪಟ್ಟಿತು. ಬ್ರಿಟಿಷ್ ಇಂಡಿಯದ ಅಂಚೆ ಏರ್ಪಾಡು ಜಾರಿಗೆ ಬಂತು. 1894ರಲ್ಲಿ ವ್ಯವಸಾಯದ ಬ್ಯಾಂಕು ಪ್ರಾರಂಭವಾಯಿತು. ಅದೇ ವರ್ಷ ಬಾಲ್ಯವಿವಾಹ ನಿಷೇಧ ಕಾನೂನು ಜಾರಿಗೆ ಬಂತು. ಎಂಟುವರ್ಷಕ್ಕೆ ಕಡಿಮೆ ಇರುವ ಬಾಲಕಿಯರಿಗೆ ವಿವಾಹ ಮಾಡಬಾರದೆಂದು, ಐವತ್ತು ವರ್ಷಗಳಿಗೆ ಹೆಚ್ಚಾಗಿ ರುವ ವ್ಯಕ್ತಿ ಹದಿನಾರು ವರ್ಷಗಳಿಗೆ ಕಡಿಮೆ ವಯಸ್ಸಿನ ಕನ್ಯೆಯನ್ನು ಮದುವೆಯಾಗ ಬಾರದೆಂದು ಅದರಲ್ಲಿತ್ತು. ಚಾಮರಾಜ ಒಡೆಯರಲ್ಲಿದ್ದ ಔದಾರ್ಯ ದಿವಾನರ ಕಾರ್ಯಕ್ಕೆ ಇಂಬಾಗಿತ್ತು.

ಈ ಹೊತ್ತಿನಲ್ಲಿ ನಡೆದ ಇನ್ನೊಂದು ವಿವಾದವನ್ನು ಗಮನಿಸಬೇಕು. ಸಂಸ್ಥಾನ ದಲ್ಲಿದ್ದ ಬ್ರಿಟಿಷ್ ಸರ್ಕಾರದ ಪ್ರತಿನಿಧಿ ರೆಸಿಡೆಂಟರು ರಾಜ್ಯದ ನಿರ್ವಹಣೆ ಸುಗಮ ವಾಗಿದೆಯೇ ಮತ್ತು ಬ್ರಿಟಿಷರಿಗೆ ಏನೂ ತೊಂದರೆಯಾಗುವುದಿಲ್ಲವೇ ಎಂಬೆಡೆ ಗಮ ನಿಸುತ್ತಿದ್ದರು. ಮೈಸೂರಿನ ರೆಂಡಿಷನ್ ಆದಮೇಲೆ ರಂಗಾಚಾರ್ಲು ಮೊದಲ ದಿವಾನರು. ಅನಂತರ ಶೇಷಾದ್ರಿ ಅಯ್ಯರ್ ಅವರು. ಇವರಿಬ್ಬರೂ ಬಹಳ ಪ್ರಭಾವ ಶಾಲಿಗಳಾಗಿದ್ದವರೇ. ಪ್ರಾರಂಭದ ಇಂಗ್ಲಿಷ್ ವಿದ್ಯಾಭ್ಯಾಸ ಮದರಾಸಿನಲ್ಲಿ ನಡೆದದ್ದ ರಿಂದ, ಮದರಾಸಿನ ಈ ದಿವಾನರುಗಳು ಬರುವಾಗ ಅವರ ಹಿಂದೆ ಎಲ್ಲ ವರ್ಗದ, ಕೆಲಸದ ಜನ ತಂಡತಂಡವಾಗಿ ಬಂದರು. ಮುಂದೆ ಮೈಸೂರಿನವರೇ ತರಬೇತಾಗಿ ಬಂದರೂ ಅವರಿಗೆ ಕಾರ್ಯಾವಕಾಶಗಳು ಕಡಿಮೆ ಇದ್ದವು. ರಾಜ್ಯಾಡಳಿತಕ್ಕೆ ಬಂದ ಮದರಾಸಿಗರಿಗೆ ಕನ್ನಡ ತಿಳಿಯದು. ಬ್ರಿಟಿಷ್ ರೆಸಿಡೆಂಟರಿಗೆ ಕನ್ನಡವೂ ಬೇಡ, ತಮಿಳೂ ಬೇಡ. ಹೀಗಾಗಿ ಇಂಗ್ಲಿಷಿನ ಪ್ರಾಶಸ್ತ್ಯ ಹೆಚ್ಚಾಯಿತು. ಮೈಸೂರಿನವರಿಗೆ ತಮ್ಮ ಭಾಷೆ ಹಿಂದೆ ಬಿದ್ದಿತೆಂದು, ತಮ್ಮ ನಾಡಿನಲ್ಲಿ ತಮಗೆ ಉದ್ಯೋಗಾವಕಾಶಗಳು ಇಲ್ಲವೆಂದು ಅಸಮಾಧಾನ ಸಹಜವಾಗಿಯೇ ಮತ್ತು ನ್ಯಾಯವಾಗಿಯೇ ಮೊಳೆಯಿತು[7], ದಿನದಿನಕ್ಕೆ ಉಲ್ಬಣವಾಗಿ ಕಡೆಗೊಮ್ಮೆ ಸ್ಫೋಟವಾಗುವ ಸ್ಥಿತಿಯನ್ನು ತಲುಪಿತು. ಮೈಸೂರಿನಲ್ಲಿ 1870ರ ದಶಕದಿಂದ ಸುಮಾರು ಮೂವತ್ತು ವರ್ಷಗಳಿಗೂ ಹೆಚ್ಚು ಎರಡು ಪಕ್ಷಗಳು ಬಲವಾಗಿದ್ದವು. ಬಿಂಡಿಗನವಿಲೆ ಕೃಷ್ಣಯ್ಯಂಗಾರ್ಯರ ನೇತೃತ್ವದಲ್ಲಿ ನಡೆದ ಮೈಸೂರು ಪಕ್ಷ 'Mysore for Mysoreans' ಎಂಬ ಧ್ಯೇಯವನ್ನುಳ್ಳದ್ದು. ಇದಕ್ಕೆ ಎಂ. ವೆಂಕಟಕೃಷ್ಣಯ್ಯನವರ ಬೆಂಬಲ ಬಹಳವಾಗಿತ್ತು. ಎಂ. ಶಾಮರಾಯರು, ಎಂ. ಎಸ್. ಪುಟ್ಟಣ್ಣನವರು, ಡಿ. ವೆಂಕಟರಾಮಯ್ಯನವರು ಈ ಚಳುವಳಿಗೆ ಬೆಂಬಲ ಕೊಟ್ಟ ಇನ್ನಿತರರು. ರಂಗಾಚಾರ್ಯರು, ಶೇಷಾದ್ರಿ ಅಯ್ಯರ್ ಇವರ ಮುಖಂಡತ್ವದ್ದು 'Mysore for India' ಎಂಬ ಧೋರಣೆಯದು.

ಹೀಗೆ ಮೈಸೂರಿನವರಲ್ಲದವರೇ ಅಂದರೆ ಕನ್ನಡಿಗರಲ್ಲದವರೇ ಅಧಿಕಾರದ ಮುಖ್ಯಸ್ಥಾನಗಳಿಗೆ ಬಂದುದರಿಂದ ಇಂಗ್ಲಿಷ್ ಕಾಲಕ್ರಮೇಣ ಹೆಚ್ಚು ಪ್ರಾಮುಖ್ಯ ವನ್ನು ಪಡೆಯಿತು. ವಿದೇಶಗಳಿಗೆ ಹೋಗಿಬರುವ ಹಲವು ಜನರು ಇಲ್ಲಿ ಉನ್ನತ

ಹುದ್ದೆಗಳನ್ನು ಪಡೆದು ಇಂಗ್ಲಿಷಿಗೆ ಪ್ರೋತ್ಸಾಹ ಕೊಟ್ಟರು. ಇಂಗ್ಲೆಂಡಿನ ಹಲವು ಪುಸ್ತಕ ವ್ಯಾಪಾರಿಗಳು ಅತ್ಯುತ್ತಮವಾದ ಇಂಗ್ಲಿಷು ಪುಸ್ತಕಗಳನ್ನು ಸುಲಭ ಕ್ರಯಕ್ಕೆ ಇಲ್ಲಿ ಮಾರಿ ಇಂಗ್ಲಿಷ್ ಭಾಷೆ ಸಾಹಿತ್ಯಗಳು ಇಲ್ಲಿ ನೆಲೆಗೊಳ್ಳಲು ಸಹಾಯಕರಾದರು.[8] ಆದರೆ ಇಂಗ್ಲಿಷ್ ಯಾವಾಗ ಕನ್ನಡವನ್ನು ಮೂಲೆಗೆ ತಳ್ಳಲುದ್ಯುಕ್ತವಾಯಿತೋ ಆಗ ಹಲವು ಜನ ಎಚ್ಚೆತ್ತರು. ಕನ್ನಡ ಭಾಷೋಜ್ಜೀವನದ[9] ಕಾರ್ಯದಲ್ಲಿ ತೊಡಗಿದರು. ಪ್ರೋತ್ಸಾಹವಿಲ್ಲದೆ ಹಿಂದಕ್ಕೆ ಬಿದ್ದಿದ್ದ ಹಲವು ಪಂಡಿತರು ಈ ದುಃಸ್ಥಿತಿಯನ್ನು ಎದುರಿಸಲಾರದೆ ಇದ್ದಾಗ ಮುಂದೆ ಬಂದು ಧೈರ್ಯೋತ್ಸಾಹಗಳನ್ನು ತೋರಿದವರು ಎಂ. ವೆಂಕಟಕೃಷ್ಣಯ್ಯನವರು, ಎಂ. ಶಾಮರಾಯರು. ಎಂ. ಎಸ್. ಪುಟ್ಟಣ್ಣನವರು, ರಘುನಾಥರಾಯರು ಮುಂತಾದವರು. ಅರಮನೆಯಲ್ಲಿ ಅಧಿಕಾರಿಗಳಾಗಿದ್ದ ಅಂಬಿಲ್ ನರಸಿಂಹಯ್ಯಂಗಾರರ ಸಹಾಯ ಬಹಳ ಪ್ರಮುಖವಾದುದು. ಇಂಗ್ಲಿಷಿನ ಸಾಹಚರ್ಯವನ್ನು ಇವರು ಬಿಡದಿದ್ದರೂ ಅದನ್ನು ಪ್ರಧಾನವಾಗಿಸಲಿಲ್ಲ. ಫಲವಾಗಿ ಇವರುಗಳ ಬರವಣಿಗೆಯಲ್ಲಿ ಒಂದು ನಾವೀನ್ಯ ಕಸಿಯಾಗಿ ಕೂಡಿಕೊಂಡಿತು.

ವಾಣೀವಿಲಾಸ ಸನ್ನಿಧಾನದವರು ರೀಜೆಂಟರಾಗಿದ್ದಾಗ ವ್ಯವಸಾಯ, ವಿದ್ಯಾಭ್ಯಾಸಗಳು ಅಭಿವೃದ್ಧಿ ಹೊಂದಿದವು. ವಯಸ್ಕ ಹಿಂದೂ ವಿಧವೆಯರ ವಿದ್ಯಾಭ್ಯಾಸಕ್ಕಾಗಿ ಮಹಾರಾಣಿಯವರ ಬಾಲಿಕಾ ಪಾಠಶಾಲೆಯಲ್ಲಿ ವಿಶೇಷ ವಿಧದ ಎರಡು ತರಗತಿಗಳು ಪ್ರಾರಂಭವಾದುವು. ಮೂಕ ಪ್ರಾಣಿಗಳಿಗೆ ಕ್ರೌರ್ಯ ತೋರಿದರೆ ದಂಡನೆ ಹಾಗೂ ಕಾಡುಮೃಗಗಳನ್ನು ಸಿಕ್ಕಂತೆ ಕೊಲ್ಲಬಾರದೆಂಬ ಕಾನೂನು ಜಾರಿಗೆ ಬಂತು. ಬರಗಾಲದಿಂದ ನೊಂದ ಜನತೆಗೆ 1898ರ ಪ್ಲೇಗ್ ಹಾವಳಿ ಬಲವಾದ ಪೆಟ್ಟಾಯಿತು. ಸಂಸ್ಥಾನದ ಆರ್ಥಿಕ ವ್ಯವಸ್ಥೆಯಲ್ಲಿ ವೆಚ್ಚ ಬಹಳವಾಯಿತು.

ನಾಲ್ವಡಿಯವರು 1902ರಲ್ಲಿ ಪಟ್ಟಕ್ಕೆ ಬಂದ ಮೇಲೆ ಸಂಸ್ಥಾನದ ಪುರೋಭಿವೃದ್ಧಿಯ ಕಾರ್ಯ ಮುಂದುವರಿಯಿತು. 1905ರಲ್ಲಿ ಬೆಂಗಳೂರಿಗೂ 1906ರಲ್ಲಿ ಮೈಸೂರಿಗೂ ವಿದ್ಯುದ್ದೀಪಗಳು ಬಂದವು. 1905ರಲ್ಲಿ ಸಹಕಾರ ಸಂಘಗಳ ರೆಗ್ಯುಲೇಷನ್ ವಿಧಾಯಕವಾಯಿತು. 1906–07ರಲ್ಲಿ ಸಾರ್ವಜನಿಕ ಆರೋಗ್ಯ ಇಲಾಖೆ, ಪಶುವೈದ್ಯದ ಇಲಾಖೆಗಳು ಮೊದಲಾದುವು. 1907ರಲ್ಲಿ ಮೈಸೂರು ನ್ಯಾಯವಿಧಾಯಕ ಸಭೆ ಸ್ಥಾಪಿತವಾಯಿತು. 1908ರಲ್ಲಿ ಟಾಟಾ ವೈಜ್ಞಾನಿಕ ಸಂಶೋಧನ ಶಾಲೆಯ ಕಟ್ಟಡಕ್ಕಾಗಿ 5 ಲಕ್ಷರೂಪಾಯಿಗಳ ಕಾಣಿಕೆಯನ್ನು ಮಹಾರಾಜರು ಕೊಟ್ಟರು. ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಹೆಚ್ಚಾಗಿ ದೊರೆಯಿತು. ವಿದ್ಯಾರ್ಥಿನಿ ವೇತನಗಳು ಪ್ರಾರಂಭವಾದುವು. 1909ರಲ್ಲಿ ದೇವಸ್ಥಾನಗಳಲ್ಲಿ ದೇವದಾಸಿಯರ ಏರ್ಪಾಡು ತಪ್ಪಿತು. ನ್ಯಾಯವಿಧಾಯಕ ಸಭೆಗೆ 1913ರಲ್ಲಿ ಹೆಚ್ಚಿನ ಅಧಿಕಾರ ಬಂದಿತು. ಸದಸ್ಯರಲ್ಲಿ ಹನ್ನೆರಡು ಮಂದಿ ಸರ್ಕಾರಿ ಉದ್ಯೋಗಸ್ಥರು, ಹದಿಮೂರು ಮಂದಿ ಸರ್ಕಾರದ ಉದ್ಯೋಗಸ್ಥರಲ್ಲದವರು ಇರಬೇಕೆಂದು ನಿರ್ಣಯವಾಯಿತು. ಈ ಹದಿಮೂರು ಮಂದಿಯಲ್ಲಿ ನಾಲ್ವರು ಪ್ರಜಾಪ್ರತಿನಿಧಿ ಸಭೆಯಿಂದ, ಎರಡೆರಡು ಜಿಲ್ಲೆ

ಗಳಿಂದ ಒಬ್ಬೊಬ್ಬ ಸದಸ್ಯರಂತೆ, ಆಗಿನ ಒಟ್ಟು ಎಂಟು ಜಿಲ್ಲೆಗಳಿಂದ ನಾಲ್ವರು, ಉಳಿದ ಐದು ಮಂದಿ ಸರಕಾರದಿಂದ ನೇಮಕಗೊಂಡರು. 1915ರಿಂದ ತಮ್ಮ ಪ್ರಶ್ನೆಗಳಿಗೆ ಸರ್ಕಾರದವರು ಕೊಟ್ಟ ಮುದ್ರಿತ ಉತ್ತರಗಳ ಸಂಬಂಧವಾಗಿ ಉಪಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದು ಮತ್ತಷ್ಟು ಅಂಶಗಳನ್ನು ತಿಳಿಯಲು ಅವಕಾಶವಾಯಿತು. 1918ರಲ್ಲಿ ಪೌರಸಭೆಗಳ ಏರ್ಪಾಡು ಪರಿಷ್ಕೃತವಾಗಿ ಸಿಟಿ ಮುನಿಸಿಪಾಲಿಟಿ, ಟೌನ್ ಮುನಿಸಿಪಾಲಿಟಿ, ಮೈನರ್ ಮುನಿಸಿಪಾಲಿಟಿಗಳಾಗಿ ಪರಿವರ್ತಿತಗೊಂಡವು.[10] ಪೌರ ಸಭೆಯಲ್ಲಿ ಚುನಾಯಿತ ಸದಸ್ಯರ ಸಂಖ್ಯೆ ಹೆಚ್ಚಿತು. ಅವರಲ್ಲಿಯೇ ಒಬ್ಬರು ಪೌರ ಸಭೆಯ ಅಧ್ಯಕ್ಷರಾಗುವುದು ಜಾರಿಗೆ ಬಂತು. ಸಂಪದಭ್ಯುದಯ ಸಮಾಜ (Economic Conference) 1911ರಲ್ಲಿ, ಮೈಸೂರ್ ಬ್ಯಾಂಕ್ 1913ರಲ್ಲಿ ಸ್ಥಾಪನೆಯಾದವು. 1914ರಲ್ಲಿ ಇತರ ಸಹಾಯಗಳಲ್ಲದೆ, ಸಮರನಿಧಿಗಾಗಿ 50 ಲಕ್ಷ ರೂಪಾಯಿಗಳಷ್ಟು ಮೊತ್ತ ಕೊಡಲ್ಪಟ್ಟಿತು. ಡಿಸ್ಟ್ರಿಕ್ಟ್ ಬೋರ್ಡ್, ತಾಲ್ಲೂಕ್ ಬೋರ್ಡ್, ಗ್ರಾಮ ಪಂಚಾಯಿತಿಗಳು ಏರ್ಪಾಡಾಗಿ ಸ್ಥಳದ ಆಡಳಿತ ಆಯಾ ಸ್ಥಳದಲ್ಲಿಯೇ ನಡೆಯುವಂತಹ ವ್ಯವಸ್ಥೆ ಪ್ರಾರಂಭವಾಯಿತು. 1927ರಲ್ಲಿ ಗ್ರಾಮ ಪಂಚಾಯಿತಿಗಳು ಡಿಸ್ಟ್ರಿಕ್ಟ್ ಬೋರ್ಡ್‌ನ ಹತೋಟಿಯಿಂದ ತಾಲ್ಲೂಕಿನ ರೆವಿನ್ಯೂ ಅಧಿಕಾರಕ್ಕೆ ಒಳಗಾಯಿತು. ತಾಲ್ಲೂಕು ಬೋರ್ಡುಗಳನ್ನು ತೆಗೆದು ಹಾಕಲಾಯಿತು.

ಸಂಸ್ಥಾನದ ಅಭಿವೃದ್ಧಿಗಾಗಿ ನಾಲ್ವಡಿಯವರ ಮನಸ್ಸು ತೀವ್ರವಾಗಿ ಕಾರ್ಯಶೀಲವಾಗಿತ್ತೆಂಬುದಕ್ಕೆ ವಿಶ್ವೇಶ್ವರಯ್ಯನವರನ್ನು ದಿವಾನರನ್ನಾಗಿಸಿದುದು (1912) ಒಂದು ಉದಾಹರಣೆ. ದೇಶದಲ್ಲಿ ಕಾಣಿಸಿಕೊಳ್ಳುತ್ತಿದ್ದ ನಾವೀನ್ಯ, ಲವಲವಿಕೆಗಳಿಗೆ ತಕ್ಕಂತೆ ಸರ್ಕಾರದ ಕಾರ್ಯನೀತಿಯಲ್ಲಿ ಕೂಡ ಹೊಸದೃಷ್ಟಿ ಅಗತ್ಯ ಎಂಬುದನ್ನು ಅವರು ಕಂಡುಕೊಂಡಿದ್ದರು. ಅಧಿಕಾರ, ಆದಾಯ, ಮನ್ನಣೆಗಳೆಲ್ಲವನ್ನೂ ವಿಶ್ವೇಶ್ವರಯ್ಯನವರು ಪಡೆದಿದ್ದರೂ ದೇಶಾಭಿವೃದ್ಧಿಗಾಗಿ ತಮ್ಮ ಮನಸ್ಸಿನಲ್ಲಿದ್ದ ಹಲವು ಪರಿಷ್ಕರಣಗಳನ್ನು ಕಾರ್ಯರೂಪಕ್ಕೆ ತರುವ ಅವಕಾಶ ವಿಶ್ವೇಶ್ವರಯ್ಯನವರಿಗೆ ದಿವಾನರಾದ ಮೇಲೆ ಲಭಿಸಿತು. ಕನ್ನಡ ಸಾಹಿತ್ಯ ಪರಿಷತ್ತು 1915ರಲ್ಲಿ ಸ್ಥಾಪನೆಯಾಯಿತು. ಮೈಸೂರು ವಿಶ್ವವಿದ್ಯಾನಿಲಯ 1916ರಲ್ಲಿ ಸ್ಥಾಪನೆಯಾಯಿತು. ದೇಶೀಯ ರಾಜರು ಆಳುತ್ತಿದ್ದ ಸಂಸ್ಥಾನಗಳಲ್ಲಿ ಇದೇ ಮೊದಲನೆಯದು. ರಾಜರು ಮೊದಲನೆಯದಕ್ಕೆ ಮಹಾಪೋಷಕರೂ ಎರಡನೆಯದಕ್ಕೆ ಕುಲಪತಿಗಳೂ ಆಗಿ ಭದ್ರ ಅಡಿಪಾಯವನ್ನು ಹಾಕಿದರು. ಇವುಗಳ ಜೊತೆಗೆ ಕೃಷ್ಣರಾಜಸಾಗರ, ಗಂಧದೆಣ್ಣೆ ಕಾರ್ಖಾನೆ, ಭದ್ರಾವತಿಯ ಕಬ್ಬಿಣದ ಕಾರ್ಖಾನೆ, ಸಂಪದಭ್ಯುದಯ ಸಮಾಜ ಇವುಗಳೆಲ್ಲ ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗಿನ ಸಾಧನೆಗಳು.

ಆಗಿನ ರಾಜ್ಯವ್ಯವಸ್ಥೆಯನ್ನು ಒಟ್ಟಾಗಿ ನೋಡಿದರೆ ದೋಷಗಳೇನಿದ್ದರೂ ಕಾರ್ಯಕುಶಲಿಗಳಾದ ದಿವಾನರಿಂದಲೂ ಉದಾರಿಗಳಾದ ಪ್ರಭುಗಳಿಂದಲೂ ಚೆನ್ನಾಗಿ ನಡೆಯುತ್ತಿತ್ತು. 1831ರಿಂದ 1881ರ ವರೆಗಿನ ಕ್ರಮಪರಿವರ್ತನೆಯ ಯುಗದಲ್ಲಿ

ಮೊದಲಿದ್ದ ಅವ್ಯವಸ್ಥೆಯನ್ನು ಸರಿಯಾಗಿಸಿ ಸರಕಾರಕ್ಕೆ ಒಂದು ಹೊಸ ಆಯಕಟ್ಟನ್ನು ಆ ಕಾಲದ ಬ್ರಿಟಿಷ್ ಕಮಿಷನರುಗಳು ಕೊಟ್ಟರು. 1881ರಿಂದ 1920–22ರ ವರೆಗಿನ ಅಭ್ಯುದಯೋದ್ಯಮದ ಯುಗದಲ್ಲಿ ವೈದ್ಯಶಾಲೆ, ವಿದ್ಯಾಪ್ರಚಾರ, ಪ್ರಜಾ ಸೌಕರ್ಯ ಹಾಗೂ ಕೈಗಾರಿಕಾ ಅಭಿವೃದ್ಧಿ ಇಂಥ ಸಾರ್ವಜನಿಕ ಸೇವೆಗಳು ಮುಖ್ಯವಾಗಿದ್ದುವು. ದಿವಾನರುಗಳು ರಾಜ್ಯಾಭಿವೃದ್ಧಿಯ ಹಲವು ಕಾರ್ಯಕ್ರಮಗಳನ್ನು ನಡೆಸಿದರು. ಮುಂದಿನದು ಪ್ರಜಾಜಾಗೃತಿಯ ಕಾಲ.[11]

ಚಾಮರಾಜರು, ವಾಣೀವಿಲಾಸ ಸನ್ನಿಧಾನದವರು ಹಾಗೂ ನಾಲ್ವಡಿಯವರು ತಮ್ಮ ಕಾಲದಲ್ಲಿ ವಿದ್ಯಾಪ್ರಚಾರ ಹೆಚ್ಚಾಗಲೂ ಸಾಹಿತ್ಯ ಹೆಚ್ಚು ಜನಾಭಿಮುಖವಾಗಲೂ ಪ್ರೋತ್ಸಾಹಿಸಿದರು. ಭಾಷೋಜ್ಜೀವನ ಕಾರ್ಯ ಭರದಿಂದ ಸಾಗಿತ್ತು, ಅರಮನೆಯ ಸಹಾಯದಿಂದ ಗ್ರಂಥಗಳು ಸುಲಭಬೆಲೆಗೆ ದೊರಕುತ್ತಿದ್ದುವು. ಇವರುಗಳು ತಮ್ಮ ಕಾಲದಲ್ಲಿ ಗತವೈಭವವನ್ನು ಉಳಿಸಿಕೊಳ್ಳುವುದರ ಜೊತೆಗೇ ಹೊಸತನಕ್ಕೂ ಆಶ್ರಯವಿತ್ತರು. ಆ ಪರ್ವಕಾಲದಲ್ಲಿ ಅಗತ್ಯವಾಗಿದ್ದ ಎಲ್ಲ ವೇಗವರ್ಧಕಗಳನ್ನೂ ಅವರ ಔದಾರ್ಯ ಒದಗಿಸಿತು. ಉಭಯಭಾಷಾಪಂಡಿತರಿಗೂ ವಿದ್ವಾಂಸರಿಗೂ ನೆಲೆಮನೆಯಾಗಿದ್ದ ರಾಜಾಶ್ರಯ ಒಂದು ಬೆಳಕಿನ ನೆಲೆಯಾಗಿ ಸೆಲೆಯಾಗಿ ಕಾಪಾಡುತ್ತಿತ್ತು. ರಾಜರ ಕೃಪಾಛತ್ರದಡಿ ಇದ್ದೇವೆಂಬ ಧನ್ಯತೆಯನ್ನು ಪ್ರಜೆಗಳು ಅನುಭವಿಸುತ್ತಿದ್ದರು.

ಮೇಲಿನ ಬರವಣಿಗೆಯಲ್ಲಿ ಪುಟ್ಟಣ್ಣನವರ ಕಾಲದ ಮೈಸೂರು ಸಂಸ್ಥಾನದ ಹಲವು ರಂಗಗಳ ಚಟುವಟಿಕೆ, ಬೆಳವಣಿಗೆಗಳನ್ನು ಹೊರರೇಖೆಗಳಲ್ಲಿ ಚಿತ್ರಿಸಿದೆ. ಆಯಾ ಕ್ಷೇತ್ರಗಳ ಅಭಿವೃದ್ಧಿಯನ್ನು ಗುರುತಿಸುವುದು ಇಲ್ಲಿನ ಗುರಿಯಲ್ಲ. ಆದರೆ ನಾಡಿನಲ್ಲಿ ನಡೆಯುತ್ತಿದ್ದ ಆಗುಹೋಗುಗಳ ಹಿನ್ನೆಲೆಯಲ್ಲಿ ಪುಟ್ಟಣ್ಣನವರ ಕಾರ್ಯಕ್ಷಮತೆಯನ್ನು ಗುರುತಿಸುವುದು ಅವಶ್ಯವಾಗಿದೆ. ಪುಟ್ಟಣ್ಣನವರ ಲೇಖನ ವ್ಯವಸಾಯವೆಲ್ಲ ಹೆಚ್ಚಿನ ಮಟ್ಟಿಗೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ರಂಗಗಳ ಪ್ರಚಲಿತ ಸಮಸ್ಯೆಗಳಿಗೆ ಪ್ರತಿಸ್ಪಂದಿಸಿರುವುದು ಈ ದಿಕ್ಕಿನಲ್ಲಿ ಗಮನಾರ್ಹವಾದ ಅಂಶವಾಗಿದೆ.

### ಅಂದಿನ ಸಾಹಿತ್ಯದ ಧೋರಣೆಗಳು

ಆಂಗ್ಲಪ್ರಭಾವಕ್ಕಿಂತ ಮೊದಲು ಸಾಹಿತ್ಯದಲ್ಲಿ ಹಲವು ನಿಯಮಗಳಿದ್ದುವು. ಅವುಗಳನ್ನು ಮೀರುವ ಆಸೆ ಬರಹಗಾರರಿಗೆ ಹುಟ್ಟುತ್ತಿದ್ದುದೇ ಕಡಮೆ. ಹಾಗೆ ಮಾಡಿದ್ದಾದರೆ ಅವು ಜನಪ್ರಿಯವಾಗುವುದಿಲ್ಲ ಎಂಬುದೂ ಕಾರಣವಾಗಿತ್ತು. ಅಂದಿನ ಅನಧಿಕೃತ ಅಂಗೀಕೃತ ನಿಯಮಗಳನ್ನು ಸ್ಥೂಲವಾಗಿ ಹೀಗೆ ನಿರ್ದೇಶಿಸಬಹುದು.

ಕಥೆ ಸುಖಾಂತವಾಗಿರಬೇಕು. ದುಷ್ಟಶಿಕ್ಷಣ ಶಿಷ್ಟರಕ್ಷಣ ಕಾರ್ಯಗಳು ಸಾಂಗವಾಗಿ ನೆರವೇರಬೇಕು. ಒಳ್ಳೆಯದಕ್ಕೆ ಗೆಲುವು, ಕೆಟ್ಟದ್ದಕ್ಕೆ ಸೋಲು ಎಂಬುದು ಅನಿವಾರ್ಯವಾದ ಮುಕ್ತಾಯವಾಗಿತ್ತು. ಜೊತೆಗೆ ಒಳ್ಳೆಯದೆಲ್ಲ ಒಂದು ಕಡೆ, ಕೆಟ್ಟದ್ದೆಲ್ಲಾ

ಇನ್ನೊಂದೆಡೆ. ದೌರ್ಬಲ್ಯ ಎರಡೂ ಕಡೆ ಇರುವ ಸಾಧ್ಯತೆ ಇರಲಿಲ್ಲ. ಪ್ರತಿವಿಚಾರವೂ ದೈವದಿಚ್ಛೆಗೆ ಮಣಿದದ್ದು ಎಂಬುದು ಪ್ರಖರವಾಗಿ ತೋರುತ್ತಿತ್ತು. ಈ ಪರಿಸ್ಥಿತಿ ಬಹು ನಿಧಾನವಾಗಿ ಬದಲಾಯಿಸಿ, ಮನುಷ್ಯ ವಾತಾವರಣದ ಶಿಶು, ಪರಿಸರದ ಅಡಿಯಾಳು ಎಂಬ ದೃಷ್ಟಿ ಬೇರೂರುವುದು ಬಹುದಿನಗಳ ನಂತರ ಕಂಡುಬಂದಿತು.

ರಸವೃಷ್ಟಿ ಆಗ ಬಹುಮುಖ್ಯ. ಯಾವುದೇ ಕಥೆಯಲ್ಲಿ ನವರಸಗಳಿಗೆ ಅನುವು ಮಾಡಿಕೊಡಲು ಸಿದ್ಧಸೂತ್ರಗಳು ತಯಾರಾಗಿದ್ದವು. ನಾಯಕ, ನಾಯಕಿ, ಖಳನಾಯಕ, ಹಾಸ್ಯಗಾರ ಇತ್ಯಾದಿ ಪಾತ್ರಗಳು ಈ ರಸಾನುಭವಕ್ಕೆ ತಕ್ಕಂತೆ ಸೃಷ್ಟಿಯಾಗುತ್ತಿದ್ದವು. ತಮ್ಮದೆ ಆದ ಜೀವನದೃಷ್ಟಿ ಕೂಡ ಇಂಥದಕ್ಕೆ ಬದ್ಧವಾಗಿತ್ತು. ಮನುಷ್ಯನ ಮನಸ್ಸು ನಿಗೂಢವಾದುದು ಎಂಬುದು ಇತ್ತೀಚೆಗೆ ತಲೆದೋರಿದ ದೃಷ್ಟಿ. ಇಂಗ್ಲಿಷ್ ಸಾಹಿತ್ಯದ ಪ್ರವಾಹ ಹಲವು ಜಿಗುಟುಗಳನ್ನು ಕೊಚ್ಚಿ ಕಳೆದ ಮೇಲೆ ಈ ಹೊಸದೃಷ್ಟಿ ಕಾಣಿಸಿಕೊಂಡಿತು.

ಪಂಡಿತ ಪಾಮರರ ರಂಜನೆ ಆಗ ಮುಖ್ಯವಾಗಿತ್ತು. ಮೋಕ್ಷಾಕಾಂಕ್ಷೆ ಹಾಗೂ ಕೀರ್ತಿ ಕಾಮನೆಗಳು ಹಲವು ಬಾರಿ ಪ್ರಮುಖವಾಗುತ್ತಿದ್ದವು.

ಆಗಿನ ಮೌಲ್ಯಗಳು ಕಟ್ಟುನಿಟ್ಟಾದುವು. ಸಂಸ್ಕೃತಿಯ ಸಾರ ಪ್ರತಿಯೊಂದು ವಿಚಾರದ ಆಳಕ್ಕೆ ಇಳಿದಂತೆ ಭಾಸವಾಗುತ್ತಿತ್ತು. ಯಾವುದೇ ಒಳ್ಳೆಯ ಕೃತಿಯಲ್ಲಿ ನಾಡುನುಡಿಗಳ ಸಂಸ್ಕೃತಿಯ ಅಚ್ಚು ಕಾಣುತ್ತಿತ್ತು. ಆಗ ಧಾರ್ಮಿಕವಾದುದಕ್ಕೆ ಮೊದಲಮಣೆ, ವೈಚಾರಿಕತೆ ಬಹಳ ಹಿಂದಿತ್ತು. ಅಲ್ಲದೆ ಅಖಂಡತೆ, ಪೂರ್ಣದೃಷ್ಟಿಗಳಿಗೆ ಆದ್ಯಗಮನ. ಖಂಡದೃಷ್ಟಿ, ಸೀಳುನೋಟ ಅನಂತರ ರೂಢಿಗೆ ಬಂತು. ಬರವಣಿಗೆಯಲ್ಲಿದ್ದ ಸಮರ್ಪಣಭಾವ ಅನಂತರ ಚಿಕಿತ್ಸಕ ಹಾಗೂ ಪರೀಕ್ಷಕ ಬುದ್ಧಿಗೆ ಎಡೆಗೊಟ್ಟಿತು.

### ಇಂಗ್ಲಿಷ್ ಪ್ರಭಾವ

ಬ್ರಿಟಿಷರ ಆಳ್ವಿಕೆಯಿಂದ ಭಾರತೀಯರ ಆಡಳಿತ, ವಿದ್ಯಾಭ್ಯಾಸ, ಸಾಮಾಜಿಕ ಜೀವನ, ಜನಗಳ ಆಶೋತ್ತರಗಳೆಲ್ಲದರ ಮೇಲೂ ಪಾಶ್ಚಾತ್ಯ ಪ್ರಭಾವ ಬೀಳುತ್ತಿತ್ತು. ಅಲ್ಲಿನ ವಿಚಾರಗಳನ್ನು ಇಲ್ಲಿನ ನೆಲದಲ್ಲಿ ಕಸಿಮಾಡಿ, ಜನತೆಗೆ ಅನುಕೂಲವಾಗುವಂತೆ ವಿಚಾರಮಾಡುವ ಸುಧಾರಕರಿಗೆ ಭಾರತದಲ್ಲಿ ಕೊರತೆಯಿರಲಿಲ್ಲ. ಅಂತಹವರಲ್ಲಿ ಮೊತ್ತಮೊದಲಿನ ಹೆಸರೆಂದರೆ ರಾಜಾರಾಮಮೋಹನರಾಯನದು. "Raja Ram Mohan Roy was the first Indian who symbolised the richness of the impact of the west on India. To many of his contemporary intellectuals Ram Mohan stood for a new liberty of the mind, a new clearness, purity and simplicity of knowledge and a new harmony of healthy and right living,"[12] ದಕ್ಷಿಣ ಭಾರತ

ದಲ್ಲಿ ಇಷ್ಟು ಉಗ್ರವಾಗಿ ಸಾಮಾಜಿಕ ಸುಧಾರಣೆಗಳಿಗಾಗಿ ಹೋರಾಡಿದ ಹೆಸರು ವೀರೇಶಲಿಂಗಂ ಪಂತುಲು ಅವರದು. ಇಂಥ ಸುಧಾರಕರು ನಾಡಿನ ಇತರ ಭಾಗಗಳಲ್ಲಿಯೂ ನಿಧಾನವಾಗಿಯಾದರೂ ಕಾಣಿಸಿಕೊಳ್ಳತೊಡಗಿದರು. ಅವರ ವಿಚಾರಗಳು ಸಾಹಿತ್ಯದಲ್ಲೂ ವ್ಯಕ್ತಗೊಳ್ಳತೊಡಗಿದವು.

ಇಂಗ್ಲಿಷರ ಹಲವು ಪ್ರಕಾರಗಳು ಕನ್ನಡಕ್ಕೆ ಬಂದಾಗ ಪೂರ್ಣವಾಗಿ ಒಮ್ಮೆಗೇ ಅನುಸರಿಸಲಾಗಲಿಲ್ಲ. ಸಾಂಸ್ಕೃತಿಕ ಭಿನ್ನತೆಯದೇ ಪ್ರಮುಖ ಸವಾಲಾಗಿತ್ತು. ಅಪರಿಚಿತವಾದ ಮಾದರಿಗಳು ಕಾಣಿಸಿಕೊಂಡಾಗ ಅವನ್ನು ನಮ್ಮದನ್ನಾಗಿಸಿಕೊಳ್ಳಲು ಸುಲಭವಾಗಿರಲಿಲ್ಲ. ಭಾಷೆ, ಸಾಮಾಜಿಕ ಪರಿಸರ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಟ್ಟುಪಾಡುಗಳು ಬೇರೆ ಬೇರೆ ಆಗಿದ್ದುವು. ಈ ವೈದೃಶ್ಯಗಳನ್ನು ರುಚಿಭೇದದಂತೆ ಬಳಸಿಕೊಂಡದ್ದು ಕನ್ನಡದ ಗಟ್ಟಿತನ.

ವಿಭಿನ್ನವಾದ ಎರಡು ಸಂಪ್ರದಾಯಗಳಿಗೆ ಸಾಮೀಪ್ಯ ಒದಗಿದಾಗ, ಅವೆರಡೂ ಒಂದೇ ಸಂಪ್ರದಾಯದ ಕವಲುಗಳಾಗದಿದ್ದ ಪಕ್ಷದಲ್ಲಿ, ತೀವ್ರವಾದ ಘರ್ಷಣೆ ಸಹಜ. ಹೊರಗಿನಿಂದ ಬಂದು ಪ್ರಭುತ್ವ ಸ್ಥಾಪಿಸಲೆಳಸುವ ಯಾವುದೇ ವಿಚಾರಕ್ಕೆ ಪ್ರತಿಭಟಿಸುವುದು ಜೀವಂತತೆಯ ಕುರುಹು. ಅದನ್ನು ತನ್ನದನ್ನಾಗಿ ಮಾಡಿಕೊಂಡು ಪ್ರಚಲಿತ ವ್ಯವಸ್ಥೆಯೊಳಗೆ ಒಳಗೊಳ್ಳುವುದು ಉಳಿಯುವಿಕೆಯ ಚಿಹ್ನೆ. ಆಗ ಹೊರಗಿನಿಂದ ಬಂದದ್ದು ಕೃತಕವಾಗಿ ನಿಲ್ಲದೆ ಇಲ್ಲಿಯೇ ಬೇರುಬಿಡುತ್ತದೆ. ಆಕ್ರಮಣ ಮಾಡಬೇಕೆಂದು ಬಂದದ್ದು ಇಲ್ಲಿನ ಕಾರ್ಯಕ್ಕೆ ಹೊಸ ಹೊಗರನ್ನು ಕೂಡಿಸುತ್ತದೆ, ವೇಗವರ್ಧಕವೂ ಆಗಬಹುದು. ಕೆಲವು ದಿನಗಳಲ್ಲಿ ಒಂದರ ಬಣ್ಣ ಇನ್ನೊಂದಕ್ಕೆ ಬರುತ್ತದೆ. ಸಂಪರ್ಕದಿಂದ ಅಪರಿಚಯತೆ ದೂರವಾಗಿ ಹೊಂದಾಣಿಕೆ ಸಹಜವಾಗಿ ಉಂಟಾಗುತ್ತದೆ. ಇಂಥ ಹಲವು ಅನುಭವಗಳಿಂದ ಕನ್ನಡ ಶ್ರೀಮಂತವಾಗಿದೆ. ತನ್ನ ಬಳಿ ಬಂದ ಹಲವು ಪ್ರಭಾವಗಳನ್ನು ಅರಗಿಸಿಕೊಂಡಿದೆ. ಈ ವಾತಾಪಿಜೀರ್ಣೋಭವ ಕ್ರಿಯೆ ಕನ್ನಡಕ್ಕೆ ಸಹಜವಾದ ಸ್ವೀಕರಣಶಕ್ತಿಯ ಕುರುಹಾಗಿದೆ. ಜೊತೆಗೆ ಎಂಥ ಗುರುತರ ಬದಲಾವಣೆಗೆ ಒಳಗಾದಾಗಲೂ ತನ್ನ ಸತ್ತ್ವವನ್ನು ಎಲ್ಲರೂಪಗಳಲ್ಲೂ ಅಡಗಿಸಿಕೊಳ್ಳುವ ಒಂದು ಶಕ್ತಿಯನ್ನು ಕನ್ನಡ ಸಾಹಿತ್ಯ ಸಿದ್ಧಮಾಡಿ ತೋರಿದೆ.

ಇಂಗ್ಲಿಷ್ ಪ್ರಭಾವದಿಂದ ಕನ್ನಡ ಸಾಹಿತ್ಯಕೃಷಿಯಲ್ಲಿ ಹೊಸದಾದ ಶಕ್ತಿಯ ಸಂಚಯ ಉಂಟಾಯಿತು. ಹೊಸಗನ್ನಡ ಸಾಹಿತ್ಯದ ಶ್ರೀಗಣೇಶ ಪೂಜೆ ನಡೆದದ್ದು ಇಂಥ ಕಾಲದಲ್ಲಿ. ಪ್ರಾಚೀನ ಹಾಗೂ ಅರ್ವಾಚೀನವಾದ ಮನೋಭಾವನೆಗಳ ಸಮನ್ವಯ ಹಾಗೂ ಆ ಕಾಲದಲ್ಲಿ ಆನುಷಂಗಿಕವಾಗಿ ಉಂಟಾದ ಸಂಘರ್ಷಣೆ ಎರಡರಿಂದಲೂ ಒಳಿತಾಯಿತು. ಸಿಹಿಯ ಭಾಗ ಅಧರಕ್ಕೆ ಇಷ್ಟವಾದದ್ದಾಗಿ, ಕಹಿಯ ಭಾಗ ಉದರಕ್ಕೆ ಪೋಷಕವಾಗಿ ಸ್ವೀಕೃತವಾಯಿತು. ಹೊಸದೆಂದು ಹೊರಗಟ್ಟಿದುದು ಒಳ್ಳೆಯದೇ.

ಮಾರ್ಗವನ್ನು ಬಿಡದೆ, ದೇಸಿಯನ್ನು ಒಳಕೊಂಡ ಜಾನಪದ ಸತ್ತ್ವದ ಒಂದು ಹೊಗರಿನಿಂದ ಕೂಡಿದ ಒಂದು ಕಳಕಳಿ, ಕಟ್ಟುನಿಟ್ಟಾದ ಮೌಲ್ಯಗಳು ಇದ್ದ ಒಂದು ಶೈಲಿ ಬೆಳೆಯಿತು. ಓದುಗರಿಗೂ ತಮಗೂ ಸೇತುವೆಯಾಗಬಹುದಾದ ಒಂದು ಶೈಲಿಯ ಆವಿಷ್ಕಾರದ ಆವಶ್ಯಕತೆಯು ಬೆಳೆಯಿತು. ಸುಲಭವಾಗಿ ಅರ್ಥವಾಗುವ ಶೈಲಿ ಅದು· ತಾಯ್ನುಡಿಯ ಆಡುಮಾತಿನ ಮಹತ್ತ್ವ ಹೆಚ್ಚಾಯಿತು. ಭಾರತೀಯ ಸಂಸ್ಕೃತಿಗೆ ಮನಸ್ಸು ತೆತ್ತವರೂ ಹೊಸದಾಗಿ ಆಮದಾದ ವಿಚಾರಗಳನ್ನು ತಮ್ಮ ಹಲವು ವಿಚಾರ ಗಳೊಂದಿಗೆ ಬೆರೆಸಿ ಬಳಸಿಕೊಂಡರು. ಸ್ವೀಕರಣ ಕಾರ್ಯದ ಒಂದು ಪರ್ವವೇ ಉಂಟಾಯಿತು. ಕನ್ನಡ ಸಾಹಿತ್ಯ ಹಲವು ಹೊಸತನಗಳನ್ನು ಮೆರೆಯಿತು.

ಕಳೆದ ಶತಮಾನದ ಉತ್ತರಾರ್ಧದಲ್ಲಿ ಸಾಹಿತ್ಯದಲ್ಲಿ ಒಂದು ಮಹತ್ತ್ವದ ಪರಿ ವರ್ತನೆ ನಡೆಯಿತು. ಭಾಷೆಸಾಹಿತ್ಯಗಳಲ್ಲಿ ಒಂದು ಹೊಸ ಕಳೆ, ಲವಲವಿಕೆಗಳು ಕೂಡಿ ಕೊಂಡವು. ಎಂ. ಎಸ್. ಪುಟ್ಟಣ್ಣನವರು, ಅವರ ಸಮಕಾಲೀನರು ಈ ಹೊಸ ಒಲವು ಗಳಿಗೆ ಸ್ಪಂದಿಸಿದರು. ಅರಮನೆಯ ಆಸ್ಥಾನದಿಂದ, ದೇವಾಲಯದ ನವರಂಗದಿಂದ ಶ್ರೀಸಾಮಾನ್ಯನ ಚಾವಡಿ ಕಟ್ಟೆಯವರೆಗೆ ಸಾಹಿತ್ಯವನ್ನು ತಂದದ್ದು ಸಾಧನೆಯೇ ಹೌದು. ಜೀವನವನ್ನೂ ದೈವವನ್ನೂ ಒಪ್ಪಿಕೊಂಡು ಜೀವನದ ಬಗೆಗೆ ಗೌರವವನ್ನು ಪ್ರಕಟಪಡಿಸಿದುದು ಅವರುಗಳ ಗುಣ. ತಮ್ಮ ಸಂಸ್ಕೃತಿಯಲ್ಲಿ ಬೆಳಕು ಕಾಣುವ ಈ ಗುಂಪಿಗೆ ಆಂಗ್ಲ ಸಾಹಿತ್ಯದ ಅರಿವಿನಿಂದ ಹೊಸ ಹೆಬ್ಬಾಗಿಲು ತೆರೆಯಿತು. ದೇಶವೇ ಪಾರತಂತ್ರ್ಯದಲ್ಲಿದ್ದರೂ ನಿರಸನತೆಯಾಗಲೀ ನೈರಾಶ್ಯವಾಗಲೀ ಇವರುಗಳಿಗೆ ಇರಲಿಲ್ಲ. ಮೌಲ್ಯಗಳ ಬಗೆಗೆ ಗಟ್ಟಿ ನಿಲುವಿತ್ತು. ಹೋಣೆಗೆ ಹಿಂಜರಿಯದ ಮನಸ್ಸು ಇವುಗಳ ಕೊಡುಗೆಯಾಗಿತ್ತು. ಹಲವು ಸಂಕಟಗಳ ನಡುವೆ ಆಶಾವಾದಿತ್ವ, ನಾಡಿನ ಸಂಸ್ಕೃತಿಯ ಬಗೆಗೆ ಶ್ರದ್ಧಾಸಕ್ತಿಗಳು ಮುಖ್ಯ ಲಕ್ಷಣಗಳಾಗಿದ್ದವು. ನಾಡುನುಡಿಗಳ ಅಭಿಮಾನ ಅವರಿಗೆ ರಕ್ಷೆಯ ರೂಪದಲ್ಲಿತ್ತು. ದೇಶಾಭಿಮಾನ ರಾಜಭಕ್ತಿಗಳು ಬೆಸೆದುಕೊಂಡಿದ್ದವು.

ಅಧಿಕಾರಿಗಳಿಂದ ದೇಶಭಾಷೆಗಳಿಗೆ ಪ್ರೋತ್ಸಾಹ ದೊರಕಿ ಅವು ಅಭಿವೃದ್ಧಿಮುಖ ವಾಗಿದ್ದವು. ಗತವೈಭವವು ಕನ್ನಡಿಗರ ಮನೋಚಕ್ಷುಗಳಲ್ಲಿ ಸುಳಿದು ಪುನರುಜ್ಜೀವನಕ್ಕೆ ಸಿದ್ಧತೆ ಮಾಡುತ್ತಿತ್ತು. ಪೂರ್ಣಪ್ರಮಾಣದ ಬದಲಾವಣೆ ಕಾಣಿಸಿಕೊಂಡು ಸುತ್ತಲಿನ ಬದುಕೇ ಸಾಹಿತ್ಯದ ಸಾಮಗ್ರಿ ಆಗಬಲ್ಲುದೆಂಬ ಅರಿವು ಉದಯಿಸಿತು. ರಾಜಕೃಪಾ ಪೋಷಿತ ಸಾಹಿತ್ಯ ಶ್ರೀ ಸಾಮಾನ್ಯನ ಮನೆಬಾಗಿಲಿಗೆ ಓಡಿ ಬಂದಂತಹ ಮುಖ್ಯ ಘಟ್ಟ ಇದು. ಈ ಸ್ಥಿತ್ಯಂತರ ಹೆಚ್ಚು ಕಡಮೆ ಎಲ್ಲ ರಂಗಗಳಲ್ಲೂ ಕಾಣಿಸಿಕೊಂಡಿತು. ನಿರಂಕುಶವಾದ ಅರಸೊತ್ತಿಗೆಯಿಂದ ಸಾಂಕುಶವಾದ ಅರಸೊತ್ತಿಗೆಯ ಕಡೆಗೆ ರಾಜ ಕೀಯವಾಗಿ, ವರ್ಣಾಶ್ರಮದ ಕಟ್ಟುಪಾಡುಗಳಲ್ಲಿ ಶೈಥಿಲ್ಯ, ವಿದ್ಯಾಭ್ಯಾಸ ನೌಕರಿಗಳಲ್ಲಿ ಹೊಸಧೋರಣೆಗಳು, ಬಾಲ್ಯವಿವಾಹ ರದ್ದತಿ ಸಾಮಾಜಿಕವಾಗಿ, ಪದ್ಯದಿಂದ ಗದ್ಯದ ಒಲವು, ಬಿಗುವಿನಿಂದ ನಾಜೂಕು ಸಾಹಿತ್ಯಕವಾಗಿ—ಈ ಧೋರಣೆಗಳು ಕಂಡುಬಂದವು. ಹಳೆಯದಕ್ಕೆ ಇತಿಶ್ರೀ ಹೇಳುತ್ತಿದ್ದಂತೆ ಹೊಸದಕ್ಕೆ ಶ್ರೀಗಣೇಶ ಪೂಜೆ ನಡೆಯಿತು.

**ಏಕೀಕರಣ**

ರಾಜಕೀಯ ಕಾರಣಗಳಿಂದ ಕರ್ಣಾಟಕದ ಎಲ್ಲ ಭಾಗಗಳೂ ಒಂದು ಆಡಳಿತಕ್ಕೆ ಒಳಪಡದೆ ಹರಿದು ಹಂಚಿಹೋಗಿದ್ದುವು. ಈ ಭಾಗಗಳ ಏಕೀಕರಣ ಗಗನಕುಸುಮ ವಾಗಿತ್ತು. ಮೈಸೂರು ಮಹಾರಾಜರ ಆಡಳಿತದಲ್ಲಿದ್ದ ಭಾಗದಲ್ಲಿ ಕನ್ನಡದ ಉಸಿರು ಸ್ವಲ್ಪ ಗಟ್ಟಿಯಾಗಿತ್ತು. ಹೈದರಾಬಾದಿನ ನಿಜಾಮರ ಕೈಲಿದ್ದ ಕನ್ನಡ ಭಾಗಗಳಲ್ಲಿ ಉರ್ದು, ಪೇಶ್ವೆಗಳ ಕೈಲಿದ್ದ ಭಾಗಗಳಲ್ಲಿ ಮರಾಠಿ ಪ್ರಭಾವ ಸ್ಪಷ್ಟವಾಗಿತ್ತು. ಇಲ್ಲೆಲ್ಲ ಕನ್ನಡಿಗರ ಅಸಹಾಯಕತೆ, ಕೆಲವೆಡೆ ಅಭಿಮಾನಶೂನ್ಯತೆ ಒಡೆದು ಕಾಣುತ್ತಿತ್ತು. ಬೇರೆ ಬೇರೆ ಪ್ರಾಂತ್ಯಗಳ ಕನ್ನಡ ಜನರು ಒಟ್ಟು ಸೇರುವುದು, ಅವರೊಡನೆ ಹೊಕ್ಕುಬಳಕೆ ನಡೆಯುವುದು ತೀರ ಕಡಮೆ ಆಗಿತ್ತು. ಆಯಾ ಪ್ರಾಂತ್ಯದಲ್ಲಿ ಆಯಾ ಭಾಷೆಗೇ ಪ್ರಾಧಾನ್ಯವಿರುವುದು ಸಹಜವೇ ಆದುದರಿಂದ ಕನ್ನಡಿಗರು ತಮ್ಮ ಹಕ್ಕುಗಳಿಂದ ವಂಚಿತರಾಗಿದ್ದರು. ಗಡಿನಾಡಿನ ಕನ್ನಡ ಭಾಗಗಳಿಗೆ ಕುತ್ತು ಸದಾ ಕಂಡುಬರುತ್ತಿತ್ತು. ಬಳ್ಳಾರಿಯನ್ನು ರಾಯಲಸೀಮೆ ಎಂದು ಆಂಧ್ರರು ತಮ್ಮದಾಗಿಸಿಕೊಳ್ಳಲು ಯತ್ನಿಸುತ್ತಿದ್ದರು. ಗಡಿಯ ಹಲವು ಜಗಳಗಳು ಇಂದಿಗೂ ತಪ್ಪಿಲ್ಲ.

ಏಕೀಕರಣದಿಂದ ಉಂಟಾಗುವ ಸೌಲಭ್ಯಗಳಾಗಲೀ, ಏಕೀಕರಣವಿಲ್ಲದೆ ಆಗುತ್ತಿರುವ ನಷ್ಟಗಳಾಗಲೀ ಜನರ ಮನಸ್ಸನ್ನು ಆರಂಭದಲ್ಲಿ ತಟ್ಟದುದರಿಂದ ಏಕೀಕರಣದ ಅಗತ್ಯವೂ ಅವರಿಗೆ ತೋರಿಬರಲಿಲ್ಲ. ಕನ್ನಡದ ಚಟುವಟಿಕೆಗಳಿಗೆ ಮೀಸಲಾದ ಸಂಘ ಸಂಸ್ಥೆಗಳು ಪ್ರೋತ್ಸಾಹದ ನೀರನ್ನು ಕಾಣದೆ ಬೇರು ಒಣಗುತ್ತಿತ್ತು. ಏಕೀಕರಣದ ಸಂಘಟನಸೂತ್ರವಿಲ್ಲದೆ ಕನ್ನಡನಾಡಿನ ಬೇರೆ ಬೇರೆ ಭಾಗಗಳ ಜನರು ಒಟ್ಟಿಗೆ ಸೇರುವುದೂ ವಿರಳವಾಗಿತ್ತು. ಇಂಥ ಹೊತ್ತಿನಲ್ಲಿ ಭಾರತ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ, ಪರೋಕ್ಷವಾಗಿ ಪ್ರಾಂತಾಭಿಮಾನ ಭಾಷಾಭಿಮಾನಗಳಿಗೂ ಇಂಬು, ಪ್ರೋತ್ಸಾಹಗಳನ್ನು ಕೊಟ್ಟಿತು.

ಬಿಡಿಬಿಡಿಯಾಗಿದ್ದ ಎಳೆಗಳನ್ನು ಸೇರಿಸಿ ಒಂದು ಸೂತ್ರವನ್ನಾಗಿ ಹೊಸೆಯಲು ಪಣ ತೊಟ್ಟವರು, ಕನ್ನಡದ ಕುಲಪುರೋಹಿತರಾದ ಆಲೂರು ವೆಂಕಟರಾಯರು. "ಜರಾಸಂಧನ ದೇಹದ ತುಂಡುಗಳಲ್ಲಿ ಸಮ್ಮಿಲನ ಶಕ್ತಿ ಇದ್ದಂತೆ, ನಮ್ಮ ಕನ್ನಡ ಭಾಷೆಯ ಈಗ ನಿರ್ಜೀವವಾಗಿರುವ ತುಂಡುಗಳಲ್ಲಿ ತಮ್ಮಷ್ಟಕ್ಕೆ ತಾವೇ ಸಮ್ಮಿಲಿತವಾಗುವ ಶಕ್ತಿಯು ಇಲ್ಲ. ಈ ಐದು ತುಂಡುಗಳನ್ನು ಒತ್ತಟ್ಟಿಗೆ ಕೂಡಿಸಿ, ಅವುಗಳಲ್ಲಿ ಜೀವಕಳೆಯನ್ನು ತುಂಬಿಸುವ ಭಾರವು ಕನ್ನಡಿಗರ ಮೇಲೆ ಇರುತ್ತದೆಂಬುದನ್ನು ಯಾರೂ ಮರೆಯಬಾರದು."[13]

ಕನ್ನಡಿಗರು ಒಂದುಗೂಡದೆ, ಕರ್ಣಾಟಕದ ಏಕೀಕರಣವಾಗದೆ ಕನ್ನಡದ ಯಾವ ಕೆಲಸವೂ ನಡೆಯದೆಂದು ಆಲೂರರು ಅರಿತುಕೊಂಡರು. ಕನ್ನಡದ ನಾಡಿಮಿಡಿತ ಕ್ಷೀಣಿಸದಿರಲು ಅದೊಂದೇ ಮಾರ್ಗ ಎಂದವರಿಗೆ ಅನ್ನಿಸಿತ್ತು. ಕನ್ನಡ ಪ್ರದೇಶಗಳಲ್ಲಿನ ಒಂದು ಭಾಗದ ಚಳುವಳಿ ಇನ್ನೊಂದು ಭಾಗಕ್ಕೆ ತಲುಪಲು, ತೀವ್ರತೆ ಹೆಚ್ಚಾಗಿ ಕೂಡಿ

ಕೊಳ್ಳಲು ಏಕೀಕರಣವಾಗದೆ ಗತ್ಯಂತರವಿರಲಿಲ್ಲ. ಆಲೂರರು ಗಂಗಾಧರರಾವ್ ದೇಶಪಾಂಡೆಯವರಿಗೆ 14-6-1929ರಲ್ಲಿ ಬರೆದ ಪತ್ರದ ಒಂದು ಭಾಗ ಹೀಗಿದೆ :

"From my experience of the public life in Karnatak and also from my experience in other fields, I have come to the conclusion that no movement political or otherwise is possible unless there is this Karnatakatwa in us. By Karnatakatwa, I mean the sumtotal of all our feelings and duties towards Karnatak (like Hindutwa)."[14]

ನಾಡಹಬ್ಬಗಳು, ವಿದ್ಯಾರಣ್ಯ ಉತ್ಸವ, ವಿಜಯನಗರ ಉತ್ಸವ, ಬಸವೇಶ್ವರ ಉತ್ಸವ, ನಿಜಗುಣಶಿವಯೋಗಿಗಳ ಉತ್ಸವ, ಕುಮಾರವ್ಯಾಸ ಉತ್ಸವ, ಪಂಪ ಉತ್ಸವ ಇವೇ ಮುಂತಾದುವುಗಳು ಕರ್ಣಾಟಕವನ್ನು ಬಲಪಡಿಸಲು ಕೈಕೊಂಡ ಉತ್ಸವಗಳು ಎಂದು ತಿಳಿಯುತ್ತದೆ.

**ಕನ್ನಡದ ಸಂಘಸಂಸ್ಥೆಗಳು**

ಹಲವು ಬಾರಿ ವಿದೇಶಸಂಚಾರ ಮಾಡಿ ಇತರ ದೇಶಗಳ ಸೌಕರ್ಯ, ಸೌಲಭ್ಯ, ಜನಜೀವನದ ಪ್ರಗತಿಗಳನ್ನು ನೋಡಿ ನಮ್ಮ ದೇಶವೂ ಅದೇ ರೀತಿ ಪ್ರಗತಿಯನ್ನು ಸಾಧಿಸಬೇಕು ಎಂದು ಆಶಿಸಿದ ನಾಲ್ವಡಿಯವರಿಗೆ ಅಂಥ ಕೆಲಸಕ್ಕೆ ಅಧ್ವರ್ಯುವಾಗಲು ದಿವಾನ್ ವಿಶ್ವೇಶ್ವರಯ್ಯನವರು ಸದಾ ಸಿದ್ಧರಾಗಿದ್ದರು. ಹೊಸದಾದ್ದನ್ನು ಸ್ಥಾಪಿಸಿ ಜನಾಂಗದ ಅಭ್ಯುದಯಕ್ಕೆ ಶ್ರಮಿಸಲು ಇಬ್ಬರೂ ಉತ್ಸುಕರಾಗಿದ್ದರು. ಇಡೀ ಸಾಮಾಜಿಕ ವ್ಯವಸ್ಥೆ ಪ್ರಗತಿಪಥದಲ್ಲಿ ಕಾಲಿಡಲು ಆವರಿಬ್ಬರೂ ಕಾರಣರೆನ್ನಬಹುದು. ಹಲವು ಸಂಘಸಂಸ್ಥೆಗಳನ್ನು ಕಟ್ಟಲು ಅವರು ಕಾರಣಕರ್ತರಾಗಿದ್ದರು. ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್, ಮಿಥಿಕ್ ಸೊಸೈಟಿ ಇಂಥವು ಹಲವು. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೂ ಇವರಿಬ್ಬರ ಪ್ರೋತ್ಸಾಹ ಮುಖ್ಯವಾದ ಆಧಾರವಾಗಿತ್ತು.

"ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಉತ್ತಮಗೊಳ್ಳಬೇಕೆಂಬ ಉದ್ದೇಶ ದಿಂದ ಸಿವಿಕ್ ಸಂಘ ಆ ಕಾಲಕ್ಕೆ ಹುಟ್ಟಿಕೊಂಡಂತೆ, ತಾಯಿನುಡಿಯ ಪರ ಕನ್ನಡಿಗರಲ್ಲಿ ಅಭಿಮಾನ ಬೆಳೆಯಲಿ ಎಂಬ ಉದ್ದೇಶದಿಂದ ಕನ್ನಡ ಸಂಘ ಒಂದನ್ನು ಬೆಳಕಿಗೆ ತರುವ ಪ್ರಯತ್ನ ಕೂಡ ನಡೆಯಿತು. 1914ರಲ್ಲಿ ಸೇರಿದ ಮೈಸೂರು ಸಂಪದಭ್ಯುದಯ ಸಮಾಜ[15] (Mysore Economic Conference) ಇದೇ ವಿಷಯವಾಗಿ ಚರ್ಚೆ ಮಾಡಿ ಕನ್ನಡ ಭಾಷೆಯಲ್ಲಿ ಗ್ರಂಥಗಳನ್ನು ರಚಿಸುವವರಿಗೆ ಪ್ರೋತ್ಸಾಹವನ್ನು ಕೊಡು ವುದಕ್ಕಾಗಿ ಸ್ವತಂತ್ರವಾದ ಅಧಿಕಾರವುಳ್ಳ ಪರಿಷತ್ತೊಂದಿರಬೇಕು, ಅಂಥ ಪರಿಷತ್ತನ್ನು ಸರಕಾರದವರು ಅಂಗೀಕರಿಸಿ ಅದಕ್ಕೆ ಸಹಾಯಮಾಡಬೇಕು, ಎಂದು ತೀರ್ಮಾನಿಸಿತು. ಈ ಉದ್ದೇಶ ಸಾಧನೆಗಾಗಿ ಒಂದು ಉಪಸಮಿತಿ ನೇಮಕವಾಯಿತು. ಈ ಉಪಸಮಿತಿ

ಯಲ್ಲಿ ಶ್ರೀಗಳಾದ ಮಹಿಷಿ ಶಾಮರಾಯರು, ಕರ್ಪೂರ ಶ್ರೀನಿವಾಸರಾಯರು, ಪಿ. ಎಸ್. ಅಚ್ಚುತರಾಯರು ಸೇರಿದ್ದರು. ಈ ಮಹನೀಯರು ಎಲ್ಲ ಕನ್ನಡನಾಡಿನ ಮುಖಂಡರನ್ನು ಬೆಂಗಳೂರಿಗೆ ಬರಮಾಡಿಕೊಂಡು ಒಂದು ಸಮ್ಮೇಳನವನ್ನು ನೆರೆಯಿಸಿ ದರು. 1915ರ ಮೇ ತಿಂಗಳ ಮೂರನೆಯ ತಾರೀಖು ಬೆಂಗಳೂರು ಕೋಟೆ ಹೈಸ್ಕೂಲಿನಲ್ಲಿ ಕನ್ನಡ ಮುಖಂಡರ ಸಭೆ ಸೇರಿತು. ಈ ಸಭೆಯಲ್ಲಿ 'ಕರ್ಣಾಟಕ ಭಾಷಾ ಸಂಸ್ಕರಣಕ್ಕಾಗಿ ಕರ್ಣಾಟಕ ಗ್ರಂಥಾವಳಿಯ ಅಭಿವೃದ್ಧಿಗಾಗಿ ಬೆಂಗಳೂರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರಿನ ಪ್ರಧಾನ ಸಭೆಯೊಂದು ಸ್ಥಾಪಿತವಾಗ ಬೇಕು' ಎಂದು ಒಂದು ನಿರ್ಣಯವಾಯಿತು. ಪರಿಷತ್ತಿನ ರಚನಾಕ್ರಮ ಚರ್ಚಿತವಾಗಿ ನಿಬಂಧನೆಗಳು ರೂಪಿತವಾದುವು. ಈ ರೀತಿ 1915ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಜನ್ಮ ತಾಳಿತು."[16]

'ಕರ್ಣಾಟಕ ವಿದ್ಯಾವರ್ಧಕ ಸಂಘ'ವು ಧಾರವಾಡದಲ್ಲಿ 1890ರಲ್ಲಿ ಸ್ಥಾಪನೆ ಆಯಿತು. ಕರ್ಣಾಟಕದ ಸಾಹಿತ್ಯಕ ಚಟುವಟಿಕೆಗಳಲ್ಲಿ ಇದರ ಪಾತ್ರ ದೊಡ್ಡದು. 'ವಾಗ್ಭೂಷಣ' ಪತ್ರಿಕೆಯನ್ನು ಪ್ರಾರಂಭಿಸಿತು. 'ಕರ್ಣಾಟಕ ಇತಿಹಾಸ ಸಂಶೋಧನ ಮಂಡಲ'ವನ್ನು ಆಲೂರ ವೆಂಕಟರಾಯರು ಧಾರವಾಡದಲ್ಲಿ 1914ರಲ್ಲಿ ಸ್ಥಾಪಿಸಿ ದರು. ಕನ್ನಡನಾಡಿನ ಇತಿಹಾಸ ಸಂಶೋಧನೆ, ಗ್ರಂಥ ಪ್ರಕಟಣೆಗಳು ಇದರ ಪ್ರಮುಖ ಉದ್ದೇಶ. 'ಕರ್ಣಾಟಕ ಏಕೀಕರಣ ಸಂಘ'ವು ಕಡಪಾ ರಾಘವೇಂದ್ರರಾಯರ ನೇತೃತ್ವ ದಲ್ಲಿ ಮೂರ್ತರೂಪಕ್ಕೆ ಬಂದಿತು. 1924ರಲ್ಲಿ ಬೆಳಗಾವಿಯಲ್ಲಿ ಏಕೀಕರಣ ಸಭೆ ನಡೆಯಿತು.

## ಗದ್ಯದ ಬೆಳವಣಿಗೆ

ಹೊಸ ಗದ್ಯ ಪ್ರಾರಂಭವಾಗಬೇಕಿದ್ದಲ್ಲಿ ಹಳೆಯ ಗದ್ಯ ತನ್ನನ್ನು ತಾನು ವರ್ಜಿಸಿ ಕೊಂಡು ಪುನಃಸೃಷ್ಟಿಯ ಕ್ರಿಯೆ ಉಂಟಾಗಬೇಕಿತ್ತು, ಬಳಕೆಮಾತಿನ ಸಲೀಸು ಕೈ ಗೂಡಲು ಅದು ಹಲವು ದಿವ್ಯಗಳನ್ನು ದಾಟಬೇಕಿತ್ತು. ಕಾಗುಣಿತ, ವಾಕ್ಯರಚನೆ, ಅನ್ಯದೇಶ್ಯ ಪದಗಳು ಹಾಗೂ ತಾಯ್ನುಡಿಯ ಸಂಪತ್ತು ಮುಂತಾದವುಗಳನ್ನೂ ತನ್ನೊಳಗೇ ಒಂದು ಹೊಸ ರಾಸಾಯನಿಕ ರಚನೆಯಾಗಿಸಿಕೊಳ್ಳಬೇಕಿತ್ತು. ಸಂವಹನಕ್ಕೆ ಸಹಾಯಕವಾದ ಆಡುಮಾತಿಗೆ ಪ್ರಾಮಾಣ್ಯ ಬಂದಾಗ ಬರವಣಿಗೆಯ ಹಲವು ತೊಡಕು ಗಳು ಮಾಯವಾದುವು. ಆದರೂ ಪದ್ಯಸಂಗೀತ ತಾರಸ್ಥಾಯಿಯಲ್ಲಿದ್ದಾಗ ಗದ್ಯದ ಗಾನ ಬರೀ ಗುನುಗುನಿಸುತ್ತಿತ್ತು. ಹೊಸಗನ್ನಡದ ಗದ್ಯ ಆಮೆಯಂತೆ ತೆವಳಿದ್ದರೆ ಅಚ್ಚರಿಯಿಲ್ಲ. ಸಾಹಿತ್ಯಕವಾಗಿ ಗದ್ಯ ಗರ್ಭಾವಸ್ಥೆಯಿಂದಲೂ ಬೆಳೆಯಬೇಕಿತ್ತು.

ಗದ್ಯಪ್ರಕಾರಗಳು ಜನಪ್ರಿಯವಾದಾಗ ಕಥನಸಾಹಿತ್ಯಕ್ಕೆ ವೇಗ ಕೂಡಿ ಕೊಂಡಿತು. ಕಥೆ, ಕಾದಂಬರಿ, ನಾಟಕಗಳ ಜೀವ ಗಟ್ಟಿಯಾಯಿತು. ಮಧ್ಯಮ ವರ್ಗಕ್ಕೆ ಪ್ರಾಶಸ್ತ್ಯ ದಕ್ಕಿತು. ಮಧ್ಯಮ ವರ್ಗದ ಮೆಚ್ಚುಗೆಗೆ ಬೆಲೆ ಬಂತು. 'ಪದ್ಯಂ ವಧ್ಯಂ,

ಗದ್ಯಂ ಹೃದ್ಯಂ' ಎಂಬ ಮುದ್ದಣನ ಹೇಳಿಕೆ ಸಾರ್ವತ್ರಿಕ ಮಾರುಲಿಯಾಯಿತು. ಆ ಹೊತ್ತಿಗೆ ಗದ್ಯದ ಬೆಳವಣಿಗೆಗೆ ಹಲವು ಅನುಕೂಲಗಳು ಕೂಡಿಬಂದುವು. "ಕಾಗದದ ವ್ಯಾಪಕ ಬಳಕೆ ; ಮುದ್ರಣ ಯಂತ್ರದ ಅಸ್ತಿತ್ವ—ಅದರಿಂದಾಗಿ ಪ್ರತಿಯೊಂದನ್ನೂ ನೆನಪಿಡುವ ಪ್ರಮೇಯ ತಪ್ಪಿದುದು ; ಲೌಕಿಕ ವಿಚಾರಗಳನ್ನೂ ಆಲಂಕಾರಿಕವಾಗಿ ಪದ್ಯರೂಪದಲ್ಲಿ ಹೇಳುವುದಕ್ಕಿಂತ ನೇರವಾಗಿ ಸುಲಭ ರೀತಿಯಲ್ಲಿ ವಿವರಿಸುತ್ತ ಹೋಗಬೇಕಾದುದರ ಅಗತ್ಯ—ಈ ಅಂಶಗಳು ಗದ್ಯದ ಪ್ರಾದುರ್ಭಾವಕ್ಕೆ ಕಾರಣವಾಗಿದೆ."[17] ಹೀಗೆ ಮೊದಲಿಲ್ಲದ ಹಿರಿಮೆ ಗದ್ಯದ ಪಾಲಿಗೆ ಬಂತು.

ಪ್ರಾರಂಭದಲ್ಲಿ ಅನುವಾದಗಳಿಂದ ಉಂಟಾದ ಪೋಷಣೆ ಬಹಳವಾದುದು. ಕನ್ನಡಕ್ಕೆ ಅಸಹಜವಾದ ನಡೆ ಕಂಡುಬಂದರೂ ಅದನ್ನು ಬೇಗನೇ ನಿವಾರಿಸಿಕೊಂಡು ಗದ್ಯವನ್ನೇ ತಮ್ಮ ಮಾಧ್ಯಮವನ್ನಾಗಿಸಿಕೊಂಡು ಹಲವರು ದುಡಿದರು. ಅದರಲ್ಲಿ ವೈವಿಧ್ಯವನ್ನೂ ತಂದರು. ಕಥೆ, ಕಾದಂಬರಿ, ಜೀವನಚರಿತ್ರೆ, ಸಂಶೋಧನೆ, ಅನುವಾದ, ಪಠ್ಯರಚನೆ, ಪತ್ರಿಕೋದ್ಯಮ ಲೇಖನ ವ್ಯವಸಾಯಗಳಲ್ಲಿ ದುಡಿದ ಎಂ. ಎಸ್. ಪುಟ್ಟಣ್ಣನವರಂಥವರು ಹೊಸಗನ್ನಡಗದ್ಯಕ್ಕೆ ಬಲವಾದ ಅಸ್ತಿಭಾರ ಹಾಕಿದರು.[18]

ಮುಮ್ಮಡಿಯವರ ಹಾಗೂ ಚಾಮರಾಜರ ಆಸ್ಥಾನಗಳಲ್ಲಿದ್ದ ನಂಜನಗೂಡು ಸುಬ್ಬಾಶಾಸ್ತ್ರಿ (1834-1906), ಸ್ವತಂತ್ರಕಾವ್ಯರಚನೆಯೊಂದಿಗೇ 'ಮೃಚ್ಛಕಟಿಕ' ಹಾಗೂ 'ಮಾಳವಿಕಾಗ್ನಿಮಿತ್ರ'ವನ್ನು ಕನ್ನಡಕ್ಕೆ ಅನುವಾದಿಸಿದರು. ವಿರೇಶಲಿಂಗಂ ಪಂತುಲು ಅವರ 'ಸತ್ಯವತಿ ಚರಿತ್ರೆ'ಯನ್ನು ಅನುವಾದಿಸಿದ ಅನಂತನಾರಾಯಣ ಶಾಸ್ತ್ರಿ (1866–1898), 'ಶಾಕುಂತಲ' ಸಂಸ್ಕೃತ ನಾಟಕವನ್ನೂ 'ಒಥೆಲೊ' ಇಂಗ್ಲಿಷ್ ನಾಟಕವನ್ನೂ ಕನ್ನಡಿಸಿದ ಬಸವಪ್ಪಶಾಸ್ತ್ರಿ (1843–1891), 'ಕರ್ಣಾಟ ಭಾಷಾಕರಂ' ನಿಘಂಟು ರಚನೆಯ ನರಹರಿ ಜಯರಾಯಾಚಾರ್ಯ, ಪ್ರೌಢ ಕವಿತ್ವ ರಚನೆಯ 'ವಿಕ್ರಮೋರ್ವಶೀಯ'ದ ಅನುವಾದಕರೂ ಆದ ಸೋಸಲೆ ಅಯ್ಯಾಶಾಸ್ತ್ರಿ (1854–1934) ಇವರುಗಳಿಂದ ಹೊಸಗನ್ನಡ ಗದ್ಯದ ಬೆಳವಣಿಗೆಯ ಸ್ವರೂಪ ಒಂದು ರೀತಿ ಗೋಚರಿಸಿದರೆ, ಇನ್ನೂ ಹೆಚ್ಚು ಹೊಸತನವನ್ನು ಮೈಗೂಡಿಸಿಕೊಂಡ ಗದ್ಯವೂ ಸರಿಸುಮಾರು ಅದೇ ಕಾಲದಲ್ಲಿ ಕಾಣಿಸಿಕೊಂಡಿತು. ಕನ್ನಡ ಗ್ರಂಥಕರ್ತರಿಗೆ ಪ್ರೋತ್ಸಾಹ, ಸ್ವಂತ ಕೃತಿರಚನೆ ಎರಡನ್ನೂ ಮಾಡಿದ ಶಿಕ್ಷಣಾಧಿಕಾರಿ ಎಂ. ಶಾಮರಾವ್ (1860–1939), ಮಹಾರಾಜಾ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕರಾಗಿದ್ದು ಹಲವು ಗದ್ಯ ಕೃತಿಗಳನ್ನೂ ರಚಿಸಿದ ಬಾಪು ಸುಬ್ಬರಾವ್(1867-1921), 'ಪ್ರಬಂಧಾವಳಿ'ಯನ್ನು ರಚಿಸಿದ 'ಕರ್ಣಾಟಕ ಕಾವ್ಯಮಂಜರಿ'ಯ ಸಂಚಾಲಕರಾದ ಎಂ.ಎ. ರಾಮಾನುಜಯ್ಯಂಗಾರ್ (1862–1938), 'ಕರ್ಣಾಟಕ ಕವಿಚರಿತೆ'ಯ ಪ್ರಥಮ ಸಂಪುಟದಲ್ಲಿ ಸಹಾಯಕರಾಗಿದ್ದ ಎಸ್. ಜಿ. ನರಸಿಂಹಾಚಾರ್, 'ಕರ್ಣಾಟಕ ಕವಿಚರಿತೆ'ಯ ಆರ್. ನರಸಿಂಹಾಚಾರ್, ಪ್ರಾರಂಭದಲ್ಲಿ ಜೊತೆಯಾಗಿ ಕೆಲಸ ಮಾಡಿ ಅನಂತರ ಬೇರೆ ಬೇರೆ

ಯಾಗಿ ಹಲವು ಕೃತಿಗಳನ್ನು ರಚಿಸಿದ ಎಂ.ಎಸ್. ಪುಟ್ಟಣ್ಣ ಹಾಗೂ ಎಂ.ಬಿ. ಶ್ರೀನಿವಾಸ ಅಯ್ಯಂಗಾರ್, ಪುಟ್ಟಣ್ಣನವರಿಂದ ಪತ್ರಿಕೋದ್ಯಮದ ದೀಕ್ಷೆ[19] ಪಡೆದು ಅನಂತರ 'ವೃತ್ತಾಂತ ಚಿಂತಾಮಣಿ', 'ಸಾಧ್ವಿ' ಹಾಗೂ ಹಲವು ಇಂಗ್ಲಿಷ್ ಪತ್ರಿಕೆಗಳನ್ನು ನಡೆಸಿದ ರಾಜಕೀಯ ಧುರೀಣರಾದ ಎಂ. ವೆಂಕಟಕೃಷ್ಣಯ್ಯ (1844–1934), 'ಆರ್ಯಕೀರ್ತಿ', 'ಭೀಷ್ಮಚರಿತೆ'ಗಳ ಕರ್ತೃ ಚ. ವಾಸುದೇವಯ್ಯ (1852-1933), ಪ್ರಗತಿಪರ ಧೋರಣೆಯ ಲೇಖಕ ಆರ್. ರಘುನಾಥರಾವ್, ಬಂಗಾಳಿಯಿಂದ ಕಾದಂಬರಿಗಳನ್ನು ಅನುವಾದಿಸಿದ ಬಿ. ವೆಂಕಟಾಚಾರ್ಯ (1845–1914) ಮುಂತಾದವರು ಹೊಸಗನ್ನಡದಲ್ಲಿ ಕಾಣಿಸಿಕೊಂಡ ಗದ್ಯದ ನಾವೀನ್ಯಕ್ಕೆ ಅಧ್ವರ್ಯುಗಳಾಗಿದ್ದವರು. ಅಲ್ಲಿಯವರೆಗೆ ತೆರವಾಗಿದ್ದ ಹೊಸಗನ್ನಡ ಗದ್ಯದ ಸ್ಥಾನವನ್ನು ಅದಕ್ಕೆ ದೊರಕಿಸಿಕೊಟ್ಟರು. ಹೊಟ್ಟೆಪಾಡಿಗಾಗಿ ಬೇರೆ ಬೇರೆ ನೌಕರಿಗಳಲ್ಲಿದ್ದು, ಇಂಗ್ಲಿಷ್ ಶಿಕ್ಷಣದಿಂದ ಹೊಸ ವಿಚಾರಗಳಲ್ಲಿ ಆಸಕ್ತಿ ಮೂಡಿಸಿಕೊಂಡು, ತಮ್ಮ ಅರಿವನ್ನು ತಮ್ಮ ಜನತೆಯಲ್ಲಿ ಹಂಚಿಕೊಳ್ಳುವ ಆತುರ ಕಾತರಗಳನ್ನು ತೋರಿದ ಈ ಮಹನೀಯರು ಹಳೆಯ ಬೇರಿಗೆ ಹೊಸ ಚಿಗುರನ್ನು ಮೂಡಿಸಿದರು.

ಸಂಸ್ಕೃತ ಕಾವ್ಯಗಳು, ನಾಟಕಗಳು ಸಂಕ್ಷಿಪ್ತವಾಗಿ ಕನ್ನಡ ಗದ್ಯರೂಪಗಳಾಗಿ ಪ್ರಕಟವಾಗುತ್ತಿದ್ದ ಧೋರಣೆ ಷೇಕ್ಸ್‌ಪಿಯರನ ನಾಟಕಗಳ (ಭಾಷಾಂತರ,ರೂಪಾಂತರಗಳಲ್ಲದೆ) ಕಥಾ ರೂಪಗಳ ಪ್ರಕಟಣೆಗಳಲ್ಲಿಯೂ ಮುಂದುವರಿಯಿತು. ಎಂ. ಎಸ್. ಪುಟ್ಟಣ್ಣ ಮತ್ತು ಎಂ. ಬಿ. ಶ್ರೀನಿವಾಸಯ್ಯಂಗಾರ್ಯರ 'ಜಯಸಿಂಹರಾಜ ಚರಿತ್ರೆ' ಷೇಕ್ಸ್‌ಪಿಯರನ 'ಸಿಂಬಿಲೈನ್'ನ ಕಥನರೂಪ. ಷೇಕ್ಸ್‌ಪಿಯರನವಲ್ಲದೆ ಇತರರ ಕೃತಿಗಳೂ ಕನ್ನಡಕ್ಕೆ ಇದೇ ರೀತಿಯಲ್ಲಿ ಬರಲಾರಂಭಿಸಿದವು. ಎಂ. ಎಲ್. ಶ್ರೀಕಂಠೇಶ ಗೌಡರು ಹೆನ್ರಿಟೇಲರನ 'ಸಿಲಿಕನ್ ಸಮ್ಮರ್' ಕೃತಿಯನ್ನು 'ಕನ್ಯಾವಿತಂತು' ಎಂದು ಸಂಕ್ಷಿಪ್ತ ರೂಪವಾಗಿ ಬರೆದರು. ಜೊತೆಗೆ ಮೇರಿಯಾ ಎಜೆವರ್ತ್‌ಳ 'ಲಿಟಲ್ ಮರ್ಚೆಂಟ್ಸ್'ನ್ನು 'ಚಿಕ್ಕ ಬಣಜಿಗರು' ಎಂದು ಕನ್ನಡಿಸಿದ್ದಾರೆ. ಇಂಗ್ಲಿಷಲ್ಲದೆ ಬೇರೆ ಭಾಷೆಗಳಿಂದಲೂ ಬಂದ ಉದಾಹರಣೆಗಳಿಗೆ ಆರ್. ನರಸಿಂಹಾಚಾರ್ಯರ 'ನಗೆಗಡಲು' ಒಂದು ಉದಾಹರಣೆ. ಜನಪದ ಕಥೆಗಳೂ ಅದೇ ರೀತಿ ರೂಪುಗೊಂಡಿದ್ದಕ್ಕೆ ಎಂ. ಎಸ್. ಪುಟ್ಟಣ್ಣನವರ 'ಪೇಟೆ ಮಾತೇನಜ್ಜಿ' (ಇದು ಒಂದು ಹಳೆಯ ಕಾವ್ಯದ ಕಥೆಯೂ ಹೌದು) ಒಂದು ಉದಾಹರಣೆ.

ಈ ಭಾಷಾಂತರ, ರೂಪಾಂತರ, ಸಂಕ್ಷಿಪ್ತ ಕಥನ ರೂಪಗಳು ಬಹು ಮುಖ್ಯವಾದ ಒಂದು ಮಜಲು. ನೂತನ ದೃಷ್ಟಿಯ ಶಿಕ್ಷಣಾಧಿಕಾರಿಗಳು ಇಂಥ ಗ್ರಂಥಗಳನ್ನು ಹಲವು ಬಾರಿ ಪಠ್ಯಗಳಾಗಿಸಿ ಪ್ರೋತ್ಸಾಹ ಕೊಟ್ಟರು. ವಿದ್ಯಾರ್ಥಿಗಳ ಅಭಿರುಚಿಗೆ ಹೊಸ ಅರಿವನ್ನು ಸೇರಿಸಿದರು. ಪತ್ರಿಕೋದ್ಯಮವಂತೂ ನಾಡುನುಡಿಗಳ ಅಭಿಮಾನ, ಹೊಸ ವಿಚಾರಗಳನ್ನು ಒಂದು ರಾಸಾಯನಿಕ ಭಾಗವನ್ನಾಗಿಸಿಕೊಂಡಿತ್ತು.

**ಭಾಷಾ ಸಂಬಂಧವಾದ ವಿಚಾರಗಳು**

ಕನ್ನಡ ಭಾಷೆ ಆಗ ಸಲ್ಲಬೇಕಾದ ಮನ್ನಣೆಗೆ ಹೊರತಾಗಿತ್ತು. ಸಂಸ್ಕೃತದ ಗರ್ಜನೆ, ಇಂಗ್ಲಿಷಿನ ಬಡಾಯಿಗಳಲ್ಲಿ ಕನ್ನಡದ ದನಿ ಹೂತುಹೋಗಿತ್ತು. ಸಂಸ್ಕೃತ ಬಲ್ಲವರಿಗೆ ಪಂಡಿತಗಿರಿ, ಇಂಗ್ಲಿಷ್ ಬಲ್ಲವರಿಗೆ ಸರಕಾರಿ ಕೆಲಸ, ಕನ್ನಡ ಮಾತ್ರ ಬಲ್ಲವರಿಗೆ ಕೆಲಸದ ಅವಕಾಶಗಳು ಕಡಿಮೆ. ಕನ್ನಡ ಎಂ. ಎ. ಮಾಡಿದರೆ 40 ರೂ.ಗಳ ಸಂಬಳ, ಬೇರೆ ಯಾವುದೇ ಎಂ. ಎ. ಮಾಡಿದರೆ 75 ರೂ.ಗಳ ಸಂಬಳ. ಕನ್ನಡ ನಾಡಿನಲ್ಲೇ ಈ ವಿಲಕ್ಷಣತೆಯಿತ್ತು. ಮದರಾಸಿನಂಥ ಹೊರನಾಡಿನಲ್ಲಿ ಇಂಟರ್ ಪರೀಕ್ಷೆಗೆ ಕನ್ನಡವನ್ನು ಐಚ್ಛಿಕ ವಿಷಯವಾಗಿ ಓದಬಹುದಾಗಿರುವಾಗ ಕನ್ನಡನಾಡಿನಲ್ಲಿ ಆ ಸಂಗತಿ ಅಸಾಧ್ಯ ಎಂಬ ವಿಲಕ್ಷಣತೆಯೂ ಇತ್ತು.[20]

ಸಂಸ್ಕೃತವನ್ನು ಬಲ್ಲ ಹಲವರಿಗೆ ಕನ್ನಡದ ಮೇಲೆ ನಿರಭಿಮಾನ. ಇಂಗ್ಲಿಷ್ ಬಲ್ಲ ಹಲವರಿಗೆ ತಾತ್ಸಾರ, ಹಲವು ವೇಳೆ ನೆರೆನುಡಿಗಳ ಒತ್ತಡಗಳೂ ಇದ್ದವು. ನಮ್ಮ ಭಾಷೆಯಲ್ಲಿನ ಸಾಧ್ಯತೆಗಳನ್ನು ದುಡಿಸಿಕೊಳ್ಳಬೇಕು, ಪರೋಪಜೀವಿಗಳಂತೆ ಬೇರೆ ಭಾಷೆಗಳಿಗೆ ಮೊರೆ ಹೋಗಬೇಕಿಲ್ಲ ; ಕನ್ನಡದಲ್ಲಿ ಯೋಚನೆ, ಕನ್ನಡದಲ್ಲಿ ಬರಹ ಎಂಬ ಆಸಕ್ತಿ ಮೂಡಬೇಕು, ಮಿಕ್ಕ ಭಾಷೆಗಳನ್ನು ನಮ್ಮ ಭಾಷೆಗೆ ಸಹಾಯಕವಾಗಿಸಿಕೊಳ್ಳಬೇಕು ಎಂಬ ಆಲೋಚನೆ ಕ್ರಮೇಣ ಮೂಡುತ್ತಾ ಬಂತು.

ಸಾಹಿತ್ಯಕ ರಂಗದಲ್ಲಿ ಆಗುತ್ತಿದ್ದ ಬದಲಾವಣೆ ಭಾಷೆಯಲ್ಲಿಯೂ ತಲೆದೋರುತ್ತಿತ್ತು. ಜಿಗುಟುತನದಿಂದ ಸಲೀಸುತನಕ್ಕೆ ಕಾಲಿಡುತ್ತಿದ್ದ ಭಾಷೆ ಅನೇಕ ದಿವ್ಯಗಳನ್ನು ದಾಟಬೇಕಿತ್ತು. ಸಂಪ್ರದಾಯ ಶರಣರು ಯಾವುದೇ ಬದಲಾವಣೆಯನ್ನು ದೂರವಿರಿಸುತ್ತಿದ್ದರು. ಹೊಸತನಕ್ಕೆ ಆದ್ಯತೆ ಕೊಡುವವರಿಗೆ ಬೆಂಬಲ ಕಡಿಮೆ ಇತ್ತು ಮತ್ತು ಅಂಥವರಲ್ಲೇ ಭಿನ್ನಾಭಿಪ್ರಾಯಗಳೂ ಇದ್ದವು. ತಾಯ್ನುಡಿಯ ಪ್ರಾಮುಖ್ಯವನ್ನರಿತವರ ಲೇಖನಗಳಲ್ಲಿ ಈ ಧಾಟಿ ಕಾಣುತ್ತಿತ್ತು.

"This is an age of great intellectual awakening in India. Thoughtful men have come to realise that our national poverty among other things is due to the ignorance that prevails among the masses about the means by which other peoples have been making rapid advancement in bettering their condition. We need not be emphatic about the fact that the surest remedy for the evil is the education of the masses. The mere elementary knowledge of the three 'R's is not enough. Ordinary scientific truths of great practical importance must be instilled into their minds. The best medium of such instruction is the vernacular of the country as spoken and written not by the learned men and the

linguistic specialists, but by the ordinary practical men of business of the present time."[21]

ಕನ್ನಡದ ಶ್ರೀಮಂತಿಕೆಯನ್ನು ಆಡುನುಡಿಯ ಜೀವಂತಿಕೆಯ ಮೂಲಕ ಉಳಿಸಿಕೊಳ್ಳುವಾಗ ಆಡುವಮಾತಿನಲ್ಲಿ ಒಂದು ಅಳತೆಗೋಲು ಅಗತ್ಯ ಎಂಬ ಭಾವನೆಯಿಂದ ಭಾಷಾವಿಷಯಕವಾದ ಚರ್ಚೆಗಳನ್ನು ಹಲವು ಸಮಿತಿಗಳು ಮಾಡಿದವು. ಕನ್ನಡ ಪಠ್ಯ ಪುಸ್ತಕಗಳಲ್ಲಿ ಪದಗಳ ಅಕ್ಷರ ಸಂಯೋಜನವು ಏಕಪ್ರಕಾರವಾಗಿರಲು ಕೆಲವು ನಿಯಮಗಳನ್ನು ಮಾಡಬೇಕೆಂದು 1892ರಲ್ಲಿ ರಚಿತವಾದ ಸ್ಪೆಷಲ್ ಸಬ್ ಕಮಿಟಿಯು[22] ಅವ್ಯವಸ್ಥಿತ ಪದಗಳ ಒಂದು ಪಟ್ಟಿಯನ್ನು ಅಚ್ಚು ಹಾಕಿಸಿ ಅಭಿಪ್ರಾಯ ಪ್ರಕಟಣೆಗಾಗಿ ಆ ಪಟ್ಟಿಯನ್ನು ಹಲವು ಪಂಡಿತರಿಗೆ ಕಳಿಸಿತು. ಬಳ್ಳಾರಿಯ ಭಾಷಾಂತರ ಸಮಿತಿಯ ಸದಸ್ಯರಾದ ಹಾಕ್, ಜೀಗ್ಲರ್, ರೈಸ್ ಹಾಗೂ ಗರಣಿ ಕೃಷ್ಣಾಚಾರ್ಯರೂ ಇತರ ಹಲವರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದ್ದಾರೆ. ಧಾರವಾಡದ ವೆಂಕಟ ರಂಗೋ ಕಟ್ಟಿ, ದೇಶಪಾಂಡೆ, ಧೋಂಡೋಪಂತರೂ ಇತರ ಹಲವರೂ ಕೂಡ ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದ್ದಾರೆ. ಹೀಗೆ ಮಾಡಿ ಅಕ್ಷರ ಸಂಯೋಜನದ ಕಾರ್ಯಕ್ಕೆ ನೆರವಾದುದನ್ನು ಸ್ಪೆಷಲ್ ಸಬ್ ಕಮಿಟಿ ಸ್ಮರಿಸಿದ್ದಲ್ಲದೆ ಮುಂದೆ ಈ ಪದಗಳ ಪಟ್ಟಿಯನ್ನು ಅಚ್ಚುಮಾಡಿತು.[23]

ಇತ್ತೀಚೆಗೆ ಬದಲಾವಣೆಯಾದ ಪದಗಳ ಹಾಗೂ ಪ್ರತ್ಯಯಗಳ ಪ್ರಾಚೀನರೂಪಗಳನ್ನು ಉಪಯೋಗಿಸುವುದು ಉತ್ತಮ ಎಂದು ಗರಣಿ ಕೃಷ್ಣಾಚಾರ್ಯರೂ, ಉಚ್ಚಾರಣೆಯಲ್ಲಿ ಸೌಲಭ್ಯ, ಅರ್ಥ ಹಾಗೂ ಅಚ್ಚಿನ ದೃಷ್ಟಿಯಲ್ಲಿ ಸ್ಪಷ್ಟತೆಗಳಿಗೆ ಮಾನ್ಯತೆ ಇರಬೇಕೆಂದು ರೈಸರೂ ಹೇಳಿದ್ದಾರೆ. ಭಾಷೆಯ ಸ್ವಾಭಾವಿಕ ಬದಲಾವಣೆಗಳು ಗ್ರಂಥಸ್ಥವಾಗುವುದನ್ನು ಹೆಚ್ಚು ಕಡಮೆ ಎಲ್ಲರೂ ಅಂಗೀಕರಿಸಿದ್ದಾರೆ.

ಕನ್ನಡದ ಬೇರೆ ಬೇರೆ ಪ್ರಾಂತಗಳ ಭಾಷಾರೂಪಗಳಲ್ಲಿ ಒಂದು ರೂಪವನ್ನು ಜಾರಿಗೆ ತಂದು ಪ್ರಾಂತಭೇದಗಳನ್ನು ಹೋಗಲಾಡಿಸಿ, ಏಕರೂಪತೆಯನ್ನು ತರುವ ಕಳಕಳಿಯ ಪ್ರಯತ್ನಗಳಲ್ಲಿ 1907ರಲ್ಲಿ ಧಾರವಾಡದಲ್ಲಿ ಆಲೂರು ವೆಂಕಟರಾಯರು ನಡೆಸಿದ ಗ್ರಂಥಕರ್ತರ ಸಮ್ಮೇಳನವೂ ಒಂದು. ಭಾಷೆಯಲ್ಲಿ ಏಕರೂಪತೆ ಹಾಗೂ ವ್ಯಾಕರಣಶುದ್ಧಿ ಇತ್ಯಾದಿ ವಿಷಯಗಳನ್ನು ಅಲ್ಲಿ ಚರ್ಚಿಸಲಾಯಿತು.

ಅನ್ಯದೇಶ್ಯಗಳನ್ನು ಪೂರ್ತಿಯಾಗಿ ಹೊರದಬ್ಬುವ ಹಂಬಲದಿಂದ ಮುಕ್ತವಾದಾಗ ಮಾತ್ರ, ಜಿಗುಟುತನದಿಂದ ಸಲೀಸುತನಕ್ಕೆ ಹೊರಳಿದಾಗ ಮಾತ್ರ ಭಾಷೆಯ ಮಿತಿಗಳು ಕಳಚಿ ಅಭಿವ್ಯಕ್ತಿಯ ವ್ಯಾಪ್ತಿ ಹೆಚ್ಚಾಗುತ್ತದೆ. ಭಾಷಾ ಪ್ರವಾಹದ ಗತಿಯನ್ನು ಅರಿತಂಥ ಜನ ಇದಕ್ಕೆ ಒಪ್ಪಿ, ಬೆಂಬಲ ಸೂಚಿಸಿದ್ದುಂಟು, ಸಂಪ್ರದಾಯ ಶರಣರಿಗೆ ಉತ್ತರಿಸಲು ಯತ್ನಿಸಿದ್ದುಂಟು.

"Another thunderbolt which the lovers of ancient forms would wish to hurl down is their great objection to the use

of foreign words This again betrays their weakness to keep pace with the advance of the times. The long Mussalman rule and the British supremacy in India, the increasing commerce and manufactures of other countries, and the daily intercourse with foreigners in different capacities etc, have among other things brought in a flood of foreign terms which are too similar, expressive, concise and handy to be conveniently substituted either by the too elaborate and learned terms from Sanskrit or by some of the vulgarities of the ancient Kannada. Provided we are earnest in keeping the paths of the learners easy, and provided we don't put extra strain upon our vocal energy, we must necessarily have easily pronounceable foreign terms in our vocabulary, and it looks too pedantic to use native expressions which will be as difficult as and sometimes more difficult than their originals."[24]

ಭಾಷಾಶುದ್ಧಿ ಎಂಬ ಮಾತೇ ಸಾಪೇಕ್ಷವಾದುದು ಎಂಬುದನ್ನು ಒಪ್ಪದೆ, ಗ್ರಂಥಗಳಲ್ಲಿ ಆಡುಮಾತಿನ ಪ್ರವೇಶಕ್ಕೆ ಒಪ್ಪದಿದ್ದವರು ಈ ಪ್ರಯತ್ನಕ್ಕೆ ತಡೆಮಾಡುತ್ತಲೇ ಇದ್ದರು. ಪಠ್ಯಗಳಲ್ಲಿಯಂತೂ ಭಾಷೆ ಆದಷ್ಟು 'ಶುದ್ಧ'ವಾಗಿರಬೇಕೆಂಬ ಧೋರಣೆ ಸಾಕಷ್ಟು ಉಗ್ರವಾಗಿಯೇ ಪ್ರಕಟವಾಗುತ್ತಿತ್ತು.

" 'ತಕ್ಕೊಂಡು', ಮೊದಲಾದ ಅಶುದ್ಧ ರೂಪಗಳು ಶುದ್ಧವಾದ ಹಾಲಿನ ಕೊಡದಲ್ಲಿಯು ಉಪ್ಪಿನ ಹರಳಿನಂತೆಯೇ ನಮಗೆ ಕಾಣುತ್ತಿರುವವು. ಕೆಲವರು 'ಹೊರ್ತು', 'ತಕ್ಕೊಂಡು', ಇತ್ಯಾದಿಗಳು 'ಹೊರತು', 'ತೆಗೆದುಕೊಂಡು' ಮೊದಲಾದವುಗಳ ಸಂಕ್ಷಿಪ್ತರೂಪಗಳೆಂದೂ ಅವು ಇರಲೇಬೇಕೆಂದೂ ವಾದಿಸುತ್ತಿರುವಂತೆ ತೋರುತ್ತದೆ. ಅಂತು ವಾದಿಸುವವರಿಗೆ ಭಾಷೆಯ ತಳಬುಡಗಳೇ ಗೊತ್ತಿಲ್ಲವೆಂದು ಹೇಳಬೇಕಾಗಿದೆ."[25]

ಆಡುಭಾಷೆ ಗ್ರಂಥಸ್ಥವಾದಾಗಿನಿಂದಲೂ ಜನಮುದ್ರೆಯನ್ನು ಪಡೆದುದರಿಂದ ಸಂಪ್ರದಾಯದ ಶೈಲಿಯ ಕೆಲವು ಅಸಹಜತೆಗಳು ದೂರವಾದುವು. ಭ್ರಮಾಸ್ಪದವಾದ ಕೃತ್ರಿಮ ಕೋಮಲ ಶೈಲಿಯನ್ನು ಮೀರಿಸಿದ್ದರಲ್ಲೂ ಅಚ್ಚರಿ ಇರಲಿಲ್ಲ. ಭಾಷೆಯ ಬಿಕ್ಕಟ್ಟುಗಳು ದೂರಹೋಗಿ, ಕ್ಲಿಷ್ಟತೆ ಕಡಿಮೆಯಾಗಿ ಲಾಲಿತ್ಯ ಕೂಡಿಕೊಂಡಿತು. ಅನ್ಯದೇಶ್ಯಗಳ ಸ್ವೀಕರಣದಿಂದ ಲೀಲಾಜಾಲ ನಡೆ ಕಸಿಯಾಯಿತು. ಇಂಗ್ಲಿಷ್ ಪದಗಳು ಸೇರಲಾರಂಭಿಸಿದ ಪ್ರಾರಂಭದಲ್ಲಿ 'ಮುನಿಸಿಪ್ಯಾಲಿಟಿ ಎಂಬ ಸಭೆಯಲ್ಲಿ' ಎಂದು ವಿವರಣಾತ್ಮಕವಾಗಿ ಇರುತ್ತಿದ್ದುದು ಅನಂತರ 'ಮುನಿಸಿಪಾಲಿಟಿಯಲ್ಲಿ ಎಂಬ ಸುಲಭವಾದ, ಈಗಾಗಲೇ ಹೊಂದಿಕೊಂಡ ಜಾಡಿಗೆ ತಿರುಗಿತು. ವಿರಾಮಚಿಹ್ನೆ, ಮುಂತಾದ

ಬರವಣಿಗೆಯ ತಾಂತ್ರಿಕ ವಿವರಗಳು ನಿಧಾನವಾಗಿ ಸುಸಂಬದ್ಧತೆಗೆ ಒಳಗಾದವು. ತಾಂತ್ರಿಕವಾದ ನ್ಯೂನತೆಗಳು ಮಾಯಾವಾಗುತ್ತ ಬಂದುವು. ಹಿಂದಿನವರ ಮಿತಿಗಳನ್ನು ಅರಿತು ಹೊಸ ಒಲವುಗಳಿಗೆ ಸ್ಪಂದಿಸಿದ್ದೇ ಈ ಕಾಲದವರ ಸಾಧನೆಯಾಗಿತ್ತು.

ವಿಷಯ ತಿಳಿದಿರುವವರಲ್ಲಿ ಅನೇಕರಿಗೆ ಭಾಷೆಯ ಹಿಡಿತವಿಲ್ಲದಿರುವುದು, ಭಾಷೆಯ ಹಿಡಿತವಿದ್ದವರಿಗೆ ಹಲವು ಬಾರಿ ವಿಷಯವೇ ತಿಳಿಯದಿರುವುದು ಎಲ್ಲ ಕಾಲಕ್ಕೂ ಬೇರೆ ಬೇರೆ ಪ್ರಮಾಣಗಳಲ್ಲಿ ಕಾಣುವ ತೊಂದರೆಯೇ. ಎರಡೂ ತಕ್ಕ ಮಟ್ಟಿಗೆ ಇರುವ ಲೇಖಕರು ಕೂಡ ಹಲವುಬಾರಿ 'ಜೀರ್ಣ ಮಂಗೇ ಸುಭಾಷಿತಂ' ಎಂಬಂತೆ ಮೂಲೆಗೊತ್ತರಿಸಲ್ಪಡುತ್ತಾರೆ. ಶಕ್ತ ಲೇಖಕರಿಗೆ ಪ್ರೋತ್ಸಾಹ ಕೊಡುವುದ ರಿಂದ ಮಾತ್ರ ಸ್ವಲ್ಪಮಟ್ಟಿಗೆ ಈ ಪರಿಸ್ಥಿತಿಯನ್ನು ಸುಧಾರಿಸಬಹುದು, ಕಾವ್ಯರಚ ನೆಯ ಶಕ್ತಿಯಿಲ್ಲದೆ ಪದ್ಯ ಹೊಸೆಯುವವರಿಂದಲೂ, ಜಿಗುಟು ಗದ್ಯದಲ್ಲಿ ತಮ್ಮ ಶಕ್ತಿಯನ್ನು ವ್ಯಯಮಾಡುವವರಿಂದಲೂ, ಗದ್ದಲದಿಂದ ಕೂಡಿದ ಆಡಂಬರದ ಭಾಷಾಂತರಗಳಿಂದಲೂ ಯಾವ ಪ್ರಯೋಜನವೂ ಇಲ್ಲ, ಹೊಸಗನ್ನಡದ ತಿರುಳು ಶೈಲಿಯಲ್ಲಿ ಬರೆಯಬಲ್ಲ ಲೇಖಕರಿಗೆ ಪ್ರಶಸ್ತಿಗಳ ಮೂಲಕ ಪ್ರೋತ್ಸಾಹಿಸಬೇಕು ಎಂಬ ಮಾತು ಕೇಳಿಬರುತ್ತಿತ್ತು.[26]

ಈ ಎಲ್ಲ ರಭಸದ ವಾದವಿವಾದಗಳ ನಡುವೆ ಕನ್ನಡ ಭಾಷೆಯ ಬೆಳವಣಿಗೆ, ಶುದ್ಧಾಶುದ್ಧ ನಿರ್ಣಯ, ಆಡುಮಾತನ್ನು ಬರವಣಿಗೆಗೆ ತರುವ ಪ್ರಯತ್ನ ಇವುಗಳಿಗೆ ಅರಮನೆಯ ಆಸ್ಥಾನದಲ್ಲಿದ್ದ ವಿದ್ವಾಂಸರ ಸಂಬಂಧ ಬಂತು. ಪ್ರಭುತ್ವ ಕೈಹಿಡಿದ ಕೆಲಸ ಕೈಗೂಡದೇ ಏನಾದೀತು ? ಹಳೆಯ ಮೈಸೂರಿನ ಭಾಷೆ ಹಲವು ಕಡೆ ಬೇರೂ ರಲು ಮೈಸೂರಿನ ರಾಜಾಸ್ಥಾನದ ಬೆಂಬಲ ಒದಗಿದ್ದು ಮುಖ್ಯ ಕಾರಣ. ಮುಂದೆ ವಿಶ್ವವಿದ್ಯಾನಿಲಯಗಳು, ಕನ್ನಡಸಾಹಿತ್ಯ ಪರಿಷತ್ತುಗಳಿಗೆ ಪ್ರಮುಖ ಪೋಷಣೆಯನ್ನು ರಾಜಾಸ್ಥಾನವೇ ಒದಗಿಸಿದ್ದುದರಿಂದ ಅಲ್ಲಿಯೂ ಮತ್ತು ಈ ಭಾಗಗಳ ಪ್ರಮುಖ ಪತ್ರಿಕೆಗಳಲ್ಲೂ ಇದೇ ಕನ್ನಡ-ಮೈಸೂರು, ಶ್ರೀರಂಗಪಟ್ಟಣ, ನಂಜನಗೂಡು, ಚಾಮ ರಾಜನಗರಗಳ ಕನ್ನಡ–ನೆಲೆಗೊಳ್ಳಲು ರಾಜಾಸ್ಥಾನದ ಅಭಯ ಮುದ್ರೆಯೇ ಕಾರಣ ವಾಯಿತು.

**ಮಿಶನರಿಗಳ ಹಾಗೂ ಇಂಗ್ಲಿಷ್ ಅಧಿಕಾರಿಗಳ ಸೇವೆ**

ಮಿಶನರಿಗಳ ಆಗಮನ ಮೂಲತಃ ಮತಪ್ರಸಾರದ ದೃಷ್ಟಿಯಿಂದಲಾದರೂ ಅನಂತರ ಅವರು ಆನುಷಂಗಿಕವಾಗಿಯಾದರೂ ಮಾಡಿದ ನಾಡನುಡಿಗಳ ಮೇಲ್ಮೆಯ ವಿಚಾರವನ್ನು ಕಡೆಗಣಿಸಲಾಗದು. ತಮ್ಮ ಧರ್ಮದ ಪ್ರಸಾರಕ್ಕಾಗಿ ಬಂದ ಅವರು ಇಲ್ಲಿನ ದೇಶಭಾಷೆಗಳನ್ನು ಕಲಿತರು, ಮುದ್ರಣಾಲಯವನ್ನು ಸ್ಥಾಪಿಸಿದರು, ಗ್ರಂಥೋ ದ್ಯಮದಲ್ಲಿ ದುಡಿದರು, ಶಾಸನ ಸಂಗ್ರಹ, ಜನಪದ ಸಾಹಿತ್ಯ ಸಂಗ್ರಹ,ಗ್ರಂಥ ಪ್ರಕಟನೆ, ಭಾಷಾಬೋಧನೆ ಈ ಎಲ್ಲ ರಂಗಗಳಲ್ಲೂ ಮನಃಪೂರ್ವಕ ಸೇವೆ ಸಲ್ಲಿಸಿದರು.

ಹತ್ತೊಂಬತ್ತನೆಯ ಶತಮಾನದ ವೇಳೆಗೇ ಗೋವಾದ ಜೆಸುಯಿಟ್ ಪಾದ್ರಿಗಳು, ಲಂಡನ್, ವೆಸ್ಲಿಯನ್ ಮತ್ತು ಬಾಸೆಲ್ ಮಿಶನರಿಗಳು ಭಾರತದ ವಿವಿಧ ಪ್ರದೇಶ ಗಳಲ್ಲಿ ಬಲವಾಗಿ ಬೇರೂರಿ ಅದ್ಭುತವಾದ ಪ್ರಗತಿಯನ್ನು ಸಾಧಿಸಿದ್ದರು. ಅಪಾರವಾದ ತಾಳ್ಮೆ, ಕಷ್ಟಸಹಿಷ್ಣುತೆ, ಮತಾಭಿಮಾನ, ಕಾರ್ಯಮಗ್ನತೆ, ದೃಢ ಮನಸ್ಸುಗಳು ಅವರುಗಳ ಮುಖ್ಯ ಗುಣಗಳಾಗಿದ್ದವು. ಪ್ರಾರಂಭದ ಕಾರ್ಯಕರ್ತರಲ್ಲದೆ, ಮತೀಯ ಗ್ರಂಥಗಳನ್ನು, ಪಠ್ಯಪುಸ್ತಕ ರಚನೆಗಳನ್ನು ಮಾಡಿದ ಬೆಂಜಮಿನ್ ರೈಸ್, ಗ್ರಂಥೋ ದ್ಯಮ ಹಾಗೂ ಪತ್ರಿಕೋದ್ಯಮಗಳಲ್ಲಿ ದುಡಿದ ಮೊಗ್ಲಿಂಗ್ ಹಾಗೂ ವೈಗಲ್, ಶಾಸನ ಸಂಗ್ರಹ ಮಾಡಿದ ಲೂಯಿರೈಸ್, ಇಂಗ್ಲಿಷಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ ಇ.ಪಿ. ರೈಸ್, ಕನ್ನಡ – ಇಂಗ್ಲಿಷ್ ನಿಘಂಟುಗಳನ್ನು ರಚಿಸಿದ (ಬೇರೆಬೇರೆಯಾಗಿ) ರೀವ್ ಮತ್ತು ಗ್ಯಾರೆಟ್, ಶಬ್ದಮಣಿದರ್ಪಣ ಮತ್ತು ಛಂದೋಂಬುಧಿಗಳ ಸಂಪಾದನೆ ಹಾಗೂ ಕನ್ನಡ – ಇಂಗ್ಲಿಷ್ ನಿಘಂಟಿನ ಕಿಟೆಲ್ ಇವರೆಲ್ಲರ ಹೆಸರುಗಳು ಶಾಶ್ವತವಾಗಿ ಕನ್ನಡಕ್ಕಾಗಿ ದುಡಿದವರಲ್ಲಿ ಗಣಿಸುವಂತಹವು.

ಅನೇಕ ಅಧಿಕಾರಿಗಳು ಇವರೊಡನೆ ದುಡಿದರು. ಲೂಯಿರೈಸ್ ಹಾಗೂ ಜೆ.ಎಫ್. ಫ್ಲೀಟರ ಹೆಸರು ಜೊತೆಜೊತೆಯಾಗಿ ನೆನಪಿಗೆ ಬರುವಂಥವು. ಶಿಕ್ಷಣ ಇಲಾಖೆ ಮತ್ತು ಪುರಾತತ್ವ ವಿಭಾಗಗಳ ಅನುಭವ ಶೇಷಾದ್ರಿ ಅಯ್ಯರ್‌ರಂಥ ದಿವಾನರ ಪ್ರೋತ್ಸಾಹ ಮತ್ತು ಆರ್. ನರಸಿಂಹಾಚಾರ್ಯರಂಥ ಮೇಧಾವಿಗಳ ಪರಿಶ್ರಮದ ಬೆಂಬಲಗಳಿಂದ ರೈಸರ ಕಾರ್ಯಕ್ಷೇತ್ರ ವಿಸ್ತಾರವಾಗಿತ್ತು. ಕರ್ಣಾಟಕದ ಸಮಗ್ರ ಇತಿಹಾಸಕ್ಕೆ ಆಧಾರವಾದ ಶಾಸನಸಂಗ್ರಹ ಉಂಟಾಯಿತು. ಫ್ಲೀಟರಿಂದ ಜನಪದ ಸಾಹಿತ್ಯ ಸಂಗ್ರಹದ ಕಾರ್ಯವು ನಡೆಯಿತು.

ಮಿಶನರಿಗಳ ಈ ಸೇವೆ ಸಮಾನಾಂತರವಾದ ಇನ್ನೊಂದು ಆಯಾಮ ದೊರೆ ಕೊಳ್ಳುವುದಕ್ಕೆ ಕೂಡ ಕಾರಣವಾಯಿತು. ವಿದೇಶೀಯರ ಕೆಲಸವನ್ನು ನೋಡಿ ದೇಶೀ ಯರ ಪ್ರಜ್ಞೆಗೆ ಹುರುಪು ಉಂಟಾಯಿತು. ಜೊತೆಗೆ ಮತಾಂತರ ಕಾರ್ಯಕ್ಕೆ ವಿರುದ್ಧ ಬಂಡೆದ್ದುದರಿಂದ ಕೂಡ ದೇಶೀಯರ ಕಾರ್ಯ ಮೊದಲಾಯಿತು. ಆಕ್ರಮಣಕಾರಿ ಯಾದ ಒಂದು ವಿಚಾರಕ್ಕೆ ಧಾರ್ಮಿಕವಾಗಿ ಒಂದಾದ ಜನಾಂಗದ ಪ್ರತಿಕ್ರಿಯೆ ಅದು. ಗಾಂಧೀಜಿಯ ಸ್ವರಾಜ್ಯ ಸ್ಥಾಪನೆಗೆ ಕೂಡ ರಾಮನಾಮದ ಪಠನ, ಭಗವದ್ಗೀತಾ ವಾಚನ ಬೆಂಬಲವಾಗಿದ್ದುವು. ಜನಸಾಮಾನ್ಯರಿಗೆ ಪ್ರಾರಂಭದ ಆಕರ್ಷಣೆಗಳಾಗಿದ್ದುವು. ಅದೇ ರೀತಿ ಪಾದ್ರಿಗಳ ವಿರುದ್ಧ ದನಿಯೆತ್ತಿದುದರಿಂದ ದೇಶೀಯರ ಮುದ್ರಣ ಹಾಗೂ ಗ್ರಂಥ ಪ್ರಕಾಶನ ಸಾಹಸಗಳಿಗೆ ಒಂದು ಜನಾಂಗದ ಬೆಂಬಲ ಒಟ್ಟಿಗೇ ದೊರಕಿತು. ದೇಶ ಪ್ರೇಮ ಧರ್ಮಗಳು ಹೊಸೆದು ಬೆಸೆದುಕೊಂಡಿದ್ದುದರಿಂದ ಈ ಪ್ರತಿಕ್ರಿಯೆ ಕೂಡಲೇ ದಕ್ಕಿತು. ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ದಿನಕ್ರಮೇಣ ಮೆಚ್ಚುಗೆ, ಪಾದ್ರಿಗಳಿಗೆ ದೊರೆಯುತ್ತಿದ್ದ ಮನ್ನಣೆ ಇವುಗಳಿಂದ ನಾಡಿನ, ಆರ್ಷೇಯ ಸಂಪ್ರದಾಯದ ಆರಾಧಕರು ಮುಯ್ಯಿ ತೀರಿಸಿಕೊಳ್ಳಲೋ ಎಂಬಂತೆ ನಾಡುನುಡಿಗಳ ವಿಚಾರದಲ್ಲಿ

ಶ್ರದ್ಧೆ ತೋರಿದರು. ಪ್ರಾಚೀನ ಕಾವ್ಯಗಳ ಸಂಪಾದನೆ, ಪ್ರಕಟಣೆಗಳ ಕಾರ್ಯ ಭರದಿಂದ ನಡೆಯಿತು. ಅಲ್ಲಲ್ಲಿ ನಡೆದ ಬುದ್ಧಿಪೂರ್ವಕವಾದ ವೈಯಕ್ತಿಕ ಮತಾಂತರಗಳೂ ಯಾವುದೋ ಒತ್ತಾಸೆಗೆ ಸಿಲುಕಿ ನಡೆಯುತ್ತಿದ್ದ ಸಾಮೂಹಿಕ ಮುಖಾಂತರಗಳೂ ಈ ಈ ಕೆರಳುವಿಕೆಗೆ ಕಾರಣವಾಗಿದ್ದುವು.

## ಪತ್ರಿಕೋದ್ಯಮ

ಪತ್ರಿಕೋದ್ಯಮಕ್ಕೆ ಮಿಶನರಿಗಳ ಸೇವೆ ಮರೆಯಲಾರದಂಥದು. ಹಲವು ದೇಶ ಭಾಷೆಗಳಲ್ಲಿ ಅವರೇ ಮೊದಲಿಗರು. ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' 1843 ರಿಂದ ಹರ್ಮನ್ ಮೊಗ್ಲಿಂಗ್‌ನ ಸಂಪಾದಕತ್ವದಲ್ಲಿ ಪ್ರಾರಂಭವಾಗಿ 1844ರಿಂದ 'ಕಂನಡ ಸಮಾಚಾರ' ಎಂಬ ಹೆಸರಿನಿಂದ ಬಳ್ಳಾರಿಯಿಂದ ಹೊರಟಿತು. ಈ ಪತ್ರಿಕೆ ಬಹುದಿನ ನಡೆಯಲಿಲ್ಲ.

ಅನಂತರ ಮಿಶನರಿಗಳಿಗೆ ಸವಾಲೋ ಎಂಬಂತೆ 'ಸುಬುದ್ಧಿ ಪ್ರಕಾಶ' ಎಂಬ ಪತ್ರಿಕೆ ಬೆಳಗಾವಿಯಿಂದ 1849ರಲ್ಲಿ ಹೊರಟಿತು. "ಮುಂದೆ ಕೆಲವೇ ವರ್ಷಗಳಲ್ಲಿ ದೇಶೀಯರು ಪತ್ರಿಕಾರಂಗದಲ್ಲಿ ಕಾಲಿರಿಸಿದುದು ಅಚ್ಚರಿಯೆನಿಸುವಂತಿದೆ. ವಿದೇಶದಿಂದ ಬಂದ ಮಿಶನರಿಗಳು ಮುದ್ರಣ ಸೌಲಭ್ಯವನ್ನು ಹೊಂದಿದವರಾಗಿ ಪತ್ರಿಕೆ ಹೊರಡಿಸಿದ್ದರೆ ಅದು ನ್ಯಾಯವಾದುದೇ. ಆದರೆ ಮರಾಠಿಯ ಪ್ರಭಾವದಲ್ಲಿದ್ದುಕೊಂಡು ಕನ್ನಡ ಸಾರಸ್ವತವಾಗಲೀ ವಾಚಕವೃಂದವಾಗಲೀ ಸೃಷ್ಟಿಯಾಗಿರದಿದ್ದಾಗ ದೇಶೀ ಮುದ್ರಣವು ನೆಲೆಗೊಂಡಿರದಿದ್ದಾಗ ಬೆಳಗಾವಿಯಿಂದ ಕನ್ನಡ ಪತ್ರಿಕೆಯೊಂದನ್ನು ಹೊರಡಿಸಲೆಳಸಿದುದು ಸಾಹಸದ ಮಾತೇ ಸರಿ. ಅಷ್ಟೇ ಅಲ್ಲ, ಅದನ್ನು ಕನಿಷ್ಠ 6 ವರ್ಷಗಳವರೆಗಾದರೂ ನಡೆಸಿಕೊಂಡು ಬರಲಾಯಿತು."[27] ಬಹುಶಃ ಇದಕ್ಕೆ ಕಾರಣ ಹಿಂದೆ ಹೇಳಿದಂತೆ ಧಾರ್ಮಿಕವಾಗಿ ಸಿಡಿದೆದ್ದ ಹಾಗೂ ಪಾದ್ರಿಗಳ ಪ್ರಭಾವಕ್ಕೆ ಕೊಟ್ಟ ಉತ್ತರವೇ ಎನಿಸುತ್ತದೆ.

ಮೊಗ್ಲಿಂಗ್ ಪುನಃ 'ಕಂನಡ ವಾರ್ತಿಕ' ಎಂಬ ಪತ್ರಿಕೆಯನ್ನು 1857ರಿಂದ ಪ್ರಾರಂಭಿಸಿದನು. 1859ರಿಂದ 'ಮೈಸೂರು ವೃತ್ತಾಂತ ಬೋಧಿನಿ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದ ಭಾಷ್ಯಂ ತಿರುಮಲಾಚಾರ್ಯರು ಮತ್ತು ಭಾಷ್ಯಾಚಾರ್ಯರು 1864ರಲ್ಲಿ ಅದು ನಿಂತಮೇಲೆ 1865ರಿಂದ 'ಕರ್ನಾಟಕ ಪ್ರಕಾಶಿಕಾ' ಪಕ್ಷ ಪತ್ರಿಕೆಯನ್ನು ಪ್ರಾರಂಭಿಸಿದರು. ಸ್ವಲ್ಪ ಕಾಲ ನಿಂತು ಅದು ಮುಂದೆ ವಾರಪತ್ರಿಕೆಯಾಗಿ ಹೊರಟಿತು. ಧಾರವಾಡದಿಂದ 1861ರಿಂದ 'ಜ್ಞಾನ ಬೋಧಕ' ಹೊರಟಿತು. ಬೆಂಗಳೂರಿನಿಂದ 1862ರಿಂದ 'ಅರುಣೋದಯ' ಮಾಸಪತ್ರಿಕೆ ಕೆಲವು ಕಾಲ ನಡೆದು, ನಿಂತು, 1866 ರಲ್ಲಿ ಪುನಃ ಪ್ರಾರಂಭವಾಯಿತು.

1866ರಲ್ಲಿ ಮೈಸೂರು ಗೆಜೆಟ್ ಪ್ರಾರಂಭವಾಯಿತು. ಮೊದಲ ಸಂಚಿಕೆ 1866ರ ಏಪ್ರಿಲ್ 7 ರಿಂದ ಪ್ರಾರಂಭವಾಯಿತು. ಎಲ್. ರಿಕೆಟ್ಸ್ ಇದರ ಸಂಪಾದಕರು. ಮೊದಲು ಅದಕ್ಕೂ ಸರ್ಕಾರಕ್ಕೂ ಸಂಬಂಧವಿರಲಿಲ್ಲ. 1867ರಲ್ಲಿ ಗೆಜೆಟ್

ಮೈಸೂರು ಸರಕಾರದ ಅಂಗವಾಗಿ, ಸರಕಾರದ ಆಜ್ಞೆಯ ಪ್ರಕಾರ ಪ್ರಕಟವಾಗಲು ಮೊದಲಾಯಿತು. 1869 ರಿಂದ ಮುದ್ರಣಶಾಲೆಯ ಅಧ್ಯಕ್ಷರೇ ಗೆಜೆಟ್‌ನ ಸಂಪಾದಕರೂ ಆದರು. "ಇಂದಿನದು ಕೇವಲ ಸರಕಾರೀ ಪ್ರಕಟನೆಗಳನ್ನೊಳಗೊಂಡು, ಸರಕಾರೀ ಕಚೇರಿಗಳವರು, ಕಂಟ್ರಾಕ್ಟರರು ಇವರಿಗೆ ಮಾತ್ರ ಸೀಮಿತವಾಗಿದ್ದರೆ, ಅಂದಿನದು ಇಂಥ ಪ್ರಕಟನೆಗಳ ಜೊತೆಗೆ ಇತರ ಪ್ರಾಸಂಗಿಕ ವಾರ್ತೆಗಳನ್ನೂ ಒಳಗೊಂಡು ಹೆಚ್ಚು ವಾಚನೀಯವಾಗಿದ್ದಿತು "[28] ಎಂಬ ಮಾತಿಗೆ ಮೊದಲಿಲ್ಲದ, ಸರ್ಕಾರದ ಸಂಬಂಧ ಅನಂತರ ಒದಗಿದ್ದುದೇ ಕಾರಣ.

ಬೆಂಗಳೂರಿನ 'ಹಿತಬೋಧಿನಿ' ಮಾಸಪತ್ರಿಕೆ (1883)[29], ಧಾರವಾಡದ 'ಚಂದ್ರೋದಯ' ವಾರಪತ್ರಿಕೆ (1883), ಅದೇ ಸುಮಾರಿನಲ್ಲಿ ಹೊರಟ ಮುಂಬಯಿಯ 'ಕನ್ನಡ ಸುವಾರ್ತೆ' ಹಾಗೂ 'ಹವ್ಯಕ ಸುಬೋಧ' ಸಾಪ್ತಾಹಿಕ (1885) ಹೊಸ ಹಾದಿಯನ್ನು ತುಳಿದ ಪತ್ರಿಕೆಗಳು. 'ವೃತ್ತಾಂತ ಚಿಂತಾಮಣಿ' ವಾರಪತ್ರಿಕೆ (1887), ಎಂ. ವೆಂಕಟಕೃಷ್ಣಯ್ಯನವರು ಸ್ವತಂತ್ರವಾಗಿ ಹೊರಡಿಸಿದ ಮೊದಲ ಪತ್ರಿಕೆ. ಜಿ. ಟಿ. ಎ. ರವರ 'ಕರ್ಣಾಟಕ ಗ್ರಂಥಮಾಲೆ', ಅನೇಕ ಹೊಸ ಗದ್ಯಕೃತಿಗಳನ್ನೂ ಭಾಷಾಂತರಗಳನ್ನೂ ಹೊರತಂದಿತು. ಅನೇಕ ಲೇಖಕರು ಬೆಳಕಿಗೆ ಬಂದರು. 'ಕರ್ಣಾಟಕ ಕಾವ್ಯಮಂಜರಿ' 'ಕರ್ಣಾಟಕ ಕಾವ್ಯ ಕಲಾನಿಧಿ'ಯ ಮೂಲಕ ಎಂ. ಎ. ರಾಮಾನುಜಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಅವರು ಹಲವು ಹಳಗನ್ನಡ ಕೃತಿಗಳನ್ನು ಬೆಳಕಿಗೆ ತಂದರು. ಕರ್ಣಾಟಕ ವಿದ್ಯಾವರ್ಧಕ ಸಂಘ 'ವಾಗ್ಭೂಷಣ' ಪತ್ರಿಕೆಯ ಮೂಲಕ ಹಲವು ಹೊಸ ಲೇಖಕರನ್ನು ಬೆಳಕಿಗೆ ತಂದಿತು.

'ಕರ್ಣಾಟಕ ವಾಣಿವಿಲಾಸ' 1888ರಲ್ಲಿ ಮಹಿಳೆಯರಿಗಾಗಿ ಮತ್ತು ವಿದ್ಯಾರ್ಥಿನಿಯರಿಗಾಗಿ ಪ್ರಾರಂಭವಾಯಿತು. 'ಸ್ತ್ರೀ ವಿದ್ಯಾಭಿಮಾನಿ'ಯೂ ಇದೇ ದೃಷ್ಟಿಯನ್ನಿಟ್ಟುಕೊಂಡು ಪ್ರಾರಂಭವಾದರೂ ಮುಂದುವರೆಯಲಿಲ್ಲ. ಎಂ. ಶಾಮರಾಯರು ಪ್ರಾರಂಭಿಸಿದ 'ವಿದ್ಯಾದಾಯಿನಿ' 1893 ರಿಂದ ಪ್ರಾರಂಭವಾಗಿ ಉತ್ತಮ ಮಟ್ಟದ ಲೇಖನಗಳನ್ನು ಒದಗಿಸಿತು.

ಪ್ರಾರಂಭದ ಪತ್ರಿಕಾಕರ್ತರು ಜನಾಂಗದ ತಿಳುವಳಿಕೆಗೆ ಮೊದಲ ಗಮನವನ್ನು ನೀಡಿದರು. ಧಾರ್ಮಿಕವಾದ ಒತ್ತು, ಶೈಕ್ಷಣಿಕ ಉದ್ದೇಶಗಳು ಅದರ ಲಕ್ಷ್ಯಗಳಾಗಿದ್ದುವು. ಪತ್ರಿಕೆಗಳಿಂದ ಜನಸಾಮಾನ್ಯರಿಗೂ ಸಾಹಿತ್ಯಭಾಷೆಗಳಿಗೂ ಸಂಪರ್ಕಸೇತು ಏರ್ಪಟ್ಟಿತು. ಬರಹಗಾರರಿಗೆ ಕೂಡ ಒಂದು ಹೊಸ ವೇದಿಕೆ ಸಿಕ್ಕಿತು. ಪಂಡಿತರ ಒಪ್ಪಿಗೆಯ ಮುದ್ರೆಗೆ ಕಾಯುವುದಕ್ಕಿಂತ ಜನರ ಒಪ್ಪಿಗೆಯ ಮುದ್ರೆ ಆಗಿಂದಾಗ ಸಿಕ್ಕಿ ರಾಜನ ಕುದುರೆ ಲಾಯದಲ್ಲಿ ಮುಪ್ಪಾಗುವ ಸ್ಥಿತಿ ತಪ್ಪಿತು. ರಾಜಾಸ್ಥಾನದ ಅವಲಂಬನೆ ಅನಿವಾರ್ಯವಾಗಿ ಉಳಿಯಲಿಲ್ಲ. ಜನತೆಯ ಪ್ರಾಶಸ್ತ್ಯ—ಮಧ್ಯಮ ವರ್ಗದ ಪ್ರಾಶಸ್ತ್ಯ—ಮೇಲೇರಿತು.

ಪತ್ರಿಕಾ ಮಾಧ್ಯಮ ಇಂದಿನಂತೆ ಅಂದೂ ಒಳಗೊಳ್ಳದ ವಿಚಾರವಿರಲಿಲ್ಲ. ಕಾಲ ವ್ಯಯ ತಪ್ಪಿ ಗ್ರಂಥ ಪ್ರಸಾರ, ವಿಷಯ ಪ್ರಸಾರ ಎಲ್ಲೆಡೆ ತಲುಪಿತು. ಶೀಘ್ರ ಪ್ರಸಾರ ದಿಂದ ಅಳಿಯುವ ಉಸಿರು ಚೇತನ ಕೂಡಿಸಿಕೊಂಡಿತು. ಜನಸಾಮಾನ್ಯರಿಗೆ ದೇಶದ, ಜಗತ್ತಿನ ಆಗುಹೋಗುಗಳು ಪರಿಚಿತವಾದುವು, ಕತ್ತಲಿದ್ದ ಕಡೆ ಬೆಳಕು ಚೆಲ್ಲಿತು.

ಪತ್ರಿಕೆಗಳಿಂದ ಗದ್ಯದ ಮುನ್ನಡೆಗೂ ಸಹಾಯವಾಯಿತು. ಸುದ್ದಿಗಳ ಭಾಷಾಂತರ ಅನಿವಾರ್ಯವಾಯಿತು. ಆಂಗ್ಲಭಾಷೆಯ ಅನುಕರಣ, ಅಲ್ಲಿಯದೇ ಪದ ಪುಂಜಗಳು ಕನ್ನಡದಲ್ಲಿ ರೂಪುಗೊಂಡವು. ಶಿಷ್ಟ ಕನ್ನಡ ಬೆಳೆಯಿತು. ವಾಕ್ಯರಚನೆ ಹೊಸ ಹೊಸ ಅಚ್ಚುಗಳನ್ನು ಪಡೆಯಿತು. ಹುಲುಸಾದ ಬೆಳೆಯಲ್ಲಿ ಶಕ್ತಿ, ಕೆಚ್ಚುಗಳು ಕೂಡುತ್ತಾ ಬಂದು, ಅದು ರಸವತ್ತಾಯಿತು. ಆದರೆ ಈ ರಭಸದಲ್ಲಿ ಕನ್ನಡದ ಶ್ರೀಮಂತ ನುಡಿಗಟ್ಟು ಮಾತ್ರ ಹಿಂದೆ ಸರಿಯುತ್ತಾ ಬಂದಿತು. ಇಂಗ್ಲಿಷ್ ವಾಕ್ಯ ರಚನೆಯ ಅನುಕರಣ ಮತ್ತು ವರ್ತಮಾನ ಪತ್ರಿಕೆಗಳ ಅನಿವಾರ್ಯಗುಣವಾದ ಆತುರ ಗಳು ಈ ಸ್ಥಿತಿಗೆ ಕಾರಣ. ಆದರೆ ಬರವಣಿಗೆಗೆ ಒಂದು ಹೊಸ ಹೊಗರು, ನಿರ್ದಿಷ್ಟತೆ, ನಯನಾಜೂಕುಗಳು, ಅಚ್ಚುಕಟ್ಟು ಹಾಗೂ ಜಿಗುಟಿಲ್ಲದ ಬಿಗಿಯಾದ ಶೈಲಿ ಇವುಗಳು ಒದಗಿದವು. ಸಾಮಾನ್ಯ ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡದ್ದರಿಂದ ಪಂಡಿತ ಶೈಲಿ ವರ್ಜ್ಯವಾಯಿತು, ಜನಪ್ರಿಯತೆಯ ಗುಣ ಒಂದು ಅಳತೆಗೋಲಾಯಿತು.

**ಇತರ ಕಡೆಗಳಲ್ಲಿ**

ಮೈಸೂರು, ಹೈದರಾಬಾದು, ಮದ್ರಾಸ್ ಹಾಗೂ ಮುಂಬಯಿ ಪ್ರಾಂತಗಳಲ್ಲಿ ಕನ್ನಡ ಪ್ರದೇಶಗಳು ಹಂಚಿಹೋಗಿದ್ದವು. ಪುಟ್ಟಣ್ಣನವರ ಕಾರ್ಯಕ್ಷೇತ್ರವಾಗಿದ್ದ ಹಳೆಯ ಮೈಸೂರಿನ ಹಲವು ರಂಗಗಳ ಚಟುವಟಿಕೆಗಳನ್ನು ಈ ಹಿಂದೆ ತಿಳಿಸಲಾಗಿದೆ. ಹೈದರಾಬಾದಿಗೆ ಸೇರಿದ ಕನ್ನಡ ಪ್ರದೇಶಗಳಲ್ಲಿ ಕನ್ನಡದ ಕೆಲಸ ಬಹಳ ಹಿಂದುಳಿದಿತ್ತು. ಮದ್ರಾಸಿನ ಭಾಗವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಕ್ಕಮಟ್ಟಿನ ಕೃಷಿ ನಡೆದಿತ್ತು. ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' (1899), ಬೋಳಾರ ಬಾಬೂ ರಾಯರ 'ವಾಗ್ದೇವಿ' (1905), ಗುಲವಾಡಿ ಅಣ್ಣಾಜಿರಾಯರ 'ರೋಹಿಣಿ' (1906) ಮೂರೂ ಕಾದಂಬರಿಗಳು ದಕ್ಷಿಣ ಕನ್ನಡ ಜಿಲ್ಲೆಯವೇ. ಅಲ್ಲದೆ ಮಿಶನರಿ ಗಳ ಪ್ರೋತ್ಸಾಹದಿಂದ ಇಲ್ಲಿ ಪತ್ರಿಕಾ ವ್ಯವಸಾಯ ಹಾಗೂ ಗ್ರಂಥ ಪ್ರಕಟನೆಗಳು ಭರದಿಂದ ಸಾಗಿದ್ದವು; ಪೇಶ್ವೆಯವರ ಆಡಳಿತಕ್ಕೆ ಒಳಗಾಗಿದ್ದ ಮುಂಬಯಿ ಕರ್ನಾಟಕ ದಲ್ಲಿ ಮರಾಠಿ ಪ್ರಾಬಲ್ಯ ತುಂಬಿತ್ತು. ಧಾರವಾಡದ ವಿದ್ಯಾಧಿಕಾರಿಯಾದ ರಸೆಲ್ ಅವರಿಂದ ಮರಾಠಿ ಬಳಕೆ ಹಿಂದೆ ಸರಿದು ಆ ಸ್ಥಾನದಲ್ಲಿ ಕನ್ನಡದ ಪುನಃಪ್ರತಿಷ್ಠಾಪನೆ ಯಾಯಿತು. ಧಾರವಾಡದಲ್ಲಿ 1856ರಲ್ಲಿ ಸ್ಥಾಪಿತವಾದ ನಾರ್ಮಲ್ ಸ್ಕೂಲಿನ ಪಾತ್ರ ಕನ್ನಡದ ಕೈಂಕರ್ಯದಲ್ಲಿ ಸ್ಮರಣೀಯವಾದುದು. ಡೆಪ್ಯುಟಿ ಚನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಹುಯಿಲಗೋಳ ಭುಜಂಗರಾವ್ ಅವರುಗಳು ಇಲ್ಲಿನ ಕನ್ನಡದ

ಮುನ್ನಡೆಗೆ ಕಾರಣರಾದರು. ಮುಂದೆ ಟ್ರೈನಿಂಗ್ ಸ್ಕೂಲು ಟ್ರೈನಿಂಗ್ ಕಾಲೇಜಾಗಲು ರಸೆಲ್ಲರೇ ಕಾರಣರಾದರು.

ಇತಿಹಾಸ ಗ್ರಂಥಗಳ ರಚನೆಯಲ್ಲಿ ಮರೆಯಲಾಗದ ಹೆಸರಾದ ರಾ. ಹ. ದೇಶ ಪಾಂಡೆಯವರು 1890ರಲ್ಲಿ ಸ್ಥಾಪಿಸಿದ ಕರ್ಣಾಟಕ ವಿದ್ಯಾವರ್ಧಕ ಸಂಘ ಕನ್ನಡದ ಯಾವುದೇ ಕೆಲಸಕ್ಕೂ ವೇಗವರ್ಧಕವಾಗಿ ಕೆಲಸ ಮಾಡಿತು. ಭಾಷಣ, ಲೇಖನಗಳ ಸ್ಪರ್ಧೆ, 1896 ರಿಂದ 'ವಾಗ್ಭೂಷಣ' ನಿಯತಕಾಲಿಕೆಯ ಪ್ರಾರಂಭ, ಇತರ ಹಲವು ಗ್ರಂಥ ಪ್ರಕಟಣೆ ಹಾಗೂ ಗ್ರಂಥಕರ್ತರಿಗೆ ಹಲವು ಬಗೆಯ ಪ್ರೋತ್ಸಾಹ ಇತ್ಯಾದಿ ಹಲವು ರೂಪಗಳಲ್ಲಿ ಸೇವೆ ಸಲ್ಲಿಸಿತು.

**ಸಮಾರೋಪ**

ಯಾವುದೇ ಕಾಲಮಾನದ ಯಾವುದೊಂದು ರಂಗದ ಚಟುವಟಿಕೆಗಳನ್ನು ತೀರ ಬೇರೆಯಾಗಿ ವಿಮರ್ಶಿಸಿದರೆ ಅದು ಮೇಲು ಮೇಲಿನ ನಿರ್ವಹಣೆಯಾಗುವ, ತೇಲು ಸ್ವರೂಪದ್ದಾಗುವ ಅಪಾಯವಿದ್ದೇ ಇದೆ. ಆದ್ದರಿಂದ ಸಾಧ್ಯವಾದಷ್ಟು ಇತರ ವಿಚಾರ ಗಳ ಸಂಪರ್ಕವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಪುಟ್ಟಣ್ಣನವರ ಸ್ವಲ್ಪ ಹಿಂದಿನ ಹಾಗೂ ಅವರ ಕಾಲದ ಸಮಾಜವನ್ನು ಹೀಗೆ ನಿರ್ದೇಶಿಸಬಹುದು. "ಹಿಂದಿನ ಸಹ ಸ್ರಾರು ವರ್ಷಗಳ ಚರಿತ್ರೆಯಲ್ಲಿ ಯಾವಾಗಲೂ ಕಂಡುಬರದ ಕ್ರಿಯೆ–ಪ್ರತಿಕ್ರಿಯೆಗಳು ಈ ಕಾಲದಲ್ಲಿ ತೋರಿಸಿಕೊಂಡವು. ಬದುಕನ್ನು ದೃಢವಾಗಿ ತುಂಬಿಕೊಂಡಿದ್ದ ನಂಬಿಕೆ ನಡವಳಿಕೆಗಳನ್ನು ಪ್ರಶ್ನಿಸುವ ಧೈರ್ಯ ಉಂಟಾಯಿತು. ಹಳತು ಹೊಸದರ ಘರ್ಷಣೆ ಯೊಂದು ಕಡೆ ; ಅವುಗಳ ಕಸಿಯಿಂದ ಮೂಡಿದ ಚಿಗುರು ಇನ್ನೊಂದು ಕಡೆ. ಒಟ್ಟಿನಲ್ಲಿ ರಾಷ್ಟ್ರದ ಗತಿಸ್ಥಿತಿಗಳು ಸಂಕೀರ್ಣಸ್ವರೂಪವನ್ನು ತಾಳಿದ್ದವು. ಪಾಶ್ಚಾತ್ಯರ ಸಂಪರ್ಕ ದಿಂದ ಇಡೀ ದೇಶದಲ್ಲಿ ಹೊಸ ಅಲೆಗಳೆದ್ದುವು. ಕುಸಿದುಹೋಗಿದ್ದ ಆಡಳಿತವ್ಯವಸ್ಥೆಗೆ ಹೊಸ ಚೇತನವೂ, ತುಕ್ಕುಗಟ್ಟಿದ್ದ ವಿಚಾರಗಳಿಗೆ ಹೊಸ ಕಾಂತಿಯೂ ಬಂದವು. ಇದೆಲ್ಲದರ ಪರಿಣಾಮ ಆ ಕಾಲದ ಸಾಹಿತ್ಯಕ ಚಟುವಟಿಕೆಗಳ ಮೇಲೆ ಆಗದೆ ಇರಲಿಲ್ಲ. ಆದ್ದರಿಂದ ಭಾರತೀಯ ಭಾಷೆ–ಸಾಹಿತ್ಯಗಳ ನವೋದಯ ಹತ್ತೊಂಬತ್ತನೆಯ ಶತ ಮಾನದಲ್ಲಿ ಕಣ್ದೆರೆಯಿತು, ಕುಡಿಯಾಯಿತು. ಯಾವುದನ್ನು ನಾವು ಆಧುನಿಕ ಸಾಹಿತ್ಯ ಎಂದು ಕರೆಯುತ್ತೇವೆಯೋ ಅದರ ಆರಂಭವಾದದ್ದು ನಿಶ್ಚಿತವಾಗಿ ಕಳೆದ ಶತಮಾನ ದಲ್ಲಿ."[30]

ಒಟ್ಟಿನಲ್ಲಿ ಅಂದಿನ ಸಾಹಿತ್ಯರಂಗದ ಚಟುವಟಿಕೆಗಳನ್ನು ಕುರಿತು ಹೇಳುವುದಾದರೆ ಹಳೆಯ ಕಾವ್ಯಗಳ ಪ್ರಕಟಣೆ, ಭಾಷಾಂತರ ರೂಪಾಂತರಗಳು ಹಾಗೂ ಸ್ವತಂತ್ರ ರಚನೆಗಳು ಮೂರೂ ರೀತಿಗಳು ಕಂಡು ಬಂದವು. ರಾಜಾಶ್ರಯ, ಇಂಗ್ಲಿಷ್ ಶಿಕ್ಷಣ, ಮುದ್ರಣಾಲಯಗಳ ಸ್ಥಾಪನೆ, ಗ್ರಂಥಪ್ರಕಾಶನಗಳ ಸೇವೆ, ಪತ್ರಿಕೋದ್ಯಮ, ಅಧಿಕಾರಿ ವರ್ಗದ ಪ್ರೋತ್ಸಾಹ ಇವುಗಳು ಭಾಷೆ ಸಾಹಿತ್ಯಗಳ ಕೆಲಸಗಳಿಗೆ ವೇಗವನ್ನು ಕೂಡಿಸಿದ

ಅಂಶಗಳು. ನಾಟಕಗಳು, ಪ್ರಬಂಧ, ಪತ್ಯರಚನೆ, ಇತಿಹಾಸಗ್ರಂಥರಚನೆ ಹಾಗೂ ಜೀವನಚರಿತ್ರೆ ಇತ್ಯಾದಿ ಗ್ರಂಥಪ್ರಕಾರಗಳಿಗೆ ಮಾನ್ಯತೆ ಬೆಳೆಯಿತು.

ಚಾಮರಾಜ ಒಡೆಯರು, ರೀಜೆಂಟರಾಗಿದ್ದ ವಾಣೀವಿಲಾಸ ಸನ್ನಿಧಾನದವರು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರು ಇವರುಗಳ ರಾಜಾಶ್ರಯ, ದಿವಾನರಾದ ರಂಗಾಚಾರ್ಲು, ಕೆ. ಶೇಷಾದ್ರಿ ಅಯ್ಯರ್ ಹಾಗೂ ಎಂ. ವಿಶ್ವೇಶ್ವರಯ್ಯ ಅವರ ಪೋಷಣೆ, ಅಂಬಿಲ್ ನರಸಿಂಹಯ್ಯಂಗಾರ್ ಅವರಂತಹ ಅರಮನೆಯ ಅಧಿಕಾರಿಗಳ ಕೃಪೆ ಹಾಗೂ ಲೂಯಿರೈಸ್ ಮತ್ತು ಎಂ. ಶಾಮರಾವ್ ಮುಂತಾದ ಶಿಕ್ಷಣಾಧಿಕಾರಿಗಳ ಪ್ರೋತ್ಸಾಹಗಳಿಂದ ಸಾಹಿತ್ಯಾಸಕ್ತರ ಗುಂಪುಕಾರ್ಯ ನಡೆಯಿತು. ಕನ್ನಡದ ತೇರನ್ನು ಮುನ್ನಡೆಸಿದ ಎಂ. ಬಿ. ಶ್ರೀನಿವಾಸಯ್ಯಂಗಾರ್, ಚ. ವಾಸುದೇವಯ್ಯ, ಬಿ. ಕೃಷ್ಣಪ್ಪ, ಆರ್. ರಘುನಾಥರಾವ್, ಎಂ. ಎಲ್. ಶ್ರೀಕಂಠೇಶಗೌಡರು, ಎ. ಆನಂದರಾವ್, ಬಿ. ವೆಂಕಟಾಚಾರ್, ಎಂ. ಎಸ್. ಪುಟ್ಟಣ್ಣ, ಎಂ. ವೇಂಕಟಕೃಷ್ಣಯ್ಯ ಮತ್ತು ಇನ್ನಿತರರ ಬರಹಗಳಲ್ಲಿ ಆ ಕಾಲದ ಕನ್ನಡ ಭಾಷೆ ಸಾಹಿತ್ಯಗಳ ಪ್ರೇರಣೆ ಧೋರಣೆಗಳು ಸ್ಪಷ್ಟ ಗೋಚರವಾದುವು.

## ಟಿಪ್ಪಣಿಗಳು

1. ಎಚ್. ಎಂ. ಶಂಕರನಾರಾಯಣರಾವ್ ; ಕನ್ನಡ ನುಡಿ, ನವೆಂಬರ್ 1, 1940 ; ಪು. 30.
2. ಎಂ.ಎಸ್. ಪುಟ್ಟಣ್ಣನವರದು ಭಾಷಾಂತರ ರೂಪಾಂತರಗಳ ಕ್ಷೇತ್ರದಲ್ಲಿ ಗಣಿಸಬೇಕಾದ ಹೆಸರು. ಅವರ 'ಹೇಮಚಂದ್ರರಾಜ ವಿಲಾಸ', 'ಹೇಮಲತ', 'ಜಯಸಿಂಹರಾಜ ಚರಿತ್ರೆ' ಹಾಗೂ 'ಸುಮತಿ ಮದನ ಕುಮಾರರ ಚರಿತ್ರೆ' ಗಳಿಗೆ ಮೂಲಕೃತಿಗಳು ಕ್ರಮವಾಗಿ ಷೇಕ್ಸ್‌ಪಿಯರನ 'ಕಿಂಗ್‌ಲಿಯರ್', 'ಹ್ಯಾಮ್ಲೆಟ್'. 'ಸಿಂಬೆಲಿನ್' ಮತ್ತು ಥಾಮಸ್ ಡೇ ಬರೆದ 'ಸ್ಯಾಂಡ್‌ಫರ್ಡ್ ಅಂಡ್ ಮರ್ಟನ್'.
3. ರಂಗಾಚಾರ್ಲು ಅವರನ್ನು ಕುರಿತು ಪುಟ್ಟಣ್ಣನವರು ಬರೆದ ಜೀವನಚರಿತ್ರೆ ಅಪೂರ್ಣವಾಗಿ ದೊರೆತಿದೆ. ನೋಡಿ : ದಿವಾನ್ ರಂಗಾಚಾರ್ಲು ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ; ಪ್ರಬುದ್ಧ ಕರ್ಣಾಟಕ 60-2; 1978 ; ಪು. 17-29.
4. ಪ್ರಜಾಪ್ರತಿನಿಧಿ ಸಭೆಯನ್ನು ಕುರಿತು ಪುಟ್ಟಣ್ಣನವರು ಒಂದು ಲೇಖನ ಬರೆದಿದ್ದಾರೆ. ನೋಡಿ: ಪ್ರಜಾಪ್ರತಿನಿಧಿಗಳ ಸಭೆ ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ ; ಮಾನವಿಕ ಕರ್ಣಾಟಕ ಸಂಪುಟ 9. ಸಂಚಿಕೆ 3 ; 1979.
5. ಮಹಾರಾಣಿಯವರ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿಯರಿಗಾಗಿಯೇ ಪುಟ್ಟಣ್ಣನವರು ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ ಅರಮನೆಯ ಅಧಿಕಾರಿಗಳಾದ ಅಂಬಿಲ್ ನರಸಿಂಹಯ್ಯಂಗಾರರ ಸೂಚನೆಯಂತೆ 1884ರಲ್ಲಿ 'ನೀತಿಚಿಂತಾಮಣಿ'ಯನ್ನು ರಚಿಸಿದರು.

6. ರೇಲ್ವೇ ವಿಚಾರವಾಗಿ ಪುಟ್ಟಣ್ಣನವರು ಎರಡು ಲೇಖನಗಳನ್ನು ಬರೆದಿದ್ದಾರೆ. ನೋಡಿ: ಎಂ. ಎಸ್. ಪುಟ್ಟಣ್ಣನವರ ಎರಡು ಲೇಖನಗಳು ; (ಸಂಗ್ರಹ) ಎಚ್. ಎಸ್. ಸುಜಾತಾ ; ಮಾನವಿಕ ಕರ್ಣಾಟಕ (ಅಚ್ಚಿನಲ್ಲಿ).
7. ಇಂಥದೊಂದು ಸನ್ನಿವೇಶವನ್ನು ಪುಟ್ಟಣ್ಣನವರು ತಮ್ಮ ಲೇಖನವೊಂದರಲ್ಲಿ ತಿಳಿಸಿದ್ದಾರೆ. ನೋಡಿ: ದಿವಂಗತ ಎಚ್. ವಿ. ನಂಜುಂಡಯ್ಯ ಸಿ. ಐ. ಇ. ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ; ಪ್ರಬುದ್ಧ ಕರ್ಣಾಟಕ 59–1; 1977 ; ಪು. 5.
8. ಪುಟ್ಟಣ್ಣನವರ ನಾಲ್ಕು ಭಾಷಾಂತರ ರೂಪಾಂತರಗಳ ಮೂಲ ಕೃತಿಗಳೂ ಆಗ ಇಲ್ಲಿ ಜನಪ್ರಿಯವಾಗಿದ್ದಂತಹ ಕೃತಿಗಳೇ.
9. ಪುಟ್ಟಣ್ಣನವರು ಕನ್ನಡದ ಪುನರುಜ್ಜೀವನ ಎಂಬ ಮಾತನ್ನು ಒಪ್ಪುತ್ತಿರಲಿಲ್ಲ. ಅದು ಜೀವಂತ ಭಾಷೆಯೆಂದೂ ಮೃತಭಾಷೆಯನ್ನು ಮಾತ್ರ ಉಜ್ಜೀವಿಸಬಹುದೆಂದೂ ಅವರು ವಾದಿಸುತ್ತಿದ್ದರು. ಅವರ The Condition of Our Kannada ಲೇಖನದಲ್ಲಿ ಈ ಧೋರಣೆ ಸ್ಪಷ್ಟವಾಗಿದೆ.
10. ಎಂ. ಎಸ್. ಪುಟ್ಟಣ್ಣನವರು ಈ ವಿಷಯವಾಗಿ ಒಂದು ಲೇಖನವನ್ನು ಬರೆದಿದ್ದಾರೆ; ನೋಡಿ : ಪಹರುಗಳ ಸ್ವತಂತ್ರಾಡಳತ ಅಥವಾ ಮ್ಯೂನಿಸಿಪ್ಯಾಲಿಟಿ ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ ; ಮಾನವಿಕ ಕರ್ಣಾಟಕ, ಸಂಪುಟ 9, ಸಂಚಿಕೆ 2; 1979 ; ಪುಟ 85-88.
11. ವಿವರಗಳಿಗೆ ನೋಡಿ : ಮೈಸೂರು ರಾಜಕೀಯ ಸುಧಾರಣೆಗಳ ತಿರುಳು ; ತಿ. ತಾ. ಶರ್ಮ, ಮುನ್ನುಡಿ-ಡಿ.ವಿ.ಜಿ.; ವಿಶ್ವಕರ್ಣಾಟಕ, ಬೆಂಗಳೂರು ; 1940 ; ಪು. 4-6.
12. Renaissance and Reaction in nineteenth century Bengal ; Bankimchandra chattopadhyay, translation and introduction by M. K. Haldar ; Minerva Associates, pvt. Ltd, 7-B, Lake place, Calcutta-700029; 1977 ; introduction p. 3.
13. ಕರ್ನಾಟಕತ್ವದ ವಿಕಾಸ ; ಆಲೂರು ವೆಂಕಟರಾಯ; ನವಜೀವನ ಗ್ರಂಥಭಂಡಾರ, ಧಾರವಾಡ; 1957 ; ಪು. 119.
14. ಅದೇ, ಪು. 9.
15. ಮೈಸೂರು ಸಂಪದಭ್ಯುದಯ ಸಮಾಜ (Mysore Economic Conference) ದ ಶಿಕ್ಷಣ ಸಮಿತಿಗಾಗಿ The Indian Heroes ಎಂಬ ಗ್ರಂಥ ಸಂಪಾದನೆ ಮಾಡಿದವರು ಎಂ. ಶಾಮರಾವ್. ಈ ಗ್ರಂಥದಲ್ಲಿ ಪುಟ್ಟಣ್ಣನವರು ಬರೆದ ಆರು ಇಂಗ್ಲಿಷ್ ಲೇಖನಗಳಿವೆ.
16. ನನ್ನ ತಂದೆ ; ರಾಧಾಕೃಷ್ಣ; ಬಿ. ಶ್ರೀನಿವಾಸಯ್ಯಂಗಾರ್, ಬೆಂಗಳೂರು; 1949 ; ಪು.150.
17. ಹೊಸಗನ್ನಡದ ಅರುಣೋದಯ ; ಶ್ರೀನಿವಾಸ ಹಾವನೂರ ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ; 1974 ; ಪು. 23.
18. ಪುಟ್ಟಣ್ಣನವರು ಅಂಥ ವಿರಳರಲ್ಲಿ ಒಬ್ಬರು. ಗದ್ಯದ ಹಲವು ಪ್ರಕಾರಗಳಲ್ಲಿ ದುಡಿದದ್ದಲ್ಲದೆ, ಷೇಕ್ಸ್‌ಪಿಯರನ ಭಾಷಾಂತರಗಳಲ್ಲಿ ಪೂರ್ಣಗದ್ಯವನ್ನು ಬಳಸಿದವರು.
19. ಎಂ. ಎಸ್. ಪುಟ್ಟಣ್ಣನವರು 1883 ರಲ್ಲಿ 'ಹಿತಬೋಧಿನಿ' ಪತ್ರಿಕೆಯನ್ನು ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ ಪ್ರಾರಂಭಿಸಿದರು. 1884 ರಲ್ಲಿ ಬಿ. ಎ. ಪರೀಕ್ಷೆಗಾಗಿ ಮದ್ರಾಸಿಗೆ ಹೋದಾಗ, ತಮ್ಮ ಪತ್ರಿಕೆಯನ್ನು ಎಂ. ವೆಂಕಟಕೃಷ್ಣಯ್ಯನವರಿಗೆ ಒಪ್ಪಿಸಿದರು.

ಮುಂದೆ ಕೆಲವು ವರ್ಷಗಳ ಕಾಲ ನಡೆದು ಆ ಪತ್ರಿಕೆ ನಿಂತಿತು. 1887ರಲ್ಲಿ 'ವೃತ್ತಾಂತ ಚಿಂತಾಮಣಿ' ಎಂಬ ತಮ್ಮ ಮೊದಲ ಸ್ವತಂತ್ರ ಪತ್ರಿಕೆಯನ್ನು ವೆಂಕಟಕೃಷ್ಣಯ್ಯನವರು ಪ್ರಾರಂಭಿಸಿದರು.

20. ವಿವರಗಳಿಗೆ ನೋಡಿ : ಕನ್ನಡ ಸಮಸ್ಯೆ ; ಸಿದ್ದವನಹಳ್ಳಿ ಕೃಷ್ಣಶರ್ಮ ; ಪ್ರಭಾತ ಸಾಹಿತ್ಯ, ಮಲ್ಲೇಶ್ವರಂ, ಬೆಂಗಳೂರು ; ? ; ಪು. 8, 2–3.
21. The condition of our Kannada ; M. S. Puttanna ; Irish press, Bangalore; ? ; pp. 1-2.
22. ಎಂ. ಶಾಮರಾಯರು ಅಧ್ಯಕ್ಷರಾಗಿದ್ದ ಈ ಸಮಿತಿಯಲ್ಲಿ ಪುಟ್ಟಣ್ಣನವರು ಒಬ್ಬ ಸದಸ್ಯರು.
23. ವಿವರಗಳಿಗೆ ನೋಡಿ :
    ವಿದ್ಯಾದಾಯಿನಿ, 2–6 ; 1894 ; ಪು. 129-136.
    ವಿದ್ಯಾದಾಯಿನಿ, 2–7 ; 1894 ; ಪು. 153-160.
    ವಿದ್ಯಾದಾಯಿನಿ, 2–8 ; 1894 ; ಪು. 177-185.
24. The condition of our Kannada, op. cit., pp. 18-19.
25. ಸ್ವಾಭಿಮಾನ ; ಹಿತಚಿಂತಕ ; ಸುವಾಸಿನಿ 4-7 ; 1927 ; ಪು. 199-202.
26. The condition of our Kannada, op. cit., pp. 12-13.
27. ಹೊಸಗನ್ನಡದ ಅರುಣೋದಯ, ಪೂರ್ವೋಕ್ತ, ಪು. 488.
28. ಅದೇ, ಪು. 494.
29. 'ಹಿತಬೋಧಿನಿ' ಮಾಸಪತ್ರಿಕೆಯ ಸಂಪಾದಕರು ಎಂ. ಎಸ್. ಪುಟ್ಟಣ್ಣ ಮತ್ತು ಎಂ. ಬಿ. ಶ್ರೀನಿವಾಸಯ್ಯಂಗಾರ್.
30. ಹೊಸಗನ್ನಡದ ಅರುಣೋದಯ, ಪೂರ್ವೋಕ್ತ, ಮುನ್ನುಡಿ. ಹಾ. ಮಾ. ನಾಯಕ ; ಪು. vii-viii.

# 1. ಕಥೆ ಕಾದಂಬರಿಗಳು

**ಪೀಠಿಕೆ**

ಹೊಸಗನ್ನಡದಲ್ಲಿ ಗದ್ಯ ಕೃಷಿಯನ್ನು ಮಾಡಿದ ಮಹನೀಯರಲ್ಲಿ ಎಂ. ಎಸ್. ಪುಟ್ಟಣ್ಣನವರು ಅಗ್ರಗಣ್ಯರು. ಪುಟ್ಟಣ್ಣನವರು ಗದ್ಯದ ಹಲವು ಪ್ರಕಾರಗಳಲ್ಲಿ ಕೆಲಸ ಮಾಡಿದರು. ಗದ್ಯದ ಸಾಧ್ಯತೆಗಳನ್ನು ಅವರು ಬಹು ಬೇಗ ಅರಿತುಕೊಂಡರು. ಮಾರ್ಗಕಾವ್ಯದ ತೆರವಾಗುತ್ತಿದ್ದ ಜಾಗಕ್ಕೆ ಇಂದಿಗೂ ಜನಪ್ರಿಯವಾದ ಕಾದಂಬರಿಯ ಪ್ರಕಾರವನ್ನು ಕನ್ನಡದಲ್ಲಿ ಯಶಸ್ವಿಯಾಗಿ ತಂದವರಲ್ಲಿ ಪುಟ್ಟಣ್ಣನವರು ಮೊದಲ ಸಾಲಿನವರು. ಐತಿಹಾಸಿಕವಾಗಲಿ, ಸಾಮಾಜಿಕವಾಗಲಿ ಕನ್ನಡ ಕಾದಂಬರಿಗಳಿಗೆ ವಸ್ತು ನಮ್ಮಲ್ಲೇ ಇದೆ, ವಿಪುಲವಾಗಿದೆ ಎಂಬುದನ್ನು ಕಂಡುಕೊಂಡ ಮೊದಲಿಗರಲ್ಲಿ ಪುಟ್ಟಣ್ಣನವರೂ ಒಬ್ಬರು. ಕನ್ನಡ ಕಾದಂಬರಿಗಳ ಇತಿಹಾಸದಲ್ಲಿ ಪುಟ್ಟಣ್ಣನವರ ಕಾದಂಬರಿಗಳಿಗೆ ಮಹತ್ತ್ವದ ಸ್ಥಾನವಿದೆ. ಆಗ ಕಾದಂಬರಿಯ ಪ್ರಕಾರ ಕನ್ನಡಕ್ಕೆ ಹೊಸದಾಗಿದ್ದ ಕಾಲ. ಅಲ್ಲದೆ ಆ ಪ್ರಕಾರ ಕನ್ನಡದ ಜಾಯಮಾನಕ್ಕೆ ಒಗ್ಗೀತೇ ಎಂಬ ಸಂಶಯವೂ ಪೂರ್ಣ ಬಗೆಹರಿದಿರಲಿಲ್ಲ. ಅಂತಹ ಹೊತ್ತಿನಲ್ಲಿ ಪುಟ್ಟಣ್ಣನವರು ತಮ್ಮ ಕಾದಂಬರಿಗಳ ಮೂಲಕ ಕನ್ನಡದ ಕಾದಂಬರಿಗಳಿಗೆ ಸುಭದ್ರವಾದ ಅಡಿಪಾಯವನ್ನು ಹಾಕಿದರು. ಗದ್ಯ ಪ್ರಕಾರದ ಇತರ ಹಲವು ರಚನೆಗಳನ್ನು ಆ ವೇಳೆಗೆ ಪೂರೈಸಿದ್ದು ತಮ್ಮ ಆಯುಸ್ಸಿನ ಅರವತ್ತು ವರ್ಷಗಳ ನಂತರ ಕಾದಂಬರಿಗಳ ರಚನೆಗೆ ಕೈ ಹಾಕಿದರು. ಪ್ರಯೋಗವನ್ನು ತೃಪ್ತಿಕರವಾಗಿ ನೇರವೇರಿಸಿದರು.

ಪುಟ್ಟಣ್ಣನವರ ಕಥನ ಸಾಹಿತ್ಯದಲ್ಲಿ 'ಮಾಡಿದ್ದುಣ್ಣೋ ಮಹಾರಾಯ' (1915), 'ಮುಸುಗ ತೆಗೆಯೇ ಮಾಯಾಂಗನೆ' (1928) ಮತ್ತು 'ಅವರಿಲ್ಲದೂಟ' (1959) ಈ ಮೂರು ಕಾದಂಬರಿಗಳು ಮಾತ್ರ ಸ್ವತಂತ್ರವಾದ ರಚನೆಗಳು. ಈ ಕಾದಂಬರಿಗಳಲ್ಲಿ ಪುಟ್ಟಣ್ಣನವರು ಚಿತ್ರಿಸಿರುವುದು ಬ್ರಿಟಿಷ್ ಆಧಿಪತ್ಯದ ಆಶ್ರಿತ ಸಂಸ್ಥಾನವಾದ ಮೈಸೂರು. ಸುಮಾರು ನೂರು ವರುಷಗಳ ಹಿಂದಿನ ಕನ್ನಡಿಗರ ಬಾಳು ಬದುಕು, ಅರಮನೆ ಗುರುಮನೆಗಳ ಪರಿಸರ, ಅವರ ಪೂರ್ವಾಚಾರ ಶ್ರದ್ಧೆ, ವಿದ್ಯಾಭ್ಯಾಸ, ಕುಟುಂಬ ಕಲಹಗಳು, ಜನರ ನೇರಕೊಂಕುಗಳು ಇತ್ಯಾದಿ ವಿಷಯಗಳು ಇಲ್ಲಿ ಚಿತ್ರಿತವಾಗಿವೆ. ರಾಜರ ಸೋಲು ಗೆಲುವುಗಳನ್ನು ಮಾತ್ರ ಚಿತ್ರಿಸುವುದು ಚರಿತ್ರೆಯಲ್ಲ. ಆ ಕಾಲದ ಜನಜೀವನವೂ ಚರಿತ್ರೆಯ ಮುಖ್ಯ ಘಟಕ. ಬಹುಶಃ ರಾಜರ ವಿಚಾರಗಳಿಗಿಂತ ಹೆಚ್ಚು ಪ್ರಮುಖವಾದ ಘಟಕ. ಪುಟ್ಟಣ್ಣನವರ ಕಾದಂಬರಿಗಳು ಈ ಅರ್ಥದಲ್ಲಿ ನಿಜವಾದ ಚಾರಿತ್ರಿಕಗಳು. "ಈಗ ಮೈಸೂರು ಚರಿತ್ರೆಯ ಮೇಲೆ ಇರುವ

ಕಾದಂಬರಿಗಳೆಂದರೆ—ನನಗೆ ತಿಳಿದಿರುವವು—ಮ. ಪುಟ್ಟಣ್ಣನವರ "ಮಾಡಿದ್ದುಣ್ಣೋ ಮಹಾರಾಯ" ಮತ್ತು ಕೆರೂರು ವಾಸುದೇವಾಚಾರ್ಯರ "ಯದು ಮಹಾರಾಜ." ಇವು ಮೊದಲನೆಯ ತರಗತಿಗೆ ಸೇರಿದವುಗಳಲ್ಲ. ಆದರೂ ಮೈಸೂರು ಚರಿತ್ರೆಯ ಮೇಲೆ ಎರಡು ಐತಿಹಾಸಿಕ ಕಾದಂಬರಿಗಳಿವೆ ಎಂದು ನಾವು ಹೆಮ್ಮೆ ಪಡಬಹುದು"[1] ಎಂದು ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವುದನ್ನು ನೆನೆಯಬಹುದು. ಹೀಗೆ ಇತರ ಸಾಧ್ಯತೆಗಳನ್ನು ದುಡಿಸಿಕೊಳ್ಳುವುದರಿಂದ ಪುಟ್ಟಣ್ಣನವರ ಕಾದಂಬರಿಗಳಿಗೆ ಸಂಕೀರ್ಣತೆ ತಾನಾಗಿ ಲಭಿಸುತ್ತದೆ.

ಪುಟ್ಟಣ್ಣನವರ ಮೂರೂ ಕಾದಂಬರಿಗಳ ವಸ್ತು ಹಾಗೂ ಅದರ ವಿಶ್ಲೇಷಣೆ ಹಲವು ಕುತೂಹಲಕರವಾದ ಅಂಶಗಳನ್ನು ಹೊರಚೆಲ್ಲುತ್ತದೆ. ವಸ್ತುವಿನ ಮೂಲಕ ಪುಟ್ಟಣ್ಣನವರು ಧ್ವನಿಸುವ ಸಾಮಾಜಿಕ ಸಂಬಂಧಗಳು, ಪರಿಸ್ಥಿತಿಗಳ ಚಿತ್ರಣ ಮುಖ್ಯ. ನ್ಯಾಯಕ್ಕೆ ಗೆಲುವು, ಅನ್ಯಾಯಕ್ಕೆ ಸೋಲು ಎಂಬುದು ಇಲ್ಲಿ ಮುಖ್ಯ ಸ್ಥಾಯಿ. ನ್ಯಾಯ ಎಂಬುದು ಪ್ರಾಮಾಣಿಕತೆಯ ಯಾವ ಒಂದು ರೂಪವಾದರೂ ಆಗಬಹುದು. ಹೆಚ್ಚಿನ ಮಟ್ಟಿಗೆ ಸ್ತ್ರೀಯ ಪಾತಿವ್ರತ್ಯ ಇದಕ್ಕೆ ರೂಪ ಕೊಡುತ್ತದೆ. ಹೆಣ್ಣಿನ, ಹಣದ ಆಸೆಗೆ ಬಿದ್ದು ಸಮಾಜದ ನಿಯಮಗಳನ್ನು ಮೀರಲೆತ್ನಿಸುವವರಿಗೆ ಉಳಿಗಾಲವಿಲ್ಲ. ಕಥೆಯ ಸಂವಿಧಾನ ಜಾಳಲ್ಲವಾದುದರಿಂದಲೂ, ಆಡುನುಡಿಯ ಬನಿಯಿಂದಲೂ ಕಾದಂಬರಿಯಲ್ಲಿ ಅಂತರ್ಗತವಾದ ನೀತಿಬೋಧೆ ಕೃತಿಗೆ ಹೊರೆಯಾಗಿಲ್ಲ. ಬಿತ್ತಿದಂತೆ ಬೆಳೆ ಎಂಬ ಕರ್ಮಸಿದ್ಧಾಂತಪರವಾದ ನಿಲುವು ಇಲ್ಲಿ ಕಾಣುತ್ತದೆ. ಮೊದಲ ಕಾದಂಬರಿಗೆ ಇದೇ ಧೋರಣೆ 'ಮಾಡಿದ್ದುಣ್ಣೋ ಮಹಾರಾಯ' ಎಂಬ ಹೆಸರಾಗಿದೆ ಎಂಬುದು ಗಮನಾರ್ಹ. ಪುಟ್ಟಣ್ಣನವರ ರಚನೆಗಳಲ್ಲಿ ಸಾಹಿತ್ಯಕ ಯಶಸ್ಸು ದಕ್ಕಿರುವುದರಲ್ಲಿ ಸಿಂಹಪಾಲು ಈ ಕಾದಂಬರಿಗಳದು.

ತಮ್ಮ ಕಾದಂಬರಿಗಳಲ್ಲಿ ಪುಟ್ಟಣ್ಣನವರು ಚಿತ್ರಿಸಿರುವುದು ತಮ್ಮ ಸುತ್ತಲಿನ ಸಮಾಜ, ಪುಟ್ಟಣ್ಣನವರು ಬದುಕಿ ಬಾಳಿದ ಸ್ವಲ್ಪ ಹಿಂದಿನ ಕಾಲದ ಜೀವನವೂ ಇಲ್ಲಿನ ಕಾದಂಬರಿಗಳಲ್ಲಿ ಕಾಣಬಹುದು. "ಸ್ವತಂತ್ರ ಕಾದಂಬರಿಗಳೆಂದರೆ ಎಂ. ಎಸ್. ಪುಟ್ಟಣ್ಣನವರೇ ಮೊದಲಾದ ಒಬ್ಬಿಬ್ಬರು ಬರೆದವು. ಪುಟ್ಟಣ್ಣನವರ ಕೃತಿಗಳಲ್ಲಿ ಅವರು ಕಂಡು ಕೇಳಿದ ಅಥವಾ ಅವರ ಅನುಭವಕ್ಕೆ ಬಂದ ಪ್ರಪಂಚ, ಪರಿಮಿತಿಯುಳ್ಳದಾದರೂ ರಮ್ಯವಾಗಿರೂಪುಗೊಂಡಿದೆ"[2] ಎಂದು ಡಿ.ಎಲ್.ನರಸಿಂಹಾಚಾರ್ಯರು ಅಭಿಪ್ರಾಯ ಪಟ್ಟಿದ್ದಾರೆ. ಕಥೆ ಸಾಗುತ್ತಾ ಹೋದಂತೆ ಕಾದಂಬರಿಕಾರರು ಉದ್ದೇಶಿಸಿರುವ ತತ್ತ್ವ ಹಿರಿದಾಗುತ್ತಾ ಹೋಗಿ ಪಾತ್ರಗಳು ಹಿಂದೆ ಸರಿಯುತ್ತವಾದ್ದರಿಂದ ಯಾವೊಂದು ಪಾತ್ರವೂ ಬಹು ಮುಖ್ಯವಾಗಿ ಎದ್ದು ಕಾಣುವುದಿಲ್ಲ, ಒಟ್ಟು ಬಂಧವೇ ಮುಖ್ಯವಾಗುತ್ತದೆ.

ಎಂ. ಎಸ್. ಪುಟ್ಟಣ್ಣನವರ ಮಹತ್ತ್ವದ ಸಾಹಿತ್ಯಕ ರಚನೆ ಎಂದರೆ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿ. ಇದು 1915ರಲ್ಲಿ ಮೊದಲ ಬಾರಿಗೆ ಪ್ರಕಟ

ವಾಯಿತು. ಇದಕ್ಕೂ ಮೊದಲೇ ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳ ರಚನೆ ಆಗಿತ್ತು. ಪ್ರಮುಖವಾಗಿ 1899ರಲ್ಲಿ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ', 1905 ರಲ್ಲಿ ಬೋಳಾರ ಬಾಬೂರಾಯರ 'ವಾಗ್ದೇವಿ', 1908ರಲ್ಲಿ ಕೆರೂರ ವಾಸುದೇವಾ ಚಾರ್ಯರ 'ಇಂದಿರಾ' ಕಾದಂಬರಿಗಳು ಬಂದಿದ್ದವು. ಆದರೆ ಸಾಹಿತ್ಯಕವಾದ ಪ್ರಥಮ ಗಮನಾರ್ಹ ಕಾದಂಬರಿ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾ ರಾಯ' ಎನ್ನಬಹುದು. ತಮ್ಮ ಕಾದಂಬರಿಯ ಬಹಳ ಚಿಕ್ಕದಾದ ಮೂಲಕಥೆಗೆ ಸಹಾಯಕವಾಗುವ ಇನ್ನಿತರ ಉಪಕಥೆಗಳು, ವೃತ್ತಾಂತಗಳು, ವರ್ಣನೆಗಳು ಮೊದ ಲಾದುವನ್ನು ರೋಚಕವಾಗಿ ಹೇಳುತ್ತಾ ಹೋಗುವ ಪುಟ್ಟಣ್ಣನವರ ನಿರೂಪಣಾ ವಿಧಾನದಲ್ಲಿ ಕುತೂಹಲ ಕಡೆಯವರೆಗೂ ಇರುತ್ತದೆ. ಹೆಸರೇ ಹೇಳುವಂತೆ 'ಮಾಡಿ ದ್ದುಣ್ಣೋ ಮಹಾರಾಯ' ನೀತಿಪ್ರತಿಪಾದನೆಯನ್ನು ಅತಿಮುಖ್ಯವಾಗಿರಿಸಿಕೊಂಡಂಥ ಕೃತಿ. ಸತ್ಯಕ್ಕೆ ಗೆಲುವು, ಅಸತ್ಯಕ್ಕೆ ಸೋಲು ಎಂಬುದು ಇಲ್ಲಿನ ಅಂತರ್ಧೋರಣೆ. ಆದರೆ ಬರವಣಿಗೆ ಪೆಡಸಲ್ಲ, ಜಿಗುಟಲ್ಲ, ಆಡುನುಡಿಯ ಸೊಗಡು ಸೂಸುವ ಭಾಷೆ ಯದು. ಆದ್ದರಿಂದ ಸಾಹಿತ್ಯಕವಾದ ಮೌಲ್ಯವೂ ಈ ಕಾದಂಬರಿಗೆ ದಕ್ಕಿದೆ. ಕನ್ನಡ ಜನತೆಗೆ ಅಪರಿಚಿತವಾದ ಯಾವುದೋ ಸಮಾಜ ಚಿತ್ರಣಗಳಿಂದ ತುಂಬಿದ ಅನುವಾದಿತ ಕಾದಂಬರಿಗಳ ನಡುವೆ, ಕನ್ನಡ ಜನರ ಆಚಾರ ವಿಚಾರಗಳು, ಸ್ವಭಾವ ಮರ್ಯಾದೆಗಳು, ಆಸೆ ಆಕಾಂಕ್ಷೆಗಳು ಮೊದಲಾದುವನ್ನು ಕನ್ನಡದ ನುಡಿಗಟ್ಟಿನಿಂದ ಶ್ರೀಮಂತವಾದ ಶೈಲಿಯಲ್ಲಿ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಪುಟ್ಟಣ್ಣನವರು ಚಿತ್ರಿಸಿದ್ದಾರೆ. ಇದೇ ಲಕ್ಷಣ ಅವರ ಇನ್ನೆರಡು ಕಾದಂಬರಿಗಳಲ್ಲಿ ಮುಂದುವರೆಯಿತು. "ಪುಟ್ಟಣ್ಣನವರ ಕಾದಂಬರಿಗಳು ಇಂಗ್ಲಿಷ್ ನಾವೆಲ್‌ಗಳಂತೆ ಪ್ರತ್ಯಕ್ಷ ಜೀವನ ಚಿತ್ರ ಗಳು"[3] ಎಂದು ಡಿ. ವಿ. ಗುಂಡಪ್ಪನವರು ಹೇಳಿದ್ದಾರೆ.

## ಮೂರೂ ಕಾದಂಬರಿಗಳ ಕಥೆ ಮತ್ತು ಸಂವಿಧಾನ

### ಮಾಡಿದ್ದುಣ್ಣೋ ಮಹಾರಾಯ

ಸದಾಶಿವ ದೀಕ್ಷಿತ ಮೈಸೂರಿನಲ್ಲಿ ರಾಜಾಸ್ಥಾನದ ಕೃಪೆಗೆ ಪಾತ್ರನಾದವನು. ಈತನ ಹೆಂಡತಿ ಒಂದು ಗಂಡುಮಗುವನ್ನು ಹೆತ್ತು ಸತ್ತುಹೋಗಿದ್ದಳು. ಈತನ ವಯಸ್ಸಾದ ತಾಯಿಯೇ ಮಗುವನ್ನು ಪೋಷಿಸುತ್ತಿದ್ದಳು. ಮುಂದೆ ಸಂಜವಾಡಿಯ ನೀಲಕಂಠ ಜೋಯಿಸರ ಒಬ್ಬಳೇ ಮಗಳಾದ ತಿಮ್ಮಮ್ಮನನ್ನು ಮದುವೆಯಾದನು. ಜೋಯಿಸರು ತಮ್ಮ ಒಬ್ಬನೇ ಮಗ ಕಿಟ್ಟುವಿಗೆ ಆಸ್ತಿಯ ನಿರ್ವಹಣೆ ಸಾಧ್ಯವಿಲ್ಲವೆಂದು ಮನಗಂಡು ಎಲ್ಲ ಹೊಣೆಯನ್ನು ಅಳಿಯನಿಗೆ ವಹಿಸಿ ನಿಶ್ಚಿಂತೆಯಿಂದ ಸಾಯುತ್ತಾರೆ.

ಸದಾಶಿವ ದೀಕ್ಷಿತನ ಮಗ ಮಹಾದೇವ ತಿಮ್ಮಮ್ಮನ ಪೋಷಣೆಯಲ್ಲಿ ಸುಖವಾಗಿ ಬೆಳೆಯುತ್ತಾನೆ. ಇವನ ವಿದ್ಯಾಭ್ಯಾಸ ಊರಿನ ಪಂತ ನಾರಪ್ಪಯ್ಯನ ಬಳಿ ಸಾಗುತ್ತಿತ್ತು. ಏಟು ಮುಂಚು ಮಾತು ಹಿಂಚು ಎಂಬುದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದ ನಾರಪ್ಪಯ್ಯನಿಗೆ ಮಠದ ಹಿರಿಯ ಹುಡುಗರು ತೀರಿಸಿಕೊಂಡ ಸೇಡಿನ ಫಲವಾಗಿ ಪ್ರಾಣಕ್ಕೇ ಕಷ್ಟವಾಗಿ ಚೇತರಿಸಿಕೊಳ್ಳಲು ನಾಲ್ಕು ತಿಂಗಳಿಗೂ ಹೆಚ್ಚು ಕಾಲ ಬೇಕಾಯಿತು. ಊಟ ಉಪಚಾರವೆಲ್ಲ ಸದಾಶಿವ ದೀಕ್ಷಿತನ ಮನೆಯಲ್ಲಿ ನಡೆಯಿತು. ಆ ವೇಳೆಯಲ್ಲಿ ಮಕ್ಕಳನ್ನು ಒಲಿಸಿಕೊಂಡು ಪಾಠ ಹೇಳಬೇಕು, ಪೆಟ್ಟಿನಿಂದಲ್ಲ ಎಂಬ ದೀಕ್ಷಿತನ ಮಾತನ್ನು ತಪ್ಪು ತಿಳಿದು ನಾರಪ್ಪಯ್ಯ ಮನಸ್ಸಿನಲ್ಲೇ ಕತ್ತಿ ಮಸೆಯುತ್ತಿದ್ದ.

ಮಹಾದೇವ ಬೆಳೆದು ದೊಡ್ಡವನಾದ, ವಿದ್ಯಾವಂತನಾದ. ದೀಕ್ಷಿತನ ಸೋದರಮಾವ ಪಶುಪತಿ ಸಾಂಬಶಾಸ್ತ್ರಿಯ ಮೊಮ್ಮಗಳು ಸೀತೆಯೊಂದಿಗೆ ಮದುವೆಯಾಯಿತು. ಸೀತೆ ಸಾತ್ತ್ವಿಕಳು, ಗುಣವಂತೆ, ಸುಂದರಿ, ಗಂಡನಿಗೆ ಒಪ್ಪಿದ ಮಡದಿ, ಮಾವನಿಗೆ ಅಚ್ಚುಮೆಚ್ಚಿನ ಸೊಸೆ ಮತ್ತು ಮನೆಯಲ್ಲಿನ ಇಬ್ಬರು ಹಿರಿಯ ಮುದುಕಿಯರಿಗೆ ಬಹಳ ಸಂತಸ ಕೊಟ್ಟವಳು. ತನ್ನ ಸಂಬಂಧದ ಹುಡುಗಿಯನ್ನು ತಂದುಕೊಳ್ಳಬೇಕೆಂಬ ಆಸೆಯು ಮುರಿದುಬಿದ್ದುದರಿಂದ ತಿಮ್ಮಮ್ಮನಿಗೆ ಸೀತೆಯನ್ನು ಕಂಡರೆ ಅಸಹನೆ, ಅನಾದರ. ಮಹಾದೇವನ ಮೇಲಿನ ಪ್ರೀತಿಯೂ ಇದರಿಂದ ಹಿಂದೆ ಸರಿಯಿತು. ತಿಮ್ಮಮ್ಮನ ಮಗಳು ಸಾತಿ ಬೇರೆ ಪಕ್ಕೆಯಲ್ಲಿ ಚುಚ್ಚಿಕೊಂಡ ಮುಳ್ಳಿನಂತೆ ಸೀತೆಗೆ ಬಹುವಾಗಿ ಬಾಧೆ ಕೊಡುತ್ತಿದ್ದಳು. ಸೀತೆ ಒಂದು ಗಂಡು ಮಗುವಿನ ತಾಯಾಗಿ, ಸಾತಿ ಗಂಡನ ಮನೆಗೆ ಹೋದಮೇಲೆ ಅತ್ತೆಯ ಕಾಟ ಸ್ವಲ್ಪ ಕಡಿಮೆಯಾಯಿತು.

ಊರಿನ ಅಮ್ಮನ ಗುಡಿಯ ಪೂಜಾರಿ ಸತ್ತಮೇಲೆ ಅವನ ಸಂಬಂಧವೆಂದು ಹೇಳಿಕೊಂಡು ಬಂದ ಸಿದ್ಧ ಊರಿನಲ್ಲಿ ದಿನೇ ದಿನೇ ಪ್ರಬಲವಾಗಿ ಬೆಳೆದು ಬೇರುಬಿಟ್ಟಿದ್ದ. ಊರಿನಲ್ಲಿದ್ದ ಕಳ್ಳರ ಹುತ್ತಕ್ಕೂ ಇವನೇ ಪ್ರಧಾನ ಪೋಷಕ. ದೇವಾಲಯದ ಬಳಿಯೇ ಇದ್ದ ಅರುಂದಮ್ಮನ ಸಮಾಧಿಗೆ ನಿತ್ಯಪೂಜೆಗೆಂದು ಹೋಗಿಬರುತ್ತಿದ್ದ ಸಾಧ್ವಿ ಸೀತೆಯ ಮೇಲೆ ಈ ಪೂಜಾರಿಯ ವಕ್ರದೃಷ್ಟಿ ಬಿತ್ತು. ಮರುಳಿಗೆ ಧೂಪ ಹಾಕುವಂತೆ ಶಕುನಿ ಬುದ್ಧಿಯ ನಾರಪ್ಪಯ್ಯನ ಮಾತುಗಳು ಅವನ ಹೀನವಾದ ಆಸೆಗೆ ಒತ್ತಾಸೆ ಮಾಡಿದವು ಪೂಜಾರಿಯ ಯಾವ ಆಮಿಷಕ್ಕೂ ಸೀತೆ ಒಳಗಾಗದೇ ಇದ್ದುದು ಅವನ ಮನಸ್ಸಿನಲ್ಲಿದ್ದ ಕಾಮಕ್ಕೆ ಕ್ರೋಧವನ್ನೂ ಬೆರೆಸಿತು. ಕಡೆಗೆ ಸೀತೆಯ ಮೇಲೆ ಮಾಟಮಂತ್ರಗಳ ಪ್ರಯೋಗ ನಡೆಯಿತು. ಸೀತೆ ಹಲವು ದಿನಗಳು ಮಾತುಕತೆಯಿಲ್ಲದೆ ನೆಲಹಿಡಿದು ಮಲಗಿದಳು. ಯಾವ ಔಷಧಿಗೂ ಅವಳ ವ್ಯಾಧಿ ತಹಬಂದಿಗೆ ಬರಲಿಲ್ಲ. ಕೊನೆಗೊಂದು ದಿನ ಕಣ್ಮುಚ್ಚಿದಳು. ಆದರೆ ಆಯುಸ್ಸು ಮುಗಿದಿರಲಿಲ್ಲ. ಶವಕ್ಕೆ ಅಗ್ನಿಸಂಸ್ಕಾರವಾದ ಮೇಲೆ ಹಸಿಕಟ್ಟಿಗೆ ನಿಧಾನವಾಗಿ ಹತ್ತಿಕೊಳ್ಳುವುದೆಂದು ಬಂಧುಗಳು ಮನೆಗೆ ಹೋದರು. ಆ ಕಾಲದಲ್ಲಿ ಶ್ಮಶಾನದ ಸಮೀಪದಲ್ಲೇ ಕೊಯಮುತ್ತೂರು ಪ್ರಾಂತ್ಯಕ್ಕೆ ಹೋಗುವ ಹಾದಿಯಲ್ಲಿ ಭಟಜಿಯೊಬ್ಬನು ಆತನ ಸ್ನೇಹಿತನೊಂದಿಗೆ ಬರುತ್ತಿದ್ದನು.

ಭಟಜಿ ಮಂತ್ರವಿದ್ಯೆಯಲ್ಲಿ ನುರಿತವನು. ಚಿತೆಯ ಮೇಲಿದ್ದ ಕಳೇಬರಕ್ಕೆ ಪ್ರಾಣವಿದೆ ಎಂದರಿತು ಭಟಜಿ ಮಾಟಪರಿಹಾರಕ ಮಂತ್ರಗಳನ್ನು ಜಪಿಸಿ ಸೀತೆಯನ್ನು ಮೇಲೇಳು ವಂತೆ ಮಾಡಿದನು. ಮಂತ್ರಶಕ್ತಿಗೆ ಒಳಗಾದ ಅಪ್ಪಾಜಿ ಅರಚುತ್ತ ಓಡಿಬಂದು ತಾನು ಮಾಟವಾಡಿ ಸೀತೆ ತಿರುಗಾಡುವ ಜಾಗದಲ್ಲಿ ಹೂಳಿದ್ದ ಬೊಂಬೆಯನ್ನು ತಂದು ಕೊಟ್ಟನು. ಭಟಜಿ ಅದನ್ನು ಬೆಂಕಿಯಲ್ಲಿ ಹಾಕಿಸಿ, ಅಪ್ಪಾಜಿಯ ಹಲ್ಲುಗಳನ್ನೆಲ್ಲ ಉದು ರಿಸಿ ಮುಂದೆ ಯಾರಿಗೂ ಅವನಿಂದ ಕೇಡಾಗಬಹುದಾದ ಅವಕಾಶವನ್ನು ತಪ್ಪಿಸಿದನು. ಸೀತೆಯನ್ನು ಕಂಡ ಮನೆಯ ಜನಕ್ಕೆ ಆನಂದಬಾಷ್ಪ ಸುರಿಯಿತು. ಕಳ್ಳರ ಕೂಟದ ಕಿರಿಯ ಸದಸ್ಯನಾದ ಅಮಾಸೆ ಸರ್ಕಾರದವರ ಕೈಗೆ ಸಿಕ್ಕಿದ ಮೇಲೆ ಗುಟ್ಟೆಲ್ಲ ಬಯ ಲಾಯಿತು. ಅಮಾಸೆಯೊಬ್ಬನ ಹೊರತು ಇಡೀ ಗುಂಪು ಸೆರೆಮನೆಗೆ ಹೋಗಬೇಕಾ ಯಿತು. ಉಪಾಧ್ಯಗೂ ಪೂಜಾರಿಗೂ ತಕ್ಕ ಶಿಕ್ಷೆಯಾಯಿತು. ಸಂಜವಾಡಿಯ ಜನ ರೆಲ್ಲಾ ಊರುಬಿಟ್ಟರು. ಸದಾಶಿವ ದೀಕ್ಷಿತನು ಮನೆಯವರೆಲ್ಲರೊಡನೆ ಸಂಜವಾಡಿ ಯಿಂದ ಮೈಸೂರಿಗೆ ವಲಸೆ ಹೋದನು.

ಕಥೆ ನಡೆಯುವುದು ಚಾಮರಾಜನಗರದ ಬಳಿಯ ಸಂಜವಾಡಿಯಲ್ಲಿ. ಕಥೆಯ ಪ್ರಾದೇಶಿಕವಾದ ಹಿನ್ನೆಲೆ ಸ್ಪಷ್ಟವಾಗಿ ತಿಳಿಯುತ್ತದೆ. "ಲಂಚಕೋರರು ಅವರಿಂದುಂಟಾ ಗುವ ಪ್ರಮಾದಗಳು ; ಗ್ರಾಮಗಳಲ್ಲಿ ಕಕ್ಷಿ ಅದರ ದೋಷಗಳು ; ಮೈಸೂರ ಮುಮ್ಮಡಿ ಶ್ರೀಕೃಷ್ಣರಾಜ ಪ್ರಭುವಿನ ಆಸ್ಥಾನ, ಅವರ ಮಹತ್ತರವಾದ ಔದಾರ್ಯ ; ಆಸ್ಥಾನದ ನಕಲಿ ; ಹೇಳಿದ್ದನ್ನೆಲ್ಲಾ ನಂಬುವ ಗ್ರಾಮವಾಸಿಗಳು ; ಪತಿವ್ರತಾ ಚರಿತ್ರೆ ; ಸಹ ಗಮನ ; ಗ್ರಾಮಗಳ ಕೊಳಚೆ ; ಅತ್ತೆಸೊಸೆಯರ ಪರಸ್ಪರ ಕಿರುಕುಳ ; ಮಠದ ಉಪಾಧ್ಯಾಯ, ಅವನ ಕ್ರೌರ್ಯ, ಬಾಲಕರಿಗೆ ಅವ ಕೊಡುವ ಶಿಕ್ಷೆ, ಅವನ ಮಹತ್ತರ ವಾದ ಕೃತಘ್ನತೆ, ವಿದ್ಯಾರ್ಥಿಗಳಿಗೆ ಮಾಡುವ ಕ್ರೂರವಾದ ಶಿಕ್ಷೆ, ಅದರ ಧರ್ಮಸೂಕ್ಷ್ಮ; ಕಾಪಟ್ಯ, ಅದರ ನೀಚಕೃತ್ಯಗಳು ; ನಿಜವಾದ ಸೌಂದರ್ಯವನ್ನು ಸೌಂದರ್ಯವಲ್ಲವೆಂದು ಮಾಡುವ ವರ್ಣನೆ ; ಪಾತಿವ್ರತ್ಯವನ್ನು ಭಂಗ ಮಾಡಲು ನಡೆಸಿದ ಅತಿಹೇಯವಾದ ಪ್ರಯತ್ನ ; ಶಾಬರ ಪ್ರಯೋಗದ ನೀಚಕೃತ್ಯ ; ಒಬ್ಬ ಐಲು ಮನುಷ್ಯನ ಹರಟೆಯಿಂದ ಹುಟ್ಟುವ ಹಾಸ್ಯ ; ಒಬ್ಬ ಹುಟ್ಟು ಕಳ್ಳ ಹೇಳಿಕೊಳ್ಳುವ ಸ್ವವಿಚಾರದ ಕಥೆ ; ಶ್ಮಶಾನ ದಲ್ಲಿ ನಡೆದ ಅತಿಭಯಂಕರವಾದ ವಿಷಯ ; ಒಬ್ಬ ಮಹಾಮಂತ್ರವಾದಿ ಮಾಡಿದ ಅದ್ಭುತವಾದ ಕಾರ್ಯ ; ಮತ್ತು ಅವನ ಪಾರಮಾರ್ಥಿಕತೆ ; ಆದ್ಯಂತವಾಗಿರುವ ನೀತಿಯ ಸಾರಾಂಶ ; ಇವೇ ಮೊದಲಾದ ಸಂಗತಿಗಳನ್ನೆಲ್ಲಾ ಆಯಾ ಸ್ಥಳಗಳಲ್ಲಿ ವಿವರಿಸಿದ್ದೇನೆ" ಎಂದು ಪುಟ್ಟಣ್ಣನವರು ಪೀಠಿಕೆಯಲ್ಲಿ ಹೇಳಿದ್ದಾರೆ. ಕಾದಂಬರಿಯ ಘಟನೆಗಳ ಆನು ಪೂರ್ವಿ ಹೆಚ್ಚು ಕಡಮೆ ಇದೇ ಆಗಿದೆ. ಸಂಗತಿಗಳು ಕಾಲಾನುಸಾರಿಯಾಗಿಯೂ ಇವೆ.

**ಮುಸುಗ ತೆಗೆಯೇ ಮಾಯಾಂಗನೆ**

ಈ ಕಾದಂಬರಿಯ ಕಥೆಯ ಕಾಲವೂ ಮುಮ್ಮಡಿಯವರ ಕಾಲಮಾನಕ್ಕೆ ಸೇರಿ ದುದೇ. ಅಪರಾಧಿಯ ಬದಲು ನಿರಪರಾಧಿಗೆ ಶಿಕ್ಷೆಯಾಗುವುದನ್ನು ತಪ್ಪಿಸಿ ಹದಗೆಟ್ಟ

ಪರಿಸ್ಥಿತಿಯನ್ನು ತಿದ್ದುವುದು ಕಾದಂಬರಿಯ ವಸ್ತು. ರಾಜಾಸ್ಥಾನದ ಇಬ್ಬರು ಅಧಿಕಾರಿಗಳು ದೇಪಣ್ಣ ಮತ್ತು ಬಸಪ್ಪ. ತಮ್ಮ ಕೈತಪ್ಪಿ ಹೋದ ದೌಲತ್ತು ಮರಳಿ ಕೈಸೇರಲು ರಾಜತಂತ್ರಗಳನ್ನು ನಡೆಸಲು ಶಕ್ತನೂ ಸಹಾಯಕನೂ ಆಗಿದ್ದಾನೆಂಬ ಕಾರಣದಿಂದ ದೊರೆಗಳಿಗೆ ದೇಪಣ್ಣನಲ್ಲಿ ಹೆಚ್ಚು ವಿಶ್ವಾಸ. ದೇಪಣ್ಣನ ಸಂಬಂಧ ಬೆಳೆಸಿದ್ದ ನಾಗರತ್ನಳೆಂಬ ವೇಶ್ಯೆಯ ಮೇಲೆ ಬಸಪ್ಪನ ಕಣ್ಣು ಬೀಳುತ್ತದೆ. ಅವನ ಪ್ರಯತ್ನ ಫಲಿಸುತ್ತದೆ. ಈತನ ದೌರ್ಬಲ್ಯ ದೊರೆಗಳಿಗೆ ತಿಳಿದು ಬಸಪ್ಪನಿಗೆ ಅವರಿಂದ ಛೀಮಾರಿಯಾಗುತ್ತದೆ. ಬಸಪ್ಪ ಹಾವಿನಂತೆ ಕೆರಳಿ ಛಲ ಸಾಧಿಸಲುದ್ಯುಕ್ತನಾಗುತ್ತಾನೆ.

ಇಂಗ್ಲಿಷರು ಟಿಪ್ಪುವನ್ನು ಮೋಸದಿಂದ ಸೋಲಿಸಿದಾಗ ಇಂಗ್ಲಿಷರಿಗೆ ನೆರವಾದ ಮೀರ್‌ಸಾದಕನನ್ನು ಎದುರಿಸಿ ಕೊಂದ ತುಕ್ಕುಡಿಯ ಪಡೆಗೆ ಸೇರಿದ್ದ ಒಬ್ಬ ಮರಾಠಾ ವೀರ ಹನುಮಂತರಾವ್ ರಣನವರೆ. ಬಾಜೀರಾವ್ ಪೇಶ್ವೆ ಮೈಸೂರು ದೇಶದೊಳಗೆ ಬಂದಾಗ ಅವನನ್ನು ಸೆರೆಹಿಡಿಯಲು ಇಂಗ್ಲಿಷರು ಮೈಸೂರಿನ ದೊರೆಗಳ ಸಹಾಯವನ್ನು ಬಯಸುತ್ತಾರೆ. ಬಕ್ಷಿ ರಾಮರಾವ್ ಮತ್ತು ಬಕ್ಷಿ ಭೀಮರಾವ್ ಅವರು ದೊರೆಯ ಅಪ್ಪಣೆಯಂತೆ ಈ ಕೆಲಸವನ್ನು ಆಗಮಾಡುತ್ತಾರೆ. ಆ ಪಡೆಯಲ್ಲಿ ಹನುಮಂತರಾವ್ ರಣನವರೆ ಕೂಡ ಇದ್ದನು. ಹಲವು ಯುದ್ಧಗಳಲ್ಲಿ ಭಾಗವಹಿಸಿ ಜಯ ಲಭಿಸಲು ಈತ ಕಾರಣನಾದರೂ ಈತನಿಗೆ ತಕ್ಕ ಸನ್ಮಾನ ಸಿಗದೆ ಸಿಡಿಮಿಡಿಯಾಗುತ್ತಾನೆ. ಯುದ್ಧಗಳಲ್ಲಿ ಹೋರಾಡುವಾಗ ಹೊಡೆದ ಕೊಳ್ಳೆಮಾಲು ಇವನ ಬಳಿ ಸಾಕಷ್ಟು ಸಂಗ್ರಹವಾಗಿರುತ್ತದೆ. ಯುದ್ಧ ಮುಗಿದ ಮೇಲೆ ಈತ ಸಾತಾರೆಯ ದುರ್ಗಾಬಾಯಿ ಎಂಬಾಕೆಯನ್ನು ಮದುವೆಯಾಗಿ ಮೈಸೂರಿನಲ್ಲಿ ವಾಸವಾಗಿರುತ್ತಾನೆ. ಅಪ್ರಮೇಯ ಎಂಬುವನು ಈತನ ಆಡಳಿತಕ್ಕೆ ಸಂಬಂಧಿಸಿದ ಕಾಗದ ಪತ್ರಗಳ ವ್ಯವಹಾರವನ್ನು ನೋಡಿಕೊಳ್ಳುವ ನಂಬಿಕೆಗೆ ಅರ್ಹನಾದ ವ್ಯಕ್ತಿ. ಇಂಗ್ಲಿಷ್ ಸರದಾರರೊಡನೆ ಬಳಕೆಯಿರುವ ವ್ಯಕ್ತಿಗಳೊಡನೆ ದೇಪಣ್ಣ ಸಂಪರ್ಕ ಬೆಳೆಸಲುದ್ಯುಕ್ತನಾಗುತ್ತಾನೆ. ಹನುಮಂತರಾವ್ ರಣನವರೆ ಅವರಲ್ಲೊಬ್ಬ.

ದೇಪಣ್ಣನನ್ನು ಈಗಿನ ಸ್ಥಾನದಿಂದ ಉರುಳಿಸಬೇಕಾದರೆ ರಣನವರೆಯನ್ನು ಆ ಸಂಚಿಗೆ ಬಲಿಪಶುವನ್ನಾಗಿಸಿಕೊಳ್ಳಬೇಕೆಂದು ಬಸಪ್ಪ ಮತ್ತು ಅವನ ಅನುಯಾಯಿಗಳು ತೀರ್ಮಾನಿಸುತ್ತಾರೆ. ಇವರಿಗೆ ಇಂಗ್ರೇಜಿ ಹಯಾತ್‌ಖಾನ್ ಎಂಬ ಭಂಡನಾದ ಸುಲಿಗೆಗಾರನ ನೆರವು ಸಿಗುತ್ತದೆ. ಪೇಶ್ವೆಯಿಂದ ಕಸಿದುಕೊಂಡ ಕಳ್ಳಮಾಲನ್ನು ಒಪ್ಪಿಸದಿದ್ದರೆ ಇಂಗ್ಲಿಷ್ ಸರಕಾರದವರ ಶಿಕ್ಷೆಗೊಳಗಾಗಬೇಕಾಗುತ್ತದೆ ಎಂಬ ಪ್ರವಾದವನ್ನು ಇವರುಗಳು ಹುಟ್ಟಿಸುತ್ತಾರೆ. ಹನುಮಂತರಾವ್ ವೀರನಾದರೂ ಶ್ರೀಮಂತನಾದರೂ ಚಾತುರ್ಯಸಂಬಂಧವಾದ ಲೌಕಿಕ ವಿಷಯಗಳಲ್ಲಿ ಮುಗ್ಧನಾದುದರಿಂದ ಈ ಪ್ರವಾದ ಅವನನ್ನು ಸಂದಿಗ್ಧ ಪರಿಸ್ಥಿತಿಯಲ್ಲಿ ಕೆಡವುತ್ತದೆ. ರತ್ನಗಳ ಪರೀಕ್ಷೆಯಲ್ಲಿ ನುರಿತವನಾದ ಅವನನ್ನು ನಂಬಿಸಿ ಒಂದು ದಿನ ಒಂದು ರಹಸ್ಯ ಸ್ಥಳಕ್ಕೆ ಕರೆದೊಯ್ದು ಹಿಂತಿರುಗುವ ಕಾಲದಲ್ಲಿ ಪುಂಡರು ಮುತ್ತುವಂತೆ ಮಾಡುತ್ತಾರೆ. ಕೊಳ್ಳೆಮಾಲಿನ ಸಂಬಂಧದಲ್ಲಿ

ಭಯಪಡುತ್ತಿದ್ದ ರಣನವರೆ ಸದಾಕಾಲವೂ ಅದೇ ಭಯದಲ್ಲಿ ತೊಳಲುತ್ತಿದ್ದುದರಿಂದ ತನ್ನನ್ನು ಇಂಗ್ಲಿಷ್ ಸರಕಾರದವರು ಬಂಧಿಸುತ್ತಿದ್ದಾರೆಂದು ತಿಳಿದು ಸಾಧ್ಯವಾದಷ್ಟು ಜನರನ್ನು ಹೊಡೆದು ಓಡಿಹೋಗುತ್ತಾನೆ. ಅವನ ಹೆಣ ಕಾಲುವೆಯಲ್ಲಿ ದೊರಕಿತೆಂಬ ಸುದ್ದಿ ಹರಡುತ್ತದೆ. ರಣನವರೆಯ ಎಡದ ಕಾಲಿನಲ್ಲಿ ಹೆಬ್ಬೆರಳು ಮಧ್ಯದಲ್ಲಿ ಕುಯಿದು ತಗ್ಗಿದಂತೆ ಇತ್ತೆಂದೂ ಈ ಹೆಣದಲ್ಲಿ ಆ ಚಿಹ್ನೆ ಇಲ್ಲವೆಂದೂ ಅಪ್ರಮೇಯ ಮಾಡಿದ ಸೂಚನೆ ವಿಶೇಷವಾಗಿ ಗಮನಿಸಲ್ಪಡುವುದಿಲ್ಲ. ರಣನವರೆಯ ಪತ್ನಿ ದುರ್ಗಾಬಾಯಿ ಮಾಡಿದುದೆಂದು ಹೇಳಲಾದ ಕೊಲೆಯ ಆರೋಪದಿಂದ ಕೊಲೆಯ ಸಂಚು ದೇಪಣ್ಣನ ಮೇಲೆ ಬರುತ್ತದೆ. ಆಸ್ಥಾನದಲ್ಲಿ ಉದ್ಯೋಗ ಕೊಡಿಸುತ್ತೇನೆಂದು ದೇಪಣ್ಣ ಹೇಳಿ 500 ರೂ ಪಡೆದದ್ದಾಗಿಯೂ ದೇಪಣ್ಣನಿಂದ ಯಾವುದೇ ಕೆಲಸ ದೊರಕದಿದ್ದಾಗ ಹಣವನ್ನು ಹಿಂತಿರುಗಿಸೆಂದು ತನ್ನ ಪತಿ ಕೇಳಿದನೆಂದೂ ಅದಕ್ಕಾಗಿ ದೇಪಣ್ಣನಿಂದ ತನ್ನ ಗಂಡನ ಕೊಲೆಯಾಯಿತೆಂದೂ ಆ ಆಪಾದನೆಯಲ್ಲಿರುತ್ತದೆ. ಈ ಆಪಾದನೆಗೆ ಹಲವು ಸಿದ್ಧ ಸಾಕ್ಷ್ಯಗಳು ದೊರಕಿ ದೇಪಣ್ಣ ಮತ್ತು ಅವನ ಗೆಳೆಯರು ಸೆರೆಮನೆಗೆ ಹೋಗ ಬೇಕಾಗಿ ಬರುತ್ತದೆ.

ಅಪ್ರಮೇಯ ಮುಂದೆ ಕಾರ್ಯೋದ್ಯುಕ್ತನಾಗುತ್ತಾನೆ. ತನ್ನ ಒಡೆಯನಿಗಾಗಿ ದೇಶ ಸುತ್ತಿಕೊಂಡು ಅಲೆಯುತ್ತಾನೆ. ಹಲವು ದಿನಗಳ ಶ್ರಮದ ನಂತರ ಆತ್ಮಾರಾಂ ಬಾವಾಜಿ ಎಂಬಾತನಿಂದ ತನ್ನ ಕಾರ್ಯ ಕೈಗೂಡುತ್ತದೆಂಬ ಸೂಚನೆ ಸಿಗುತ್ತದೆ. ನರ ಬಲಿ ಕೊಡುವ ಕರಾಟಿಗರ ಗುಂಪಿಗೆ ಸಿಕ್ಕಿ ತಪ್ಪಿಸಿಕೊಂಡು, ಜನ್ನೈಯ್ಯಂಗಾರಿ ಎಂಬ ವ್ಯಕ್ತಿಯಂತೆ ನಟಿಸಿ ತಾನು ಅಪ್ರಮೇಯನ ವೈರಿ ಎಂದು ಹೇಳಿಕೊಂಡು ಬಸಪ್ಪನ ಕೂಟಕ್ಕೆ ಸೇರಿ ಗುಟ್ಟುಗಳನ್ನು ತಿಳಿಯುತ್ತಾನೆ. ನ್ಯಾಯಾಸ್ಥಾನದಲ್ಲಿ ಮರುವಿಚಾರಣೆಗೆ ಏರ್ಪಾಟಾಗುತ್ತದೆ. ಗೋಷಾದಲ್ಲಿರುವ ರಣನವರೆಯ ಪತ್ನಿ ದುರ್ಗಾಬಾಯಿ ಎಂದು ಹೇಳಲಾದ ಹೆಂಗಸಿನ ಹೇಳಿಕೆಗೆ ಬೆಲೆ ಬರುತ್ತದೆಯೋ ಹೊರತು ಅಪ್ರಮೇಯನ ಪ್ರಯತ್ನವೆಲ್ಲಾ ನಿರುಪಾಯವಾಗುತ್ತದೆ. ಆ ಹೊತ್ತಿಗೆ ಸರಿಯಾಗಿ ರಣನವರೆ ತನ್ನ ಹೆಂಡತಿಯೊಡನೆ ನ್ಯಾಯಾಲಯಕ್ಕೆ ಬರುತ್ತಾನೆ. ಮುಸುಕು ಹಾಕಿದ್ದಾಕೆ ದುಷ್ಟರ ಕೂಟಕ್ಕೆ ಸೇರಿದ್ದ ಚೆನ್ನಿ ಎಂಬ ಹೆಂಗಸು ಎಂದು ತಿಳಿದುಬರುತ್ತದೆ. ಈ ಮಾಯಾಂಗನೆಯ ಮುಸುಕು ತೆಗೆದಾಗ ಅಪ್ರಮೇಯನ ಪ್ರಯತ್ನ ಸಫಲವಾಗುತ್ತದೆ, ನಿಜಾನಿಜಗಳು ಎಲ್ಲರ ಅರಿವಿಗೆಬರುತ್ತದೆ. ಬಸಪ್ಪ ಮತ್ತು ಅವನ ಗೆಳೆಯರಿಗೆ ಸೆರೆಮನೆಯೇ ಗತಿಯಾಗುತ್ತದೆ. ದೇಪಣ್ಣನ ಮೇಲಿರುವ ಅಪವಾದ ತೊಲಗಿ ಸೆರೆಮನೆಯಿಂದ ಬಿಡುಗಡೆಯಾಗುತ್ತದೆ. ರಾಜಾಸ್ಥಾನದ ಗೌರವಕ್ಕೆ ಹನುಮಂತರಾವ್ ಮತ್ತು ಅಪ್ರಮೇಯ ಪಾತ್ರರಾಗುತ್ತಾರೆ.

'ಮುಸುಗ ತೆಗೆಯೇ ಮಾಯಾಂಗನೆ'ಯ ಹೆಸರು ಈ ಕಾದಂಬರಿ ಪತ್ತೇದಾರಿ ಕಥೆಯನ್ನೋ ರಂಜನೀಯವಾದ ಸುರಸ ಕಥೆಯನ್ನೋ ಹೇಳುತ್ತದೆ ಎನಿಸುವಂತೆ ಮಾಡುತ್ತದೆ. ಇಲ್ಲಿ ಪತ್ತೇದಾರಿ ಎಳೆಯಿರುವುದೇನೋ ನಿಜವೇ. ಜೊತೆಗೆ ಕಾದಂಬರಿಯ ತೆಳುವಾದ ಕಥೆಯ ಹಂದರದಲ್ಲಿ ರಾಜಕೀಯದ ಎಳೆಗಳಿವೆ. ಬ್ರಿಟಿಷರ ಕೈಯಿಂದ

ಮೈಸೂರು ಅರಸೊತ್ತಿಗೆಯನ್ನು ಬಿಡಿಸಿ ಪುನಃ ಅದನ್ನು ಮುಮ್ಮಡಿಯವರ ಕೈಸೇರುವಂತೆ ಮಾಡಲು ಬ್ರಿಟಿಷ್ ಸರದಾರನನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವ ಒಂದು ಹವಣು ಕಾಣುತ್ತದೆ. ಕಥೆ ನಡೆಯುವುದು ಮೈಸೂರಿನಲ್ಲಿ. ಮುಮ್ಮಡಿಯ ರಾಜಾಸ್ಥಾನವೇ ಕಥೆಯ ಮೂಲವೇದಿಕೆ. ಅಂದಿನ ಮೈಸೂರಿನ ರಾಜಕೀಯ ಸ್ಥಿತಿಯಲ್ಲಿನ ಒಳಜಗಳಗಳು, ಅಸೂಯೆ, ಪಿತೂರಿ ಮೊದಲಾದ ಎಲ್ಲ ಗೊಂದಲಗಳೂ ಸ್ಪಷ್ಟವಾಗಿ ಚಿತ್ರಿತವಾಗಿವೆ. ಸಾಮಾಜಿಕ ವಿವರಗಳು ಪ್ರಾಮಾಣಿಕವಾಗಿ ಚಿತ್ರಿತವಾಗಿವೆ. ಕಥೆಯ ಮುಖ್ಯಪಾತ್ರವಾದ ಅಪ್ರಮೇಯನ ಪ್ರಾಮಾಣಿಕತೆಯೊಂದೇ ಅವನ ಬಲ. ಪುರುಷ ಪ್ರಯತ್ನದ ಪ್ರತೀಕವಾಗಿ ಅಪ್ರಮೇಯ ಇಲ್ಲಿ ಕಾಣಿಸಿಕೊಳ್ಳುತ್ತಾನೆ.

**ಅವರಿಲ್ಲದೂಟ**

ರಾಮಸ್ವಾಮಯ್ಯಂಗಾರಿ ಮತ್ತು ರಂಗನಾಯಕಮ್ಮ ದಂಪತಿಗಳಿಗೆ ಅಪಾರ ಸಂಪತ್ತಿದ್ದರೂ ಸಂತಾನಭಾಗ್ಯವಿಲ್ಲದ್ದೊಂದೇ ಕೊರತೆ. ರಾಮಸ್ವಾಮಿಯ ತಂದೆಯ ಕಾಲದಲ್ಲಿ ಅವರ ಮನೆಯಲ್ಲಿ ಪೋಷಿತನಾದ ರಾಮುಜಿ ಎಂಬಾತ ದೂರಪ್ರಾಂತ್ಯಗಳಲ್ಲಿ ಸೇವೆ ಸಲ್ಲಿಸಿ ಅನಂತರ ಈತನ ಆಶ್ರಯಕ್ಕೆ ಬರುತ್ತಾನೆ. ಈತನ ಹೆಂಡತಿ ತೀರಿಹೋಗಿದ್ದಾಳೆ, ಮಕ್ಕಳಿಲ್ಲವೆಂದು ಮಲ್ಲನೆಂಬ ಹುಡುಗನನ್ನು ಸಾಕಿಕೊಂಡಿದ್ದಾನೆ. ಈತನೂ ರಾಮಸ್ವಾಮಿಯ ಮನೆಗೆ ಬರುತ್ತಾನೆ. ರಾಮಸ್ವಾಮಿ ರಂಗನಾಯಕಮ್ಮ ಇವರುಗಳಿಗೆ ಜಾನಕಿ ಎಂಬ ಮಗಳಾಗಿ ಮುಂದೆ ಆಕೆಯ ಮದುವೆ ಒಬ್ಬ ಸದ್ಗುಣಿ, ವಿದ್ಯಾವಂತ, ಬಡವನ ಜೊತೆ ಆಗುತ್ತದೆ. ಗಂಡಹೆಂಡಿರು ಅನ್ಯೋನ್ಯವಾಗಿರುತ್ತಾರೆ. ಒಂದು ಗಂಡು ಮಗು ಆಗುತ್ತದೆ. ಆದರೆ ಬಾಲ್ಯದಿಂದಲೂ ಮಲ್ಲನಿಗೆ ಜಾನಕಿ ಹಾಗೂ ಅವಳ ಆಸ್ತಿಯ ಮೇಲೆ ಕಣ್ಣಿದ್ದು ಜಾನಕಿಯ ಮದುವೆಯಾದಾಗಿನಿಂದ ಆತ ಒಳಗೇ ವ್ಯಗ್ರನಾಗಿರುತ್ತಾನೆ. ರಂಗನಾಯಕಮ್ಮ ಕೋಟಿ ತುಳಸಿಪೂಜೆ ಮಾಡಿ ಉದ್ಯಾಪನೆಯನ್ನು ಮಾಡಲಿರುವಳೆಂದೂ ಅದಕ್ಕೆ ಮಗಳು ಅಳಿಯ ಮೊಮ್ಮಗನನ್ನು ಕರೆತರಲು ಹೇಳಿದ್ದಾಳೆಂದೂ ಮಲ್ಲ ಪೆಟ್ಟಿಗೆ ಗಾಡಿ ತೆಗೆದುಕೊಂಡು ಬರುತ್ತಾನೆ. ಬೇಕೆಂದು ಹೊತ್ತು ಮಾಡಿಕೊಂಡು ಹೊರಟು, ದಾರಿ ತಪ್ಪಿಸಿ ಅಡ್ಡದಾರಿಗೆ ಕರೆತರುತ್ತಾನೆ. ಜಾನಕಿಯ ಮಾತನ್ನು ಅಸಡ್ಡೆ ಮಾಡುತ್ತಾನೆ. ಜಾನಕಿಯ ಗಂಡ ನರಸಿಂಹಾಚಾರಿಯ ಮೈಯಲ್ಲಿ ಆರೋಗ್ಯವಿಲ್ಲದೆ ನರಳುತ್ತಿರುತ್ತಾನೆ. ಅವನಿಗೆ ನೀರು ತರಲು ಜಾನಕಿ ಮಲ್ಲನೊಡನೆ ಹೋಗುತ್ತಾಳೆ. ಮರುದಿನ ಬೆಳಗಿನ ಜಾವ ಅವಳು ಬಾವಿಯೊಳಗಿಂದ ಕಿರಿಚುವ ಸದ್ದು ಕೇಳಿ ದಾರಿಗರು ಅವಳನ್ನು ಮೇಲೆತ್ತುತ್ತಾರೆ. ನೀರುತರಲು ಈ ಬಾವಿಯ ಬಳಿ ಬಂದಾಗ ಹಗ್ಗ ತರಲು ಮಲ್ಲ ಹೋದನೆಂದೂ, ಒಂದೆರಡು ನಿಮಿಷಕ್ಕೆ ಯಾವುದೋ ಭೂತ ಬಂದು ಒಡವೆಯನ್ನೆಲ್ಲಾ ಕಿತ್ತುಕೊಂಡು ಬಾವಿಯಲ್ಲಿ ನೂಕಿತೆಂದೂ ಜಾನಕಿ ಹೇಳುತ್ತಾಳೆ. ಅವಳನ್ನು ಅವಳ ಮಗುವನ್ನು ತಂದೆ ರಾಮಸ್ವಾಮಿ ಬಂದು ಮನೆಗೆ ಕರೆದೊಯ್ಯುತ್ತಾನೆ. ಮಲ್ಲನ ದೇಹ ಅಲ್ಲೇ ಬಿದ್ದಿರುವುದು ಕಾಣುತ್ತದೆ. ನರಸಿಂಹಾ

ಚಾರಿಯ ಸುಳಿವು ಸಿಗುವುದಿಲ್ಲ. ಮುಂದೆ ಮಲ್ಲನಿಗೆ ಹಾವಿನ ಕಡಿತದಿಂದ ವಿಷವೇರಿದೆ ಯೆಂದೂ ಪ್ರಾಣ ಹೋಗಿಲ್ಲವೆಂದೂ ತಿಳಿಸಿ ಅವನನ್ನು ಒಬ್ಬ ಫಕೀರ ಬದುಕಿಸುತ್ತಾನೆ. ಎದ್ದು ಹೋದ ಮಲ್ಲ ಪುನಃ ಹಿಂತಿರುಗುವುದಿಲ್ಲ. ಅಳಿಯನಿಗಾಗಿ ರಾಮಸ್ವಾಮಿ ಎಷ್ಟೇ ಹುಡುಕಿಸಿದರೂ ಫಲಕಾರಿಯಾಗುವುದಿಲ್ಲ. ಮೊಮ್ಮಗ ಓದಿ ವಿದ್ಯಾವಂತನಾಗು ತ್ತಾನೆ.

ಬಳ್ಳಾರಿಯಲ್ಲಿದ್ದ ಒಬ್ಬ ಗುಜರಾತಿ ವರ್ತಕನ ಎರಡನೇ ಪತ್ನಿ ನಾಗರತ್ನಳಿಗೂ ಧೀರಾಜಿ ಎಂಬ ಶ್ರೀಮಂತ ಪಡ್ಡೆ ಯುವಕನಿಗೂ ಸಂಬಂಧ ಬೆಳೆಯುತ್ತದೆ. ವಿಟನಾದ ಧೀರಾಜಿಯೊಡನೆ ಸಂಬಂಧ ಬೆಳೆಸಲು ಸಹಕಾರಿಯಾದ ಮೋಟಜ್ಜಿಯ ದುರ್ಬೋಧ ನೆಗೂ ತನ್ನ ಮನಸ್ಸಿನ ದೌರ್ಬಲ್ಯಕ್ಕೂ ಮರುಳಾಗಿ ನಾಗರತ್ನ ತನ್ನ ಮುದಿ ಅತ್ತೆ ಸರಿಯಾದ ಶುಶ್ರೂಷೆ ಇಲ್ಲದೆ ಸಾಯುವಂತೆ ಮಾಡುತ್ತಾಳೆ. ಬಲಮಗ ಸೊಸೆ ಮನೆ ಬಿಟ್ಟು ಹೋಗುತ್ತಾರೆ. ರತನ್‌ಬಾಲಾಜಿ ಎಂಬ ಇವಳ ಮಗ ಕೂಡ ಅಣ್ಣನೊಡನೆ ಹೊರಟುಹೋದಾಗ ಈಕೆ ತನ್ನ ಮಗ ರತನ್‌ಬಾಲಾಜಿಯ ಕೊಲೆ ಆಗಿದೆಯೆಂದೂ ಆ ಕೊಲೆಯನ್ನು ತನ್ನ ಗಂಡನಾದ ಧರ್ಮದಾಸ ಮಾಡಿದ್ದೆಂದೂ ಆರೋಪಿಸುತ್ತಾಳೆ. ಧರ್ಮದಾಸನ ಹಿರಿಮಗ ಬಚ್ಚಾಜಿ ಕೊಲೆಯಾದನೆಂದು ಆರೋಪಿಸಲಾದ ಬಾಲಕನನ್ನು ನ್ಯಾಯಾಲಯಕ್ಕೆ ಕರೆತರುತ್ತಾನೆ. ಧರ್ಮದಾಸನ ಆರೋಪ ತೊಲಗಿ ನಾಗರತ್ನಬಾಯಿ ಯನ್ನು ಹಿಡಿತರಲು ನ್ಯಾಯಾಲಯದ ಆಜ್ಞೆಯಾಗುತ್ತದೆ. ಆ ವೇಳೆಗೆ ಎಲ್ಲ ಸಂಪತ್ತಿ ನೊಡನೆ ನಾಗರತ್ನ ಹಾಗೂ ಧೀರಾಜಿ ಓಡಿಹೋಗುತ್ತಾರೆ. ಪುಣೆಯಲ್ಲಿ ಮದನಸಿಂಗ್ ಮತ್ತು ಕುಸುಮಾಕ್ಷಿ ಎಂಬ ಹೆಸರಿನಿಂದ ಜೀವಿಸುತ್ತಿರುತ್ತಾರೆ. ಬಚ್ಚಾಜಿಯ ಪ್ರಚೋ ದನೆಯಿಂದ ಕಿಸನ್ ಎಂಬಾತ ಶಿವಗನೆಂಬ ಹೆಸರಿನಲ್ಲಿ ಇವರ ಮನೆಯಲ್ಲಿ ಊಳಿಗಕ್ಕೆ ಸೇರಿ ತನ್ನ ನಟನೆಯಿಂದ ಇಬ್ಬರನ್ನೂ ನಂಬಿಸಿ ಆಪ್ತನಾಗಿ ಅವರ ಗುಟ್ಟುಗಳನ್ನು ಅರಿಯುವುದರ ಜೊತೆ ಅವರಿಬ್ಬರ ನಡುವೆ ವೈಮನಸ್ಯವುಂಟಾಗುವಂತೆ ಮಾಡುತ್ತಾನೆ. ಇಬ್ಬರೂ ಪರಸ್ಪರ ಆಪಾದನೆ ಮಾಡುತ್ತಿದ್ದಾಗ ಇವರ ಗುಟ್ಟು ಹೊರಬಿದ್ದು ನಾಗರತ್ನಳನ್ನು ಕಂದಾಚಾರದವರು ಹಿಡಿದು ಬಳ್ಳಾರಿಗೆ ಕರೆತರುತ್ತಾರೆ. ಧೀರಾಜಿ ಓಡಿಹೋಗುತ್ತಾನೆ. ವಿಚಾರಣೆ ಆಗುವ ಕಾಲಕ್ಕೆ ಚಂಡಮಾರುತ, ಮಳೆ ಪ್ರಾರಂಭ ವಾಗಿ ನಾಗರತ್ನ ಸಿಡಿಲು ಹೊಡೆದು ಸಾಯುತ್ತಾಳೆ.

ರಾಮಸ್ವಾಮಿ ತನ್ನ ಮಗಳು ಮೊಮ್ಮಗನೊಂದಿಗೆ ಅಳಿಯನ ತಾಯಿಯನ್ನೂ ಕರೆದುಕೊಂಡು ದೇಶ ಸುತ್ತುತ್ತಾ, ಹೋದೆಡೆಯಲ್ಲೆಲ್ಲಾ ಮೊಮ್ಮಗನ ವಿದ್ಯೆಗೆ ರಾಜ ಮನ್ನಣೆಯನ್ನು ಪಡೆಯುತ್ತಾ ರೀವಾ ಸಂಸ್ಥಾನಕ್ಕೆ ಬರುತ್ತಾನೆ. ವಿದ್ವಾಂಸನಾದ ನರಸಿಂಹಾಚಾರಿ ಯಾವುದಾದರೂ ರಾಜಾಸ್ಥಾನದಲ್ಲಿ ಕಂಡಾನು ಎಂಬ ಗುಪ್ತ ಆಶೆ ಎಲ್ಲರಿಗೂ ಇರುತ್ತದೆ. ರೀವಾ ಸಂಸ್ಥಾನಕ್ಕೆ ಬಂದ ದೊಂಬರ ಗುಂಪಿನ ಒಂದು ವಿಚಾ ರಣೆ ಆಸ್ಥಾನಕ್ಕೆ ಬರುತ್ತದೆ. ತಮ್ಮ ಗುಂಪಿಗೆ ಹೊಸದಾಗಿ ಸೇರಿದ ಒಬ್ಬ, ತಮ್ಮ ಮಾತನ್ನು ಮೀರಿದ್ದಾನೆಂದೂ ಅವನನ್ನು ತಮ್ಮ ಗುಂಪಿನಿಂದ ಉಚ್ಚಾಟಿಸಿದ್ದಾಗಿಯೂ

ವಿಚಾರಿಸಿ ಶಿಕ್ಷಿಸುವ ಹೊಣೆ ಆಸ್ಥಾನದ್ದೆಂದೂ ವಿಚಾರಣೆ ನಡೆಯದಿದ್ದರೆ ತಾನೇ ಆತನನ್ನು ಕೊಲ್ಲುವುದಾಗಿಯೂ ಗುಂಪಿನ ಮುಖ್ಯಸ್ಥ ತಿಳಿಸುತ್ತಾನೆ. ತಪ್ಪು ಮಾಡಿದ ಹೊಸಬನ ವಿಚಾರಣೆಯ ಕಾಲದಲ್ಲಿ ಆತ ಬಳ್ಳಾರಿಯಲ್ಲಿ ಧೀರಾಜಿ ಎಂಬ ಹೆಸರಿಟ್ಟು ಕೊಂಡಿದ್ದ ಮಲ್ಲ ಎಂಬುದು ಬೆಳಕಿಗೆ ಬರುತ್ತದೆ. ಜಾನಕಿಯನ್ನು ಬಾವಿಯಲ್ಲಿ ನೂಕಿ ಒಡವೆಗಳನ್ನು ಅಪಹರಿಸಿದ್ದಾಗಿ ಆತ ತಪ್ಪೊಪ್ಪಿಕೊಳ್ಳುತ್ತಾನೆ. ರಾಮಸ್ವಾಮಿ ತನ್ನ ಕುಟುಂಬಕ್ಕೆ ಒದಗಿದ ಪಾಡನ್ನು ರಾಜಸಭೆಯಲ್ಲಿ ತಿಳಿಸುತ್ತಾನೆ. ಅದೇ ಆಸ್ಥಾನದಲ್ಲಿ ರಾಜಗುರುವಾಗಿದ್ದಾತನೇ ನರಸಿಂಹಾಚಾರಿ ಎಂಬುದು ತಿಳಿದುಬರುತ್ತದೆ. ಅಂದು ಗಾಡಿಯಲ್ಲಿ ಬಂದಾಗ ಪ್ರಜ್ಞೆ ತಪ್ಪಿದ್ದಾಗಿಯೂ ತಿಳಿವು ಬಂದಾಗ ತನ್ನ ಪತ್ನಿ, ಮಲ್ಲ ಇಬ್ಬರೂ ಇರದುದನ್ನು ಕಂಡು ತಾನು ಪತ್ನಿಯ ಶೀಲವನ್ನು ಶಂಕಿಸಿ ಹೊರಟು ಬಿಟ್ಟದ್ದಾಗಿಯೂ ಈಗ ಆಕೆ ನಿರಪರಾಧಿನಿ ಎಂದು ಅರಿತದ್ದಾಗಿಯೂ ನರಸಿಂಹಾಚಾರಿ ಹೇಳುತ್ತಾನೆ. ಮಲ್ಲನಿಗೆ ಮರಣದಂಡನೆಯಾಗುತ್ತದೆ. ಗಂಡಹೆಂಡತಿ, ತಂದೆ ಮಕ್ಕಳು, ತಾಯಿ ಮಕ್ಕಳು, ಮಾವ ಅಳಿಯಂದಿರ ಸಮಾಗಮ ರಾಜಾಸ್ಥಾನದಲ್ಲಿ ಉಂಟಾಗುತ್ತದೆ.

ಈ ಕಾದಂಬರಿಯಲ್ಲಿ ಮೊದಲಿನ ಎರಡು ಕಾದಂಬರಿಗಳಿಗಿಂತ ಹೆಚ್ಚು ಮಹತ್ತ್ವ ಸಂಭಾಷಣೆಗೆ ಲಭಿಸಿದೆ. ಕಥೆ ಚುರುಕುಗತಿಯಲ್ಲಿ ನಡೆಯುತ್ತದೆಂದೋ ಅಥವಾ ನಾಟಕೀಯತೆಯ ತಿರುವುಗಳಿಗೆ ಹೆಚ್ಚು ಉಪಯುಕ್ತತೆ ದೊರಕುತ್ತದೆಂದೋ ಎರಡೂ ಕಾರಣಗಳಿಂದಲೋ ಪುಟ್ಟಣ್ಣನವರು ಈ ಮಾರ್ಗವನ್ನು ಅನುಸರಿಸಿದ್ದಾರೆಂದು ತೋರುತ್ತದೆ. ಆಗಿನ ರಂಗಭೂಮಿಯ ನಾಟಕಗಳಲ್ಲಿ, ಯಕ್ಷಗಾನಗಳಲ್ಲಿ, ಸಂಭಾಷಣೆ ಬಹು ಮುಖ್ಯವಾಗಿದ್ದು ಕಾದಂಬರಿಗೂ ಅಲ್ಲಿಂದಲೇ ಆಮದಾಗಿರಬಹುದು. 'ಮಾಡಿದ್ದುಣ್ಣೋ ಮಹಾರಾಯ'ಕ್ಕಿಂತ 'ಮುಸುಗ ತೆಗೆಯೇ ಮಾಯಾಂಗನೆ'ಯಲ್ಲಿ ಸಂಭಾಷಣೆ ಹೆಚ್ಚು ಪ್ರಮಾಣದಲ್ಲಿದೆ ; 'ಅವರಿಲ್ಲದೂಟ'ದಲ್ಲಿ ಇನ್ನೂ ಹೆಚ್ಚು ಪ್ರಮಾಣ ಕಾಣುತ್ತದೆ. ಮುಮ್ಮಡಿಯವರ ಕಾಲಮಾನಕ್ಕೆ ಸೇರುವ ಈ ಕಥೆ ಅಂದಿನ ಸಾಮಾಜಿಕವಾದ ಸ್ಥಿತಿಗತಿಗಳನ್ನು ಆ ಕಾಲದ ಹಲವು ಆಶ್ಚರ್ಯಕರ ಸನ್ನಿವೇಶಗಳನ್ನು ನಿರೂಪಿಸುತ್ತದೆ.

ಯಾವುದೇ ಕಾದಂಬರಿಯಲ್ಲಿ ಉದ್ದವಾದ ನೀರಸವಾದ ಸ್ವಗತಗಳಿಲ್ಲ. 'ವಾಚಕರೇ' ಮುಂತಾದ ಸಂಬೋಧನೆಗಳಿಂದ ಕಾದಂಬರಿಕಾರರು ಮಧ್ಯೆ ತಲೆಹಾಕುವುದಿಲ್ಲ. ಅತಿರಂಜಿತ ನಾಟಕೀಯತೆ ಇಲ್ಲ. ನಗರ ಇಲ್ಲಿ ಅಧಿಕಾರಸ್ಥಾನ ಮಾತ್ರ, ಹಳ್ಳಿಗೆ ವಿರುದ್ಧವಲ್ಲ. ನಗರವಾಸಿಗಳು ಹಳ್ಳಿಗರು ಇವರಲ್ಲಿ ಪರಸ್ಪರ ಅಸಹನೆ ಇಲ್ಲ.

### ಪಾತ್ರ ಚಿತ್ರಣ

**ಸೀತೆ :** ಪರಂಪರೆಯ ಸೌಶೀಲ್ಯದ ಕುರುಹಾಗಿ ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಹಾರಾಯ'ದ ಸೀತೆಯನ್ನು ಚಿತ್ರಿಸುತ್ತಾರೆ. ಒಂದು ಘಟ್ಟದಲ್ಲಿ

ಸೀತೆಯ ಸುತ್ತಲೂ ಕಥೆಯ ಹಂದರ ನಿರ್ಮಿತವಾಗಿ ಸೀತೆಯೇ ಕೇಂದ್ರ ಬಿಂದುವಾಗಿದ್ದಾಳೆ. ಸೀತೆ ರಾಜಾಸ್ಥಾನದಲ್ಲಿ ಹೆಸರುಗಳಿಸಿದ ಪಶುಪತಿ ಸಾಂಬಶಾಸ್ತ್ರಿಯ ಮೊಮ್ಮಗಳು, ರಾಜಪೂಜ್ಯತೆಯನ್ನು ಹೊಂದಿರುವ ಸದಾಶಿವ ದೀಕ್ಷಿತರ ಸೊಸೆ, ಮಹಾದೇವನ ಹೆಂಡತಿ, ತಿಮ್ಮಮ್ಮನ ಬಲಸೊಸೆ. ಹಿರಿಯರು ಹೇಳುವ ಗರತಿಯ ಲಕ್ಷಣಗಳಿಗೆಲ್ಲ ಲಕ್ಷ್ಯದಂತಿದ್ದಾಳೆ ಸೀತೆ. ಪತಿವ್ರತೆ, ಸುಂದರಿ, ಕೆಲಸದಲ್ಲಿ ಮುಂದು, ಮಾತು ಕಡಿಮೆ, ತನ್ನ ನೋವನ್ನು ತಾನೇ ನುಂಗಿ, ನಗುನಗುತ್ತಾ ಇರುವುದು ಈಕೆಯ ರೂಢಿ. ಗಂಡನಲ್ಲಿ ಸಮರ್ಪಣ ಭಾವ, ಮಗುವಿನಲ್ಲಿ ಪ್ರಾಣ, ಮನೆಯ ಹಿರಿಯರಲ್ಲಿ ಗೌರವ, ತನ್ನನ್ನು ತಾನೇ ರಕ್ಷಿಸಿಕೊಳ್ಳಲಾರಳು. ಕುಟುಂಬದ ಒಂದು ಸೋಲನ್ನು, ನ್ಯಾಯಪರರ ಇಕ್ಕಟ್ಟು ಬಿಕ್ಕಟ್ಟುಗಳನ್ನು ಇದು ಸೂಚಿಸುವಂಥದು. ಮನೆಯಲ್ಲಿ ಇವಳಿಗೆ ದೊರಕ್ಕಿದ್ದೆಲ್ಲ ಮೆಚ್ಚುಗೆ, ಸಹಾನುಭೂತಿ, ಕಷ್ಟದಲ್ಲಿ ಜೊತೆಯಲ್ಲ. ಅತ್ತೆಯ ಕೆಟ್ಟ ಬೈಗಳನ್ನು ಉಸಿರೆತ್ತದೆ ಸಹಿಸಿದಳು. ಆದರೆ ತನ್ನನ್ನು ಮೈಸೂರು ಸೂಳೆಗೆ ಹೋಲಿಸಿದಾಗ, ಮಹಾದೇವನನ್ನು ಬೈದಾಗ ಮಾತ್ರ ಅವಳು ಅತ್ತೆಗೆ, ವಿನಯ ದಿಂದಲೇ ಆದರೂ, ಉತ್ತರ ಕೊಡುವುದು ಅರ್ಥಗರ್ಭಿತವಾಗಿದೆ. ಎಂತಹ ಸಾತ್ವಿಕರೂ ತಮ್ಮ ವ್ಯಕ್ತಿತ್ವದ ಕೇಂದ್ರಬಿಂದುವಿನ ಅಪಮಾನವನ್ನು ಸಹಿಸಲಾರರೆಂಬ ಹಿನ್ನೆಲೆಯಲ್ಲಿ ಇದನ್ನು ನೋಡಬೇಕು. ಸೀತೆಯ ಪಾತ್ರ ಬರಿಯ ಆದರ್ಶ ಪಾತ್ರವಾಗುವುದನ್ನು ತಪ್ಪಿಸಿ ಕೆಲಮಟ್ಟಿಗಾದರೂ ನಂಬಲರ್ಹವಾಗುವುದು ಈ ಕಾರಣದಿಂದಲೇ. ಅತ್ತೆ ನಾದಿನಿಯರ ಕಾಟದಿಂದಲೇ ಅವಳು ಮೆತ್ತಗಾಗಿದ್ದಾಳೆ. ಜೊತೆಗೆ ಹೊರಗಿನಿಂದ ಕಾಮದ ಬಲೆ ಅವಳಿಗೆ ಬೀಸಲಾಗಿದೆ. ಇಂಥ ಹೊತ್ತಿನಲ್ಲಿ ಅವಳ ನೆರವಿಗೆ ಬಂದದ್ದು ಅವಳ ತಾಯ್ತನದ ಹಿರಿಮೆ, ಅವಳ ಮನಸ್ಥೈರ್ಯ, ಅಪರೂಪಕ್ಕೆ ನೆರೆಮನೆಯಾಕೆಯ ಸಹಾನುಭೂತಿ, ಸೀತೆ ಸಾವಿತ್ರಿಯರ ಚರಿತ್ರೆಗಳು, ಅರುಂದಮ್ಮನ ವೃತ್ತಾಂತ. ತನ್ನನ್ನು ಸುತ್ತುವರಿದಿದ್ದ ಸಂಕಟಗಳ ಅಗ್ನಿಪರೀಕ್ಷೆಯಲ್ಲಿ ಗೆದ್ದು ಬಂದ ಸೀತೆ ಭಟಜಿಯ ನೆರವಿನಿಂದ ನಿಜವಾದ ಅಗ್ನಿಯಿಂದಲೂ ಎದ್ದು ಬಂದಳು. ಜನಪದ ಗೀತೆಗಳಲ್ಲಿ ಬರುವ 'ಅತ್ತೆ ಮಾವರಿಗಂಜಿ, ಸುತ್ತೇಳು ನೆರೆಗಂಜಿ, ಮತ್ತೆ ನಲ್ಲನ ದನಿಗಂಜಿ' ನಡೆವ ಗೃಹಿಣಿಯಂತಹುದು ಸೀತೆಯ ಪಾತ್ರ.

**ತಿಮ್ಮಮ್ಮ :** ಈ ಕಾಲಕ್ಕೆ ಸ್ವಲ್ಪ ಅತಿರಂಜಿತ ಎನ್ನಬಹುದಾದ ಪಾತ್ರ. ಹಿಂದಿನ ಕಾಲದ ಅತ್ತೆಯರ, ದರ್ಪಕ್ಕೆ ಕೊರೆ ತೋರಿದರೆ ತಮ್ಮ ಅಸ್ತಿತ್ವಕ್ಕೆ ಅನ್ಯಾಯ ಎಂದು ಭಾವಿಸಿದ್ದವರ, ಮೂರ್ತರೂಪ. ತನ್ನ ಕಡೆಯಿಂದ ಪತಿಗೆ ಆಸ್ತಿ ಸೇರಿದೆ ಎಂಬ ಹೆಮ್ಮೆ ಮುಂದೆ ಹಟ, ದೌರ್ಜನ್ಯಗಳ ಮರಿ ಹಾಕಿತು. ತಾನು, ತನ್ನ ಮಗಳು ಎಲ್ಲರ ಹೊಗಳಿಕೆಗೆ ಪಾತ್ರರಾಗಬೇಕು, ಆಗಲಿಲ್ಲ. ಸಾಧು ಸೊಸೆ ಕೋಪಾಗ್ನಿಗೆ ಬಲಿಪಶು ಆದಳು. ತಿಮ್ಮಮ್ಮನಿಗೆ ಅವಳ ಬಾಯೇ ಬ್ರಹ್ಮಾಸ್ತ್ರ. ಇಂತಹವಳ ಮನಸ್ಸಿನಲ್ಲೂ ಮೊಮ್ಮಗನ ಬಗೆಗೆ ಅಪಾರ ವಾತ್ಸಲ್ಯದ ಒಂದು ಒರತೆ ಜಿನುಗಿದೆ, ಸೊಸೆಯ ಮೇಲಿನ ಅನಾದರವನ್ನೂ ಮರೆಸುವಷ್ಟು. ಅಪ್ಪಾಜಿಯ ಹೀನ ಆಶೆ ಅವಳಿಗೆ ಅರಿವಿಲ್ಲ.

ಆಕೆ ಆಷಾಢಭೂತಿ ಅಲ್ಲ. ಆದರೆ ಅಪ್ಪಾಜಿಯ ಉಪಚಾರ, ಹೊಗಳಿಕೆಗಳಿಗೆ ಸೋತು ತನಗರಿಯದಂತೆಯೇ ಆತನ ಕೃತ್ಯಗಳಿಗೆ ಬೆಂಬಲ ಕೊಡುತ್ತಾಳೆ. ಸೊಸೆಯ ರೋಗಕ್ಕೆ ಮದ್ದು ಕೇಳಲು ಅವನ ಬಳಿಯೇ ಹೋಗುತ್ತಾಳೆ. ಸೀತೆ ಎಲ್ಲ ಕಂಟಕಗಳಿಂದ ಮುಕ್ತಳಾಗಿ ಮನೆಗೆ ಮರಳಿದಾಗ ಪಶ್ಚಾತ್ತಾಪದಗ್ಧಳಾಗಿದ್ದಾಳೆ, ಪರಿವರ್ತನೆಗೊಳಗಾಗಿದ್ದಾಳೆ.

**ಅಪ್ಪಾಜಿ :** ಸಂಜವಾಡಿಯ ಅಮ್ಮನ ಗುಡಿಯ ಪೂಜಾರಿ ಸತ್ತಾಗ ಆತನ ಸಮೀಪದ ಬಂಧು ಎಂದು ಬಂದು ಸೇರಿಕೊಂಡ ಸಿದ್ದನೆಂಬ ವ್ಯಕ್ತಿ ಕ್ರಮೇಣ ಊರಲ್ಲಿ ದೊಡ್ಡವನಾದುದನ್ನು "ಸಿದ್ಧ ಸಿದ್ದಪ್ಪನಾದ, ಸಿದ್ದಪ್ಪ ಸಿದ್ದಪ್ಪಾಜಿಯವರಾದರು, ಸಿದ್ಧಪ್ಪಾಜಿಯವರು ಹೋಗಿ ಅಪ್ಪಾಜಿಯವರಾದರು" (ಮಾ. ಮ. 59) ಎಂದು ಕಾದಂಬರಿಕಾರರು ವರ್ಣಿಸಿದ್ದಾರೆ. ಇವನಿಗೆ ಕುರಿಗಳನ್ನು ಹಳ್ಳಕ್ಕೆ ಬೀಳಿಸುವ ಕಲೆ ಚೆನ್ನಾಗಿ ಗೊತ್ತು. ಕಿಡಿಗೇಡಿಗಳನ್ನು ತನ್ನೆಡೆಗೆ ಸೆಳೆದುಕೊಳ್ಳುವುದೂ ಚೆನ್ನಾಗಿ ಗೊತ್ತು, ಸಾತ್ವಿಕರು ತಾವಾಗಿ ಇವನಿಂದ ದೂರ ಹೋಗುತ್ತಿದ್ದರು. ಇದರಿಂದ ಇವನ ಆಟ ಬಹುಪಾಲು ಸರಾಗ. ಇವನದು ಹತೋಟಿಯಿಲ್ಲದ ಕ್ರಮ, ಜೊತೆಗೆ ಪ್ರಾಯದ ಮದ, ಭಕ್ತರ ಕಾಣಿಕೆ ದುಡ್ಡು, ಕಳ್ಳರ ಕೂಟದ ಆದಾಯ. ಹಿಡಿತವಿಲ್ಲದ ಮನಸ್ಸು, ಶಕುನಿ ನಾರಪ್ಪಯ್ಯನ ಸಹವಾಸ ಇವುಗಳು ಇನ್ನಷ್ಟು ಕೆಳಗಿಳಿಸಿದವು. ತಿಮ್ಮಮ್ಮನಿಗೆ ಮಾಡಿದ ಉಪಚಾರ, ಸೀತೆಗೆ ಒಡ್ಡಿದ ಪ್ರಲೋಭನೆ, ಎಲ್ಲವೂ ವಿಫಲವಾಗಿ ಕಡೆಗೆ ಕುರುಡುಕಾಮದಿಂದ ಪ್ರೇರಿತನಾಗಿ ಸೀತೆಯ ಮಾನಭಂಗಕ್ಕೆ ಹವಣಿಸಿದ ಅಪ್ಪಾಜಿಗೆ ಆದದ್ದು ಅಭಿಮಾನಭಂಗ, ಸಿಕ್ಕಿದ್ದು ಕಲ್ಲಿನೇಟು. ರೂಪ ಇರುವೆಡೆಯಲ್ಲೆಲ್ಲಾ ಕಲಂಕವೂ ನೆಲೆಗೊಂಡಿರಬಹುದು ಎಂಬ ಇವನ ಭ್ರಮೆಗೆ ಉಪಾಧ್ರಿಯ ಮಾತು ಒತ್ತಾಸೆ ಕೊಟ್ಟಿತು. ಉಪಾಧ್ರಿಯ ಹಿನ್ನೆಲೆ ಅಪ್ಪಾಜಿಯ ಪತನದ ವೇಗವರ್ಧಕ. ಭಟಜಿಯಿಂದ ಸೋಲು ಅನುಭವಿಸಿ, ಹಲ್ಲುದುರಿಸಿಕೊಂಡು ತನ್ನಿಂದ ಯಾರಿಗೂ ಕೇಡಾಗದಂತಾದ ಶೀಘ್ರದಲ್ಲೇ ಅವನಿಗೆ ಸೆರೆಮನೆಯ ಶಿಕ್ಷೆಯೂ ಲಭಿಸುತ್ತದೆ

ಹೆಂಡತಿಯ ಬಾಯಿಗೆ ಹೆದರಿ ಗೃಹಕೃತ್ಯಗಳ ವಿಚಾರಗಳಲ್ಲಿ ಸೋತ ಸದಾಶಿವ ದೀಕ್ಷಿತ; ಬಲತಾಯಿಯ ಬಾಯಿ, ತಂದೆಯಲ್ಲಿದ್ದ ಗೌರವಗಳ ನಡುವೆ ಹೆಂಡತಿಯನ್ನು ಅತಿಶಯವಾಗಿ ಪ್ರೀತಿಸುವ, ಹಿಂದೂ ಕುಟುಂಬದ ಕೆಲವು ನಿಯಮಗಳಿಂದ ಏನೂ ಮಾಡಲಾಗದ ಗಂಡನಾಗಿ, ಮಹಾದೇವ; ಸರ್ಕಾರದ ಉಪ್ಪು ತಿಂದು ದ್ರೋಹ ಬಗೆದು ಹೆಣ್ಣು ಹಣಗಳೆರಡರ ವಿಷಯದಲ್ಲೂ ನೀತಿ ತಪ್ಪಿ ನಡೆದು ಕಡೆಗೆ ಶಿಕ್ಷೆಗೊಳಗಾದ ಮಾರಮಣರಾಯ; ಅನಾವಶ್ಯಕ ಕ್ರೌರ್ಯದಿಂದ ಮಕ್ಕಳನ್ನು ಶಿಕ್ಷಿಸಿ, ತಾನೂ ಕಷ್ಟ ಅನುಭವಿಸಿದ,ಬುದ್ಧಿ ಹೇಳಿದ ದೀಕ್ಷಿತನ ಮನೆಯಲ್ಲಿ ಅನ್ನವುಂಡು ಗಳುವೆಣಿಸಿದ ನಾರಪ್ಪಯ್ಯ; ಐಲುತನದ ಕಿಟ್ಟು; ತಾಯಿಯೊಡನೆ ಸೇರಿ ಅತ್ತಿಗೆಗೆ ನರಕ ಹಿಂಸೆ ಕೊಟ್ಟ ಸಾತಿ ಹಾಗೂ ಕೃತಿಯ ಮಂಗಳಾಂತ್ಯದ ಹರಿಕಾರನಾಗಿ ಬಂದು ಯಾವ ಫಲಾಪೇಕ್ಷೆಯನ್ನೂ ಒಲ್ಲದ ಭಟಜಿ ಇವರ ಚಿತ್ರಗಳು ಸ್ಫುಟವಾಗಿ ಮೂಡುತ್ತವೆ.ಯಾವ ಪಾತ್ರವೂ ಒಳ್ಳೆಯ ಅಥವಾ

ಕೆಟ್ಟಗುಣದ ಮೂರ್ತರೂಪವಾಗಿಲ್ಲದಿರುವುದು ಕೃತಿಯ ಹೆಗ್ಗಳಿಕೆಗೆ ಕಾರಣವಾಗಿದೆ. ಸಾತ್ವಿಕ ಸದಾಶಿವದೀಕ್ಷಿತ, ಸೀತೆ, ಮಹಾದೇವ ಇವರ ಒಳ್ಳೆಯತನದಲ್ಲಿ ಅಸಹಾಯ ಕತೆ ತುಂಬಿದೆ. ತಿಮ್ಮಮ್ಮನಲ್ಲಿ ಒಂದು ಕರುಣೆಯ ಎಳೆ ಇದೆ. ಅಮಾಸೆಯ ಮುಗ್ಧತೆ, ಮಾರಮಣರಾಯನ ಚಾಲೂಕಿಲ್ಲದ ನಡವಳಿಕೆ ಇದೇ ವಿಚಾರವನ್ನು ಸಮರ್ಥಿಸುತ್ತವೆ. ಅಮಾಸೆಯ ಕಥನ, ಅರುಂದಮ್ಮನ ವೃತ್ತಾಂತ, ಶೇಷಯ್ಯ ಕೃಷ್ಣಯ್ಯರ ವೃತ್ತಾಂತಗಳು ಬಿಡಿಯಾಗಿಯೂ ಓದಬಹುದಾದ ಕಥಾನಕಗಳಾಗಿವೆ.

**ಅಪ್ರಮೇಯ :** 'ಮುಸುಗ ತೆಗೆಯೇ ಮಾಯಾಂಗನೆ'ಯ ಪ್ರಮುಖ ಪಾತ್ರ ಅಪ್ರಮೇಯ. ಅವನ ವಿದ್ಯಾಭ್ಯಾಸ ಗುಂಡಲುಪೇಟೆ ಮಳವಳ್ಳಿಗಳಲ್ಲಿ ವಿಲಕ್ಷಣವಾಗಿ ನಡೆದು ರಣನವರೆಯಂಥ ಶೂರನ ಬಳಿ ಪ್ರಯೋಜನಕ್ಕೆ ಬಂದಿತು. ತಾನಾರೆಂಬುದನ್ನು ಮರೆಸಿ ತನ್ನ ಕೆಲಸವನ್ನು ಸಾಧಿಸಿಕೊಳ್ಳುವ ಗತ್ತುಗಳು ಅವನಲ್ಲಿ ನೆಲೆಯಾಗಿದ್ದುದಕ್ಕೆ ಮಳವಳ್ಳಿಯ ಮುಂಜಿಗೆ ಹೋಗಿದ್ದವನು ಫಾರ್ಸಿ ಉರ್ದುಗಳನ್ನು ಕಲಿತು ಪಾಂಡಿತ್ಯ ಪ್ರದರ್ಶನಮಾಡಿ ಹಿಂದೂಗಳಲ್ಲದೆ ಮುಸಲ್ಮಾನರ ಮೆಚ್ಚುಗೆಯನ್ನು ಗಳಿಸಿದ್ದೇ ಸಾಕ್ಷಿ. ಸುಸಂಸ್ಕೃತ, ಸಾತ್ವಿಕ, ಹಿಡಿದ ಕೆಲಸವನ್ನು ಮಾಡುವುದರಲ್ಲಿ ಗಟ್ಟಿಗ, ಪ್ರಾಮಾಣಿಕತೆಯಲ್ಲಿ ಯಾರಿಗೂ ಕಡಿಮೆಯಲ್ಲ. ಹನುಮಂತರಾವ್ ಹಾಗೂ ಅಪ್ರಮೇಯರಲ್ಲಿ ಹೇಳಿ ಮಾಡಿಸಿದಂತಹ ಹೊಂದಾಣಿಕೆಯಿದೆ. ಹನುಮಂತರಾವ್ ಬಾಹುಬಲ ಸಂಪನ್ನ. ಅಪ್ರಮೇಯ ಬಹುಬುದ್ಧಿಶಾಲಿ. ಹಲವು ಯುದ್ಧಗಳಲ್ಲಿ ಹೋರಾಡಿ ಗೆದ್ದ ದೈಹಿಕ ಬಲದ ಸಾಧನೆ ರಣನವರೆಯದು. ಟೊಳ್ಳುಸುದ್ದಿಯ ನಿಜಾನಿಜಗಳನ್ನರಿಯಲು ಅಸಮರ್ಥನಾದ ಹನುಮಂತರಾವ್ ತನ್ನೆಲ್ಲ ಆಸ್ತಿಯನ್ನು ಬಿಟ್ಟು ಓಡಿದಾಗ ದೈಹಿಕ ಬಲದ ಮಿತಿಯನ್ನು ಪುಟ್ಟಣ್ಣನವರು ತಿಳಿಸುತ್ತಾರೆ. ಸೂಕ್ಷ್ಮಬುದ್ಧಿ, ಸ್ವಾಮಿನಿಷ್ಠೆ, ಬುದ್ಧಿ ಕುಶಲತೆಗಳಿಂದ ಅಪ್ರಮೇಯ ತನ್ನೊಡೆಯನ ಆಸ್ತಿ ಪರರ ಪಾಲಾಗದಂತೆ ಕಾಪಾಡಿ, ಅವನ ಅನ್ವೇಷಣೆಗಾಗಿ ಹೊರಡುವುದು ಬುದ್ಧಿಬಲದ ಸಾಧನೆ. ಅಪ್ರಮೇಯ ಎಚ್ಚರ ತಪ್ಪುವುದು ಒಂದೇ ಬಾರಿ ಕರಾಡಿಗರ ಪರಿಚಯವಾದಾಗ ಮಾತ್ರ ಹಾಗೂ ಕಡೆಯಲ್ಲಿ ಆತ್ಮಾರಾಂ ಬಾವಾಜಿಯ ಸಹಾಯದಿಂದ ತನ್ನ ಕಾರ್ಯದಲ್ಲಿ ಯಶಸ್ವಿಯಾಗುವುದು ಬುದ್ಧಿಬಲದ ಮಿತಿಯನ್ನು ಸೂಚಿಸುತ್ತದೆ. ದೈಹಿಕಬಲ ಹಾಗೂ ಬುದ್ಧಿಬಲಗಳ ತುಲನೆಯಲ್ಲಿ ಬುದ್ಧಿಬಲದ ಹೆಚ್ಚುಗಾರಿಕೆಯನ್ನು ತೋರಿಸಿ ಅನಂತರ ಅದು ಫಲಾಪೇಕ್ಷೆಯಿಲ್ಲದ ಪಾರಮಾರ್ಥಿಕತೆಗೆ ಶರಣಾಗುವುದು, ಪುರುಷಶಕ್ತಿಯೇ ಪ್ರಧಾನವಲ್ಲ ಎಂದು ತೋರಿಸುವುದು ಪುಟ್ಟಣ್ಣನವರ ಉದ್ದೇಶ. ಹನುಮಂತರಾವ್ ತನ್ನ ಬಳಿ ಇರುವ ಲೂಟಿಮಾಲಿನ ಕಾರಣದಿಂದ ತನ್ನ ಮೇಲೆ ಬರಬಹುದಾದ ಆಪಾದನೆಗೆ ಹೆದರಿ ಓಡಿದಾಗ ಅವನ ಆಸ್ತಿಪಾಸ್ತಿಗಳನ್ನು ರಕ್ಷಿಸಿ, ಅವನನ್ನು ಹುಡುಕುತ್ತಾ ಹೊರಟು ಹಲವು ನಷ್ಟಗಳನ್ನು ಅನುಭವಿಸಿ, ಕರಾಡಿಗರ ನರಬಲಿಯ ಪಶುವಾಗಬೇಕಾದಾಗಲೂ ತಪ್ಪಿಸಿಕೊಂಡು ಬಂದು, ಆತ್ಮಾರಾಂ ಬಾವಾಜಿಯ ಕೃಪೆಯಿಂದ ತನ್ನ ಕಾರ್ಯದಲ್ಲಿ ಯಶಸ್ವಿಯಾದುದು ಮುಂದಿನ ಹಲವು ಗುರುತರ ಕಾರ್ಯಗಳಲ್ಲಿ

ಅವನ ಹೊಣೆಯನ್ನು ನಿರ್ಧರಿಸುತ್ತದೆ. ಇವನಿಂದಲೇ ದೇಪಣ್ಣನ ಮೇಲಿನ ಕೊಲೆಯ ಅಪವಾದ ದೂರವಾಗುತ್ತದೆ. ಕೈ ತಪ್ಪಿದ್ದ ಮೈಸೂರಿನ ದೌಲತ್ತು ಮುಮ್ಮಡಿಯವರ ಕೈ ಸೇರುವ ಕಾರ್ಯಕ್ಕೆ ಹೊಸ ಬೆಂಬಲ ದೊರೆಯುತ್ತದೆ. ಈ ಕಾರ್ಯಕ್ಕಾಗಿ ಬ್ರಿಟಿಷ್ ಸರದಾರರನ್ನು ಅನುಸರಿಸಬೇಕೆಂಬ ಪ್ರಯತ್ನಕ್ಕೆ ಹೊಸ ಚಲನೆ ದಕ್ಕಿದಂತೆ ಆಗುತ್ತದೆ.

'ಮುಸುಗ ತೆಗೆಯೇ ಮಾಯಾಂಗನೆ'ಯ ಒಂದು ಕುತೂಹಲಕರ ಪಾತ್ರ ಎಂದರೆ ಇಂಗ್ರೀಜಿ ಹಯಾತ್‌ಖಾನ್, 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಉಪಾದ್ರಿ ನಾರಪ್ಪಯ್ಯ, ಅಪ್ಪಾಜಿ ಹಾಗೂ 'ಅವರಿಲ್ಲದೂಟ' ಕಾದಂಬರಿಯ ಮಲ್ಲ ಇವರಿಗಿಂತ ಈತ ಚಾಣಾಕ್ಷ. ಮೇಲಿನ ಮೂವರಲ್ಲೂ ಒಂದೊಂದು ಮಿತಿಯಿದೆ. ಇಂಗ್ರೀಜಿ ಹಯಾತ್‌ಖಾನ್ ಇವರೆಲ್ಲರನ್ನೂ ಮೀರಿದವನು. ಇವನದು ನರಿಯ ಚಾತುರ್ಯ, ತೋಳನ ನೀಚತನ, ಹದ್ದಿನ ಕಣ್ಣು, ಹಾವಿನ ಛಲ, ಒಟ್ಟಿನಲ್ಲಿ ದಗಾಖೋರ, ಖದೀಮ ಎನ್ನಬಹುದಾದ ವ್ಯಕ್ತಿ. ಅವನ ಅತ್ತೆ ಕಾಸಿಂಬಿಯ ಸಹಾಯ ಪಡೆದು ಮುಗ್ಧರಾದ ಹಳ್ಳಿಯ ಜನರನ್ನು ವಂಚಿಸಿ ಸುಲಿಯುತ್ತಿದ್ದುದು ಅವನ ಧೂರ್ತತೆಗೆ ನಿದರ್ಶನ. ಪುಟ್ಟನಂಜಪ್ಪಾಜಿ ಅರಸು, ಆಸಪತ್ರೆ ತಿಮ್ಮಯ್ಯ ಮುಂತಾದವರಿಗೆ ಮಾಡಿದ ಮೋಸಗಳು ಚಮತ್ಕಾರಪೂರ್ಣವಾದುವು. ಆದರೆ ರಣನವರೆಗೆ ಮಾಡಿದ ವಂಚನೆ ಇನ್ನೂ ದೊಡ್ಡ ಹರಹಿನದು. ಇನ್ನೂ ಹೆಚ್ಚಿನದಕ್ಕೆ ಚಾಚಿದ ವಂಚನೆಯ ಜಾಲ ಅಲ್ಲಿದೆ. ಹಯಾತ್‌ಖಾನನಂಥ ಚತುರರು ಬಸಪ್ಪನಿಗೆ ಜೋಡಿಯಾದುದು ಮೊದಲೇ ತೊಳಲುತ್ತಿದ್ದ ರಣನವರೆಯ ಧೈರ್ಯ ಕುಸಿಯಲು ಕಾರಣವಾಯಿತು. ಈ ಹಯಾತ್‌ಖಾನನಿಗೆ ಜನರ ಯೋಗ್ಯತೆ ಅರ್ಹತೆಗಳನ್ನರಿಯುವ ಶಕ್ತಿಯ ಜೊತೆಗೆ ಅವರ ದೌರ್ಬಲ್ಯವನ್ನರಿಯುವ ಗುಟ್ಟೂ ಗೊತ್ತು. ಒಂದು ರೀತಿಯಲ್ಲಿ ಇವನ ಶಕ್ತಿ ಇದೇ ಎನ್ನಬಹುದು.

ಅಯಾಚಿತವಾಗಿ ತನ್ನ ಬಳಿ ಬಂದ ದೇಪಣ್ಣನಂಥವನ ಮಹತ್ತ್ವವನ್ನು ಅರಿಯದೆ ಹೊರ ಹೊಳಪಿಗೆ ಸೋತು ಮರುಳಾದ ನಾಗರತ್ನಾಸಾನಿ, ಪರಿಪೂರ್ಣ ಚಿತ್ರವನ್ನು ಒಂದು ಮಸಿ ಕೆಡಿಸಿತೆಂಬ ಗಾದೆಗೆ ಸಾಕ್ಷಿಯಾದ ಧೀರನೂ ಬುದ್ಧಿವಂತನೂ ಆದ, ಚಾಪಲ್ಯಕ್ಕೆ ಬಲಿಯಾಗುವ ದೇಪಣ್ಣ, ದೇಪಣ್ಣನ ಮೇಲಿನ ಕ್ರೋಧದಿಂದ ಉಂಡಮನೆಗೆ ದ್ರೋಹ ಬಗೆಯುವ ಸಂಚಿಗೆ ಕೈಯಿಟ್ಟ ಬಸಪ್ಪ ಇತ್ಯಾದಿಗಳು ಸ್ಫುಟವಾಗಿ ಮೂಡಿರುವ ಇತರ ಪಾತ್ರಗಳು.

**ಜಾನಕಿ :** 'ಅವರಿಲ್ಲದೂಟ'ದ ಬಹುಕಾಲ ಮಕ್ಕಳಿಲ್ಲದ ದಂಪತಿಗಳ ಬಾಳಿನಲ್ಲಿ ಬೆಳಕಿನ ಹರಿಕಾರಳಾಗಿ ಹುಟ್ಟಿದ ಜಾನಕಿ ಗುಣವಂತೆ, ಶೀಲವಂತೆ. ಶ್ರೀಮಂತಿಕೆಯ ಸೋಗಿಗೆ ಮರುಳಾಗದ ತಾಯಿತಂದೆಗಳು ಅವಳನ್ನು ಸದಾಚಾರಸಂಪನ್ನನಾದ ಬಾಗಲೂರು ನರಸಿಂಹನಿಗೆ ಮದುವೆ ಮಾಡಿಕೊಟ್ಟರು. ಗಂಡನಿಗೂ ಅತ್ತೆಗೂ ಮೆಚ್ಚಿನವಳಾದ ಜಾನಕಿಯ ಗೌರವ ಅವಳು ತಾಯಿಯಾದ ಮೇಲೆ ಇನ್ನೂ ಒಂದು

ಮೆಟ್ಟಿಲೇರಿತು. ಇಂಥ ಸುಖದ ಸುರಿಮಳೆಯಲ್ಲಿ ಅವಳು ಸೊಕ್ಕಲಿಲ್ಲ, ಬೀಗಲಿಲ್ಲ. ಆದರೆ ಅವಳ ಮೇಲೆ ಅವಳ ಸಂಪತ್ತಿನ ಮೇಲೆ ಅವರ ಮನೆಯಲ್ಲಿ ನಿರ್ಗತಿಕನಾಗಿ ಬಂದು ಸೇರಿಕೊಂಡು ಬೆಳೆದ ಮಲ್ಲನ ಕಣ್ಣು, ಅವಳು ತನಗೆ ದಕ್ಕಲಿಲ್ಲ ಎಂಬ ರೋಷ, ಅವಳ ಸಂಪತ್ತನ್ನಾದರೂ ನುಂಗುವ ಛಲ. ಆದರೆ ಮಲ್ಲನ ಈ ಕಾಮದ ಕಣ್ಣಾಗಲೀ ರೋಷದ ಬಗೆಯಾಗಲೀ ಜಾನಕಿಗೆ ಪ್ರಾರಂಭದಲ್ಲಿ ತಿಳಿಯದು. ಅನಂತರ ಅಸ್ಪಷ್ಟವಾಗಿ ತಿಳಿದ ಸೂಚನೆ ಇದೆ. ಅಲ್ಲದೆ ಅವಳ ಮೇಲೆ ನೇರವಾದ ಬಲಾತ್ಕಾರವಿಲ್ಲ. ಈ ದೃಷ್ಟಿಯಿಂದ ಜಾನಕಿಯ ಪಾತ್ರ ಸೀತೆಯಷ್ಟು ಪರೀಕ್ಷಿತವಲ್ಲ. ಆದ್ದರಿಂದಲೇ ಕಷ್ಟದಲ್ಲಿ ನುರುಗಿ ಬರುವ ಗಟ್ಟಿತನವೂ ಹೊಳಪೂ ಕೂಡ ಸೀತೆಯದರಷ್ಟು ತೀವ್ರವಲ್ಲ, ಹಾಗೆಂದು ಗಂಡನಿಂದ ದೀರ್ಘಕಾಲದ ಅಗಲಿಕೆಯ ಕಷ್ಟ ಕಡಿಮೆಯದೂ ಅಲ್ಲ. ಈ ಕಾಲದಲ್ಲಿ ಅಲ್ಪಸ್ವಲ್ಪ ಉಳಿದಿರಬಹುದಾದ ಅವಳ ಮನಸ್ಸಿನ ಅಪಕ್ವತೆಯೂ ಕಳಚಿ ಅವಳು ಪತಿಸಾನ್ನಿಧ್ಯಕ್ಕಾಗಿ ಚಾತಕಪಕ್ಷಿಯಂತೆ ಕಾದಿದ್ದಾಳೆ. ನಿರಪರಾಧಿನಿಯಾದ ಅವಳ ಮೇಲಿನ ಸಂಶಯದ ಪೊರೆ ಕಳಚಿದ ಕೂಡಲೇ ಅವಳ ಪತಿ ನರಸಿಂಹಾಚಾರಿ ತನ್ನ ಇರುವಿಕೆಯನ್ನು ಬಯಲುಗೊಳಿಸುತ್ತಾನೆ. ಸೀತೆಯ ಪ್ರಾಣದಂತೆಯೇ ಜಾನಕಿಯದು ಸೌಶೀಲ್ಯದ ಅಚ್ಚಿಗೆ ಬಿದ್ದ ಪಾತ್ರ.

**ಮಲ್ಲ :** ತನ್ನ ಮಿತಿಯನ್ನರಿಯದೆ ತನ್ನದಲ್ಲದ ಪಾಲೂ ತನಗೇ ಸೇರಬೇಕೆಂದು ಬಯಸಿ ಅದಕ್ಕಾಗಿ ಇವನು ನಡೆಸಿದ ಪ್ರಯತ್ನಗಳು ಇವನನ್ನಲ್ಲದೆ ಇವನ ಸುತ್ತಲಿನವರನ್ನು ಹಲವು ಕಷ್ಟಗಳ ತಿರುಗುಣಿಯಲ್ಲಿ ಸಿಲುಕಿಸಿದವು. ಅನಾಥ ಹುಡುಗನಾಗಿ ರಾಮಜಿಯ ಬಳಿಸೇರಿ ಅವನೊಡನೆ ರಾಮಸ್ವಾಮಿ ರಂಗನಾಯಕಮ್ಮ ಇವರ ಆಶ್ರಯ ಪಡೆದು ಮನೆಯ ಮಗನಂತೆ ಬೆಳೆದ ಈತ ಜಾನಕಿಯ ರೂಪ ಸಂಪತ್ತುಗಳಿಗೆ ಬಯಸಿದವ. ಅವನಿಂದ ಸಾಧ್ಯವಾದದ್ದು ಅವಳ ಒಡವೆಗಳ ಅಪಹರಣ ಮಾತ್ರ. ಬಳ್ಳಾರಿಗೆ ಹೋಗಿ ನೆಲೆಸಿದ ಇವನ ಕುತಂತ್ರದ ಬೀಜ ಅವಿವೇಕಿಯಾದ ನಾಗರತ್ನಳ ಮನಸ್ಸಿನಲ್ಲಿ ಆಕರ್ಷಕವಾಗಿ ಕಂಡು ಇವನು ಅಪೇಕ್ಷಿಸಿದ ಫಲಗಳನ್ನು ನೀಡಿತು. ಮೋಟಜ್ಜಿಯ ದುರ್ಬೋಧೆ ಸಹಾಯಕವಾಗಿ ಕೆಲಸ ಮಾಡಿತು. ನಾಗರತ್ನಳಂಥ ಹಲವರು ಅವನ ಆಕರ್ಷಣೆಯ ಕೇಂದ್ರವಾದರು. ಅವನ ನಿಜರೂಪ ಇತರರಿಗೆ ತಿಳಿಯುವ ವೇಳೆಗೆ ಅವನು ಅಲ್ಲಿಂದ ತಪ್ಪಿಸಿಕೊಂಡು ರೀವಾ ಸಂಸ್ಥಾನಕ್ಕೆ ದೊಂಬರ ಜೊತೆಯವನಾಗಿ ಬಂದ. ಇವನ ವೇಷ ಕಳಚಿ ಇವನ ನೀಚಕಾರ್ಯಗಳೆಲ್ಲ ಒಟ್ಟಿಗೇ ಬಹಿರಂಗಕ್ಕೆ ಬಂದುದು ಇವನಿಂದ ಕಷ್ಟಪಟ್ಟ ಜನರ ಹಾಗೂ ಇವನನ್ನು ಶಿಕ್ಷಿಸತಕ್ಕ ರಾಜನ ಸಮ್ಮುಖದಲ್ಲಿ. ತನ್ನ ತಪ್ಪುಗಳನ್ನು ಒಪ್ಪಿಕೊಳ್ಳಬೇಕಾದ ಪರಿಸ್ಥಿತಿಯಲ್ಲಿ ಹಾಗೆ ಮಾಡದೆ ವಿಧಿಯಿರಲಿಲ್ಲ ಇವನಿಗೆ. ಇವನ ಪಾಪಪಾತ್ರೆ ತುಂಬಿತ್ತು, ತಕ್ಕ ಶಿಕ್ಷೆಯೂ ದೊರೆಯಿತು.

ಸಾತ್ತ್ವಿಕತೆಯ ಅಪರಾವತಾರವಾಗಿದ್ದು ಹಾವಿಗೆ ಹಾಲೆರೆದ ರಾಮಸ್ವಾಮಿ ಹಾಗೂ ರಂಗನಾಯಕಮ್ಮ ; ನಿಷ್ಠಾವಂತ ಸೇವಕ ರಾಮಜಿ ; ಸಲ್ಲದ ಸಂಶಯವನ್ನು

ತಳೆದು ಹಲವು ವರ್ಷಗಳ ಕಾಲ ತೊಳಲಿದ ಪತಿ ನರಸಿಂಹಾಚಾರಿ ; ಬಡತನದಲ್ಲಿ ಕಂದಿ ಸಿರಿತನ ಬಂದಮೇಲೆ ಬದಲಾಗದೆ ಉಳಿದ ಆತನ ಮುದಿತಾಯಿ ಮಂಗಮ್ಮ ಮುಂತಾದವರು ಕಥೆಯ ಬೆಳವಣಿಗೆಗೆ ಸಹಾಯಕರಾದ ಪಾತ್ರಗಳು.

ಪುಟ್ಟಣ್ಣನವರು ಪಾತ್ರರಚನೆಯಲ್ಲಿ ಗಟ್ಟಿಗರು. ಪಾತ್ರಗಳು ಒಂದೇ ಬಣ್ಣದಿಂದ ಕೂಡಿದುವಲ್ಲ, ಗಟ್ಟಿತನವಿಲ್ಲದೆ ನೆರಳುಗಳಂತೆ ಎಲ್ಲೂ ಸುಳಿಯುವುದಿಲ್ಲ. ಸಾಮಾಜಿಕ ಪರಿಸ್ಥಿತಿಯ ಭದ್ರ ನೆಲೆಗಟ್ಟಿನ ಮೇಲೆ ರಚಿತವಾದುದರಿಂದ ಅವುಗಳು ಎಲ್ಲೂ ಪೇಲವವಾಗದೆ ಸಶಕ್ತವಾಗಿವೆ. ವಿದೇಶೀಯರಾಗಲೀ ಪರಧರ್ಮೀಯರಾಗಲೀ ಪುಟ್ಟಣ್ಣನವರ ಕಾದಂಬರಿಗಳಲ್ಲಿ ಮುಖ್ಯಪಾತ್ರಗಳಾಗುವುದಿಲ್ಲ. ಹಲವು ವೇಳೆ ವಾದಕ್ಕಾಗಿ ಹಾಗೂ ಆರ್ಯಧರ್ಮದ ಹಿರಿಮೆಯನ್ನು ತಿಳಿಸಲು ಇಂಥ ಪಾತ್ರಗಳ ಅಗತ್ಯವನ್ನು ಪೂರೈಸಿದರೂ ಅವು ಆನುಷಂಗಿಕವಾಗಿ ಮಾತ್ರ ಕಾಣುತ್ತವೆ. ಕಾದಂಬರಿಯ ಪಾತ್ರಗಳು ಪುಟ್ಟಣ್ಣನವರ ಜೀವನದೃಷ್ಟಿಗೆ ಮಾತ್ರ ಬಗ್ಗುತ್ತವೆ ಎಂದು ಹೇಳಬಹುದು.

### ರಾಜಾಸ್ಥಾನದ ಚಿತ್ರಣ

ವಿಜಯನಗರ ಸಾಮ್ರಾಜ್ಯದ ಪತನದ ನಂತರ ಮೈಸೂರು ಕವಿ, ಪಂಡಿತ, ಕಲಾವಿದರಿಗೆ ಹೆಚ್ಚು ಕಡಿಮೆ ಏಕಮಾತ್ರ ಆಶ್ರಯಸ್ಥಾನವಾಗಿ ಪ್ರಕಾಶಗೊಂಡಿತು. ಈ ಗುಣ ಅತ್ಯಂತ ಹೆಚ್ಚು ಪ್ರಮಾಣದಲ್ಲಿ ಮೊದಲ ಬಾರಿ ಕಂಡದ್ದು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ. ಮುಮ್ಮಡಿಯವರು ಸ್ವತಃ ಕವಿಗಳೂ ಆಗಿದ್ದುದಲ್ಲದೆ ಕವಿಪೋಷಕರೂ ಆಗಿದ್ದರು. ಕುಣಿಗಲ ರಾಮಶಾಸ್ತ್ರಿ, ಅಳಿಯ ಲಿಂಗರಾಜ, ಕೆಂಪುನಾರಾಯಣ, ಯಾದವ ಕಬ್ಬಿಗ ಇವರ ಆಸ್ಥಾನದಲ್ಲಿದ್ದರು. ಅಭಿನವ ಭೋಜರೆಂಬ ಬಿರುದಿಗೆ ಅರ್ಹರಾಗಿದ್ದ ಮುಮ್ಮಡಿಯವರ ಕಲಾ ಪ್ರೌಢಿಮೆ ಅತ್ಯುಚ್ಚ ಮಟ್ಟದ್ದಾಗಿತ್ತು. ಸಾಂಸ್ಕೃತಿಕವಾದ ಒಂದು ಪರಂಪರೆಯನ್ನು ಮುಂದುವರೆಸುವ ಕೆಲಸ ಮುಮ್ಮಡಿಯವರಿಂದ ಸತತವಾಗಿ ನಡೆಯಿತು. ಚಾಮರಾಜನಗರದ ಚಾಮರಾಜೇಶ್ವರ ದೇವಸ್ಥಾನದ ನಿರ್ಮಾಣ, ನಂಜನಗೂಡಿನ ನಂಜುಂಡೇಶ್ವರ ದೇವಾಲಯ ಹಾಗೂ ಚಾಮುಂಡಿಬೆಟ್ಟದ ಮೇಲೆ ಚಾಮುಂಡೇಶ್ವರಿ ಅಮ್ಮನವರ ಗುಡಿಯ ಹೊರ ಪ್ರಾಕಾರದ ವಿಸ್ತರಣೆ ಇವುಗಳು ಜರುಗುತ್ತಿದ್ದವು. ಈ ದೇವಾಲಯಗಳಿಗೆ ಹಲವು ಲಕ್ಷ ರೂಪಾಯಿಗಳ ರತ್ನಪಡಿ ಒಡವೆಗಳು, ಚಿನ್ನಬೆಳ್ಳಿ ಸಾಮಾನುಗಳನ್ನು ಕೊಟ್ಟಿದ್ದರು. ಇಂಥ ದಾನಧರ್ಮಗಳಲ್ಲಿ ಪ್ರಭುಗಳ ಕೈ ಧಾರಾಳವಾಗಿಯೇ ಇರುತ್ತಿತ್ತು. 'ಕೃಷ್ಣರಾಜ ಭೂಪ, ಮನೆಮನೆಗೆ ದೀಪ' ಎಂಬ ಮಾತು ಗಾದೆಯಂತೆ ಬಳಕೆಯಾಗುತ್ತಿತ್ತು.

ಆದರೆ ಆಡಳಿತದಲ್ಲಿನ ಸ್ಥಿತಿ ತೀರ ವಿರುದ್ಧವಾಗಿತ್ತು. ಮುಳ್ಳು ತುಂಬಿದ ಶಯ್ಯೆಯಂತೆ ಹಲವು ರೀತಿಯ ಸಂಕಷ್ಟಗಳಿಂದ ಕೂಡಿತ್ತು. ಬ್ರಿಟಿಷರು ಕೇಳಿ ಕೇಳಿ

ದಾಗೆಲ್ಲ ಯುದ್ಧಕ್ಕೆ ಸಹಾಯಮಾಡಿ ಸೈನ್ಯದ ವೆಚ್ಚ ಮಿತಿ ಮೀರಿತ್ತು. ಕ್ಷಾಮದ ಹಾವಳಿಯಿಂದಲೂ ಬೊಕ್ಕಸ ಬರಿದಾಗುತ್ತ ಬಂದಿತ್ತು. ಪ್ರಜೆಗಳಿಗೆ ನೆರವು ನೀಡಲೆಂದು ಅವರು ಹಿಂದುಮುಂದು ನೋಡದೆ ಹಣವನ್ನು ವೆಚ್ಚ ಮಾಡಿದರು. ಕಲೆ ಸಾಹಿತ್ಯಗಳಿಗೆ ಪ್ರಧಾನ ಪೋಷಕರಾಗಿದ್ದುದು ಆದಾಯಕ್ಕಿಂತ ವೆಚ್ಚ ಹೆಚ್ಚಲು ಇನ್ನೊಂದು ಕಾರಣವಾಗಿತ್ತು. ಈ ಎಲ್ಲ ಕಾರಣಗಳಿಂದ ಅವರು ಸಂಸ್ಥಾನದ ಆರ್ಥಿಕ ಹೊಣೆಯನ್ನು ನಿರ್ವಹಿಸಲು ಅಶಕ್ತರೆಂಬ ಆಪಾದನೆಯನ್ನು ಹೊತ್ತು ರಾಜ್ಯಕ್ಕೆ ಎರವಾಗಬೇಕಾಯಿತು.

ಪುಟ್ಟಣ್ಣನವರ ಕಾದಂಬರಿಗಳಲ್ಲಿ ಒಂದೆಡೆ ದೊರೆಗಳ ದಾನಶೂರತೆ ಇನ್ನೊಂದೆಡೆ ದೌಲತ್ತಿಲ್ಲದ ವಿಲಕ್ಷಣ ಪರಿಸ್ಥಿತಿ, ಅದರ ಪರಿಣಾಮವಾದ ಕ್ಷೋಭೆ ಇವುಗಳ ಚಿತ್ರಣ ಕಾಣುತ್ತದೆ. ದೊರೆಯ ಇಬ್ಬಗೆಯ ಪರಿಸ್ಥಿತಿಯೊಡನೆ, ದೊರೆಯ ಸುತ್ತಣ ಜನರ ವಾಸ್ತವಿಕ ಚಿತ್ರಣ ಪುಟ್ಟಣ್ಣನವರು ತಮ್ಮ ಕಾದಂಬರಿಗಳಲ್ಲಿ ಕಾಣಿಸುವ ರಾಜಾಸ್ಥಾನದ ಹರವು.

ಪ್ರಜಾವತ್ಸಲನಾದ ಒಬ್ಬ ದೊರೆ ನಿರಂಕುಶಪ್ರಭುತ್ವದಲ್ಲಿ ಉದಯಿಸಿದ್ದೇ ಆದರೆ ಅದಕ್ಕೆ ಸಮಾನವಾದ ಕ್ಷೇಮ ಪ್ರಜೆಗಳಿಗೆ ಬೇರೆ ಇಲ್ಲ ಎಂಬುದು ಪುಟ್ಟಣ್ಣನವರ ನಿಲುವು.[4] ಬಹುಶಃ ಇದೇ ಅರ್ಥದಲ್ಲಿ ರಾಜಕೃಪೆ ಎಂಬುದನ್ನು ದೈವೀಕೃಪೆಯೊಡನೆ, ರಾಜನಿಷ್ಠೆ ಎಂಬುದನ್ನು ದೇವರಲ್ಲಿ ನಿಷ್ಠೆ ಎಂಬುದರೊಡನೆ ಪುಟ್ಟಣ್ಣನವರು ಸಮೀಕರಿಸಿದರು. ರಾಜಾಸ್ಥಾನಕ್ಕೆ ನಿಷ್ಠೆ ಎಂಬುದು ಈ ಅರ್ಥದಲ್ಲಿ ಇಂಥ ಪರಿಸ್ಥಿತಿಯಲ್ಲಿ ಗಮನಾರ್ಹ. ಅವರ ಕಾದಂಬರಿಗಳಲ್ಲಿ ಮಾತ್ರವಲ್ಲದೆ ಜೀವನ ಚರಿತ್ರೆಗಳು, ಸಂಶೋಧನ ಕೃತಿಗಳು, ಹಲವು ಬಿಡಿಲೇಖನಗಳು ಮುಂತಾದ ಹಲವು ಕಡೆ ಈ ಅಂತರ್ಧೋರಣೆ ಸುಳಿವು ನೀಡುತ್ತದೆ.

ಆಸ್ಥಾನದ ವಿವರಗಳನ್ನು ಅದರ ಎಲ್ಲ ಧೋರಣೆಗಳೊಡನೆ ಚಿತ್ರಿಸುವ 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' ಪುಟ್ಟಣ್ಣನವರ ಕಾದಂಬರಿಗಿಂತಲೂ ಮುಂಚೆ ಬಂತು. ಪುಟ್ಟಣ್ಣನವರ ಎಲ್ಲ ಬರಹಗಳಲ್ಲೂ ರಾಜಾಸ್ಥಾನದ ಚಿತ್ರಣ ಆಂತರಿಕ ಬಾಂಧವ್ಯವನ್ನು ಉಂಟುಮಾಡುವ ಒಂದು ಸಶಕ್ತ ಭಾಗ.

ಅರಮನೆಯ ನಾಮತೀರ್ಥ ತೊಟ್ಟಿಯಲ್ಲಿ ಒಮ್ಮೆ ಶಿವಪೂಜೆ ನಡೆಯುತ್ತಿರುವಾಗ ವಾಕ್ಯಾರ್ಥ ಮಾಡಿದ ಸದಾಶಿವ ದೀಕ್ಷಿತನಿಗೆ ಕೂಡಲೆ 'ಸಿಡಿಲಮರಿ' ಎಂದು ಹೊಗಳಿ ಎರಡು ವರಹ ಸಂಬಳ ಮಾಡಿದ್ದು (ಮಾ. ಮ. 19), ಸಾಮಾನ್ಯ ಜೋಯಿಸರು ಹೆದರುವ ಮಟ್ಟಿಗೆ ಜ್ಯೋತಿಷ್ಯ ಜ್ಞಾನವಿದ್ದುದು (ಮಾ. ಮ. 21), ಹಲವು ರೀತಿಯ ಉಡುಗೊರೆ ಉಪಚಾರಗಳನ್ನು ಕೊಟ್ಟು ಮಹಾದೇವನ ಮದುವೆಗೆ ಆಗಮಿಸಿ ನಿರಾಡಂಬರವಾಗಿ ನಡೆದುಕೊಂಡು ಎಲ್ಲರಲ್ಲೂ ಧನ್ಯತೆಯ ಭಾವದ ಆಸ್ವಾದನೆ ಮೂಡಿಸಿದ್ದು (ಮಾ. ಮ. 76–80), ಗರ್ಗೇಶ್ವರಿ ತಿರುಮಕೂಡಲು ಪ್ರಾಂತದ ಒಬ್ಬ ಜೋಡಿದಾರನ ಮನೆಯ ಮದುವೆಗೆ ಬಂದ ವೃತ್ತಾಂತ (ಮು. ತೆ.

ಮಾ. 64-65) ಮುಂತಾದವು ಹಲವು. (ಈ ಕಡೆಯ ಉದಾಹರಣೆಯ ವೇಳೆಯಲ್ಲಿ ಅನಿರೀಕ್ಷಿತ ತಿರುವೊಂದು ನಡೆದು ಕಥೆಗೆ ಬೇರೊಂದು ತಿರುವು ದೊರೆಯುತ್ತದೆ. ಅದರ ವೃತ್ತಾಂತ ಬೇರೆ.) ಯಾವುದೇ ಬಿಂಕ ಬಿಗುಮಾನಗಳಿಲ್ಲದೆ ಸಾರ್ವಜನಿಕರಲ್ಲಿ ಬೆರೆತು ಆತ್ಮೀಯವಾಗಿ ಓಡಿಯಾಡುತ್ತಿದ್ದುದರಿಂದಲೇ ಮುಮ್ಮಡಿಯವರಿಗೆ ಜನರ ಹೃದಯದಲ್ಲಿ ಒಂದು ಶಾಶ್ವತವಾದ ಸ್ಥಾನ ಲಭಿಸಿತ್ತು. "ರಾಜಾ ಪ್ರತ್ಯಕ್ಷ ದೇವತಾ" ಎಂಬ ಭಾವನೆ ಮುಮ್ಮಡಿಯವರನ್ನು ಕುರಿತು ಪ್ರಜೆಗಳಲ್ಲಿ ಅಕ್ಷರಶಃ ನಿಜವಾಗಿತ್ತು. ದೈನಂದಿನ ಜೀವನದಲ್ಲಿ ರಾಜರ ನಾಮಸ್ಮರಣೆ ಎಷ್ಟು ಪವಿತ್ರವಾಗಿತ್ತೆಂಬುದಕ್ಕೆ ಪುಟ್ಟಣ್ಣನವರು ಕೆಲವು ಘಟನೆಗಳನ್ನು ಹೇಳುತ್ತಾರೆ. 'ಅವರಿಲ್ಲದೂಟ' ದಲ್ಲಿ ಅಂಚೆ ಸಾಗಿಸುವವನಿಗೆ ಕಾಡುದಾರಿಯಲ್ಲಿ ಹುಲಿ ಎದುರಾದರೆ ಅವನ ಮನಸ್ಸಿನಲ್ಲಿ ಮುಮ್ಮಡಿಯವರ ಚಿತ್ರ ಆಪದ್ಬಾಂಧವನಂತೆ ಮೂಡುತ್ತದೆ. ನಾಲಿಗೆಯ ಮೇಲೆ ಅವರ ಹೆಸರು ಬರುತ್ತದೆ. ದೌಲತ್ತು ಅವರ ಕೈ ತಪ್ಪಿಹೋದದ್ದು ಸಾಮಾನ್ಯರಿಗೆ ಯಾವ ಭೇದವನ್ನೂ ಕಾಣಿಸಿಲ್ಲ. ಈಗಲೂ ಮುಂಚಿನಂತೆಯೇ ಮೈಸೂರು ದೊರೆಗಳ ಮೇಲೆಯೇ ಅವರ ಅಣೆ ಪ್ರಮಾಣಗಳು ಸಾಗುತ್ತವೆ. "ಸೂರ್ಯ ಅಸ್ತವಾದರೂ ಅವನ ಕಿರಣಗಳ ಪ್ರಭೆ ಇನ್ನೂ ಇರುತಾ ಸಂಧ್ಯಾ ಕಾಲವೆನಿಸಿಕೊಳ್ಳುವುದಿಲ್ಲವೆ ? ಹಾಗೆ" (ಅ. 6) ಎಂದು ಪುಟ್ಟಣ್ಣನವರು ಈ ಸ್ಥಿತಿಯನ್ನು ವರ್ಣಿಸುತ್ತಾರೆ.

ಇಂಥ ದೊರೆಯ ಸುತ್ತ ಸಮಯಸಾಧಕರ, ಕೈಲಾಗದವರ, ಉದಾಸೀನರ ಪರಿವಾರ ಸಂತೋಷಕರವಾದ ಪರಿಸ್ಥಿತಿಯ ದ್ಯೋತಕವಾಗಿರಲಿಲ್ಲ.

ದೌಲತ್ತು ತಮ್ಮ ಕೈ ತಪ್ಪಿ ಕಂಪನಿ ಸರ್ಕಾರದವರ ಕೈಸೇರಿರುವುದು ಮುಮ್ಮಡಿಯವರನ್ನು ಬಹುವಾಗಿ ಕೊರೆಯುವ ಅಂಶ. ಹೇಗಾದರೂ ಅದನ್ನು ಪಡೆದು ಪ್ರಜೆಗಳಲ್ಲಿ, ತಮ್ಮ ಸಮಾನರಾದ ರಾಜವಾಡೆಯವರಲ್ಲಿ ತಮ್ಮ ಗೌರವವನ್ನುಳಿಸಿ ಕೊಳ್ಳಬೇಕೆಂಬುದು ಅವರ ವಿಚಾರ. ಯೋಗ್ಯರೂ ಸಮರ್ಥರೂ ಆದ ಜನರಲ್ಲಿ ಈ ರಹಸ್ಯ ಕಾರ್ಯಕ್ಕೆ ಬೇಕಾದ ವಿಚಾರದ ಆಲೋಚನೆಯನ್ನು ನಡೆಸುತ್ತಿದ್ದರು. ಇಂಥವರಲ್ಲಿ ಅನುವಾಗಿ ನಿಂತವರು ಕೆಲವೇ ಜನ. ಕಂಪನಿಯವರು ತೀರಾ ಸಾಧಾರಣ ಕಾರಣಕ್ಕಾಗಿ ತಮ್ಮ ರಾಜ್ಯವನ್ನು ಕಸಿದುಕೊಂಡಿದ್ದರಿಂದ ರಾಜ್ಯವನ್ನು ಪುನಃ ಪಡೆಯುವಾಗಲೂ ಅವರಿಂದಲೇ ಬರುವ ಹಾಗೆ ಮಾಡಿಕೊಳ್ಳುವುದು ಕ್ಷೇಮಕರ ಎಂಬ ನಂಬಿಕೆಯಿಂದ ಕಾರ್ಯವನ್ನು ನಡೆಸಲು ರಾಜರು ಉದ್ಯುಕ್ತರಾಗಿದ್ದರು. ಬ್ರಿಟಿಷ್ ಸರದಾರರಲ್ಲಿ ಬಳಕೆಯಿರುವ ಜನಗಳ ಸ್ನೇಹ ಅದಕ್ಕೆ ಅನುಕೂಲಕರವಾಗಿತ್ತು. ದೇಪಣ್ಣನಂಥವರಿಂದ ಈ ಕಾರ್ಯ ನೆರವೇರುವ ಹಾಗೂ ಇತ್ತು. ಆದರೆ ಇಂಥ ಗುರುತರವಾದ ಕಾರ್ಯ ಒಬ್ಬಿಬ್ಬರಿಂದ ಆಗುವಂಥದಲ್ಲ. ಇಂಥ ಪರಿಸ್ಥಿತಿಯಲ್ಲಿ ಸಮರ್ಥ ವ್ಯಕ್ತಿಗಳು ರಾಜರ ಬಳಿ ಸುಳಿಯಲೂ ಆಗದಂಥ ಸಂದರ್ಭ ಸೃಷ್ಟಿಯಾಗಿರುವುದು ತಿಳಿಯುತ್ತದೆ, ಈ ಅಂಶ ರಾಜರಿಗೂ ತಿಳಿದ ವಿಷಯವೇ ಆಗಿದೆ ಎನ್ನುವುದು "ಇಂಥಾ ಘಟಕರೂ ಇಂಥಾ ಸಾಹಸಿಗಳೂ ನಮಗೆ ದೊರೆಯುವುದು ಅಪೂರ್ವ. ಇಂಥವರು ತಾವಾಗಿ ನಮ್ಮಲ್ಲಿ

ಬರುವುದಿಲ್ಲ, ಒಂದು ವೇಳೆ ಯಾರಾದರೂ ಹಟಾತ್ತಾಗಿ ಬಂದರೂ ನಮ್ಮ ಸುತ್ತ ಮುತ್ತ ಓಡಾಡಿಕೊಂಡು ನಮ್ಮನ್ನು ಸ್ತೋತ್ರ ಮಾಡುತಾ ಅರಮನೆಯಿಂದ ಬೇಕಾದ್ದನ್ನು ದೋಚಿಕೊಂಡು ತಮ್ಮ ಮನೆ ತುಂಬಿಕೊಳ್ಳುತಾ ಸಮಯದಲ್ಲಿ ನಮಗೇ ಎರಡು ಬಗೆಯುತಾ ಇರುವ ಪರಮ ನೀಚರು ಅಂಥವರನ್ನು ನಮ್ಮ ದೃಷ್ಟಿಗೆ ಬೀಳದಂತೆಯೇ ಮಾಡಿ, ನಮ್ಮ ಲೋಕವೆಲ್ಲಾ ಈ ಖೂಳರೇ ಎನ್ನುವ ಹಾಗೂ ಅರಮನೆ ಎಂಬುದು ಕಾರಾಗೃಹವೆನ್ನುವ ಹಾಗೂ ಮಾಡಿಬಿಟ್ಟಿದ್ದಾರೆ. ದೊರೆತನ ಮಾಡುವವನಿಗೆ ದೈವಕೃಪೆಯಿಂದ ನಿಮ್ಮಂಥಾ ಸತ್ಪುರುಷರ ಸಹವಾಸ ದೊರೆಯಬೇಕೇ ಹೊರತು ಮತ್ತೆ ಬೇರೇ ಮೋಕ್ಷವೇ ಇಲ್ಲ." (ಮು. ತೆ. ಮಾ. 201-202) ಎಂಬ ಅವರ ಉದ್ಗಾರದಿಂದ ತಿಳಿಯುತ್ತದೆ.

ದೇಶದಲ್ಲಿ ನಡೆಯುತ್ತಿರುವ ಕಳ್ಳತನಗಳನ್ನು ಅಡಗಿಸಲಾಗಲೀ ಕಳ್ಳರನ್ನು ಹಿಡಿಯಲಾಗಲೀ ಆಗದೆ ಅಧಿಕಾರಿಗಳು ಅಶಕ್ತರಾಗಿರುವುದು (ಮು. ತೆ. ಮಾ. 83), ಹಲವೆಡೆ ಕಳ್ಳರಿಗೆ ಅಧಿಕಾರಿಗಳೇ ಒತ್ತಾಸೆಯಾಗಿರುವುದು (ಮಾ. ಮ. 183), ಅಂಥ ಅಧಿಕಾರಿಗಳು ಅರಮನೆಯಲ್ಲಿ ರಾಜಪೂಜ್ಯತೆಯನ್ನು ಹೊಂದಿರುವುದು (ಮಾ. ಮ. 31), ಅರಮನೆಯ ಅಧಿಕಾರವರ್ಗದ ತಿಮ್ಮಣ್ಣಶಾಸ್ತ್ರಿಗಳಂಥವರ ಆರ್ಭಟ (ಮಾ. ಮ. 20) ಇತ್ಯಾದಿ ಘಟನೆಗಳು ಪರಿಸ್ಥಿತಿಯನ್ನು ಪಡಿಮೂಡಿಸುತ್ತವೆ. ಚಾಮರಾಜ ನಗರದ ಅಮೀಲನಂಥ ಧೂರ್ತನನ್ನು ರಾಜರು ನಂಬಿದ್ದು ನಿಜಾನಿಜಗಳನ್ನರಿಯಲಾಗದ ರಾಜಾಸ್ಥಾನದ ಸ್ಥಿತಿಯನ್ನು ಗುರುತಿಸುತ್ತದೆ. ಕುತಂತ್ರಿಗಳು ನಟನೆಯಿಂದ ರಾಜರ ಅಂತರಂಗ ಸಚಿವರಾಗುತ್ತಿದ್ದ ಸ್ಥಿತಿಯಲ್ಲಿ ಅರಸೊತ್ತಿಗೆಯಲ್ಲಿನ ವ್ಯಂಗ್ಯವಿದೆ. ರಾಜರ ಪ್ರಭಾವ ಇರುವೆಡೆ ನ್ಯಾಯ ತಿಳಿದ ಅಧಿಕಾರಿಗಳ ಪ್ರವರ್ತನೆಗೂ ಅಡ್ಡಿ. ಎಲ್ಲ ವಿಷಯ ತಿಳಿದಿದ್ದರೂ ಅಮೀಲನ ಮೇಲಿನ ಅಧಿಕಾರಿಗಳು ಕೂಡ ಅಮೀಲನ ರಾಜಪೂಜ್ಯತೆಗೆ ಹೆದರುತ್ತಾರೆ, (ಮಾ. ಮ. 38). ತಮ್ಮ ಆಸ್ಥಾನದ ಇಬ್ಬರ ನಡುವಿನ ಕಲಹದ ಮೂಲವನ್ನು ಗುರುತಿಸಲು ಸೋತಿದ್ದು, ತಪ್ಪು ತಿದ್ದಲೂ ಆಗದುದು, ಜಾತಿಯ ಗಲಭೆಗಳನ್ನು ತಡೆಹಿಡಿಯಲಾಗದುದು ಮತ್ತು ವ್ಯಕ್ತಿಗಳ ಗುಣಗಳನ್ನು ಇಡೀ ಜಾತಿಗೇ ಆರೋಪಿಸುವುದು (ಅವರಿಲ್ಲದೂಟ) ಈ ಎಲ್ಲ ರೀತಿಗಳಲ್ಲೂ ಪ್ರಭುತ್ವ ಎಡವುತ್ತಿರುವುದು ಸ್ಪಷ್ಟ. ಜೊತೆಗೆ ಗುಣಮನ್ನಣೆಯಲ್ಲೂ ತಡವಾಗುವುದು (ಮಾ. ಮ. 25) ಇನ್ನೊಂದು ದೌರ್ಬಲ್ಯ.

ವಿದ್ವಾಂಸರಿಗೆ, ಪಂಡಿತರಿಗೆ, ಕಲಾಸಕ್ತರಿಗೆ ರಾಜಕಾರಣದಲ್ಲಿ ಆಸಕ್ತಿಯೂ ಇಲ್ಲ, ಸಾಮರ್ಥ್ಯವೂ ಇಲ್ಲ. ರಾಜಕಾರಣದಲ್ಲಿ ತೊಡಗಿದವರಿಗೆ ಸ್ವಾರ್ಥ, ಅಸೂಯೆಗಳು ಮೈಗಂಟಿವೆ. ಈ ಬಿಕ್ಕಟ್ಟಿನಲ್ಲಿ ರಾಜರು ಒಂದು ಕಡೆ ಅತ್ಯುಜ್ವಲ ವ್ಯಕ್ತಿತ್ವದವರಾಗಿದ್ದರೆ. ಇನ್ನೊಂದೆಡೆ ಸೋತು ಕೈ ಚೆಲ್ಲಿದ್ದಾರೆ.

ಇದರ ಮೇಲೆ ರಾಜರಲ್ಲಿ ಆತ್ಮೀಯರಾಗಿದ್ದು ರಾಜಕಾರ್ಯ ಸಮರ್ಥರಾಗಿರುವವ

ರಲ್ಲಿ ನೈತಿಕವಾದ ಗಟ್ಟಿತನವಿಲ್ಲ. ರಾಜರ ಅಂತರಂಗಕ್ಕೆ ಸೇರಿದ ದೇಪಣ್ಣ ಶಕ್ತನಾದವ. ಆದರೆ ಚಾಪಲ್ಯಗಳಿಗೆ ಬಲಿಯಾದ ವಿಟಪುರುಷ. ಅವನು ನೆಚ್ಚಿರುವ ನಾಗರತ್ನಾಸಾನಿಯು ಇನ್ನೊಬ್ಬ ವಿಟ ಎದುರುಪಕ್ಷಕ್ಕೆ ಸೇರಿದವನು. ದೇಪಣ್ಣನ ಸ್ನೇಹಿತ ರಣಸವರೆ ಲೂಟಿಮಾಲು ಹೊಂದಿರುವವನು, ರತ್ನಪಡಿ ವ್ಯವಹಾರದಲ್ಲಿ ಆಸಕ್ತಿ ಹೊಂದಿದವನು. ಕಾನೂನಿಗೆ ಇಂಥ ಚಟುವಟಿಕೆಗಳು ವಿರುದ್ಧವಾದುವು. ಇದರ ಮೇಲೆ ಇವನಿಗೆ ಧೈರ್ಯವಾಗಿ ದಕ್ಕಿಸಿಕೊಳ್ಳುವ ಬುದ್ಧಿಯೂ ಚಾತುರ್ಯವೂ ಇಲ್ಲದುದು ಪರಿಸ್ಥಿತಿಯ ಇನ್ನೊಂದು ಮುಖವನ್ನು ವಿಡಂಬಿಸುತ್ತದೆ. ತಾನು ಮಾಡಿದ್ದು ಅಪರಾಧವೆಂದು ಪರಿಗಣನೆಯಾಗುವ ಸಾಧ್ಯತೆ ರಣಸವರೆಗೆ ತಿಳಿದಿದೆ. ಕೊಳ್ಳೆಯಲ್ಲಿ ಲೋಭ, ಆದರೆ ಸಿಕ್ಕಿಹಾಕಿಕೊಂಡರೆ ಎಂಬ ಭಯ. ಜವಾಹಿರು ಪರೀಕ್ಷೆಯಲ್ಲಿ ಹನುಮಂತರಾವ್ ರಣಸವರೆ ಸೋಲುವುದು, ದೇಶತ್ಯಾಗ ಮಾಡುವುದು ಕೂಡ ಈ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿದೆ, ಸಾಂಕೇತಿಕವಾಗಿದೆ. ಹನುಮಂತರಾವ್ ರಣಸವರೆಗೆ ಅಪ್ರಮೇಯನ ಬೆಂಬಲ ಸಿಕ್ಕಿದಂತೆ ಮುಮ್ಮಡಿಯವರಿಗೆ ಯಾರೂ ಇಲ್ಲ. ಸ್ವತಃ ರಣಸವರೆಯೂ ಅಪ್ರಮೇಯನ ಸಾಮರ್ಥ್ಯವನ್ನು ಪೂರ್ಣ ತಿಳಿಯದವನು. ಅದೇ ರೀತಿ ರಾಜಾಸ್ಥಾನವೂ ತನ್ನ ನಿಷ್ಠಾವಂತ ಸೇವಕರನ್ನು ಗುರುತಿಸುವುದರಲ್ಲಿ ಸೋಲುತ್ತದೆ. ಸಾಮಾನ್ಯ ಜನರ ಅಸೂಯೆ ಸ್ವಾರ್ಥಗಳು ಮೇಲಿನ ವಲಯಗಳಲ್ಲಿ ರಾಜಕಾರಣವನ್ನು ಹೇಗೆ ಕಲಕಬಹುದೆಂಬುದು ಸ್ಪಷ್ಟನಿರೂಪಿತವಾಗಿದೆ. ದೇಪಣ್ಣ, ಬಸಪ್ಪ ಮುಂತಾದವರ ಜಗಳದಲ್ಲಿ ಹಯಾತ್‌ಖಾನನ ಬೆಂಬಲ ದೊರೆಗಳ ವಿರುದ್ಧ ಪಕ್ಷಕ್ಕೇ ಸಲ್ಲುತ್ತದೆ. ಈ ಎಲ್ಲ ದಿವ್ಯಗಳ ನಡುವೆ ದೊರೆತನ ನಡೆಸುವುದು ಎಂಥ ತೊಡಕಿನ ಕಾರ್ಯ ಎಂದು ಬೇರೆ ಹೇಳಬೇಕಿಲ್ಲ, ಒಳ್ಳೆಯ ಮನಸ್ಸಿರುವವರಿಗೆಲ್ಲ ಒಂದು ಬಗೆಯ ಮಿತಿಗಳು ಅಂಟಿಕೊಂಡಿವೆಯೇನೋ ಎಂಬಂತೆ ಭಾಸವಾಗುತ್ತದೆ. ರಾಜ್ಯವನ್ನು ಕಾಪಾಡಿಕೊಳ್ಳಲು, ಮಿತಿಮೀರಿದ ಒಳ್ಳೆಯತನದಿಂದಲೇ ಸೋತ ದೊರೆಯ ಈ ಸೋಲು ಪ್ರಾತಿನಿಧಿಕ ಎಂಬ ಅನಿಸಿಕೆಯುಂಟಾಗುತ್ತದೆ. ಪ್ರಭುತ್ವ ಕೂಡ ಸ್ಥಿರತೆಗೆ ಎರವಾಗುತ್ತಿದ್ದುದನ್ನು ಪುಟ್ಟಣ್ಣನವರು ಹೀಗೆ ಹೇಳಿದ್ದಾರೆ. "ಒಂದೊಂದು ವೇಳೆ ಗಾಳಿಗೆ ಹಿಡಿದ ದೀಪದಂತೆ ಚಿತ್ತಚಂಚಲವಾದರೂ ಕೊನೆಯಲ್ಲಿ ಸರಿಯಾದ ದಾರಿಯಲ್ಲಿ ನಿಲ್ಲುತಾ ಇದ್ದದ್ದು ಕೃಷ್ಣರಾಜ ಒಡೆಯರ ಪೂರ್ವಾರ್ಜಿತ ಪುಣ್ಯವೆಂದು ಹೇಳಬೇಕು" (ಮು. ತೆ. ಮಾ. 77).

ಮುಮ್ಮಡಿಯವರ ಪಾತ್ರ ಮೂರು ಕಾದಂಬರಿಗಳಲ್ಲೂ ಹಿನ್ನೆಲೆಯನ್ನು ಒದಗಿಸುವ ಒಂದು ಸಮರ್ಥ ಪಾತ್ರ. ಮುಮ್ಮಡಿಯವರ ಕಲ್ಪವೃಕ್ಷದಂತಹ ಔದಾರ್ಯ, ವಿದ್ವತ್ಪಕ್ಷಪಾತ, ಆಶ್ರಿತ ಜನರಲ್ಲಿ ಮಮತೆ, ಶಾಸ್ತ್ರಪಾಂಡಿತ್ಯ, ಕಲೆಸಾಹಿತ್ಯಗಳಿಗೆ ಮನ್ನಣೆ, ಆತ್ಮೀಯ ವ್ಯವಹರಣೆಗಳು ಅವರನ್ನು ಅಂತಃಕರುಣೆಗಳಾಗಿ ಚಿತ್ರಿಸಿವೆ. ಹಲವು ಶಾಸ್ತ್ರಗಳಲ್ಲಿ ಪಳಗಿದ ಶೇಷಯ್ಯ, ವಿಲಕ್ಷಣ ಸಂಗತಿಗಳಲ್ಲಿ ಶಕ್ತಿ ಇದ್ದ ಹಗಲುವೇಷದ ಕೃಷ್ಣಯ್ಯ ಮುಂತಾದವರ ವಿವರಗಳು ರಂಜನೀಯವಾಗಿವೆ. ರಾಜರ

ಸಾಮರ್ಥ್ಯಾಸಾಮರ್ಥ್ಯಗಳನ್ನು ಪುಟ್ಟಣ್ಣನವರು ದಟ್ಟ ವಿವರಗಳೊಂದಿಗೆ ಚಿತ್ರಿಸುತ್ತಾರೆ. ರಾಜಾಸ್ಥಾನದಲ್ಲಿನ ಸಮಯಸಾಧಕರಿಂದ ಹಿಡಿದು ನಿಜವಾದ ರಾಜಭಕ್ತರವರೆಗೂ ವಿವಿಧ ಜನಗಳ ಪರಿಚಯ ಇಲ್ಲಿದೆ. ಸಾಮಾನ್ಯ ಜನಗಳಲ್ಲಿ ರಾಜಕೀಯದ ಒಂದು ಅರಿವು ಸಾಮಾನ್ಯವಾಗಿ ಇಲ್ಲ. ಅಂಥದೇನಿದ್ದರೂ ನಮಗೆ ಕಾದಂಬರಿಯಲ್ಲಿ ಪುಟ್ಟಣ್ಣನವರು ನಿರೂಪಕರಾಗಿ ತಿಳಿಸುವ ವಿವರಗಳಿಂದ ಮಾತ್ರ ತಿಳಿಯುತ್ತದೆ.

ಪುಟ್ಟಣ್ಣನವರ ಕಾದಂಬರಿಗಳಷ್ಟು ಸಮರ್ಥವಾಗಿ (ಮುಖ್ಯವಾಗಿ 'ಮಾಡಿದ್ದುಣ್ಣೋ ಮಹಾರಾಯ') ಕನ್ನಡದ ಬೇರಾವ ಕಾದಂಬರಿಯೂ ಮುಮ್ಮಡಿಯವರ ಆಸ್ಥಾನದ ವಿವರಗಳನ್ನು ಹಿಡಿದಿಟ್ಟಿಲ್ಲ. ಪುಟ್ಟಣ್ಣನವರ ಬಾಲ್ಯ ಮುಮ್ಮಡಿಯವರಿದ್ದ ಮೈಸೂರಿನಲ್ಲಿಯೇ ಕಳೆದುದರಿಂದ ಅವರಿಗೆ ರಾಜಾಸ್ಥಾನದ ನಿಕಟ ಪರಿಚಯವಿತ್ತು. ಮುಮ್ಮಡಿಯವರು ದಿವಂಗತರಾದಾಗ ಪುಟ್ಟಣ್ಣನವರಿಗೆ ಹದಿನಾಲ್ಕು ವರ್ಷ ವಯಸ್ಸು. ಸೂಕ್ಷ್ಮ ಸಂವೇದನೆಗಳ ಪುಟ್ಟಣ್ಣನವರು ಮುಮ್ಮಡಿಯವರ, ಅವರ ಸುತ್ತಮುತ್ತಲಿನವರ ಹಲವು ಸಂಗತಿಗಳನ್ನು ತಿಳಿದಿರಬೇಕು. ಅವರನ್ನು ಸಮೀಪದಿಂದ ಕಂಡಿರಬೇಕು. ಅಲ್ಲದೆ ರಾಜರ ಸುತ್ತಲಿನವರ ನಿಕಟ ಪರಿಚಯ ಅವರಿಗೆ ತಿಳಿದಿರುವ ಸಂಭವವೂ ಉಂಟು. ಮುಮ್ಮಡಿಯವರನ್ನು ಕುರಿತು ಅನೇಕ ವಿಚಾರಗಳ ಸಂಗ್ರಹಣೆ ಅನುದ್ದೇಶಿತವಾಗಿಯೇ ಆದರೂ ಆ ವೇಳೆಗೆ ಸಾಕಷ್ಟು ಆಗಿರಬಹುದು. ಮುಂದೆ ರಾಜಾಸ್ಥಾನದ ಸಂಪರ್ಕವೂ ಬಂತು." ಪುಟ್ಟಣ್ಣನವರ ಕಾದಂಬರಿಗಳಿಗೆ ನಿಜವಾದ ಪರೋಕ್ಷ ನಾಯಕರೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರು ಆ ಪ್ರಭುಗಳ ವ್ಯಕ್ತಿ ವರ್ಚಸ್ಸು ಪುಟ್ಟಣ್ಣನವರ ಮನಸ್ಸನ್ನು ಸೂರೆಗೊಂಡಿದೆ. ಕಥೆಗಳು ನಡೆಯುವುದು ಮೈಸೂರಿನಲ್ಲಿ, ಅಥವಾ ಸಮೀಪದ ಊರುಗಳಲ್ಲಿ. ಇಲ್ಲಿಯ ಪಾತ್ರಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಅವರ ಆಸ್ಥಾನಕ್ಕೆ ಸಂಬಂಧಪಟ್ಟವರು, ಅವರ ಆಶ್ರಿತ ವರ್ಗಕ್ಕೆ ಸೇರಿದವರು. ಹೀಗಿರುವುದರಿಂದ ಮುಮ್ಮಡಿಯವರ ಪ್ರಸ್ತಾಪ ಇಲ್ಲಿ ಮತ್ತೆ ಮತ್ತೆ ಬರುತ್ತದೆ. ಅದು ಬಂದಾಗ ಪುಟ್ಟಣ್ಣನವರ ಲೇಖನಿಗೆ ತಡೆಯಿಲ್ಲ. ಅವರ ಉತ್ಸಾಹಕ್ಕೆ ಮಿತಿಯಿಲ್ಲ. ಮುಮ್ಮಡಿಯವರ ಔದಾರ್ಯ, ಸರಳಮನಸ್ಸು, ಗಂಭೀರ ವರ್ಚಸ್ಸು ಇವನ್ನೆಲ್ಲ ವ್ಯಕ್ತಪಡಿಸುವ ಎಷ್ಟು ಸಂಗತಿಗಳು ಇಲ್ಲಿ ಅಡಕವಾಗಿವೆ. ಹೀಗೆಂದರೆ ಪ್ರಭುಗಳನ್ನು ಪುಟ್ಟಣ್ಣನವರು ಅಮಾನುಷ ವ್ಯಕ್ತಿಯಾಗಿ ಚಿತ್ರಿಸಿದ್ದಾರೆಂದು ಅರ್ಥವಲ್ಲ. ಹತ್ತಿರವಿದ್ದವರ ಮಾತು ಕೇಳಿ ದೊರೆಗಳ ಚಿತ್ತ ಒಮ್ಮೊಮ್ಮೆ ವ್ಯತ್ಯಾಸವಾಗುತ್ತಿತ್ತೆಂಬುದನ್ನೂ ಅವರು ಉಲ್ಲೇಖಿಸಿದ್ದಾರೆ. ಅಂಥ ಸಂದರ್ಭದಲ್ಲಿ ಅವರ ನಿಷ್ಕಪಟ ಹೃದಯವನ್ನು ತೆರೆದಿಡಲು ಮರೆತಿಲ್ಲ"[5] ಎಂಬ ತೀ. ನಂ. ಶ್ರೀಕಂಠಯ್ಯನವರ ಮಾತು ಸೂಕ್ತವಾದುದು.

ಒಟ್ಟಿನಲ್ಲಿ 'ರಾಜಾ ಪ್ರತ್ಯಕ್ಷ ದೇವತಾ' ಎಂಬುದು ಪುಟ್ಟಣ್ಣನವರು ಒಪ್ಪಿದ ಧೋರಣೆ. ತಮಗಿಂತ ದೊಡ್ಡದನ್ನು ಕಂಡುಕೊಂಡು ಅದಕ್ಕೆ ನಿಷ್ಠರಾಗಿರುವ ಪುಟ್ಟಣ್ಣನವರ ಪ್ರವೃತ್ತಿ ಇಲ್ಲಿ ಸುಸ್ಪಷ್ಟ.

## ಹಾಸ್ಯ

ಪುಟ್ಟಣ್ಣನವರ ಕಾದಂಬರಿಗಳಲ್ಲಿ ಹಾಸ್ಯದ ವಿವಿಧ ಬಗೆಗಳು ಕಾಣುತ್ತವೆ. ವಸ್ತುನಿರೂಪಣೆಯ ಒಂದು ಭಾಗವಾಗಿ ಇದರ ನಿರ್ವಹಣೆ ಅಚ್ಚುಕಟ್ಟಿನದು. ಸಾಮಾಜಿಕವಾದ ಅಸಮತೆ ಕಂಡಾಗ ಅಸಹನೆ ರೋಷಗಳು ವ್ಯಂಗ್ಯದಲ್ಲಿ ಧ್ವನಿತವಾಗುತ್ತವೆ. ಈ ಕಟಕಿಯ ಖಾರಕ್ಷಾರಗಳು ಕಾದಂಬರಿಕಾರರ ಉದ್ದೇಶಕ್ಕೆ ತಕ್ಕಂತೆ ಅಭಿವ್ಯಕ್ತವಾಗುತ್ತವೆ.

ಪುಟ್ಟಣ್ಣನವರ ಪರಮಾದರ ಗೌರವಗಳಿಗೆ ಪಾತ್ರವಾದ ಮುಮ್ಮಡಿಯವರ ಆಸ್ಥಾನದ ನಕಲಿ ನಾರಣಪ್ಪನ ಹಾಸ್ಯ ಅಂದಿನ ರಾಜಾಸ್ಥಾನಗಳ ವಿದೂಷಕರ ಕಸಬುದಾರಿಕೆಯ ಹಾಸ್ಯ. ರಾಜರಲ್ಲಿ ನಗೆಗಾರರಿಗೆ ಇರುವ ಸಹಜ ಸಲಿಗೆ, ಸನ್ನಿವೇಶವನ್ನು ಸರಿಯಾಗಿ ಗ್ರಹಿಸಿ ಅದನ್ನು ಹೊಗಳಿಕೆಗಾಗಲೀ, ತೆಗಳಿಕೆಗಾಗಲೀ ಸರಿಯಾಗಿ ಉಪಯೋಗಿಸಿಕೊಳ್ಳುವ ಹಾಸ್ಯಪ್ರಜ್ಞೆ ಈತನಿಗುಂಟು. ಸರಸವಾದ ಸನ್ನಿವೇಶವನ್ನು ಸಹಜವಾಗಿ ಈತ ನಿರ್ಮಿಸಬಲ್ಲನೆಂಬುದಕ್ಕೆ ಸೀತೆ ಮಹಾದೇವರ ಮದುವೆಯ ಚಿತ್ರಣ (ಮಾ. ಮ. 76-79) ಸಾಕ್ಷಿ ನುಡಿಯುತ್ತದೆ. 'ಮುಸುಗ ತೆಗೆಯೇ ಮಾಯಾಂಗನೆ'ಯಲ್ಲಿ ಕಾಣುವ ಆಸ್ಥಾನದ ಹಾಸ್ಯಗಾರ ಪಾರಿಜಾತ ಕೇಶವ, ಆಸ್ಥಾನಿಕರು ತಮ್ಮ ನಿಲುವನ್ನು ಪ್ರಭುಗಳಿಗೆ ತಿಳಿಸಬೇಕೆಂದಾಗ ಸಹಕರಿಸುತ್ತಾನೆ. ನಿರ್ವಾಣದಯ್ಯನವರ ಮೆರವಣಿಗೆ ವಿಚಾರ ಇದಕ್ಕೆ ಸಾಕ್ಷಿ (ಮು. ತೆ. ಮಾ. 60–61). ಆಸ್ಥಾನಿಕರ ಬಣ್ಣವನ್ನು ಹಲವು ಬಾರಿ ಸ್ಪಷ್ಟವಾಗಿ ಇವನ ಮೂಲಕ ಪುಟ್ಟಣ್ಣನವರು ಹೊರಡಿಸುತ್ತಾರೆ. ಗೌರವ ದೂರವಾದ ಲಂಪಟತೆಯನ್ನು ಕಳ್ಳತನದಿಂದ ನಡೆಸಬಯಸುವ ಬಸಪ್ಪನಂಥವರನ್ನು ಕುಚೇಷ್ಟೆಗೀಡಾಗಿಸುವ ಇವನ ಮಾತುಗಳು ಚುಚ್ಚುಮದ್ದಿನಂತೆ. ಬಸಪ್ಪನಂಥ ಆಸ್ಥಾನಿಕರನ್ನು ಪುಟ್ಟಣ್ಣನವರು ನೇರವಾಗಿಯೂ ಗೇಲಿ ಮಾಡುತ್ತಾರೆ. ದೇಪಣ್ಣನ ಆಗಮನವನ್ನು ಅರಿತ ಬಸಪ್ಪ ವಿಧಿಯಿಲ್ಲದೆ ಒಮ್ಮೆ ಧಾನ್ಯ ತುಂಬುವ ಗಳಗೆಯಲ್ಲಿ ಗಂಟೆಗಟ್ಟಲೆ ಅಡಗಿಕೂತು ಅನುಭವಿಸಿದ ಅವಸ್ಥೆ, ಇನ್ನೊಮ್ಮೆ ಮೂಲೆಯಲ್ಲಿದ್ದ ಹಳೆಯ ಹಾಸುಗೆಯ ಸುರುಳಿಯಲ್ಲಿ ಮೂವತ್ತು ಗಳಿಗೆ ಇದ್ದು ಪಡೆದ ಅನುಭವ, ಮತ್ತೊಮ್ಮೆ ಜುಟ್ಟು, ಮೀಸೆ, ಹುಬ್ಬುಗಳನ್ನು ಬೋಳಿಸಿಕೊಂಡು ಬಿಳಿಕೆಂಪು ನಾಮ ಹಾಕಿಕೊಂಡು ನೀರು ಹಾಕುವವನ ವೇಷದಲ್ಲಿ ತಪ್ಪಿಸಿಕೋಡು ಹೋದದ್ದು–ಇವೆಲ್ಲ ಅವನ ಪಾತ್ರ ಲೇವಡಿಗೆ ಗುರಿಯಾಗಿದೆ.

ಸಾಮಾಜಿಕರ ನಡುವೆ ಕಾಣುವ ವಿರೋಧಾಭಾಸಗಳನ್ನು ಪುಟ್ಟಣ್ಣನವರು ಹಾಸ್ಯಕ್ಕೆ ಈಡುಮಾಡುತ್ತಾರೆ. ಅಮ್ಮನಗುಡಿಯ ಲಟ್ಟರು, ಉಂಡಾಡಿಗಳು, ಸಮಯಸಾಧಕರು, ಕೆಲಸಗಳ್ಳರ ನಡುವೆ ಕಟ್ಟಜೋಯಿಸನ ಭದ್ರವಿಲ್ಲದ ಬಾಯಿಯಿಂದ ವೈಷ್ಣವ, ಶ್ರೀವೈಷ್ಣವ, ಸ್ಮಾರ್ತ ಪಂಗಡಗಳ ಮಡಿಯ ಗುಟ್ಟನ್ನು ಬಯಲಿಗೆಳೆಯುವ ರೀತಿ ಆಯಾ ಪಂಗಡದವರೂ ನಗುವಂತೆ ಮಾಡುತ್ತದೆಯೇ ಹೊರತು

ಬೇರೆ ಅಲ್ಲ. ಅವುಗಳ ಅಸಂಬದ್ಧತೆಯನ್ನು ಟೀಕೆಗೊಳಗಾಗಿಸುವುದು–ಒಬ್ಬ ಪೆದ್ದನೆನಿಸಿಕೊಂಡ ವ್ಯಕ್ತಿಯ ಮೂಲಕ–ಆಗ ಎದುರುಪಕ್ಷದಿಂದ ಲೋಕಾಚಾರದಂತೆ, ಕುಲಾಚಾರದಂತೆ ನಡೆಯುತ್ತದೆ ಎಂಬ ಹಾರಿಕೆಯ ಮಾತು ಹೇಳಿಸುವುದು ಪಟ್ಟು ಸಡಲಿಸದ ಪುಟ್ಟಣ್ಣನವರ ನಿರ್ದಾಕ್ಷಿಣ್ಯಕ್ಕೆ ಪ್ರತೀಕವಾಗಿದೆ.

ವ್ಯಂಗ್ಯ ಇನ್ನಷ್ಟು ಮೊನಚಾಗುವುದು ಏನೂ ಅರಿಯದ ಮನೆಯಾಳಿನಂತೆ ಬಂದು ಸೇರಿಕೊಂಡಿದ್ದ ಕಿಸನ್ ಎಲ್ಲ ರೀತಿಯ ದುರ್ಗುಣಗಳಿಗೆ ಆಗರವಾಗಿದ್ದ ಮನೆಯೊಡತಿಯೊಡನೆ, ಅಂಥವನೇ ಆದ ಒಡೆಯನ ವಿಚಾರವನ್ನು ಹೇಳುತ್ತಾ 'ಜೂಜಾಡುವುದೇ ಕೆಟ್ಟದು. ಅದರಲ್ಲಿ ಅನ್ಯಾಯ ಮಾಡಿದರೇನಾಯಿತು ?' (ಅ. 154) ಎನ್ನುವ ಸನ್ನಿವೇಶಗಳಲ್ಲಿ. ತಪ್ಪಿತಸ್ಥರ ಬಳಿ ನ್ಯಾಯವಾಗಿರುವವನೊಬ್ಬನು ನೀವು ಮಾಡಿದ್ದರಲ್ಲಿ ಅಸಹಜವಾದದ್ದೇನೂ ಇಲ್ಲ ಎಂದು ಬಾಯಲ್ಲಿ ಹೇಳುತ್ತಾ ತಪ್ಪುಗಳನ್ನು ಅವರ ಮುಖಕ್ಕೇ ರಾಚುವ ವಿಧಾನ ಇದು.

ಮಾರಮಣರಾಯನ ಸುಲಿಗೆ, ಕಳ್ಳರ ಕೂಟದ ವಂಚನೆ, ಉಪಾಧ್ಯಿಯ ಪ್ರಚ್ಛನ್ನ ದ್ವೇಷ, ಆಸ್ಥಾನಿಕರ ನೈತಿಕ ನೆಲೆಗಟ್ಟಿಲ್ಲದ ಪರಿಸ್ಥಿತಿ ಎಲ್ಲವನ್ನೂ ಪುಟ್ಟಣ್ಣನವರು ತಮ್ಮ ಕಾದಂಬರಿಗಳಲ್ಲಿ ಕುಟುಕುತ್ತಾರೆ. ಈ ಮನೋಧರ್ಮದ ತಳದಲ್ಲಿ ಸಮಾಜದ ವಿಡಂಬನೆಗಿಂತಲೂ ಅದನ್ನು ನೇರಗೊಳಿಸುವ ಮಾರ್ಮಿಕವಾದ ನಿಲುವು ಕಾಣುತ್ತದೆ. ಟೊಳ್ಳನ್ನು ಬಯಲಿಗೆಳೆಯುವುದಕ್ಕಿಂತ ಅದನ್ನು ನೇರಗೊಳಿಸುವುದು ಇಲ್ಲಿನ ಉದ್ದೇಶ.

ಜನರ ಅಸಂಗತ ಸ್ವಭಾವಗಳನ್ನು ತಮ್ಮ ಹಾಸ್ಯಪ್ರಜ್ಞೆಯ ಭೂತಗನ್ನಡಿಯಲ್ಲಿ ವಿಚಿತ್ರವಾಗಿ ಕಾಣುವಂತೆ ಸೆರೆಹಿಡಿಯುತ್ತಾರೆ. ತಿಮ್ಮಮ್ಮ ಸೊಸೆಯ ಸೌಂದರ್ಯವನ್ನು ಕುರೂಪ ಎಂಬಂತೆ ವರ್ಣಿಸುವುದು (ಮಾ. ಮ. 132–134), ರುಚಿಯಾದ ಕಳವಳವನ್ನು ವಿಧಿಯಿಲ್ಲದೆ ತಿನ್ನುವಂತೆ ನಟಿಸುವ ನಾಗರತ್ನಳ ಸೋಗು (ಅ. 112–114), ಇತ್ಯಾದಿಗಳು ಪುಟ್ಟಣ್ಣನವರ ಚಿಕಿತ್ಸಕ ಪ್ರವೃತ್ತಿಗೆ ತಕ್ಕ ಪರಿಕರಗಳನ್ನು ಒದಗಿಸುತ್ತವೆ.

ಕೌಟುಂಬಿಕ ಸರಸ ಸನ್ನಿವೇಶಗಳಿಗೆ ಹಾಸ್ಯದ ಲೇಪವನ್ನು ಸವರಿ ಪುಟ್ಟಣ್ಣನವರು ಮಧುರ ವಾತಾವರಣವನ್ನು ನಿರ್ಮಿಸಬಲ್ಲರು. ಕಟಕಿ, ವ್ಯಂಗ್ಯ, ಲೇವಡಿ, ಗೇಲಿ, ಅಪಹಾಸ್ಯ, ಕುಟುಕುಗಳ ಚುರುಕು ಬಿಸಿಗೆ ದೂರವಾಗಿ, ಎಳೆಬಿಸಿಲಿನಂತೆ ಮನೋಹರವೂ ಆಪ್ಯಾಯಮಾನವೂ ಆದ ಶಾಖ ಮನಸ್ಸನ್ನು ಬೆಚ್ಚಗೆ ಮಾಡಿ ಮುದ ನೀಡುವಂತೆ ತಿಳಿಹಾಸ್ಯದ ಕಚಗುಳಿಯನ್ನು ಜಾನಕಿ ನರಸಿಂಹಾಚಾರಿಯ ಪ್ರಯಾಣದಲ್ಲಿ ತಂದಿದ್ದಾರೆ (ಅ. 56–58). ಮಿನುಗುವ ಈ ಹಾಸ್ಯದ ಮಿಂಚಿನಲ್ಲಿ ಈ ದಂಪತಿಗಳಿಗಾಗಿ ಕಾದಿರುವ ಕರಾಳ ಕತ್ತಲೆಯ ಅರಿವಾದಾಗ ಇಡೀ ಸನ್ನಿವೇಶಕ್ಕೆ ನಾಟಕೀಯ ವ್ಯಂಗ್ಯದ ಲಗತ್ತಾಗುತ್ತದೆ.

ಪುಟ್ಟಣ್ಣನವರ ಹಾಸ್ಯ ಬಹಳ ನಾಜೂಕಿನದೂ ನಯದ್ದೂ ಅಲ್ಲ, ಆದರೆ

ಒರಟೂ ಅಲ್ಲ. ಮೈ ಚಳಿ ಬಿಟ್ಟ, ಬಿಡಿಸುವ ಹಾಸ್ಯ ಅದು. ಸಾಮಾಜಿಕ ವಿಚಾರಗಳಲ್ಲಿ ವಿಲಕ್ಷಣವಾದುದೆಲ್ಲವೂ ಅವರ ಹಾಸ್ಯದ ಮೊನೆಗೆ ಈಡಾಗುತ್ತದೆ. ತಮ್ಮ ಬಗೆಯೇ ಹಾಸ್ಯ ಮಾಡಿಕೊಳ್ಳುವ ಶಕ್ತಿ ಇರುವುದರಿಂದ ಹಾಸ್ಯ ಎಲ್ಲಿಯೂ ಅವರಲ್ಲಿ ಅನಪೇಕ್ಷಿತವಾಗದು. ಲವಲವಿಕೆ ನೆಮ್ಮದಿಗಳು ತುಳುಕುತ್ತಿರುವ ಹಾಸ್ಯ ಒಂದೆಡೆ, ಹಾಗಿಲ್ಲದೆಡೆ ವ್ಯಂಗ್ಯ, ಆದರೆ ಎಲ್ಲೂ ಕಳಪೆಯಲ್ಲ.

## ಸಾಮಾಜಿಕ, ಜನಪದ ವಿಚಾರಗಳು

ಪುಟ್ಟಣ್ಣನವರು ತಮ್ಮ ಬರವಣಿಗೆಯಲ್ಲಿ ಸಾಮಾಜಿಕ ಪರಿಸರವನ್ನು ಅಚ್ಚರಿಗೊಳಿಸುವಂತೆ ಸೆರೆಹಿಡಿಯುತ್ತಾರೆ. ಅಂದಿನ ವ್ಯವಸ್ಥೆಯ ಹಲವು ಮುಖಗಳನ್ನು ಗುರುತಿಸುತ್ತಾರೆ.

ಅಂದಿನ ಮಠಗಳಲ್ಲಿ ಪಾಠ ಹೇಳಿಕೊಡುತ್ತಿದ್ದವರು ಸಾಧಾರಣವಾಗಿ ಕುಂಟ ಉಪಾದ್ರು, ಕುರುಡು ಉಪಾದ್ರು, ಚೊತ್ತ ಉಪಾದ್ರು ಇಂಥವರು. ಸಾಮಾಜಿಕವಾಗಿ ಪಾಠಶಾಲೆಗಳ, ಉಪಾಧ್ಯಾಯರ ಪದ್ಧತಿಯನ್ನು ಗುರುತಿಸುವುದು ಪುಟ್ಟಣ್ಣನವರ ಉದ್ದೇಶ. ಉದಯರಾಗ ಹೇಳಿಸುವುದು, ಹಲಗೆಯಲ್ಲಿ ಬರೆಸುವುದು, ಕಾಗದಗಳನ್ನು ಓದಿಸುವುದು, ಇಚ್ಛೆ ಟವಣೆ ಹಾಕಿಸುವುದು, ಇದು ಆಗಿನ ವಿದ್ಯಾಭ್ಯಾಸಕ್ರಮ. ಇದರಲ್ಲಿ ಜೈಮಿನಿ ಭಾರತ, ಯಕ್ಷಗಾನದ ಕಥೆಗಳನ್ನು ರಾಗವಾಗಿ ಓದಿಸತಕ್ಕವನೇ ಬಹಳ ನಿಪುಣ ಉಪಾಧ್ಯಾಯ (ಮು. ತೆ. ಮಾ. 5). ಉಪಾಧ್ಯಾಯರು ಮಕ್ಕಳಿಗೆ ಕೊಡುತ್ತಿದ್ದ ಶಿಕ್ಷೆ, ಅದಕ್ಕೆ ಅಂದಿನ ಪುಂಡ ಹುಡುಗರು ಸೇಡು ತೀರಿಸಿಕೊಳ್ಳುವುದರ ವಿವರವಾದ ಚಿತ್ರಣ, ಬಾಲಕರ ಶಿಕ್ಷಣ ಕ್ರಮದ ಅನಗತ್ಯ ಕ್ರೌರ್ಯ (ಮಾ. ಮ. 39–45) ಇವು ವಿವರವಾಗಿ ಬಂದಿವೆ.

ಅಂದು ಮಹಾರಾಷ್ಟ್ರ ಅಥವಾ ಹಿಂದವಿ ಭಾಷೆಯ ಪ್ರಾಬಲ್ಯ ಹೆಚ್ಚಾಗಿತ್ತು. ದರಬಾರಿನ ಕಾಗದ ಪತ್ರಗಳೆಲ್ಲಾ ಹಿಂದವಿಯಲ್ಲಿ ನಡೆಯುತ್ತಿತ್ತು. ಸರ್ಕಾರದ ಉದ್ಯೋಗಗಳು ಹಿಂದವಿ ಬಲ್ಲವರಿಗೇ ದೊರಕುತ್ತಿದ್ದವು. ಹಿಂದವಿಯನ್ನು ಕಲಿಸುತ್ತಿದ್ದ ಪಂತೋಜಿಗಳಿಗೆ ಕನ್ನಡ ಉಪಾಧ್ಯಾಯರಿಗಿಂತ ಹೆಚ್ಚು ಗೌರವವಿತ್ತು (ಮಾ. ಮ. 40).

ನಾಗರತ್ನಾಸಾನಿಯನ್ನು ಒಲಿಸಿಕೊಳ್ಳಲು ಬಸಪ್ಪ ಮಾಡಿಕೊಳ್ಳುವ ಶೃಂಗಾರ, ಬಟ್ಟೆಗಳ ವೈವಿಧ್ಯ ಅಂದಿನ ಸೊಗಸುಗಾರ ಪುಟ್ಟಸ್ವಾಮಿಗಳ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ತಿಳಿಸುತ್ತದೆ (ಮು. ತೆ. ಮಾ, 3–4).

ದಸರಾ ದಿನಗಳಲ್ಲಿ ದುರ್ಗಾಪೂಜೆಯಂದು ಕರಾಡಿಗರು ನರಬಲಿ ಕೊಡುವ ಪ್ರಸ್ತಾಪ ಒಂದೆಡೆ ಬಂದರೆ (ಮು. ತೆ. ಮಾ. 145) ಸಹಗಮನದ ಚಿತ್ರ (ಮಾ. ಮ.

120—121) ಇನ್ನೊಂದಡೆ ಬರುತ್ತದೆ. ಈ ಪದ್ಧತಿಗಳು ಖಿಲವಾಗುತ್ತಿದ್ದರೂ ಅಲ್ಲೊಂದು ಇಲ್ಲೊಂದು ನಡೆಯುತ್ತಿದ್ದುದನ್ನು ಪುಟ್ಟಣ್ಣನವರು ತೀರಾ ಎಳೆಯರಾಗಿ-ದ್ದಾಗ ನೋಡಿಯೋ, ನೋಡಿದವರಿಂದ ಕೇಳಿಯೋ ಇರಬಹುದು. ತಾವು ಬಾಳಿ ಬದುಕಿದ ಕಾಲಕ್ಕಿಂತ ಸ್ವಲ್ಪ ಹಿಂದಿನ ಕಾಲದ ಚಿತ್ರಣ ಅವರ ಉದ್ದೇಶ. ಮುಖಕ್ಕೆ ಕರಿಬಲೆ ಹಾಕಿಕೊಂಡು ಕೈಯಲ್ಲಿ ಗೊರವೆಕೊಳ್ಳಿಯನ್ನು ಹತ್ತಿಸಿ ಬೆಳಕು ಉಜ್ವಲವಾಗಿರ ಲೆಂದು ಅದನ್ನು ಬೀಸುತ್ತಾ ದಪ್ಪಗೆಜ್ಜೆಗಳು ಕಟ್ಟಿದ ಕೋಲನ್ನು ಹೆಗಲ ಮೇಲೆ ಇಟ್ಟು ಕೊಂಡು ಅಂಚೆಯನ್ನು ತಲುಪಿಸಲು ಊರಿಂದೂರಿಗೆ ಓಡುತ್ತಾ ಹೋಗುವ ಅಂಚೆ ಯವರ ಚಿತ್ರಣವಿದೆ, (ಅ. 3—5). ಅಂದಿನ ಕಾಲದಲ್ಲಿ ತೀರಾ ಸಾಮಾನ್ಯವಾಗಿದ್ದ ಕೊರವಂಜಿಯರು (ಅ. 19), ದೊಂಬರು (ಅ. 175) ಇವರ ಪ್ರಸ್ತಾಪವಿದೆ.

ಯಕ್ಷಗಾನದ ಆಟಗಾರರು, ಸಂಗೀತಗಾರರು, ನಾಟಕದವರು, ಯಕ್ಷಿಣಿ ಆಟ ದವರು, ಹಾಸ್ಯಗಾರರು, ಕುಸ್ತಿಯವರು ಇಂಥವರು ಊರಿಂದೂರಿಗೆ ಓಡಾಡುತ್ತಾ ಪ್ರದರ್ಶನಗಳನ್ನು ಮಾಡುತ್ತಿದ್ದ ಪ್ರಸ್ತಾಪ ಬರುತ್ತದೆ, (ಮಾ. ಮ. 54). ದೇವಸ್ಥಾನದ ಪೂಜಾರಿ ತನ್ನ ಚಮತ್ಕಾರಗಳಿಂದ ಜನರನ್ನು ಸುಲಿಯುವ ಚಿತ್ರಣವಿದೆ (ಮಾ. ಮ. 58—61). ಚೋರಶಾಸ್ತ್ರದ ವಿವರಗಳು ರೋಚಕವಾಗಿ ವರ್ಣಿತವಾಗಿದೆ (ಮಾ. ಮ. 61, 184–187). ಹಬ್ಬಹರಿದಿನಗಳ, ದೇವಸ್ಥಾನದ ಉತ್ಸವಾದಿಗಳ ವಿಚಾರಗಳು (ಮಾ. ಮ. 111, 131, 143) ಇಲ್ಲಿ ಕಾಣುತ್ತವೆ. ಅಂದಿನ ಕೆಲಸಗಳ್ಳರ ಕಾಡುಹರಟೆಯ ಚಿತ್ರಣ (ಮಾ. ಮ. 136—142, 156—165) ಸೊಗಸಾದ ಬರವಣಿಗೆಯಾಗಿದೆ.

ಅಂದಿನ ಜಾತಿಮತಗಳ ವಿಚಾರ, ನಂಬಿಕೆಗಳು, ನವೋಢಾ ವಿವಾಹದ ವಿಚಾರಗಳು (ಅ. 27—32), ಸ್ತ್ರೀಯರಿಗೆ ಹಿಂದೂಧರ್ಮದಲ್ಲಿ ವಿಧಿಸಲ್ಪಟ್ಟ ಕಟ್ಟುಪಾಡುಗಳು (ಅ. 74—76, 88—90), ಲಂಚಕೋರ ಅಧಿಕಾರಿಗಳು ಜನರನ್ನು ಸುಲಿಯುತ್ತಿ ದ್ದುದು (ಮಾ. ಮ. 16, 31—32)— ಇವುಗಳು ಕೂಡ ಸ್ಥಳವನ್ನು ಪಡೆದಿವೆ. ಹಳೆಯ ಕಾಲದಲ್ಲಿ ಕಟ್ಟುತ್ತಿದ್ದ ಕಟ್ಟಡಗಳ ಭದ್ರತೆ (ಮಾ. ಮ 28), ಯಂತ್ರೋ ದ್ಯಮ ನಾಗರಿಕತೆಗಳು ಬೇರುಬಿಡುವ ಮುನ್ನ ಇದ್ದ ಪರಿಸ್ಥಿತಿ (ಮು.ತೆ.ಮಾ. 113) ಅಂದಿನ ದಯೆಯುಳ್ಳ ಸಾಮಾಜಿಕ ಪರಿಸ್ಥಿತಿಗಳನ್ನು ಹೇಳುವಾಗ (ಮು. ತೆ. ಮಾ. 146—147) ಪುಟ್ಟಣ್ಣನವರಿಗೆ ಹುಮ್ಮಸ್ಸೂ ಹೆಚ್ಚು.

ಹಿಂದೂಧರ್ಮದಲ್ಲಿನ ಅಪರಿಮಿತ ನಂಬಿಕೆಯಿಂದ ಬೇರೆಯವರಿಗೆ, ತಿಳಿಯದವರಿಗೆ ವಿಚಿತ್ರವಾಗಿ ಕಾಣಿಸಿದ್ದನ್ನು ಅದು ಅರ್ಥಗರ್ಭಿತವಾಗಿದೆಯೆಂದು ಸಾಧಿಸಹೊರಡುತ್ತಾರೆ (ಅ. 27—32). ಹಲವಡೆ ವಾದಕ್ಕಾಗಿ ವಾದ ಮಾಡುತ್ತಾರೆ. ಹಲವೆಡೆ ಸಾಮಾಜಿಕ ಪರಿಸ್ಥಿತಿಗಳಿಗೆ ಕನ್ನಡಿ ಹಿಡಿಯುತ್ತಾರೆ, ಹಲವೆಡೆ ಸಾರ್ವತ್ರಿಕ ಸತ್ಯವನ್ನೇ ಹೇಳುತ್ತಾರೆ. ಹಳೆಯ ಸೊಬಗಿನ ವಿಚಾರಗಳೆಡೆಗೆ ನಮ್ಮ ಮನಸ್ಸನ್ನು ಹೊರಳಿಸಿದರೂ,

ಅಂದಿನಂತೆ ಇಂದಿಲ್ಲ ಎಂದು ಟೀಕಿಸಿದರೂ ಅಂದಿನ ಕೆಲಸ ಇಂದಿಗಿಂತ ಭದ್ರವಾಗಿತ್ತು ಎನಿಸಿದಾಗ ಮಾತ್ರ. ಇದರಿಂದ ಅವರ ವಾದ ಟೊಳ್ಳುತನದಿಂದ ಪಾರಾಗುತ್ತದೆ.

ಆ ಕಾಲದ ಸಾಂಸ್ಕೃತಿಕ ಸಂವೇದನೆಗಳ ನೆಲೆಬೆಲೆಗಳೇನು ಎನ್ನುವುದನ್ನು ಪತ್ತೆ ಹಚ್ಚುವ ಕೆಲಸವನ್ನು ಸುಲಭವಾಗಿ ಪುಟ್ಟಣ್ಣನವರಂಥ ನಿಷ್ಠಾವಂತರಾದ ಬರಹಗಾರರ ಬರವಣಿಗೆಗಳಿಂದ ಮಾಡಬಹುದು. ಒಂದು ಧೋರಣೆಗೆ ತಮ್ಮನ್ನು ಒಪ್ಪಿಸಿಕೊಂಡು ನಿಷ್ಠರಾಗಿ ನಡೆದವರ, ಮಾತುಕೃತಿಗಳಲ್ಲಿ ಒಂದು ಅಭೇದ ಕಲ್ಪನೆಯನ್ನು ತಂದವರ ಅಂದರೆ ಒಂದು ಧೋರಣೆಯನ್ನು ತಾತ್ತ್ವಿಕವಾಗಿ ಮಾತ್ರವಲ್ಲದೆ, ಅದನ್ನು ಪರಿಪಾಲಿಸಿದವರ ಕೃತಿಗಳಿಂದ ಮಾತ್ರ ಯಾವುದೇ ಸ್ಪಷ್ಟ ಪರಿಗ್ರಹಣ ಸಾಧ್ಯ.

ಸಾಮಾಜಿಕ ಪರಿಸ್ಥಿತಿಯನ್ನು ಅದರ ಎಲ್ಲ ಗೊಂದಲಗಳೊಡನೆಯೇ ಸೆರೆ ಹಿಡಿಯುವುದು ಈ ಕಾದಂಬರಿಗಳ ಸಾಧನೆ. ಸಂಪ್ರದಾಯಬದ್ಧವಾದ ಕುಟುಂಬದಲ್ಲಿ ಸೀತೆ ಅರಕ್ಷಣೀಯಳಾಗಿರುವುದು, ಆಕೆಯನ್ನು ಹೊರಗಿನವನೊಬ್ಬ ರಕ್ಷಿಸುವುದು, ದೇವಸ್ಥಾನಗಳು ರಾಜರ ಉಸ್ತುವಾರಿಯಲ್ಲಿ ನಿರ್ಮಾಣಗೊಳ್ಳುತ್ತಿರುವ ಹಿನ್ನೆಲೆಯಲ್ಲಿ ಅವು ಕಳ್ಳರ ಹುತ್ತಗಳೂ ಆಗಿರಬಹುದಾದ ಸಂಭವನೀಯತೆಯನ್ನು ತೋರಿಸುವುದು ಮುಂತಾದ ಘಟನೆಗಳ ಮೂಲಕ ಪುಟ್ಟಣ್ಣನವರು ವ್ಯವಸ್ಥೆಯ ಟೊಳ್ಳನ್ನು ಗುರುತಿಸುತ್ತಾರೆ.[6] ಒಂದು ವ್ಯವಸ್ಥೆಯನ್ನು ಪುರಸ್ಕರಿಸಿಯೂ ಆ ವ್ಯವಸ್ಥೆಯ ಸೋಲನ್ನು ತಿಳಿಸುವ ಹಲವು ಸಂಗತಿಗಳನ್ನು ರಾಜಾಸ್ಥಾನದ ಚಿತ್ರಣದಲ್ಲಿ ಈ ಹಿಂದೆ ಹೇಳಲಾಗಿದೆ.

## ಭಾಷೆ – ಶೈಲಿ

ಆಡುನುಡಿಯ ಸಮರ್ಥ ಬಳಕೆಯಿಂದ ಸೊಗಡುಬೀರುವ ಪುಟ್ಟಣ್ಣನವರ ಭಾಷೆ ಮೊದಲ ಸುತ್ತಿನಲ್ಲೇ ನಮಗೆ ಆಕರ್ಷಕವಾಗಿ ಕಾಣುವುದು ನಿಜ. ಇದರ ಮೂಲಕ ಹೊಮ್ಮುವ ಘಟನೆಗಳ ಒಳಸಂಬಂಧಗಳಿಂದ ಹೊರಡುವ ಧ್ವನಿಗೂ, ಹೊರಡಿಸುತ್ತಿರುವ ವ್ಯಕ್ತಿಗೂ, ಬಳಸಿರುವ ಭಾಷೆಗೂ ಬಿರುಕುಗಳಿಲ್ಲದೆ ಇರುವುದರಿಂದ, ಅವಿನಾಸಂಬಂಧ ಸ್ಥಾಪಿತವಾಗಿರುವುದರಿಂದ ಸಾಹಿತ್ಯಕ ಮಹತ್ತ್ವದ ಭದ್ರನೆಲೆಗಟ್ಟು ಲಭಿಸಿದೆ. ಪಾಂಡಿತ್ಯದ ಒಣಪ್ರದರ್ಶನ, ಬೆರಗೊಳಿಸುವ ಮೋಹಕ ಬರಹಗಳಲ್ಲಿ ಪುಟ್ಟಣ್ಣನವರಿಗೆ ಎಂದೂ ಒಲವಿರಲಿಲ್ಲ.

ಕಾದಂಬರಿ ಪ್ರಕಟವಾದ ಕಾಲವನ್ನು ಗಮನಿಸಿದರೆ, ಇಲ್ಲಿನ ವ್ಯಾಕರಣಕ್ಕೆ ಹೆಚ್ಚು ಪ್ರಾಮುಖ್ಯ ಕೊಡದಿರುವ ಸಂಗತಿ ಅಚ್ಚರಿಯೆನಿಸುತ್ತದೆ. ಸಂವಹನವೊಂದೇ ಪುಟ್ಟಣ್ಣನವರ ಉದ್ದೇಶ. ಅವರಲ್ಲಿ ಭಾಷಾಸಂಬಂಧಿಯಾದ ಯಾವ ಸಂಕೋಚಗಳೂ ಇಲ್ಲ. ಪುಟ್ಟಣ್ಣನವರು ಸಂಪ್ರದಾಯದ ಸಂಕೋಲೆಯೊಳಗಿಂದ, ಜಿಗುಟುತನದಿಂದ ಕನ್ನಡ

ಗದ್ಯವನ್ನು ಬಿಡಿಸಿ ಅದಕ್ಕೆ ಲಾಲಿತ್ಯವನ್ನೂ ಬಳುಕನ್ನೂ ನೀಡಿದರು. ಕಾಗುಣಿತಕ್ಕೆ ಕಡೆಯ ಮಣೆಯನ್ನು ದಯಪಾಲಿಸಿದರು. ಈ ಕಾದಂಬರಿಯ ಗದ್ಯವನ್ನೇನಾದರೂ ಭಾಷಾಶುದ್ಧಿಯ ಮೂಸೆಯಲ್ಲಿ ಒಮ್ಮೆ ಹಾಯಿಸಿ ಹೊರತಂದದ್ದಾದರೆ ಕಾದಂಬರಿಯ ಬನಿ, ಸೊಗಡು, ಎಲ್ಲ ಜಾರಿಹೋಗಿ ಬರಿಯ ಅಳ್ಳಟ್ಟೆ ಮಾತ್ರ ಉಳಿಯುತ್ತದೆ. ಪುಟ್ಟಣ್ಣನವರ ಗದ್ಯಸಾಧನೆ ಈ ಕಾದಂಬರಿಗಳ ಸಿದ್ಧಿಯ ಒಂದು ಮುಖ್ಯ ಭಾಗ ವೆಂಬುದು ನಿಸ್ಸಂದೇಹವಾದ ಮಾತು. ಪುಟ್ಟಣ್ಣನವರ ಗದ್ಯ ಶೈಲಿಯನ್ನು ಕೆಲವು ಉದಾಹರಣೆಗಳ ಮೂಲಕ ತಿಳಿಯಬಹುದು.

"ಅದಕ್ಕೆ ತಿಮ್ಮಮ್ಮನು ಇನ್ನೂ ಆಗ್ರಹದಿಂದ ಹಾವಿಗೆ ಆಣೆ ಎಂದರೇನು, ಚೇಳಿಗೆ ಆಣೆ ಎಂದರೇನು, ನನ್ನ ಮಗುವಿನ ಹಾಸಿಗೆಯ ಬಳಿಯಲ್ಲಿ ಕೂತು ನೀನು ಹಾಗೆ ಆಡುವುದಕ್ಕೆ ಕಾರಣವೇನು ? ರಾತ್ರಿಯಿಂದಲೂ ಸಾಕಿಗೆ ಚೆನ್ನಾಗಿಲ್ಲವಲ್ಲ; ತಲೆನೋವು, ಚಳಿಚಳಿ, ಎನ್ನುತಾಳೆ, ಅವಳ ತಲೇ ಕಂಡರೆ ನಿನಗೆ ಆಗದು, ನೀನು ಏನೋ ಮಾಡಿದೀಯೆ, ಅದೇನು ಮಾಡಿದೆ ಹೇಳು, ಇಲ್ಲದಿದ್ದರೆ ನಿನ್ನನ್ನು ಸುಮ್ಮನೇ ಬಿಡುವುದಿಲ್ಲ. ಹಿಡಿದಹಿಕಾಳಿಯನ್ನು ಬಿಡಿಸಿ ಬಿಡುತೇನೆ. ನನ್ನ ಮನೇ ಅನ್ನವುಂಡು ನನ್ನ ಮನೇ ಬಟ್ಟೆ ಉಟ್ಟು ನನ್ನ ಮಗಳ ಪ್ರಾಣಕ್ಕೆ ತಂದು ಇದ್ದೀಯಲ್ಲೇ, ಒಳ್ಳೇ ಮಾತಿ ನಿಂದ ಏನ ಮಾಡಿದ್ದೀಯ ಬೊಗಳು, ನೀವು ಹಾಲುಂಡ ಮನೆ ಕರು ಸಾಯಲಿ ಎನ್ನುವ ತಟವಾಣೇರು; ಅದೇನು ಮಾಡಿ ಇದ್ದೀಯೇ ಹೇಳೆ ಗಯ್ಯಾಳಿ, ಅವಳೇನು ನಿನ್ನ ಗೋಜಿಗೆ ಬಂದಳೇ, ನಿನ್ನ ಸೊಲ್ಲಿಗೆ ಬಂದಳೆ, ನಿನ್ನ ಗಂದಗಾಳಿಗೆ ಬಂದಳೆ, ನಿನ್ನ ಕಂಣ ಚುಚ್ಚಿದಳೆ, ನಿನ್ನ ಹೊಟ್ಟೇ ಇರಿದಳೆ ನಿನ್ನ ನಾಲಿಗೇ ಸೀಳಿ ಉಪ್ಪು ತುಂಬಿದಳೆ, ನಿಮ್ಮಪ್ಪನ ಮನೆಯಿಂದ ತಂದಿದ್ದ ಮಾಗಡಿ ಮಣೆಯನ್ನು ತೆಗೆದುಕೊಂಡಳೆ, ನಿಮ್ಮಪ್ಪನ ಮನೆಗೆ ಬೆಂಕಿ ಹಾಕಿದಳೆ, ನಿಮ್ಮಪ್ಪನ ಮುಖ ಸುಟ್ಟಳೆ, ನಿಮ್ಮ ಅವ್ವೆ ತಲೆಗೆ ಬೂದಿ ಸುರಿದಳೆ, ನಿನ್ನ ಮುಖಕ್ಕೆ ಮುಳ್ಳು ಬಡಿದಳೆ, ಎಂದು ಬಗೆಬಗೆಯಾಗಿ ಕೆಲೆಯುತಾ ಬಂದಳು. ಇವಳ ಆಟೋಪವನ್ನು ನೋಡಿ ಇನ್ನೇನು ಮಾಡಿಬಿಡುತಾಳೆಯೋ ಎಂಬ ಹೆದರಿಕೆಯಿಂದ ಸೀತೆಗೆ ಕೈ ಕಾಲು ನಡುಗುವುದಕ್ಕೆ ಮೊದಲಾಯಿತು. ಗಾಬರಿಗೆ ಕೊಡ ವನ್ನು ಎತ್ತಿಹಾಕಿಕೊಂಡು ಬಿದ್ದುಬಿಟ್ಟಳು. ಕೊಡಗಳೆರಡೂ ಬಿದ್ದು ತಗ್ಗಿಹೋದವು, ಸೀತೆಯು ಕುಕ್ಕರಿಸಿಕೊಂಡಳು, ಹಾಗೇ ಸೊಕ್ಕಿದ ಹಾಗಾಯಿತು."

(ಮಾ. ಮ. 126—127)

"ರಾತ್ರೆಯಾಯಿತು, ಬಾಗಿಲ ಹಾಕಿಕೊಂಡು ನಮ್ಮ ಚಿಕ್ಕವ್ವನೂ ಚಿಕ್ಕಪ್ಪನೂ ಮಲಗಿಕೊಂಡರು. ನಮ್ಮ ಕಂಬಳಿ ಒಳಗೆ ಸಿಕ್ಕಿಹೋಯಿತು. ಬರೀಮೈಯಲ್ಲಿ ಎಂದಿನ ರಂಜಳಿಗೆಯಲ್ಲಿ ಕೂತುಕೊಂಡೆವು. ಏಟು ಬಿದ್ದದು ಬೇರೆ, ಚಳಿ ಬೇರೆ, ಹೊಟ್ಟೆಗೆ ಹಿಟ್ಟಿಲ್ಲದ್ದು ಬೇರೆ ಹೀಗೆ ಇತ್ತು. ನಿದ್ರೆ ಬರಲೇ ಇಲ್ಲ. ಅಲ್ಲೆಲ್ಲಾ ಹುಲಿ ಕಿರಬ ಇವುಗಳ ಕಾಟ ಬಲ. ಸರಿಹೊತ್ತು ಮೀರಿತ್ತು. ಒಂದು ಹುಲಿ ಕೂಗುತಾ ನಮ್ಮ ಗುಡಲಿನ ಹತ್ತಹತ್ತರಕ್ಕೆ ಬಂತು. ನಮಗೆ ಬಹು ಹೆದರಿಕೆಯಾಯಿತು.

ನಾವಿಬ್ಬರೂ ಗಡಗಡನೆ ನಡುಗುತಾ ಕೂತಿದ್ದ ಕಡೆಯಲ್ಲಿಯೇ ಕಾಲಮಡಿ ಮಾಡಿಕೊಂಡೆವು. ಹುಲಿ ಹಾಗೆಯೇ ಹೊರಟು ಹೋಯಿತು. ಕೊಳಕ್ಕೆ ಹೋಗಿ ಬಿದ್ದು ಸಾಯೋಣ ಬರುತೀಯ ? ಎಂದು ನಮ್ಮಕ್ಕ ಕೇಳಿದಳು. ಸಾಯುವುದು ಎಂದರೆ ನನಗೆ ತಿಳಿಯದು. ಹಾಗೆ ಸತ್ತರೆ ನಮ್ಮ ಚಿಕ್ಕವ್ವ ಹೊಡೆಯುತ್ತಾಳೋ ಏನೋ, ನಾನು ಏಟ ತಡೆಯಲಾರೆ ಕಣಕ್ಕಯ್ಯ ಎಂದೆ. ನಾನು ಆಡಿದ ಮಾತಿಗೆ ನಮ್ಮ ಅಕ್ಕನಿಗೆ ಬಹಳ ದುಃಖ ಬಂತು. ಅಯ್ಯೋ ನನ್ನ ಕಂದ ಎಂದು ಅವಳು ನನ್ನ ಕತ್ತನ್ನು ಕಟ್ಟಿಕೊಂಡು ಅತ್ತಳು, ಅಷ್ಟರಲ್ಲಿ ಬೆಳಗಾಯಿತು. ಮೇಲಕ್ಕೆ ಏಳುವುದಕ್ಕೇ ನಮ್ಮ ಕೈಲಾಗದು. ಮೆಲ್ಲಗೆ ಎದ್ದು ಈಚೆಗೆ ಬಂದು ನಿಂತುಕೊಂಡೆವು. ಬಾಗಿಲ ತೆಗೆದುಕೊಂಡು ನಮ್ಮ ಚಿಕ್ಕಪ್ಪ ಈಚೆಗೆ ಬಂದು ನಮ್ಮನ್ನು ನೋಡಿದ, ರಾತ್ರೆ ಯಾಕೆ ಹಿಟ್ಟು ತಿನ್ನಲಿಲ್ಲ ಎಂದು ಕೇಳಿದ. ನಾನು ಗಡಗಡನೆ ನಡುಗುತಾ ಕೆಳಕ್ಕೆ ಬಿದ್ದೆ. ಆಗ ಅವನು ಒಣಕಲ ರೊಟ್ಟಿಯನ್ನು ತಂದು ನಮ್ಮಿಬ್ಬರಿಗೂ ಕೊಟ್ಟನು. ಅದನ್ನು ತಿಂದು ನೀರ ಕುಡಿದ ಮೇಲೆ ಸ್ವಲ್ಪ ಉಸಿರು ಬಂತು."

(ಮಾ.ಮ. 178–179)

"ಈ ಬಸಪ್ಪನು ಆ ಹೆಂಗಸಿನ ಗೀಳನ್ನು ಮನಸ್ಸಿಗೆ ಹತ್ತಿಸಿಕೊಂಡು ಪೇಚಾಡುತಾ ತನ್ನ ಕೋರಿಕೆ ನೆರವೇರುವುದಕ್ಕೆ ಬೇಕಾದ ಪ್ರಯತ್ನ ಒಂದನ್ನೂ ಬಿಡದೆ ಮಾಡಿದನು. ಒಂದು ದಿನ ಅಂಗರೇಖು ರುಮ್ಮಾಲು ಪಾಯಿಜಾಮ ಹಾಕಿಕೊಂಡು ಒಳ್ಳೇ ಪಂಚೆಯನ್ನು ಮೇಲೆ ಹೊದ್ದು ಆ ನಾಯಿಕಸಾನಿಯ ಮನೇ ಮುಂದೆ ಸುಳಿದಾಡುವುದೂ ; ಇನ್ನೊಂದು ದಿನ ತಲೆಗೆ ಜೋಡೀ ವಸ್ತ್ರವನ್ನು ಕುಚ್ಚುಬಿಟ್ಟು ಸುತ್ತಿ ಪಟ್ಟೇ ಅಂಚಿನ ಪಂಚೆಯನ್ನು ಕಠಾರಿ ಕಚ್ಚೇ ಹಾಕಿ ಉಟ್ಟು ಅಗಸನ ಮನೆಯ ಮಡಿಪಂಚೆಯನ್ನು ಹೊದ್ದು ಹೋಗುವುದೂ; ಇನ್ನೊಂದು ದಿನ ವಜ್ರದ ಹತ್ತಕಡಕನ್ನೂ ಕೈ ಬೆರಳುಗಳಿಗೆ ಉಂಗುರಗಳನ್ನೂ ಇಟ್ಟು, ಮಲ್ಲಿಗೇ ಹೂವು, ಪಚ್ಚೇತೆನೆ, ಸಂಪಿಗೇ ಹೂವು, ಇರ ವಂತಿಗೇ ಹೂವು ಮೊದಲಾದ ಪರಿಮಳದ ಹೂವು ಇವುಗಳಿಗೆ ಪನ್ನೀರನ್ನು ಚಿಮಿಕಿಸಿ ಅವುಗಳನ್ನು ಜವ್ವಾಜಿ ಸವರಿದ ನಾರಿನಿಂದ ಕಟ್ಟಿಸಿ ಅದನ್ನು ತನ್ನ ಎಣ್ಣೆಗಂಟಿಗೆ ದಟ್ಟವಾಗಿ ಸುತ್ತಿ, ಆ ಗಂಟನ್ನು ತನ್ನ ಬೆನ್ನಮೇಲೆ ಭುಜದಿಂದ ಭುಜಕ್ಕೆ ಉರುಳಾಡಿಸುತಾ, ಹುಬ್ಬಿನ ನಡುವೆ ಚುಕ್ಕಿಬಟ್ಟನಿಟ್ಟು ಒಲಪು ಮಾಡುತ್ತಾ, ಆ ಬೀದಿಯಲ್ಲಿ ಗುಜರೀ ಹೊತ್ತಿನಲ್ಲಿ ತಿರುಗಾಡುತ್ತಾ, ನೆವನೆವದಲ್ಲಿ ಆ ಹೆಂಗಸಿನ ಮನೆಯ ಮುಂದೆ ನಿಲ್ಲುತಾ ತಾಂಬೂಲವನ್ನು ದವಡೆ ಒಡೆಯುವಹಾಗೆ ಒತ್ತರಿಸಿಕೊಂಡು ಅಗಿಯುತಾ, ಸಿಕ್ಕಿದವರನ್ನು ಅಲ್ಲಲ್ಲಿ ನಿಲ್ಲಿಸಿಕೊಂಡು ಮಾತನಾಡುತಾ, ಕಾರಣವಿಲ್ಲದಿದ್ದಾಗ್ಯೂ ತಾನೇ ನಗುತಾ ಹೀಗೆಲ್ಲಾ ಒಲಪು ಮಾಡುತಾ ಬಂದನು." (ಮು.ತೆ.ಮಾ. 3-4)

ಪಾತ್ರಗಳು ಬೇರೆ ಬೇರೆ ಭಾಷೆಗಳಲ್ಲಿ ಉಪಭಾಷೆಗಳಲ್ಲಿ ಮಾತನಾಡುವುದು ಹೊಸದಲ್ಲ. ಸಂಸ್ಕೃತ ನಾಟಕಗಳಲ್ಲಿಯೂ ಕಾಣುವಂತಹುದೇ. ಆದರೆ ಅಲ್ಲಿ ಉಚ್ಚ ನೀಚ ವರ್ಗ, ಹೆಣ್ಣುಗಂಡುಗಳ ಭೇದ ಎಂಬ ಅಂಶಗಳನ್ನೂ ಗಣಿಸುತ್ತಿದ್ದರು.

ಈ ಮನೋವೃತ್ತಿಯ ಸಾಮಾಜಿಕ ದೃಷ್ಟಿಗೆ ಅಲ್ಲಿ ಪ್ರಾಧಾನ್ಯ ದೊರೆಯಿತು, ಇಲ್ಲಿ ಮಹತ್ತ್ವ ದೊರೆತಿರುವುದು ಸಾಹಿತ್ಯಕ ಸಾಧ್ಯತೆಗಳನ್ನು ಸೂರೆಗೊಳ್ಳುವುದಕ್ಕೆ. ಇಂಥ ಉದಾಹರಣೆಗಳು ಕೆಲವನ್ನು ನೋಡಬಹುದು.

"ಮಾರಮಣರಾಯ-ಜೋಸ್ಯರೇ, ನಿಮ್ಮ ವಾಕ್ಕಿನಾಗೆ ಅಮೃತವಿರಾದು, ನೀವು ಧನಧಾನ್ಯ ಅಂಬೋವೇಳೆಗೆ ಅದು ನಿಜವಾಗಿ ಬಂಧಾಂಗಾಯಿತು, ಏನೈಯ್ಯ, ಬಂದಿ, ಸಂಗಣ್ಣ ?

ಸಂಗೇಗೌಡ–ಬಂದಿ ಬುದ್ಧಿ, ಪಾದ್ದಲ್ಲಿ.

ಮಾರಮ–ನಾನು ಹೇಳಿದ್ದು ಬಂತಾ ?

ಸಂಗೇ–"ಬುದ್ಧಿ ಬಂತು" ಎಂದು 100 ರೂಪಾಯಿಯನ್ನು ತಂದು ಎಣಿಸಿ ಸುಬೇದಾರರ ಮೇಜಿನ ಮೇಲೆ ಇರಿಸಿದನು.

ಮಾರಮ–(ಹಣ ಬಂದದ್ದಕ್ಕೆ ಸ್ವಲ್ಪ ಸಂತೋಷಿಯಾಗಿ, ಮುಖದಲ್ಲಿ ಮಾತ್ರ ಗಂಟು ಹಾಕಿದ ಹುಬ್ಬಿನಿಂದ ಕೋಪವನ್ನು ತೋರಿಸುವವನ ಹಾಗೆ ನಟಿಸುತ್ತಾ) ಬಾಕಿ ಐವತ್ತು ರೂಪಾ ಕಡಿಮಿ ಮಾಡಿದಿ, ನಿಮ್ಮ ಜನಕ್ಕೆ ಪುತ್ತಿ ಇಲ್ಲ, ಅದು ಬರೋ ವರೆಗೆ ಫೈಸಲ ಹೇಳಲಿಕ್ಕೆ ಆಗೋದಾ ? ಹೇಳಿದ್ದು 200, ತಂದದ್ದು 100, ಒಂದೊಂದು ಹೀಂಗೆ ಕಡಿಮಿ ಮಾಡ್ವಿ, ಹೀಂಗೆ ಕೊಂಚ ಕೊಂಚಕ್ಕೆ ಏನಾಗೋದು, ಇದಕ್ಕಾ ನಾವು ದೇಶ ಬಿಟ್ಟು ದೇಶಕ್ಕೆ ಬಂದೇವು ? ಏನ ಕಣೋ ?

ಸಂಗೇ–ನಾಳೆ ಬತ್ತದೆ ಬುದ್ಧಿ.

ಮಾರಮ– ಜೋಸ್ಯರೆ, ನಮ್ಮಕಡಿ ಹೀಂಗಿಲ್ಲ, ಮಾತು ಒಂದು ಕೆಲಸ ಒಂದು, ಇರಾದು. ಇಲ್ಲಿ ದಾವುದೂ ನಿಜ ಇಲ್ಲ, ಈ ಸೀಮಿ ನಮ್ಮ ಸೀಮಿ ಹಾಂಗೆ ಧರ್ಮ ಸೀಮಿ ಇಲ್ಲ, ಒಂದೂ ಇಲ್ಲ." (ಮಾ.ಮ. 14)

"ಆಗ ಮಾರಮಣರಾಯನ ಹೆಂಡತಿಯು–ಅಯ್ಯೋ ಈ ಕೇಡು ಉಂಟಾ ? ಯಜಮಾನರು ತಾಲ್ಲೋಕು ಧೊರಿ. ಅವರನ್ನು ಹಿಡಿದುಕೊಂಡು ಹೋಗ ಬಹುಂದಾ ? ಕೇಳೋರೇ ದಿಕ್ಕಿಲ್ಲದ ಹಾಂಗದಲ್ಲ. ಅವರ ಅಧಿಕಾರಕ್ಕದಾವುದು ದೊಡ್ಡದು. ಕೊಡುತಾರ ತಕೋತಾರ ಲಾಕ್‌ಏಕ ಮಾಡಥಾರ ಏಕ್‌ಲಾಕ್ ಮಾಡ ಥಾರ, ಆಕ್ಷೇಪಣೆ ಏನದ ? ಇಂಥಾ ಅಧಿಕಾರಿಗಳ ಮಾನ ಹೀಂಗ ಹೋಗಬಹುಂದಾ ? ನಮ್ಮ ಮನಿ ಎಲ್ಲ ಗುಡಿಸಿದ ಹಾಂಗ ತೆಗೆದುಕೊಂಡು ಹೋದರಲ್ಲ. ಯಜಮಾನರು ಒಂದುಕಾಸು ಮುಟ್ಟುತಿರಲಿಲ್ಲ. ದಿಕ್ಕಿಲ್ಲದ ಸೀಮ್ಯಾಗೆ ಬಂದು ಹೀಂಗಾಯಿತು. ಸ್ವಲ್ಪಕ್ಕೆಲ್ಲಾ ನಾವು ಹಾಂಗೆ ಹೋಗುತ್ತಿದ್ದೆವಾ ? ಅಂಥಾ ಧೊರಿ ಈ ತಾಲ್ಲೋ ಕಿಗೆ ಎಂದಿಗೆ ಬಂದಾನು ? ನಮ್ಮ ಮನಿಯವರೂ ಹಾಂಗೇ ಹೇಳಿಧಾಂಗ ಕೇಳೋಣೆಲ್ಲ. ದಾವುದೂ ಮುಟ್ಟಬೇಡಿ ಅಂತ ಅಗಾಗ ಹೇಳಿದ್ದೇನು. ಆತಗೆ ದಾವುದು ಲಕ್ಷ್ಯ ? ನಾನು ಅಮಿಲ್ದಾರ ಹೆಂಡತಿಯಲ್ಲವ, ಇವರು ಹ್ಯಾಂಗಾದರೂ ಹೋಗಲಿ, ನನಗ ಅವಮಾನವಲ್ಲವ ? ಇಂಥಾ ಗ್ಯಂಡ ಇದ್ದೇನು ? ಸುಮ್ಮಗ ಕಣ್ಣ ಮುಚ್ಚಿಕೊಂಡು

ಆ ಕಡಿ ಹಾಳಾದರ ಲಕ್ಷಣವಾಗಿ ಈ ಹಾಳ ತಲಿ ಬೋಳಿಸಿಕೊಂಡು ಅಂಗಾರಹಚ್ಚಿಕೊಂಡು ಸುಖವಾಗಿ ಇದ್ದೇನು. ಅಷ್ಟಕ್ಕ ಮಾರ್ಗ ಇಲ್ಲದ ಹೀಂಗೆ ಈತಗಾಗಿ ನಾನು ಹೊರಗ ಮುಖ ಇಡಲೀಕ್ಕಾಗದ ಹಾಂಗಾಯಿತು ಏನಬಡಿಕೊಳ್ಳಿ ? ಎಂದು ನೆರೆಹೊರೆಯುವರ ಸಂಗಡ ಆಡಿಕೊಂಡಳು." (ಮಾ.ಮು. 197)

ಸಂಭಾಷಣೆಯಲ್ಲಿ ಪುಟ್ಟಣ್ಣನವರು ಜೀವ ತುಂಬುವ ರೀತಿಗೆ ಒಂದೆರಡು ಉದಾಹರಣೆಗಳನ್ನು ನೋಡಬಹುದು.

"ಹೆಂಡತಿ–ಅಂದಿಗೆ ಆ ಬಟ್ಟೆ, ಇಂದಿಗೆ ಈ ಬಟ್ಟೆ, ಮುಂದಕ್ಕೆ ದರದಟ್ಟೆ. ಇನ್ನೆಂದು ಹೊಟ್ಟೆ ತುಂಬ ಹಿಟ್ಟುಹಾಕಿದ್ದೀಯೆ ?

ಗೋಪೇಗೌಡ–ಎಂದು ನೀ ಹಸುಗಂಡು ಇದ್ದದು ? ನೆನ್ನೆ ಮೊನ್ನೆ ಬಿಸಿ ಉಣಲಿಲ್ಲವ ?

ಹೆಂಡತಿ–ಮೊನ್ನೆ ಎಲ್ಲಿ ಉಂಡಿ ? ವಸಿ ಜೋಳದ ಅಂಬಲಿಯಲ್ಲವ ಕುಡದದು ?

ಗೋಪೇ–ನನಗೆ ಅದೂ ಇಲ್ಲವಲ್ಲ ? ಹಸಗಂಡು ಎಡ ಮಗ್ಗಲಾದಿ.

ಹೆಂಡತಿ–ವಸಿ ಅಂಬಲಿ ಬಸಗಂಡರೆ ಹೊಟ್ಟೆ ತುಂಬತೈತ ? ಹಿಂಗೆ ಹೊಟ್ಟೆಗಿಲ್ಲದೆ ಸತ್ತರೆ ಕಳ್ಳೆಲ್ಲಾ ಸುಂಡಿ ಹೋಗಾಕಿಲ್ಲವ ? ಕೈ ಕಾಲು ಹೆಂಗೆ ಬತ್ತದೆ ? ಎತ್ತಿಗೆ ಹತ್ತು ಹರವಿ, ಎಮ್ಮೆಗೆ ಹತ್ತು ಹರವಿ ನೀರತಂದು ಬಾನಿಗೆ ಹುಯ್ ಬೇಡವ, ಹುಲ್ಲಹಾಕಬೇಡವ, ಕರೇಬೇಡವ, ಕಾಸಬೇಡವ, ತೊಪ್ಪೆ ತಟ್ಟಬೇಡವ, ರಾಗಿ ಮಾಡಬೇಡವ, ಹಸಿಹಿಟ್ಟು ಬೀಸಬೇಡವ, ತೊಳಸಬೇಡವ, ಮುದ್ದೆಮಾಡಬೇಡವ, ಇಕ್ಕಿ ಬಡಿಸಿ ಮಾಡಬೇಡವ, ಹೊಟ್ಟೆಗಿಲ್ಲದೆ ಇದೆಲ್ಲಾ ಮಾಡಾಕಾದಾತಾ ? ಏಡು ಹೊತ್ತು ಹೊಟ್ಟೆಗೆ ಹಿಟ್ಟಿಲ್ಲ ಜಿದ್ದರೆ ನಾ ದುಡೀಲಾರಿ.

ಗೋಪೇ–ಅದೇನು ಬಗೆ ಅತ್ತೀಯುಣೆ ? ಕಂದಾಯಕೆನಾ, ಕವಣೆಕೆನಾ, ಹಿಟ್ಟಿಗೆನಾ, ಬಟ್ಟೆಗೆನಾ, ಎಂಡಿಪ್ಪತ್ತಣ ತೆರಾಕೆನಾ, ಹಸಗಂಡು ಹಸಗಂಡು ಬಿದ್ದಿರಾಕೆನಾ, ಉಣ್ಣಾಕೆ ನೀ ಅಲ್ಲವ ?" (ಮು. ತೆ. ಮಾ. 149–150)

"ಜಟಾಪಾಠಿ–ಏನೂ ಅರಿಯದವನ ಹಾಗೆ ಕೇಳುತೀಯೆ. ಹೇಳತಕ್ಕದ್ದೇನಿದೆ ? ಚಪ್ಪರ, ಮೇಲ್‌ಕಟ್ಟು, ಪಟ್ಟೆಪಂಚಾಂಗರಾಯ, ಬಾಳೆಸೊಪ್ಪು, ಮಾವಿನ ಕಂಬ, ಹೆಂಗಸರ ಒಡವೆ ತಳಕು, ಅವರ ಪೀತಾಂಬರ ಪಟ್ಟೆ ಬಂಣಗಳ ಸೊಗಸು, ಅವರ ಒಲಪು ವಯ್ಯಾರಗಳು, ಗಂಡಸರ ಅಂಗರೇಕು ರುಮ್ಮಾಲು, ಪಟ್ಟೇ ಅಂಚಿನ ಧೋತ್ರ, ಕಲಾಬತ್ತು ಪಂಚೆ, ಶಾಲ್, ಉಂಗುರ, ಉಡಿದಾರಗಳು ಹತ್ತಕಡಕಿನ ಹೊಳಪು, ಓಲಗ, ಮದ್ದಳೆ, ಸೂಳೇರ ಕುಣಿತ, ಗಂಧ, ಹುವ್ವು, ಅಡಕೆಲೆ. ಆಮೇಲೆ ಹಂಣೆಲ್ಲ ಕಾಯಿ ಇಲ್ಲ ಬಾ ನನ್ನ ಗುಡಿಗೆ ತೀರ್ಥವಿಲ್ಲ ಪ್ರಸಾದವಿಲ್ಲ ಹೋಗು ನಿನ್ನ ಮನೆಗೆ.

ಗೋಪಾಲ–ಫಲದಾನ ದಕ್ಷಿಣೆ ವಿಚಾರವೇ ಹೇಳಲಿಲ್ಲ.

ಪ್ಯಾರಂಭಟ್ಟ–ಒಂದು ಎಳೆನೀರು ಬುರುಡೆ, ಒಂದು ಪಾವಲಿ ತುಗಚಿದ. ಏನು ಉದ್ಧಾರವಾಯಿತು ?

ಗೋಪಾಲ–ಸರ್ವತ್ರ ಹೀಗೆಯೇ ಕೊಟ್ಟ. ಹಾಗಾದರೆ ಇನ್ನೇನು ಕೊಡಬೇಕು ?

ಮಧ್ವಾಚಾರು–ತಲಿ ಒಂದಕ್ಕೆ ಒಂದು ರೂಪಾಯಿ ಕೊಡಲಿಕ್ಕಿಲ್ಲೇನು ? ಒಂದು ದಿನ ಮಾತ್ರ ಗುಂಜಾಲಾಡು ಸಮಾರಾಧನಿ ಮಾಡಿದ. ನಾಮುದವರಿಗ ಬೇರೆ ಮಾಡಿ ನಮಗ ಅಡ್ಡ ಚ್ಯೋರಗ ಒಂದಾಗಿ ಕೂಡಿ ಕಲಸಮೇಲೋಗರ ಮಾಡಿದರು. ಬಡಿಸಲಿಕ್ಕೆ ಬಂದವ ಎರಡು ಲಾಡು ಮೇಲೆ ಒಂದೂ ಹಾಕಲಿಕ್ಕಿಲ್ಲ. ತುಪ್ಪ ಹಾಕಲಿಕ್ಕ ಬಂದವ ದೊಡ್ಡ ಸವಟಿನಾಗ ಎರಡು ಸವಟು ಹಾಕಿದ. ಇನ್ನಿಷ್ಟು ಹಾಕಬಾರದಾ ? ತನ್ನ ಮನಿಯಿಂದ ತರುತಾನಾ ? ಪ್ರಸ್ತ ಮಾಡೋವ ಮಾಡುತಾನ. ಬಡಿಸಲಿಕ್ಕೆ ಬಂದವರಿಗೆ ಏನು ಧಾಡಿ ? ಅವರು ತಲಿ ಹುಯಿಸಿಕೊಂಭಾಂಗ ದಾರೂ ಇಲ್ಲ. ಹೊಟ್ಟೆ ತುಂಬಬೇಡೆ ?" (ಅ. 44)

ಪುಟ್ಟಣ್ಣನವರಲ್ಲಿ ಗಾದೆಗಳೂ ನುಡಿಗಟ್ಟುಗಳೂ ಹೇರಳವಾಗಿ ಸಿಗುತ್ತವೆ. ಅವುಗಳನ್ನು ಸಹಜವಾಗಿ ಪುಟ್ಟಣ್ಣನವರು ಬಳಸುತ್ತಾರೆ. ಆಡುವ ತನಕ ಅರಗಿಣಿ, ನಡೆಯುವ ತನಕ ನಾಣ್ಯ (ಮು. ತೆ. ಮಾ. 3), ಆಂಜನೇಯನು ಕಾಲನೇಮಿಯನ್ನು ಕುರಿತು ಸಂಜೀವನ ಪರ್ವತಕ್ಕೆ ದಾರಿ ಕೇಳಿದಂತೆ (ಮಾ. ಮ. 154), ಆಂಜನೇಯ ಬ್ರಹ್ಮಪಟ್ಟಕ್ಕೆ ಕಾದ ಹಾಗೆ (ಅ. 123), ಉಳ್ಳೀ ತಿಂದವ್ಮನಿಗೆ ಉಳುಕಿತು (ಮಾ. ಮ. 93), ಊಟ ಹಾಗ, ಫಲಾಹಾರ ಮುಪ್ಪಾಗ (ಮಾ. ಮ. 131), ಕರೆದು ಹೆಂಣ ಕೊಟ್ಟರೆ ಮಲ್ಲೋಗರ ಬಂತು (ಅ. 35), ಕಂಡರೆ ಸುಂಕ, ಕಾಣದಿದ್ದರೆ ಬಿಂಕ (ಅ. 18), ಕಾಣಿಕೆ ಮುಂಚು, ಮಾತು ಹಿಂಚು (ಮು. ತೆ. ಮಾ. 157), ಕಾರಗಳ್ಳಿ ತೋರೆಯುರು ಕೃಷ್ಣರಾಜ ಒಡೆಯರ ಮನೆಗೆ ಹೆಂಣು ಕೇಳುವುದಕ್ಕೆ ಹೋದ ಹಾಗೆ (ಅ. 35), ಕೊಳ್ಳೀ ತೆಗೆದುಕೊಂಡು ತಲೇ ತುರಿಸಿಕೊಂಡರು (ಮಾ. ಮ. 154), ದೀಪಕ್ಕೆ ಈಚಲ ಹುಳು ನಿಂದಾವೇ (ಮು. ತೆ. ಮಾ. 103), ನೀರಲ್ಲಿ ಎಮ್ಮೆ ನಿಲ್ಲಿಸಿಕೊಂಡು ಕ್ರಯ ಕಟ್ಟಿದಂತೆ (ಮು. ತೆ. ಮಾ. 88), ಮೊದಲಾದ ಗಾದೆಗಳೂ ಎಕ್ಕಾಗುಳ್ಳ ಹುಟ್ಟಿ ಹೋಗು (ಮಾ. ಮ. 128), ಒಂದೇ ಕತ್ತಿನಲ್ಲಿ ಪ್ರಾಣಾ ಹೋಗು (ಮಾ. ಮ. 72), ಕಟ್ಟು ಹರಿದ ಪಂಜು (ಮಾ. ಮ. 135), ಕಾಲ ಬಿಗಿಯಾಗು (ಮು. ತೆ. ಮಾ. 150), ಕೈ ಆಸೆ, ಬಾಯಾಸೆ (ಮು. ತೆ. ಮಾ. 46), ಕೈಯಲ್ಲಿ ಕಿಸಿಯುವುದು (ಅ. 116), ಕಂಕುಳ ಸಂದಿಯಲ್ಲಿ ಹೊಸಗಿ ಹಾಕು (ಮು. ತೆ. ಮಾ. 120), ಚಕ್ರ ಹಾಕು (ಅ. 18), ಹತ್ತು ಬಾಯಲ್ಲಿ ಹೊಗಳು (ಅ. 111) ಮುಂತಾದ ನುಡಿಗಟ್ಟುಗಳೂ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತವೆ.

ಹಳೆಯ ಮೈಸೂರಿನ ಪ್ರದೇಶದಲ್ಲಿ ಆಡುನುಡಿಯನ್ನು ಹೊಸಗನ್ನಡದಲ್ಲಿ ಮುಖ್ಯ ಮೂರು ಪ್ರಕಾರಗಳಲ್ಲಿ–ಕಾದಂಬರಿ, ನಾಟಕ, ಕಾವ್ಯಗಳಲ್ಲಿ–ಸಮರ್ಥವಾಗಿ ಬಳಸಿದವರು ಕ್ರಮವಾಗಿ ಎಂ. ಎಸ್. ಪುಟ್ಟಣ್ಣನವರು, ಟಿ. ಪಿ. ಕೈಲಾಸಂ ಅವರು ಹಾಗೂ ಜಿ. ಪಿ. ರಾಜರತ್ನಂ ಅವರು. ಕೈಲಾಸಂ ಅವರ ನಾಟಕಗಳಲ್ಲಿ ಆಡುನುಡಿಯ

ಬಳಕೆ ಹಲವೆಡೆ ಕೃತಕ, ಶ್ರಮದಾಯಕ. ಮಾರ್ಗಕಾವ್ಯದ ಗ್ರಾಂಥಿಕ ಶೈಲಿಯ ಮೇಲೆ ಸೇಡು ತೀರಿಸಿಕೊಳ್ಳಲೋ ಎಂಬಂತೆ ಇನ್ನೊಂದು ಅತಿರೇಕಕ್ಕೆ ಹೋದರು. ಗಡಿಯಾರದ ಗೋಲಕ ಒಂದೆಡೆ ಕ್ರಮಿಸಿದಷ್ಟೇ ಇನ್ನೊಂದೆಡೆಯೂ ಕ್ರಮಿಸುತ್ತದೆ ಎಂಬ ನಿಯಮದ ಮಿತಿಗೆ ಒಳಪಟ್ಟರು. ರಾಜರತ್ನಂ ಅವರ ಕಾವ್ಯದ ಭಾಷೆ ಹಲವು ವೇಳೆ ಅದನ್ನು ಬಳಸುವ ವ್ಯಕ್ತಿಗಳ ಭಾವನೆಯೊಂದಿಗೆ ಸಹಜವಾಗಿ ಕಾಣುವುದಿಲ್ಲ. "ಒಟ್ಟಾಗಿ ಹೇಳುವುದಾದರೆ, ಈ ಕವನಗಳಲ್ಲಿ ಒಂದು ಶಿಷ್ಟವಾದ ಅಥವಾ ಸುಸಂಸ್ಕೃತ ವಾದ ಮನಸ್ಸು ಇಲ್ಲವೇ ಪ್ರಜ್ಞೆಯು ಇನ್ನೊಂದು ಒರಟಾದ ಆವರಣದ ಮನಸ್ಸನ್ನು ಅದೇ ಭಾಷೆಯ ಮುಖಾಂತರ ತನ್ನ ಪ್ರಜ್ಞಾಪರಿಣಾಮಕ್ಕೆ ಸೋಸಿಕೊಳ್ಳುವುದರ ಮೂಲಕ ಕನ್ನಡಕ್ಕೆ ವಿಶಿಷ್ಟವಾದ (ಭಾಷೆ ಮತ್ತು ಅನುಭವ ಎರಡರ ದೃಷ್ಟಿ ಯಿಂದಲೂ) ಕಾವ್ಯವನ್ನು ಸೃಷ್ಟಿಸಿದೆ. ಇಲ್ಲಿ ಬಳಕೆಯಾದ ಭಾಷೆ ತನಗೆ ಸಹಜವಾದ ಆವರಣದ ಮತ್ತು ಮನಸ್ಸಿನ ಹಲವು ಅವಸ್ಥೆಗಳನ್ನು ಸಮರ್ಪಕವಾಗಿ ಭರಿಸಿದೆ. ಆದರೆ,ತನ್ನ ಪ್ರಜ್ಞಾಪರಿಣಾಮಕ್ಕೆ ಸೋಸಿಕೊಳ್ಳಲು ಹವಣಿಸುತ್ತಿರುವ ಶಿಷ್ಟಪ್ರಜ್ಞೆಯ ವ್ಯಾಪಾರವನ್ನೂ ಅಷ್ಟೇ ಸಮರ್ಥವಾಗಿ ತನ್ನೊಳಗೇ ಅರಗಿಸಿಕೊಳ್ಳುವುದು ಆ ಭಾಷೆಗೆ ಸಾಧ್ಯವಾಗುವುದಿಲ್ಲ"[7] ಎಂಬ ಜಿ. ಎಚ್. ನಾಯಕರ ಮಾತು ಗಮನಾರ್ಹವಾಗಿದೆ.

ಟಿ. ಪಿ. ಕೈಲಾಸಂ ಮತ್ತು ಜಿ. ಪಿ. ರಾಜರತ್ನಂ ಈ ಇಬ್ಬರಿಗೂ ಮೊದಲೇ ಆಡುನುಡಿಯನ್ನು ಬಳಸಿದ ಪುಟ್ಟಣ್ಣನವರಲ್ಲಿ ಈ ಮಿತಿಗಳು ಇಲ್ಲದಿರುವುದು ಗಮ ನಾರ್ಹವೂ ಸಂತೋಷಾಶ್ಚರ್ಯಗಳ ಮಾತೂ ಆಗಿದೆ. ಯಾವೊಂದು ಧೋರಣೆಯೂ ಇಲ್ಲದೆ ಇದ್ದದ್ದನ್ನು ಇದ್ದಂತೆ ಹೇಳುವ ಬಗೆ ಇದಕ್ಕೆ ಮುಖ್ಯ ಕಾರಣವಿರಬಹುದು. ಇದೊಂದೇ ಅಲ್ಲದೆ ಇನ್ನೊಂದು ಅಂಶದಲ್ಲಿಯೂ ಪುಟ್ಟಣ್ಣನವರ ಹೆಸರಿಗೇ ಹೆಚ್ಚು ಅಂಕಗಳು ಸಲ್ಲುತ್ತವೆ. ಆಡುನುಡಿಯ ಇತರ ಸಾಧ್ಯತೆಗಳನ್ನು ಪುಟ್ಟಣ್ಣನವರು ಕಂಡುಕೊಂಡರು. ವ್ಯಾಕರಣ, ಕಾಗುಣಿತಗಳನ್ನು ಅತಿಕ್ರಮಿಸಿದರೂ ಅದು ಕೃತಕ ವಾಗದೆ ಸಹಜ ಉಚ್ಚಾರಕ್ಕೆ ಬದ್ಧವಾಗಿದೆ. ಗಾದೆಗಳು, ನುಡಿಗಟ್ಟುಗಳು, ಸಹಜ ಬಳಕೆಯ ಪದಗಳು, ಹೇರಳವಾಗಿ ಬರುತ್ತವೆ.

ತಮ್ಮ ಕಾದಂಬರಿಗಳಲ್ಲಿ ಪುಟ್ಟಣ್ಣನವರು ಚಿತ್ರಿಸಿರುವುದು ಮೈಸೂರು, ಶ್ರೀರಂಗ ಪಟ್ಟಣ, ಸಂಜನಗೂಡು, ಚಾಮರಾಜನಗರ ಈ ಪ್ರದೇಶಗಳ ಜನಜೀವನವನ್ನು. ಆಡು ನುಡಿಯ ಗತ್ತು ಗಮ್ಮತ್ತುಗಳು ಇಲ್ಲಿ ಹರಳುಗೊಂಡಿರುವ ರೀತಿ ವಿಸ್ಮಯಕರವಾಗಿದೆ. ಪ್ರಾಮಾಣಿಕವಾದ ಭಾವತೀವ್ರವಾದ ಆಲೋಚನೆಗೆ ಮಾತ್ರ ದಕ್ಕುವಂತಹ ಸುಸ್ಪಷ್ಟ ಶೈಲಿಯನ್ನು ಮೇಲಿನ ಉದಾಹರಣೆಗಳಲ್ಲಿ ಕಾಣಬಹುದು. ಹೊಸಗನ್ನಡ ಗದ್ಯದ ಬೆಳೆಯಲ್ಲಿ ಪುಟ್ಟಣ್ಣನವರದು ನಿಸ್ಸಂಶಯವಾಗಿಯೂ ಅರಿಬತ್ತ. "The episodic novel does not have the feel of a fairy tale largely on account of the racy idiom Puttanna employs and the successful way in which it evokes a whole community. The experience it articulates has an authentic ring, and the "density of specifi-

cation" prevents its becoming melo-drama." ಎಂಬ ಎಂ. ಜಿ. ಕೃಷ್ಣ ಮೂರ್ತಿಯವರ ಮಾತನ್ನು ಇಲ್ಲಿ ನೆನೆಯಬಹುದು.

ಪುಟ್ಟಣ್ಣನವರ ಕನ್ನಡ ಶಿಷ್ಟ ಕನ್ನಡ. ಈಗ ಮೈಸೂರು ಬೆಂಗಳೂರುಗಳಲ್ಲಿ ಬಳಸುವ ಕನ್ನಡ. ಇಂದಿಗಿಂತ ಸ್ವಲ್ಪ ಹೆಚ್ಚು ಬನಿಯಿಂದ ಕೂಡಿದ್ದು ಎನ್ನಬಹುದು. ತಮ್ಮ ನಿರೂಪಣೆಯಲ್ಲಿ ಪುಟ್ಟಣ್ಣನವರು ಈ ಪ್ರಭೇದವನ್ನು–ಮುಂದೆ ಈ ಪ್ರದೇಶದ ವಿಶ್ವವಿದ್ಯಾನಿಯಗಳು ಪತ್ರಿಕೆಗಳು ಸ್ವೀಕರಿಸಿದ ಪ್ರಭೇದವನ್ನು–ಬಳಸಿದರೂ ಬೇರೆ ಬೇರೆ ಜಾತಿ, ಬುಡಕಟ್ಟು, ಪಂಗಡ, ಪ್ರದೇಶಗಳಿಂದ ಬಂದ ಪಾತ್ರಗಳ ಬಾಯಲ್ಲಿ ಆಯಾ ಭಾಷೆಯನ್ನೇ ಬಳಸುತ್ತಾರೆ. ಬೇರೆ ಏನು ಪ್ರಭಾವ ಇದ್ದರೂ ಅದನ್ನು ಕೂಡಿಕೊಂಡೇ ಹೇಳುತ್ತಾರೆ, ಹೊರತಾಗಿಸುವುದಿಲ್ಲ.

**ಸಾಂಕೇತಿಕತೆ**

ಪುಟ್ಟಣ್ಣನವರು ಸಂಕೇತಗಳ ಆಮಿಷಕ್ಕೆ ಬಲಿಯಾದವರಲ್ಲ. ಅದಕ್ಕೆ ಬೇಕಾದ ತಾಂತ್ರಿಕ ಪರಿಣತಿಯೂ–ಇಂದಿನ ಅರ್ಥದಲ್ಲಿ–ಅವರಲ್ಲಿ ಇರಲಿಲ್ಲ ಎಂಬುದು ಸ್ಪಷ್ಟವಾದ ವಿಷಯವೇ ಆಗಿದೆ. ಅವರ ಆಸಕ್ತಿ ಏನಿದ್ದರೂ ಅಪ್ಪಟ ವಿವರಗಳಿಂದ ಕೂಡಿದ ಜನಜೀವನದ ಚಿತ್ರಣದ ಮೂಲಕ ನೈತಿಕದೃಷ್ಟಿಯ ಅಂತಿಮ ಗೆಲುವಿನ ಚಿತ್ರಣ ಮಾತ್ರ. ಅವರ ಕಾದಂಬರಿಗಳಲ್ಲಿ ಸಂಕೀರ್ಣತೆಯಿಂದ ಸಾಮಾಜಿಕ ಪರಿಸ್ಥಿತಿಯನ್ನು ಹೇಳುವ ಘಟನೆಗಳೇ ಸಂಕೇತಗಳಾಗಿ ರೂಪುಗೊಳ್ಳುತ್ತವೆ. ಸೀತೆ ಅರಕ್ಷಿತಳಾಗಿರುವುದು ಸಾಮಾಜಿಕ ಪರಿಸ್ಥಿತಿಯೊಂದರ ಸಂಕೇತವಾಗಿದ್ದರೆ ರಾಜಾಸ್ಥಾನದ ಚಿತ್ರಣವೂ ಅದೇ ಲೆಕ್ಕಕ್ಕೆ ಸೇರುತ್ತದೆ. ಕಣ್ಣಿಗೆ ಹೊಡೆಯುವ ಸ್ಪಷ್ಟ ಸಂಕೇತಗಳು ಕಾಣದಿದ್ದರೂ ಒಮ್ಮೊಮ್ಮೆ ವಾಚ್ಯವಾದವುಗಳು ಸಿಗುತ್ತವೆ. 'ಅವರಿಲ್ಲದೂಟ'ದ ರಂಗನಾಯಕಮ್ಮ ಹೆಣ್ಣಿಗೆ ಪರಿಪೂರ್ಣತೆಯನ್ನು ಕೊಡುವ ತಾಯ್ತನದಿಂದ ವಂಚಿತಳಾಗಿದ್ದಾಗ ಹೇಳುವ ಮಾತುಗಳು ಇದೇ ಹಿನ್ನೆಲೆಯಲ್ಲಿ ಅರ್ಥಪೂರ್ಣ. "ಬೋರಿ, ನಾವು ಏನು ಸಿಂಗರಿಸಿ ಕೊಂಡೇನೆ ? ನಮಗೆ ಬರದದೇನಾ ? ಚಿನ್ನ, ಬೆಳ್ಳಿ, ಹಳ್ಳು, ಮುತ್ತು ಇದೆಲ್ಲಾ ನೆಲದಲ್ಲಿ ಸಿಕ್ಕಾಕಿಲ್ಲವಾ ? ನೆಲಕೆ ಸಿಂಗಾರವಾಯಿತಾ ! ಅದ ನೆಲದಿಂದ ತೆಗೆದು ನಾವು ಮೇಲೆ ಹಾಕ್ಕೊಂಡರೆ ಹೆಂಗೆ ಸಿಂಗಾರ ?" (ಅ. 16). ಭೂಮಿ ಹೆಣ್ಣಿನ ಪ್ರತೀಕ ಹಾಗೂ ಸಸ್ಯಶ್ಯಾಮಲೆಯಾದ ಭೂಮಿಗೇ ಎಲ್ಲ ರೀತಿಯ ಬೆಲೆ ಎಂಬುದನ್ನು ಪರಿಭಾವಿ ಸಿದರೆ ಒಡವೆಗಳಿಂದ ಬರಿಯೊಡಲ ಶೂನ್ಯತೆಯನ್ನು ತುಂಬಲಾಗದೆಂದು ರಂಗನಾಯ ಕಮ್ಮನ ಮಾತು ತಿಳಿಸುತ್ತದೆ. ಒಂದು ಸನ್ನಿವೇಶವೇ ಸಂಕೇತವಾಗಿ ನಿಲ್ಲುವುದಕ್ಕೆ ಒಂದು ಉದಾಹರಣೆ – ಜಾನಕಿ ಹಾಗೂ ನರಸಿಂಹಾಚಾರಿ ಇಬ್ಬರೂ ಪ್ರಯಾಣ ಮಾಡು ವಾಗ ನರಸಿಂಹಾಚಾರಿ ಹೇಳುವ ಒಗಟಿಗೆ ಉತ್ತರ ದೊರಕದೆ ಅಪೂರ್ಣವಾಗಿ ನಿಲ್ಲು ವುದು ಕೂಡ ಜಾನಕಿಯ ಬಾಳೇ ಉತ್ತರವಿಲ್ಲದ ಒಗಟಾಗಿ ಬಹುಕಾಲ ಸಾಗಬೇಕಾದ ಸ್ಥಿತಿಯನ್ನು ಸೂಚಿಸುತ್ತದೆ.

ಕಥೆಯ ಸ್ತರದಲ್ಲಿ ಕಥೆ, ಬೇರೊಂದು ಸ್ತರದಲ್ಲಿ ಸೂಕ್ಷ್ಮ ಪರಿಭಾವನೆಯಿಂದ ಹೊಸ ಅರ್ಥಗಳು ಇವು ಪುಟ್ಟಣ್ಣನವರಲ್ಲಿ ಕ್ವಚಿತ್ತಾಗಿ ಕಾಣುತ್ತವೆ. ಇಡೀ ಘಟನೆಗಳೇ ಸಂಕೇತವಾಗುವ ಮೇಲಿನ ಘಟನೆಯಂತಹದು ಕೂಡ ಅಪ್ರಜ್ಞಾಪೂರ್ವಕವಾಗಿ ಬಂದದ್ದು. ಕಾದಂಬರಿಗಳಲ್ಲಿ ಬರುವ ರಾಮಾಯಣ ಮಹಾಭಾರತಗಳ ಉಲ್ಲೇಖ ಗಳು ಕೂಡ ಪುಟ್ಟಣ್ಣನವರು ಒಪ್ಪಿಕೊಂಡ ಸಾಂಸ್ಕೃತಿಕ ಧೋರಣೆಯಿಂದ ಬಲಗೊಳ್ಳುತ್ತ ವಾದ್ದರಿಂದ ಸೀತೆ, ಜಾನಕಿ, ಅರುಂಧತಿ ಎಂಬ ಹೆಸರುಗಳು ಕೂಡ ಸಾಂಕೇತಿಕ ವಾಗುತ್ತವೆ. ಇವು ಬಳಕೆಯಾಗಿರುವುದು ಕೂಡ ಆ ಉದ್ದೇಶದಿಂದಲೇ ಎಂಬುದು ಇಲ್ಲಿ ಗಮನಾರ್ಹ. ಯಾವುದೇ ವಿಷಯವನ್ನು ಅದರ ಪೂರ್ಣಚೌಕಟ್ಟಿನಲ್ಲಿ ಗ್ರಹಿಸುವು ದರಿಂದ ನಿರೂಪಣೆಯಲ್ಲಿನ ಯಾವುದೋ ಒಂದಂಶ ಸಾಂಕೇತಿಕವಾದ ನಿಲುವನ್ನು ತಾಳುತ್ತದೆ.

**ಮೂರೂ ಕಾದಂಬರಿಗಳ ಹೋಲಿಕೆಗಳು**

ಹಿಂದೆಯೇ ಹೇಳಿದಂತೆ ಪುಟ್ಟಣ್ಣನವರ ಕಥನಸಾಹಿತ್ಯದಲ್ಲಿ ಈ ಮೂರು ಕಾದಂಬರಿಗಳು ಮಾತ್ರ ಸ್ವತಂತ್ರ ರಚನೆಗಳು. ಮೂರು ಕಾದಂಬರಿಗಳೂ ಒಂದೇ ಚೌಕಟ್ಟಿನಲ್ಲಿ ರಚಿತವಾದುವು. ಮೂರರಲ್ಲೂ ಮುಖ್ಯ ಹಾಗೂ ಆನುಷಂಗಿಕ ವಿಚಾರ ಗಳಲ್ಲಿ ಸ್ವಲ್ಪಮಟ್ಟಿಗೆ ಹೋಲಿಕೆ ಕಾಣಬರುತ್ತದೆ. ಇವು ಆಕಸ್ಮಿಕವಲ್ಲ.

ಈ ಕಾದಂಬರಿಗಳಲ್ಲಿ ಯಾವುದಕ್ಕೂ ನಾಯಕ ಅಥವಾ ನಾಯಕಿಯ ಹೆಸರಿಲ್ಲ. 'ಮಾಡಿದ್ದುಣ್ಣೋ ಮಹಾರಾಯ' ಎಂಬುದು ಒಂದು ನಂಬಿಕೆ, ಗಾದೆ. 'ಮುಸುಗ ತೆಗೆಯೇ ಮಾಯಾಂಗನೆ' ಒಂದು ಸಂಬೋಧನೆ. 'ಅವರಿಲ್ಲದೂಟ' ಅಥವಾ 'ಕೊಂಬೆಗೆ ರೆಂಬೆ ಸೇರಿತು' ಎಂಬುದು ಒಂದು ಉದ್ಗಾರ ಹಾಗೂ ಸುಖಾಂತವಾದ ಒಂದು ಸ್ಥಿತಿ.

ಮೂರೂ ಕಾದಂಬರಿಗಳು ಶ್ಲೋಕ, ಹಾಡು ಇತ್ಯಾದಿಗಳಿಂದ ಪ್ರಾರಂಭ ವಾಗುತ್ತವೆ.

ಮೂರರಲ್ಲೂ ಪ್ರಾಮಾಣಿಕತೆಯ ವಿವಿಧ ರೂಪಗಳ ಮೇಲೆ ಧಾಳಿ, ಘರ್ಷಣೆಯ ನಂತರ ಒಳ್ಳೆಯದಕ್ಕೆ ಗೆಲುವು, ಕೆಟ್ಟದ್ದಕ್ಕೆ ಸೋಲು. 'ಮಾಡಿದ್ದುಣ್ಣೊ ಮಹಾರಾಯ' ದಲ್ಲಿ ಪಾತಿವ್ರತ್ಯದ ಮೇಲಿನ ಸಂಚು, 'ಮುಸುಗ ತೆಗೆಯೇ ಮಾಯಾಂಗನೆ' ಯಲ್ಲಿ ತಪ್ಪು ಮಾಡದವನ ಮೇಲೆ ಅಪವಾದ ಹೊರಿಸುವ ಹವಣಿಕೆ, 'ಅವರಿಲ್ಲದೂಟ' ದಲ್ಲಿ ನಿರಪ ರಾಧಿಗಳನ್ನು ಮೋಸಕ್ಕೊಳಗಾಗಿಸುವ ಯತ್ನ—ಈ ವೈಯಕ್ತಿಕ ಸ್ವಾರ್ಥಗಳು ಕೊನೆಗೆ ಟೊಳ್ಳಾಗಿ ಬೀಳುತ್ತವೆ. ಸತ್ಯಕ್ಕೇ ಗೆಲುವಾಗುತ್ತದೆ. ಅಲ್ಲದೆ ಈ ಕಾರ್ಯನಿರ್ವ ಹಣೆಗೆ ಬರಿಯ ಪುರುಷಪ್ರಯತ್ನವೊಂದೇ ಸಾಲದು, ದೈವೀಕೃಪೆಯ ರೂಪವಾಗಿ ಪಾರಮಾರ್ಥಿಕ ನೆರವನ್ನು ನೀಡುವ ನಿಸ್ವಾರ್ಥ ವ್ಯಕ್ತಿಯೊಬ್ಬನ ಸಹಾಯ ಈ ಕಾದಂಬರಿ ಗಳಲ್ಲಿ ಸಾಮಾನ್ಯವಾಗಿ ಕಾಣುವ ನಿಯಮ.

'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಸೀತೆ ಹಾಗೂ 'ಅವರಿಲ್ಲದೂಟ' ದ ಜಾನಕಿ ಇವರ ಗುಣ ಒಂದೇ ಅಚ್ಚಿನದು. ಕಾಲಮಾನ ಹಾಗೂ ಪಾತ್ರಗಳ ಮೂಲದ್ರವ್ಯ ಒಂದೇ. ಇವರಿಬ್ಬರೂ ಅನುಭವಿಸುವ ಕಷ್ಟಪರಂಪರೆಗಳು ಕೂಡಾ ತೀರ ಬೇರೆಯಾದವುಗಳಲ್ಲ. ಸೀತೆಯ ಮೇಲೆ ಅಪ್ಪಾಜಿಯ ವಕ್ರದೃಷ್ಟಿ. ಮಲ್ಲನಿಗೆ ಜಾನಕಿಯ ಮೇಲೆ ಕಣ್ಣು. ಒಟ್ಟಿನಲ್ಲಿ ಸಾತ್ತ್ವಿಕತೆಯ ಮೇಲೆ ತಾಮಸದ, ನಯನಾಜೂಕಿನ ಮೇಲೆ ರೂಕ್ಷತೆಯ ಕಣ್ಣು. ಸೀತೆಯ ಮೇಲೆ ಬಲಾತ್ಕಾರದ ಪ್ರಯತ್ನವಿದೆ. ಜಾನಕಿಯ ಮೇಲೆ ಅಂಥ ಪ್ರಯತ್ನವಿಲ್ಲ. ಎರಡೂ ಕಡೆಯೂ ಒಡವೆ ಹಣ—ಇವುಗಳ ಅಪಹರಣವಿದೆ. ಹೆಸರುಗಳ ಸಾಮ್ಯವೂ ಆಕಸ್ಮಿಕವಲ್ಲ.

ಫಲಾಪೇಕ್ಷೆಯಿಲ್ಲದ ವ್ಯಕ್ತಿಗಳ ನೆರವು ಮೂರು ಕಾದಂಬರಿಗಳಲ್ಲೂ ಕಾಣುತ್ತದೆ. ಸತ್ತ ಸೀತೆಯನ್ನು ಭಟಜಿ ಬದುಕಿಸಿ ಏನನ್ನೂ ಸ್ವೀಕರಿಸದೆ ಹೋದಂತೆ ಮಲ್ಲನನ್ನು ಫಕೀರನೊಬ್ಬ ಫಲಾಪೇಕ್ಷೆಯಿಲ್ಲದೆ ಬದುಕಿಸುತ್ತಾನೆ. ತಾವು ಬದುಕಿಸುವ ವ್ಯಕ್ತಿಗಳ ವೈಯಕ್ತಿಕ ಗುಣದೋಷಗಳನ್ನು ಕೂಡ ಲೆಕ್ಕಿಸದ ನಿರ್ಮಮಕಾರ ಈ ವ್ಯಕ್ತಿಗಳದು. ಸೀತೆಯ ಗುಣ ಭಟಜಿಗೆ ತಿಳಿಯುವ ಸೂಚನೆ ಇದೆ. ಇದಕ್ಕೆ ಕಾರಣ ಸೀತೆ ಹೆಂಗಸೆಂಬುದೂ ಆಕೆಯನ್ನು ಆಕೆಯ ನೆಲೆಗೆ ಸೇರಿಸಬೇಕೆಂಬುದೂ ಇರಬಹುದು. ಫಕೀರ ಅದಕ್ಕೂ ನಿಲ್ಲುವುದಿಲ್ಲ. ತನ್ನ ಕೆಲಸ ಮುಗಿಸಿ ಹೊರಟುಹೋಗುತ್ತಾನೆ. 'ಮುಸುಗ ತೆಗೆಯೇ ಮಾಯಾಂಗನೆ' ಯ ಆತ್ಮಾರಾಂ ಬಾವಾಜಿ ಕೂಡ ಅಪ್ರಮೇಯನಲ್ಲಿ ಧೈರ್ಯ ತುಂಬುತ್ತಾನೆ, ಆಗಬೇಕಾದುದು ಆಗುವ ಕಾಲಕ್ಕೆ ಎಂಬ ಮಾತನ್ನು ಹೇಳುತ್ತಾನೆ. ಅಲ್ಲದೆ ಹನುಮಂತರಾವ್ ರಣನವರೆಗೆ ವಿಷಯ ತಿಳಿಯುವಂತೆ ಮಾಡುತ್ತಾನೆ.

ಸೀತೆಯನ್ನು ರಕ್ಷಿಸಬೇಕಾದ ಗಂಡ, ಮಾವ, ಊರಿನ ಗುಡಿ, ರಾಜಾಸ್ಥಾನಗಳು ರಕ್ಷಿಸುವುದಿಲ್ಲ. ಹೊರಗಿನ ಶಕ್ತಿ ರಕ್ಷಿಸುತ್ತದೆ. ಜಾನಕಿಯನ್ನು ಕೂಡ ಗಂಡ ತಂದೆಯರು ರಕ್ಷಿಸಲಾಗಲಿಲ್ಲ, ಬದಲಾಗಿ ತಪ್ಪು ತಿಳಿಯುವ ಗಂಡನ ಮೂಲಕ ವ್ಯಂಗ್ಯದ ಸೂಚನೆ ಇದೆ.

ಸೀತೆಯನ್ನು ಅಧಃಪತನಕ್ಕೆಳೆಯಲು ಅವರ ಮನೆಯ ಅನ್ನವುಂಡ ಉಪಾಧ್ರಿ ಉದ್ಯುಕ್ತನಾಗಿದ್ದರೆ ಜಾನಕಿಯ ವಿನಾಶಕ್ಕೆ ಅವರ ಮನೆಯಲ್ಲಿದ್ದು ಊಟಮಾಡಿದ ಮಲ್ಲ ಕಾರಣನಾಗಿದ್ದಾನೆ. ಕಾದಂಬರಿಕಾರರ ಜೀವನದೃಷ್ಟಿ, ಧೋರಣೆಗಳಿಂದ ಸೀತೆ ಜಾನಕಿಯರ ಮೇಲಿನ ಸಂಚು ಯಶಸ್ವಿಯಾಗುವುದಿಲ್ಲ.

'ಮಾಡಿದ್ದುಣ್ಣೋ ಮಹಾರಾಯ' ಹಾಗೂ 'ಅವರಿಲ್ಲದೂಟ' ಎರಡೂ ಕಾದಂಬರಿಗಳಲ್ಲಿ ಅತ್ತೆಸೊಸೆಯರ ವಾದವಿದೆ. ಎರಡೂ ಕಡೆ ಸೌಮ್ಯ ಸ್ವಭಾವಕ್ಕೇ ಪೆಟ್ಟು ಬೀಳುತ್ತದೆ. 'ಮಾಡಿದ್ದುಣ್ಣೋ ಮಹಾರಾಯ' ದಲ್ಲಿ ಸೊಸೆ ಅಸಹಾಯಕಳು, 'ಅವರಿಲ್ಲದೂಟ' ದ ಅತ್ತೆ ಲೆಕ್ಕಕ್ಕಿಲ್ಲದ ವ್ಯಕ್ತಿ.

'ಮಾಡಿದ್ದುಣ್ಣೋ ಮಹಾರಾಯ' ದ ಅಪ್ಪಾಜಿಗೆ ಉಪಾಧ್ರಿಯ ಒತ್ತಾಸೆ

ಇದ್ದಂತೆ 'ಅವರಿಲ್ಲದೂಟ'ದ ಧೀರಾಜಿ, ನಾಗು ಇವರಿಗೆ ವೋಟಜ್ಜಿಯ ಬೋಧನೆ ಇದೆ. ಅಪ್ಪಾಜಿ ಹಾಗೂ ಧೀರಾಜಿ, ನಾಗು ಇವರು ಉಪಾದ್ರಿ ಹಾಗೂ ವೋಟಜ್ಜಿಯ ದುರ್ಬೋಧನೆ ಇಲ್ಲದೆ ತಾವು ಮಾಡಿದ ಕಲುಷಿತಕಾರ್ಯಕ್ಕೆ ಕೈಹಾಕುತ್ತಿರಲಿಲ್ಲ ಎಂಬ ಸಂದೇಹ ಉದಯಿಸುವುದಕ್ಕೆ ಅವಕಾಶವಿದೆ.

'ಮಾಡಿದ್ದುಣ್ಣೋ ಮಹಾರಾಯ' ದಲ್ಲಿ ತಿಮ್ಮಮ್ಮನ ಬಾಯಿಗೆ ಹೆದರಿ ಆಕೆಯ ಗಂಡ ಸದಾಶಿವದೀಕ್ಷಿತ ಬಾಯಿಮುಚ್ಚಿ ಕೂಡುತ್ತಾನೆ. ಮಾನಸ್ಥನಾದ ಪತಿ ಗಯ್ಯಾಳಿ ಪತ್ನಿಗೆ ಹೆದರುವ ಚಿತ್ರಣ 'ಅವರಿಲ್ಲದೂಟ'ದ ಧರ್ಮದಾಸ ಹಾಗೂ ನಾಗರತ್ನರ ನಡುವೆಯೂ ಇದೆ.

ತಮಗೇ ತಿಳಿಯದೆ ತಮ್ಮನ್ನು ಕಡಿಮೆಮಾಡಿಕೊಳ್ಳುವ ವರ್ಣನೆಯನ್ನು ತಿಮ್ಮಮ್ಮ ಮಾಡುತ್ತಾಳೆ. ಸೊಸೆಯ ಸೌಂದರ್ಯವನ್ನೂ ಕುರೂಪ ಎನ್ನುವಂತೆ ಹೇಳುತ್ತಾಳೆ. ನಾಗುವಾದರೂ ಮೃಷ್ಟಾನ್ನವನ್ನು ಕದನ್ನಕ್ಕಿಂತಲೂ ಕಡಿಮೆ ಎನ್ನುವಂತೆ ಹೇಳುತ್ತಾಳೆ. ಇವರ ಅಂತರಂಗದ ಆಶಯಗಳು ಎರಡೂ ಕಡೆ ಹೊರಗಿಣಿಕುತ್ತವೆ. ಎರಡೂ ಕಡೆ ಹೆಂಗಸರು ಬೆನ್ನ ಹಿಂದೆ ಇವರನ್ನು ಬೈದುಕೊಳ್ಳುತ್ತಾರೆ.

'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಪರಿವಾರದವರು ಹಾಗೂ ತೊರೆಯರ ಜಗಳ ಉಲ್ಬಣವಾಗಿ ಸ್ಫೋಟಗೊಳ್ಳುವ ಸನ್ನಿವೇಶ ಒಂದು ಮದುವೆಯ ಮೆರವಣಿಗೆಯ ಹೊತ್ತಿನಲ್ಲಿ. 'ಮುಸುಗ ತೆಗೆಯೇ ಮಾಯಾಂಗನೆ' ಕಾದಂಬರಿಯಲ್ಲಿ ಶಿವಾಚಾರದವರ ಹಾಗೂ ಇತರರ ನಡುವಿನ ವಿರಸ ಒಡೆದು ಕಾಣುವುದು ಒಬ್ಬ ಮಠ ಪತಿಗಳ ಮೆರವಣಿಗೆಯ ಹೊತ್ತಿನಲ್ಲಿ. ಎರಡೂ ಮೆರವಣಿಗೆಗಳು ಕೋಮು ವಿರಸದ ಸಾಕಾರ ರೂಪಗಳಾಗಿವೆ. ಎರಡರ ಗಲಭೆಯೂ ರಾಜಸನ್ನಿಧಿಗೆ ವಿಚಾರಣೆಗೆ ಬರುತ್ತವೆ. ಎರಡೂ ಕಡೆ ರಾಜಾಸ್ಥಾನ ತನ್ನ ಹೊಣೆಯ ನಿರ್ವಹಣೆಯಲ್ಲಿ ಸೋಲುತ್ತದೆ.

'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಅಮಾಸೆ ಪ್ರವಾಸ ಹೋದಾಗ ಅವನಿಗೆ ಒಂದು ವಿಲಕ್ಷಣ ಅನುಭವ ದೊರಕುತ್ತದೆ. ಊರ ಹೊರಗೆ ಒಂದು ಗುಡಿ, ಮರಗಳ ದಟ್ಟವಾದ ನೆರಳು, ಹರಿಯುತ್ತಿದ್ದ ಹಳ್ಳ, ಯಥೇಚ್ಛವಾಗಿ ಹೂ ಬಿಡುತ್ತಿದ್ದ ಕಾಡುಗಿಡಗಳು. ಈ ಪರಿಸರದ ಸೌಂದರ್ಯಕ್ಕೆ ಮನಸೋತು ಅಮಾಸೆ ನದಿಯಲ್ಲಿ ಸ್ನಾನಮಾಡಿ, ಹೂ ಕೊಯ್ದು ತಂದು ದೇವರಪೂಜೆ ಮಾಡುತ್ತಾನೆ. ಅಲ್ಲಿ ಸಿಗುವ ಒಬ್ಬ ಅಸಹಾಯಕ ಸ್ತ್ರೀಯ ಆಪತ್ತನ್ನು ದೂರಮಾಡುತ್ತಾನೆ. 'ಮುಸುಗ ತೆಗೆಯೇ ಮಾಯಾಂಗನೆ' ಕಾದಂಬರಿಯಲ್ಲಿ ಅಪ್ರಮೇಯ ತನ್ನ ಒಡೆಯನನ್ನು ಹುಡುಕಿಕೊಂಡು ಅಲೆಯುವಾಗ ಇಂಥದೇ ಅನುಭವ ಸಿಗುತ್ತದೆ. ಊರ ಹೊರಗೆ ಬೆಟ್ಟದ ಸಾಲು, ಪಕ್ಕದಲ್ಲಿ ಸಣ್ಣ ಹಳ್ಳ, ಸಮೀಪದಲ್ಲಿ ಒಂದು ಗುಡಿ, ಬೇಕಾದಷ್ಟು ಹೂ ಹೊತ್ತು ನಿಂತಿದ್ದ ಗಿಡಗಳು. ಅಪ್ರಮೇಯ ನದಿಯಲ್ಲಿ ಸ್ನಾನ ಆಹ್ನಿಕಗಳನ್ನು ಪೂರೈಸಿ ದೇವರ ಪೂಜೆ ಮಾಡುತ್ತಾನೆ. ಮುಂದೆ ಅಲ್ಲಿ ಭೇಟಿಯಾಗುವ ಆತ್ಮಾರಾಂ

ಬಾವಾಜಿಯಿಂದ ಅಸಹಾಯಕನಾಗಿದ್ದ ಅವನ ಆಪತ್ತು ದೂರವಾಗುವ ಸೂಚನೆ ದೊರೆಯುತ್ತದೆ.

'ಮಾಡಿದ್ದುಣ್ಣೋ ಮಹಾರಾಯ'ದ ಹಗಲುವೇಷದ ಕೃಷ್ಣಯ್ಯ ಹಾಗೂ 'ಮುಸುಗ ತೆಗೆಯೇ ಮಾಯಾಂಗನೆ'ಯ ಅಪ್ರಮೇಯ ದೈಹಿಕವಾದ ಹತೋಟಿಯನ್ನು [9] ಬೆರಗುಗೊಳಿಸುವಂತೆ ತೋರಿಸುತ್ತಾರೆ.

ಭೇದ, ತಂತ್ರಗಳು ನಡೆಯುವಾಗ 'ಮುಸುಗ ತೆಗೆಯೇ ಮಾಯಾಂಗನೆ' ಹಾಗೂ 'ಅವರಿಲ್ಲದೂಟ' ಗಳಲ್ಲಿ ಒಂದೇ ಬಗೆಯ ಚಳಕವಿದೆ—ಯಾರನ್ನು ನಾಶ ಮಾಡಬೇಕೋ ಅವರನ್ನು ಕೊಲೆಗಾರರನ್ನಾಗಿಸುವುದು ಯಾರು ಕೊಲೆಯಾದರೆಂದು ಜನ ನಂಬಬೇಕೋ ಅವರನ್ನು ನಾಪತ್ತೆಯಾಗಿಸುವುದು. ಮೊದಲನೆಯವರಲ್ಲಿ ದೇಪಣ್ಣನನ್ನು ಮುಳುಗಿಸಬೇಕೆಂದು ರಣನವರೆಯನ್ನು ಸೆರೆಹಿಡಿಯಲು ಹೋದಾಗ ಆತ ಓಡಿಹೋದನು. ಹೇಗೂ ನಾಪತ್ತೆಯಾದಂತೆಯೇ ಆಯಿತು. ತನ್ನ ಮನಸ್ಸಿನ ಭಯದಿಂದ ಅವನು ಈಚೆ ಬರುವಂತಿಲ್ಲ, ಅವನು ಪ್ರಕಟವಾಗಿ ಕಾಣಿಸಿಕೊಳ್ಳದೆ ದೇಪಣ್ಣ ತಾನು ಕೊಲೆಗಾರನಲ್ಲ ಎಂದು ಸಾಬೀತು ಮಾಡುವ ಹಾಗಿಲ್ಲ. ಇದರ ಮೇಲೆ ರಣನವರೆಯರದು ಎಂದು ಹೇಳಲಾದ ಹೆಣವೊಂದು ದೊರೆಯುತ್ತದೆ. 'ಅವರಿಲ್ಲದೂಟ'ದಲ್ಲಿ ಕೂಡ ರತನ್‌ಬಾಲಾಜಿ ನಾಪತ್ತೆಯಾದ ಮೇಲೆ—ಈತನೂ ತಾನಾಗಿಯೇ ಹೊರಟು ಹೋಗುತ್ತಾನೆ — ಅವನ ತಂದೆ ಧರ್ಮದಾಸನ ಮೇಲೆ ಕೊಲೆಯ ಆಪಾದನೆ ಬರುತ್ತದೆ. ರತನ್‌ಬಾಲಾಜಿಯದೆಂದು ಕತ್ತರಿಸಿದ ಖಂಡಗಳೂ ಚೆಲ್ಲಿರುವ ರಕ್ತವೂ ಕಾಣುತ್ತದೆ.'ಮುಸುಗ ತೆಗೆಯೇ ಮಾಯಾಂಗನೆ'ಯ ಅಪ್ರಮೇಯನು, ಹನುಮಂತರಾವ್ ರಣನವರೆಯ ಪತ್ನಿ ದುರ್ಗಾಬಾಯಿ ಎಂದು ಹೇಳಿಕೊಂಡಿದ್ದ ಚೆನ್ನಿಯನ್ನು ಪ್ರಶ್ನಿಸುವುದೂ 'ಅವರಿಲ್ಲದೂಟ'ದ ಕಿಸನ್ ಎಂಬ ವ್ಯಕ್ತಿ ಧೀರಾಜಿ ಎಂಬ ಹೆಸರಿಟ್ಟುಕೊಂಡಿದ್ದ ಮಲ್ಲನನ್ನು ವಿಚಾರಣೆಗೊಳಪಡಿಸುವುದೂ–ಎರಡೂ ನ್ಯಾಯಾಲಯದ ಆವರಣದಲ್ಲೇ–ಹೋಲಿಕೆಗಳನ್ನು ಹೊಂದಿದೆ. ಎರಡೂ ಕಡೆ ಕೊಲೆಯಾದವನೆಂದು ಭಾವಿಸಲ್ಪಟ್ಟವನೇ ನ್ಯಾಯಾಲಯಕ್ಕೆ ಬಂದಾಗ ದುಷ್ಟರ ಸಂಚು ಬಯಲಾಗುತ್ತದೆ. ದೇಪಣ್ಣ, ರಣನವರೆ ಸ್ನೇಹಿತರು, ಧರ್ಮದಾಸ್ ಮತ್ತು ರತನ್‌ಬಾಲಾಜಿ ತಂದೆ ಮಕ್ಕಳು—ಹೀಗೆ ಎರಡು ಕಡೆಯೂ ಕೊಲೆಯ ಆಪಾದನೆ ಭರಿಸಿದ ವ್ಯಕ್ತಿ ನಾಪತ್ತೆಯಾದ ವ್ಯಕ್ತಿಗಳಿಗೆ ನಿಕಟ ಸಂಬಂಧವಿದೆ.

ಪುಟ್ಟಣ್ಣನವರ ಮನಸ್ಸು ಕಲ್ಪಿಸಿದ್ದ ಆಶಯಗಳು ಹೀಗೆ ಈ ಮೂರೂ ಕಾದಂಬರಿಗಳಲ್ಲಿ ಹೆಚ್ಚು ಕಡಮೆ ಒಂದೇ ಆಗಿರುತ್ತದೆ. ಒಂದು ಮನೋಧರ್ಮಕ್ಕೆ ಕಟ್ಟುಬಿದ್ದ ಮನಸ್ಸು ತಾನು ಹರಿಯುವ ವಿಚಾರಗಳಲ್ಲೇ ಒಂದು ಮಿತಿಯನ್ನು ಏರ್ಪಡಿಸಿಕೊಳ್ಳುತ್ತದೆ. ಆ ಮಿತಿಯಲ್ಲಿಯೇ ಉದ್ದೇಶಿತವಾದ ಕಲಾತ್ಮಕ ಸಿದ್ಧಿಯನ್ನು ಪಡೆದಿರುವುದು ಪುಟ್ಟಣ್ಣನವರ ವೈಶಿಷ್ಟ್ಯವಾಗಿದೆ.

**ರಾಮಾಯಣದ ಹೋಲಿಕೆಗಳು—'ಮಾಡಿದ್ದುಣ್ಣೋ ಮಹಾರಾಯ' ದೊಡನೆ**

'ಮಾಡಿದ್ದುಣ್ಣೋ ಮಹಾರಾಯ'ದಲ್ಲಿ ರಾಮಾಯಣದ ಹಲವು ಅಂಶಗಳು ಛಟ್ಟಿಯಿಳಿದಿವೆ. "ಸಹಜವಾಗಿ ನಿರ್ಮಲವಾಗಿರುವ ವಸ್ತುವನ್ನು ದೋಷರಹಿತವಾದ್ದೆಂದು ಎಷ್ಟು ಸಾರಿ ಎಷ್ಟೆಷ್ಟು ವಿಧದಲ್ಲಿ ಬಣ್ಣಿಸಿದಾಗ್ಯೂ ಬುದ್ಧಿಯು ರಾಟೆಯು ಒಂದೇ ಗಾಡಿಯಲ್ಲಿ ಓಡಾಡುವ ಹಗ್ಗದಂತಾಗುವುದಲ್ಲದೆ ಅದಕ್ಕೆ ವಿಸ್ತಾರವಾದ ಪ್ರದೇಶದಲ್ಲಿ ಸ್ವೇಚ್ಛಾಪ್ರವೃತ್ತಿಯುಂಟಾದಂತಾಗಲಿಲ್ಲ; ಆ ಬುದ್ಧಿಗೆ ಕೂಪಕೂರ್ಮದ ಸ್ವಭಾವ ಶಾಶ್ವತವಾಗುವುದು.

ಇಂಥಾ ನಿರ್ದುಷ್ಟ ಪದಾರ್ಥಗಳ ವರ್ಣನೆಯನ್ನು ಬಿಟ್ಟು ಕೆಳಕ್ಕೆ ಇಳಿದರೆ, ಬುದ್ಧಿಯ ಜೋವು, ಬಿಟ್ಟಂತಾಗುವುದು. ಅಂಥಾ ನಿರ್ಮಲಮೂರ್ತಿಗಳಾದ ಶ್ರೀರಾಮ ಸೀತಾದೇವಿ, ಯುಧಿಷ್ಠಿರ ದ್ರೌಪದಿ, ಇವರುಗಳ ಗುಣಗಳಲ್ಲಿ ಕೆಲವು ಭಾಗವನ್ನು ಹೊಂದಿ, ಲೋಕದ ಲತಾಡಿಗೆ ಸಿಕ್ಕಿ ಕಷ್ಟಕ್ಕೆ ಗುರಿಯಾದರೂ, ತಮ್ಮ ಧೀರೋದಾತ್ತ ಗುಣಗಳನ್ನು ಬಿಡದೇ ಇರತಕ್ಕ ಪಾತ್ರಗಳನ್ನು ಮನುಷ್ಯ ಮಾತ್ರದವರಲ್ಲಿ ಆರಿಸಿಕೊಂಡೋ ಊಹಿಸಿಕೊಂಡೋ ವರ್ಣಿಸುವುದು ಮನಸ್ಸನ್ನು ಚೆನ್ನಾಗಿ ಆಕರ್ಷಣ ಮಾಡುವುದರಲ್ಲಿ ಸಂಶಯವಿಲ್ಲ. ಪುರಾಣಪ್ರಸಿದ್ಧರು ವ್ಯಾಕರಣದ ಸೂತ್ರಗಳಾಗಿದಾರೆ. ಮನುಷ್ಯ ಸಾಮಾನ್ಯರಲ್ಲಿ ಸಿಕ್ಕುವ ಧೀರರು ಉದಾಹರಣೆಗಳಾಗಿದಾರೆ" (ಮಾ. ಮ. ಪೀಠಿಕೆ 8) ಎಂಬ ಮಾತಿಗೆ ಲಕ್ಷ್ಯವಾಗಿ ಪುಟ್ಟಣ್ಣನವರು ರಾಮಾಯಣವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಕಾದಂಬರಿಯನ್ನು ಬರೆದಿರುವುದು ಖಚಿತವಾಗುತ್ತದೆ.

ಕಾದಂಬರಿಯ ಒಂದು ಮುಖ್ಯ ಪಾತ್ರದ ಹೆಸರು ಸೀತೆ ಎಂದು ಉದ್ದೇಶಪೂರ್ವಕವಾಗಿ ಬಳಕೆಯಾಗಿದೆ. ಸೀತೆಯ ಪಾತ್ರ ಪರಂಪರಾಗತವಾದ ಸೌಶೀಲ್ಯದ ಅಚ್ಚಿಗೆ ಬಿದ್ದ ಪಾತ್ರ. ಈ ಹೆಸರು ಇಟ್ಟದ್ದು ಸಾರ್ಥಕವಾಯಿತು ಎಂದು ಮುಮ್ಮಡಿಯವರ ಬಾಯಲ್ಲಿ ಆಕೆಯ ಮದುವೆಯ ಹೊತ್ತಿನಲ್ಲಿ ಹೇಳಿಸುತ್ತಾರೆ, (ಮಾ. ಮ. 79). ಸದಾಶಿವದೀಕ್ಷಿತ್ ಸಂಜೆಯ ಹೊತ್ತು ಹೇಳುವ ಪುರಾಣಗಳಲ್ಲಿ ರಾಮಾಯಣದ ಸೀತೆಯಂತಹ ಪತಿವ್ರತೆಯರ ಚರಿತ್ರೆಗಳಿಗೇ ಮಹತ್ತ್ವ ದಕ್ಕಿದೆ. ಇಂತಹ ಕಥನವಾದ ಮೇಲೆ ಒಂದು ದಿನ ಅರುಂದಮ್ಮನ ಚರಿತ್ರೆ – ಆಕೆಯ ಸರಿಯಾದ ಹೆಸರು ಅರುಂಧತಿ—ಹೆಂಗಸರ ಮಾತಿನಲ್ಲಿ ತಿಳಿಯುತ್ತದೆ. ಅರುಂಧತಿ ಎಂಬುದೂ ಒಬ್ಬ ಪತಿವ್ರತೆಯ ಹೆಸರೇ. ಇದೂ ಪ್ರಜ್ಞಾಪೂರ್ವಕವಾಗಿ ಬಳಕೆಯಾದದ್ದೇ. 'ಮಾಡಿದ್ದುಣ್ಣೋ ಮಹಾರಾಯ' ದ ಸೀತೆ ತನ್ನ ಅತ್ತೆಯ ಬೈಗಳೆಲ್ಲವನ್ನೂ ಸಹಿಸಿ ತನ್ನನ್ನು ಮೈಸೂರು ಸೂಳೆಗೆ ಹೋಲಿಸಿದಾಗ ಪ್ರತಿಯಾಗಿ ಉತ್ತರಕೊಟ್ಟಳು. ಅರುಂದಮ್ಮನಾದರೂ ತನ್ನ ಬಂಧು ಗೋಪಾಲನ ಎಲ್ಲ ಮಾತನ್ನೂ ಸಹಿಸಿದವಳು ತನ್ನನ್ನು ಸೂಳೆಗೆ ಹೋಲಿಸಿದಾಗ ಶಾಪ ಹಾಕಿದಳು. ಅದರಂತೆಯೇ ಗೋಪಾಲನ ಕಾಲುಗಳೆರಡೂ ಕುಷ್ಟರೋಗದಿಂದ ಬಿದ್ದು ಹೋಗಿ,ನಾಲಿಗೆ ಸೆಳೆದುಕೊಂಡು ನೀರೂ ನೆರಳೂ

ಇಲ್ಲದ ಕಡೆ ಪ್ರಾಣ ಬಿಡುತ್ತಾನೆ. ಇಂಥ ಘಟನೆಯ ಸಂಭವನೀಯತೆ ಏನೇ ಇರಲಿ, ಇದೆಲ್ಲ ಕಾದಂಬರಿಕಾರರ ಒಂದೇ ಪ್ರಮುಖ ಆಶಯವನ್ನು ಎತ್ತಿ ಹಿಡಿಯುತ್ತದೆ. ಸೀತೆಯ ಮೂಲಕ ಧ್ವನಿಸುವ ಸತ್ಯಕ್ಕೇ ಅರುಂದಮ್ಮನ ಪಾತ್ರವೂ ಬೆಂಬಲವನ್ನು ಕೊಡುತ್ತದೆ. ಜೊತೆಗೆ ಈಕೆ ಸಹಗಮನ ಮಾಡಿದಂತೆ ಹೇಳಲಾಗಿದೆ. ಅಮಾಸೆಯಿಂದ ಕಾಪಾಡಲ್ಪಟ್ಟ ಉಪ್ಪಲಗಿತ್ತಿಯೊಬ್ಬಳ ವೃತ್ತಾಂತವೂ ಇಂಥದ್ದೇ. ಆಕೆ ತನ್ನ ಗಂಡನನ್ನು ಬಿಟ್ಟು ಬೇರೆಯವರಿಗೆ ನಡೆದುಕೊಳ್ಳುವುದಿಲ್ಲ ಎಂಬ ತೀರ್ಮಾನವೇ—ಆಕೆ ಅಬಲೆಯಾದರೂ, ಆಕೆಯ ಗಂಡ ಎದುರು ಪಕ್ಷದವರಿಂದ ಗೆಲುವನ್ನು ಪಡೆಯಲಾರದವನಾದರೂ, ಅಮಾಸೆಯಂಥ ಹೊಸಬನ ಸಹಾಯವನ್ನು ಪಡೆಯುವುದರ ಮೂಲಕ – ಗೆಲ್ಲುತ್ತದೆ.

ಸೀತೆಯ ಮೇಲೆ ಆಕ್ರಮಣ ಮಾಡಲು ಬಂದ ಅಪ್ಪಾಜಿಯನ್ನು ಕುರಿತು ಕಾದಂಬರಿಕಾರರು "...ಆ ಸಿದ್ದನು ನವೀನ ರಾವಣನೋ ಕಲಿಯುಗದ ಕಾಲನೇಮಿಯೋ ಎನ್ನುವ ಹಾಗೆ ಕಾಣಿಸುತಾ..." ಎಂದು (ಮಾ. ಮ. 148) ಉದ್ಗರಿಸುತ್ತಾರೆ. ರಾಮಾಯಣದ ಸೀತೆಯಲ್ಲಿ ಇಲ್ಲಿನ ಸೀತೆ ಎಷ್ಟು ತಾದಾತ್ಮ್ಯ ಹೊಂದಿದ್ದಾಳೆಂದರೆ ತನ್ನ ಮೇಲೆ ಅಪ್ಪಾಜಿ ಕೈ ಮಾಡಿದಾಗ ಆಕೆ "ಸೀತಾಮ್ಮನವರನ್ನು ರಾವಣ ಕೈಯಾರ ಮುಟ್ಟಿ ಎತ್ತಿ ರಥದ ಮೇಲೆ ಕೂರಿಸಿಕೊಂಡು ಹೋದನಲ್ಲ ? ಆದಾಗ್ಯೂ ಅವಳ ಪಾತಿವ್ರತ್ಯಕ್ಕೆ ಭಂಗ ಬರಲಿಲ್ಲವಲ್ಲ ?" (ಮಾ. ಮ 150) ಎಂದು ಉದ್ಗರಿಸುತ್ತಾಳೆ. ಕಾದಂಬರಿಕಾರರ ಹಾಗೂ ಸೀತೆಯ ಈ ಮಾತುಗಳು ಅಪ್ಪಾಜಿಯನ್ನು ನೇರವಾಗಿಯೇ ರಾವಣನಿಗೆ ಹೋಲಿಸಿದೆ. ಮುಂದೆ ತಿಮ್ಮಮ್ಮ ಸೀತೆಯ ಬಗೆಗೆ ವಿಚಾರಿಸಲು ಅಪ್ಪಾಜಿಯ ಬಳಿ ಬಂದಾಗ"ಆಂಜನೇಯನು ಕಾಲನೇಮಿಯನ್ನು ಕುರಿತು ಸಂಜೀವನ ಪರ್ವತಕ್ಕೆ ದಾರಿಯನ್ನು ಕೇಳಿದ ಹಾಗಾಯಿತು." (ಮಾ. ಮ. 154) ಎಂಬ ಕಾದಂಬರಿಕಾರರ ಉದ್ಗಾರ ನಮಗೆದುರಾಗುತ್ತದೆ. ಕೃತಿಯ ಮಂಗಳಾಂತ್ಯದಲ್ಲಿ, ಮಿಥ್ಯಾಪವಾದಕ್ಕೆ ಸಿಲುಕಿದ್ದ ರಾಮಾಯಣದ ಸೀತೆ ಅಗ್ನಿಪರೀಕ್ಷೆಯಲ್ಲಿ ಗೆದ್ದು ಬಂದಂತೆ, 'ಮಾಡಿದ್ದುಣ್ಣೋ ಮಹಾರಾಯ'ದ ಸೀತೆಯೂ ಅಗ್ನಿಯಿಂದಲೇ ಎದ್ದು ಬರುತ್ತಾಳೆ.

### ವೈಯಕ್ತಿಕ ಸಂಗತಿಗಳು

ಕೃತಿಕಾರನ ವ್ಯಕ್ತಿತ್ವ ಕೃತಿಯಲ್ಲಿ ಪ್ರತಿಫಲಿಸುವುದು ಅನೂಹ್ಯವಾದ ಸಂಗತಿಯಲ್ಲ. ಈ ಪರಿಚಿತ ವಿಚಾರವನ್ನು ಪುಟ್ಟಣ್ಣನವರ ಕಾದಂಬರಿಗಳಲ್ಲೂ ಹಲವೆಡೆಗಳಲ್ಲಿ ಕಾಣಬಹುದು. ಕುತೂಹಲಕರವಾದ ವಿಷಯವೆಂದರೆ ಪುಟ್ಟಣ್ಣನವರ ಜೀವನಕ್ಕೆ ಸಂಬಂಧಿಸಿದ ವಿವರಗಳು ಇಲ್ಲಿ ಒಂದೇ ಪಾತ್ರಕ್ಕೆ ಸಂಬಂಧಿಸದೆ ಹಲವು ಕಡೆ ಕಾಣುತ್ತದೆ. ಆದರೆ ಅನುಭವಗಳು ಚೆದರಿದಂತೆ ಕಾಣದು. ಅಲ್ಲದೆ ತನ್ನನ್ನೇ ಮುಖ್ಯ ಪಾತ್ರವನ್ನಾಗಿಸಿಕೊಳ್ಳುವ ಬಾಲಿಶತನದಿಂದ ಪುಟ್ಟಣ್ಣನವರು ಬಹುದೂರ ಸರಿಯುವು

ದರಿಂದ ನಿರೂಪಿತ ಸಂಗತಿಗಳಲ್ಲಿ ಬೆರಗು ಸಂಭ್ರಮಗಳಿಗಿಂತ ತೂಕ ತಪ್ಪದ ಹಾಳತ, ಒಪ್ಪ ಕಾಣುತ್ತದೆ.

ಪುಟ್ಟಣ್ಣನವರ ವೈಯಕ್ತಿಕ ಜೀವನದಲ್ಲಿ ಮೊದಲ ದಾಂಪತ್ಯಕ್ಕೆ ಸಂಬಂಧಿಸಿದಂತೆ ಒಂದು ನೋವಿನ ಸಂಗತಿ ನಡೆಯಿತೆಂದು ಈ ಮೊದಲು ಹೇಳಿದೆ. [10] ಪುಟ್ಟಣ್ಣನವ ರಿಗೆ ತಗುಲಿದ ಈ ಪೆಟ್ಟು ಅವರನ್ನು ಕೆಳಗಿಳಿಸಲಿಲ್ಲ. ಕತ್ತಲು ಹೆಚ್ಚಾದಷ್ಟೂ ನಕ್ಷತ್ರ ಗಳು ಹೆಚ್ಚು ಮಿನುಗುತ್ತವೆ ಎಂಬ ಒಂದು ಹೇಳಿಕೆಯಿದೆ. ಈ ಅನುಭವ ಅವರ ತೀವ್ರ ತರವಾದ ಭಾವನೆಗಳಿಗೆ ಕಾವೇರಿಸಿ ಒಂದು ಪಕ್ವತೆಗೆ ತಂದಿತು. ಪುಟ್ಟಣ್ಣನವರಿಗೆ ಸ್ತ್ರೀಯ ಪಾತಿವ್ರತ್ಯ ಪ್ರಾಮಾಣಿಕತೆಯ ಒಂದು ರೂಪ. ಅವರು ನಂಬಿದ್ದ ಮೌಲ್ಯಗಳು ಖಚಿತ ಹಾಗೂ ಸಾಮಾಜಿಕವಾಗಿ ಸ್ವೀಕೃತವಾದವು. ಈ ಹಿನ್ನೆಲೆ ಯಲ್ಲಿ ಪುಟ್ಟಣ್ಣನವರಂಥ ಸೂಕ್ಷ್ಮ ಮನಸ್ಸಿನ ಜೀವಿಗೆ ಆದ ಆಘಾತ ತೀವ್ರವಾಗಿಯೇ ಇತ್ತು. ಈ ಅರಕೆಯನ್ನು ತುಂಬಿಕೊಳ್ಳಲು ಸಾಹಿತ್ಯದಲ್ಲಿ ವಿರುದ್ಧ ಮುಕ್ತಾಯದ ಒಂದು ಕೃತಿಗೆ ಶರಣುಹೋದರು. (ರಾಮಾಯಣ ಅವರಿಗೆ ಅಚ್ಚುಮೆಚ್ಚಾದದ್ದು ಬಹುಶಃ ಸ್ತ್ರೀಯ ಪಾತಿವ್ರತ್ಯಕ್ಕೆ ಅಲ್ಲಿ ದೊರಕಿರುವ ಹಿರಿಮೆಯಿಂದ,) ಪುಟ್ಟಣ್ಣನವರ ಜೀವನ ಸಾಹಿತ್ಯಗಳಲ್ಲಿ ಅಭೇದ ಕಲ್ಪನೆ ಬಂದದ್ದು ಹೀಗೆ.

ಅವರ ವೈಯಕ್ತಿಕ ಜೀವನದಲ್ಲಿ ಉಂಟಾದ ಈ ನೋವಿನ ಅನುಭವದ ಕಾಲಕ್ಕೂ "ಮಾಡಿದ್ದುಣ್ಣೋ ಮಹಾರಾಯ" ದ ರಚನೆಯ ಕಾಲಕ್ಕೂ ಇದ್ದ ಹಲವು ವರ್ಷಗಳ ಅಂತರದಿಂದ ನೋವು ರೋಷಗಳಿಂದ ಜೀವ ಮಾಗಿದ್ದೂ ಅಲ್ಲದೆ, ಬರವಣಿ ಗೆಯಲ್ಲಿ ಒಂದು ಪಕ್ವತೆ ಸಾಧಿತವಾಗಿತ್ತು. ಮೊದಲಿನಿಂದಲೂ ರೂಢಿಸಿಕೊಂಡಿದ್ದ ಮೌಲ್ಯಗಳ ಬಗೆಗಿನ ನಿಷ್ಠೆ ದಿನದಿನಕ್ಕೆ ಹೆಚ್ಚುತ್ತಾ ಹೋಗಿತ್ತು. ಒಂದು ಸಂಸ್ಕೃತಿಯ ಧೋರಣೆಯನ್ನು ವೈಯಕ್ತಿಕವಾದ ನೆಲೆಗಟ್ಟಿನಲ್ಲಿ ಅನುಭವಿಸಿ, ಕುದಿದು, ಪಾಕ ಗೊಂಡು ಕಲಾತ್ಮಕವಾಗಿ ಅದನ್ನು ಒಂದು ಸಾಹಿತ್ಯ ಕೃತಿಯಾಗಿಸಿದ ಒಂದು ಶ್ರೇಷ್ಠ ಉದಾಹರಣೆ 'ಮಾಡಿದ್ದುಣ್ಣೋ ಮಹಾರಾಯ'.

ಇನ್ನೊಂದು ಹೆಚ್ಚುಳವೆಂದರೆ ಪುಟ್ಟಣ್ಣನವರು ಎಂದೂ ಸಿನಿಕರಾಗಿರಲಿಲ್ಲ. ಈ ಅಹಿತಕರ ಘಟನೆಯ ನಂತರವೂ ಹೆಣ್ಣಿನ ಬಗೆಗೆ ಅವರಿಗೆ ಅಪಾರವಾದ ಗೌರವ ಸಹಾನುಭೂತಿಗಳಿದ್ದುವು.

ಇದಲ್ಲದೆ ಹಿಂದೆಯೇ ಹೇಳಿದಂತೆ ಕಾದಂಬರಿಯ ಹಲವು ಪಾತ್ರಗಳಲ್ಲಿ ಪುಟ್ಟಣ್ಣ ನವರ ವ್ಯಕ್ತಿತ್ವ ಪಡಿಮೂಡಿರುವುದೂ ಉಂಟು. ಜೊತೆಗೆ ಹಲವು ನೈಜಘಟನೆಗಳು ಕಾದಂಬರಿಯಲ್ಲಿ ಸ್ಥಳ ದೊರಕಿಸಿಕೊಂಡಿರುವುದೂ ಕಾಣುತ್ತದೆ. 'ಮಾಡಿದ್ದುಣ್ಣೋ ಮಹಾರಾಯ'ದ ಸದಾಶಿವ ದೀಕ್ಷಿತನ ಪಾತ್ರದಲ್ಲಿ ಪುಟ್ಟಣ್ಣನವರ ಪಾತ್ರ ಬಹುಮಟ್ಟಿಗೆ ಕಾಣುತ್ತದೆ. ಸದಾಶಿವ ದೀಕ್ಷಿತನ ರಾಜಪೂಜ್ಯತೆ, ವೈದ್ಯಜ್ಞಾನ, ಜ್ಯೋತಿಷಭಾಗದ ಜ್ಞಾನ. ಸಂಸ್ಕೃತ ಪಾಂಡಿತ್ಯ, ಮಕ್ಕಳ ವಿದ್ಯಾಭ್ಯಾಸದ ಮೇಲಿನ ವಿಚಾರಗಳು ಇತ್ಯಾದಿ ಗಳೆಲ್ಲಾ ಪುಟ್ಟಣ್ಣನವರ ರಕ್ತಗತವಾದ ಗುಣಗಳು. ಸದಾಶಿವ ದೀಕ್ಷಿತನಂತೆ ಪುಟ್ಟಣ್ಣ

ನವರೂ ಎರಡನೆಯ ಮದುವೆಯನ್ನು ಮಾಡಿಕೊಂಡರು. ಪುಟ್ಟಣ್ಣನವರ ಎರಡನೆಯ ಹೆಂಡತಿ ಗೌರಮ್ಮನವರ ತಂದೆ ಪ್ರಸಿದ್ಧ ಜೋಯಿಸರು. ಸದಾಶಿವ ದೀಕ್ಷಿತನ ಎರಡನೆಯ ಹೆಂಡತಿಯ ತಂದೆಯೂ ಪ್ರಸಿದ್ಧ ಜೋಯಿಸರು. ಸದಾಶಿವ ದೀಕ್ಷಿತನ ಮಗ ಮಹಾದೇವ ತಂದೆಯನ್ನು ಭಾವ ಎಂದು ಕರೆಯುತ್ತಿದ್ದಂತೆ, ಪುಟ್ಟಣ್ಣನವರ ಮಕ್ಕಳು ಅವರನ್ನು ಭಾವ ಎಂದೇ ಕರೆಯುತ್ತಿದ್ದರು. ಕಾದಂಬರಿ ಬರೆಯುವ ಕಾಲಕ್ಕೆ ಅವರಿಗೆ ಕಾದಂಬರಿಯ ಕೊನೆಯಲ್ಲಿ ಬರುವ ಸದಾಶಿವ ದೀಕ್ಷಿತನ ವಯಸ್ಸಾಗಿದ್ದುದು ಈ ಹೋಲಿಕೆಗಳಿಗೆ ಕಾರಣವಾಗಿಬಹುದು.

ಮಹಾದೇವನ ಬಾಲ್ಯದಲ್ಲಿ ನಡೆದ ಒಂದು ಘಟನೆ ಇಂತಿದೆ : ತಾಯಿ ಇಲ್ಲದ ತಬ್ಬಲಿ ಮಗುವಿಗೆ ಕೂಲಿಹಾಲನ್ನು ಕೊಡಿಸುತ್ತಿದ್ದರು. ಹಾಲು ಕೊಡುತ್ತಿದ್ದ ದಾದಿ ವಿಪರೀತ ಹಿಂಸೆ ಕೊಡುತ್ತಿದ್ದಳು. ಒಂದು ದಿನ ಬೆಳಗಿನಿಂದ ರಾತ್ರೆ ಹತ್ತು ಗಂಟೆಯ ವರೆಗೆ ಬರಲಿಲ್ಲ. ಮಗು ಅತ್ತು ಅತ್ತು ಸೊರಗಿತು. ರಾತ್ರೆ ಹತ್ತುಗಂಟೆಗೆ ದಾದಿ ಬಂದಾಗ ಅಜ್ಜಿ ರೋಸಿ, ಮಗುವನ್ನು ಕೊಂದಾದರೂ ಬಿಡು ಎನ್ನುತ್ತಾ ಮೇಲಿನಿಂದ ಮಗುವನ್ನೆತ್ತಿ ದಾದಿಯ ಕಾಲಮೇಲೆ ಹಾಕಿಬಿಟ್ಟಳು. ಮಗು ಮೂರ್ಛೆ ಹೋಯಿತು. ದಾದಿಯ ಶುಶ್ರೂಷೆಯಿಂದ ಎಚ್ಚೆತ್ತಿತು. ಇದು ಪುಟ್ಟಣ್ಣನವರ ಬಾಲ್ಯದಲ್ಲಿ ನಡೆದ ಘಟನೆ. ಮಹಾದೇವನ ಬಾಲ್ಯ ಅಜ್ಜಿಯ ಪೋಷಣೆಯಲ್ಲಿ ಕಳೆದಂತೆ ಪುಟ್ಟಣ್ಣನವರ ಬಾಲ್ಯವೂ ಅಜ್ಜಿಯ ಪೋಷಣೆಯಲ್ಲಿಯೇ ಕಳೆಯಿತು. ಮುಂದೆ ಮಹಾದೇವ ತನ್ನ ಹೆಂಡತಿಗೆ ಬಂದ ಅಪಾಯವನ್ನು ಗುರುತಿಸದೇ ಹೋದುದರಲ್ಲಿ ಪುಟ್ಟಣ್ಣನವರು ತಮ್ಮ ಪತ್ನಿಗೆ ಅಂಥದೇ ಸಂಚು ಕಾದಿದ್ದುದನ್ನು ತಪ್ಪಿಸಲಾಗದೇ ಹೋದ ಸೂಚನೆಯಿದೆ.

'ಮುಸುಗ ತೆಗೆಯೇ ಮಾಯಾಂಗನೆ'ಯಲ್ಲಿ ಪುಟ್ಟಣ್ಣನವರ ಸೋದರಮಾವನವರ ಉಲ್ಲೇಖವಿದೆ (ಮು. ತೆ. ಮಾ. 115)

'ಅವರಿಲ್ಲದೂಟ'ದ ಶ್ರೀಮಂತ ರಾಮಸ್ವಾಮಿ ತನ್ನ ಮಗಳನ್ನು ನಿರ್ಗತಿಕನಾದ ಗುಣಶಾಲಿಗೆ ಮದುವೆ ಮಾಡಿಕೊಡುತ್ತಾನೆ. ಅಳಿಯ ವಿದ್ಯಾವಂತ, ಗುಣವಂತ ಎಂಬುದೇ ಮುಖ್ಯವಾಯಿತು, ನಿರ್ಧನಿಕ ಎಂಬ ಅಂಶ ಮಸುಳಿಸಿತು. ಪುಟ್ಟಣ್ಣನವರು ಆಗಿನ ಕಾಲದ ತಾಲ್ಲೂಕು ಧಣಿಗಳಾದ ಅಮಲ್ದಾರರು, ಶ್ರೀಮಂತರು. ಆದರೂ ತಮ್ಮ ಹಿರಿಯ ಮಗಳನ್ನು ಅನಾಥಾಲಯದಲ್ಲಿ ಬೆಳೆದ ಹುಡುಗನಿಗೆ ಧಾರೆಯೆರೆದು ಕೊಟ್ಟರು.

'ಮಾಡಿದ್ದುಣ್ಣೋ ಮಹಾರಾಯ'ದಲ್ಲಿ ಬರುವ ಉಪ್ಪಲಿಗ ತೊರೆಯರ ಜಗಳ, ಮದುವೆಯ ಮೆರವಣಿಗೆ ಕೂಡ ನಿಜವಾದ ಘಟನೆ.[11]

ಅಮಾಸೆ ಎಂಬ ಒಬ್ಬ ಕಳ್ಳನನ್ನು ಋಜು ಮಾರ್ಗಕ್ಕೆ ತಂದ ವಿಷಯವನ್ನು ಈ ಹಿಂದೆ ಹೇಳಿದೆ.[12] ಆ ಅಮಾಸೆಯ ವೃತ್ತಾಂತ 'ಮಾಡಿದ್ದುಣ್ಣೋ ಮಹಾರಾಯ'ದ ಒಂದು ಸುಂದರವಾದ ಆಖ್ಯಾನವಾಗಿದೆ.

ವೈಯಕ್ತಿಕವಾದ ಸಂಗತಿಗಳು, ನೈಜಘಟನೆಗಳು ಇಷ್ಟೊಂದು ಕಿಕ್ಕಿರಿದಿರಲು ಹಲವು ಕಾರಣಗಳನ್ನು ಊಹಿಸಬಹುದು. ಕಲ್ಪನೆಯ ವೈಪರೀತ್ಯಕ್ಕೆ ಬೇಸರಿಸಿ ಈ ರೀತಿ ಆಗಿರಬಹುದು. ವಾಸ್ತವ ಚಿತ್ರಣದ ಬಗೆಗಿನ ಮೋಹವೂ ಕಾರಣವಿರಬಹುದು. ಸಪ್ಪೆಯಾಗಿ ಸವೆದು ಜಡ್ಡುಗಟ್ಟಿದ್ದ ಮಾರ್ಗಕಾವ್ಯಗಳಿಗೆ ಜನ ವಿಮುಖರಾಗತೊಡಗಿದ ಕಾಲದಲ್ಲೇ ಪುಟ್ಟಣ್ಣನವರು ಸುತ್ತಲ ಬದುಕಿನ ಅಪ್ಪಟ ವಿವರಗಳು, ಸೊಗಡು ಬೀರುವ ಸಂಗತಿಗಳನ್ನು ಯೋಗ್ಯವಾದ ರೀತಿಯಲ್ಲಿ ಆಕರ್ಷಕ ರೀತಿಯಲ್ಲಿ ತಂದುದು ಕಾಲಕ್ಕೆ ತಕ್ಕಂತೆ ಪ್ರತಿಸ್ಪಂದಿಸುವ ಅವರ ಶಕ್ತಿಯ ದ್ಯೋತಕ. ತಾವು ಕಂಡ, ಕೇಳಿದ, ಅನುಭವಿಸಿದ ಸಂಗತಿಗಳೆಲ್ಲವನ್ನೂ ಪುಟ್ಟಣ್ಣನವರು ಅವುಗಳ ಎಲ್ಲ ಸತ್ತ್ವ, ಸ್ವತ್ವ ಗಳೊಡನೆ ತಮ್ಮ ಕಾದಂಬರಿಗಳಲ್ಲಿ ತಂದರು. ವರದಿಯಾಗುತ್ತಿದ್ದ ಅಪಾಯವನ್ನು ತಪ್ಪಿಸಿದ್ದು ಅವರ ಸಾಹಿತ್ಯಕ ಸಿದ್ಧಿ. ಕಲ್ಪನೆ ಅನುಭವದ ಮೂಸೆಯಲ್ಲಿ ಹಾಯ್ದು ಬಂದಿತು. ಹಲವು ಬಾರಿ ಘಟನೆಗಳ ಕಾಲ ಕೂಡ ಸೂಚಿತವಾಗುತ್ತದೆ (ಈ ಕಾಲ ಕೆಲವೆಡೆ ಗೊಂದಲಕರವೂ ಆಗಿದೆ).

**ಜೀವನದೃಷ್ಟಿ — ಮೌಲ್ಯ ನಿರೂಪಣೆ**

ತಮ್ಮ ಕಾದಂಬರಿಗಳಲ್ಲಿ ಪುಟ್ಟಣ್ಣನವರು ಚಿತ್ರಿಸುವುದು ತಮ್ಮ ಸುತ್ತಲಿನ ಸಮಾಜ. ಇದು ಮೇಲು ಮೇಲಿನ ವಿವರ ವರ್ಣನೆಗಳಿಗೆ ಸೀಮಿತವಾಗದೆ ಇನ್ನೂ ಹೆಚ್ಚಿನ ವ್ಯಾಪ್ತಿಯಲ್ಲೂ ನಿಜವಾದ ಮಾತಾಗುತ್ತದೆ. ಪುಟ್ಟಣ್ಣನವರ ಧೋರಣೆ ಅವರು ಚಿತ್ರಿಸುವ ಸಮಾಜದಿಂದ ಸ್ವೀಕೃತವಾದ ಧೋರಣೆಯೂ ಹೌದು. ಈ ಧೋರಣೆಯೇ ಕಾದಂಬರಿಯ ಎಲ್ಲ ಅಂಗಗಳ ಮೇಲೂ ನಿಯಂತ್ರಣವನ್ನು ಹೊಂದಿದೆ. ಮೂಲಭೂತ ವಿಶ್ವಾಸದಿಂದ ಈ ಧೋರಣೆ ರೂಪುಗೊಂಡಿರುವುದರಿಂದ ಅದು ಸಮರ್ಥವಾದ ನಿಯಂತ್ರಣವೇ ಹೊರತು ವಾದರಕ್ಷಣೆಗಾಗಿ ಹೊರಗಿನಿಂದ ಬಳಸುವ ಅಸ್ತ್ರವಲ್ಲ. ಸಂಪ್ರದಾಯದ ಚೌಕಟ್ಟಿನಲ್ಲಿ ಬಿಡಿಸಲಾಗದ ಸಮಸ್ಯೆಗಳನ್ನು ಪುಟ್ಟಣ್ಣ ನವರು ಸ್ವೀಕರಿಸುವುದಿಲ್ಲ. ಬೇರೆ ಬೇರೆ ಜೀವನ ದೃಷ್ಟಿಗಳ ಮುಖಾಮುಖಿ, ದ್ವಂದ್ವ ಇವುಗಳನ್ನು ಪುಟ್ಟಣ್ಣನವರು ಚಿತ್ರಿಸಲು ಹೋಗುವುದಿಲ್ಲ. ಆದ್ದರಿಂದ ಅವರ ನಂಬಿಕೆಗೆ ವಿರುದ್ಧವಾಗಿ ಅವರು ರಾಜಿ ಮಾಡಿಕೊಳ್ಳುವ ಪ್ರಸಂಗ ಇಲ್ಲವೇ ಇಲ್ಲ ಎನ್ನಬಹುದು. ಅಲ್ಲದೆ ಅವರ ಮೌಲ್ಯಗಳು ಕೇವಲ ತಾತ್ತ್ವಿಕವೂ ಅಲ್ಲ. ಈ ದೃಷ್ಟಿಕೋನ ಬದುಕಿನಲ್ಲಿ ತೋರುವ ನಿಷ್ಠೆಯಿಂದ ಬೆಂಬಲಿತವಾಗಿದೆ. ಆದ್ದರಿಂದ ಈ ಮೌಲ್ಯಚಿತ್ರಣದಲ್ಲಿ ಅಸ್ಫುಟತೆ ಇಲ್ಲ. "ನಮ್ಮ ಹಿಂದಿನ ಬರಹಗಾರರಾದ, ಆದರೆ ಚಾರಿತ್ರಿಕ ದೃಷ್ಟಿ ಯಿಂದ ಈಚಿನವರಾದ ಎಂ. ಎಸ್. ಪುಟ್ಟಣ್ಣನವರಂತಹ ಬರಹಗಾರರ ಕೃತಿಗಳಲ್ಲಿ ನ್ಯಾಯಾನ್ಯಾಯಗಳ ಕಲ್ಪನೆಗೂ, ಕೇವಲ ತಾತ್ತ್ವಿಕ ಮತ್ತು ಲೌಕಿಕವಲ್ಲದ ಧರ್ಮಕ್ಕೂ ಅತಿ ನಿಕಟ ಸಂಬಂಧವಿತ್ತು. ಈ ಧರ್ಮದ ಕಲ್ಪನೆಯ ಪ್ರಭಾವದಿಂದಾಗಿ ವೈಯಕ್ತಿಕ ನ್ಯಾಯಾನ್ಯಾಯಗಳ ಕಲ್ಪನೆ ಒಂದು ಇಡೀ ಸಮಾಜವೇ ಒಪ್ಪಿಕೊಂಡ ನ್ಯಾಯಾನ್ಯಾಯ

ಗಳ ಕಲ್ಪನೆಯಿಂದ ಬೇರಾಗಿ ಇರಲಿಲ್ಲ. "[13] ಎಂದು ಎಂ. ಜಿ. ಕೃಷ್ಣಮೂರ್ತಿಯವರು ಹೇಳಿರುವುದು ಗಮನಾರ್ಹವಾಗಿದೆ.

ಸೌಶೀಲ್ಯದ ಮೇಲೆ ದೌರ್ಜನ್ಯ ಒಂದು ಪರಂಪರಾಗತವಾದ, ಸಾಹಿತ್ಯದಲ್ಲಿ ಆಕರ್ಷಣೀಯವಾದ ವಸ್ತು. ಅದು ಸ್ತ್ರೀಯ ಪಾತಿವ್ರತ್ಯವೋ, ನ್ಯಾಯವಾದ ಅಧಿಕಾರವೋ ಆಗಬಹುದು. ಸೌಶೀಲ್ಯದೊಡನೆ ಸರಳತೆ, ಅಮಾಯಕತೆ ಹಾಗೂ ಅಸಹಾಯಕತೆಗಳು ಇಲ್ಲಿ ಮಿಳಿತವಾಗಿರುತ್ತವೆ. ಕೆಡುಕನ್ನು ಗುರುತಿಸದ, ಗುರುತಿಸಿದರೂ ಗೆಲ್ಲಲಾಗದ ಅಸಮರ್ಥತೆಯ ಮೂಲ ಇದು. ಆದರೂ ಕಾದಂಬರಿಕಾರರ ಜೀವನದೃಷ್ಟಿಯಿಂದ ಒಳ್ಳೆಯದಕ್ಕೆ ಗೆಲವು, ಕೆಟ್ಟದಕ್ಕೆ ಸೋಲು. 'ಮಾಡಿದ್ದುಣ್ಣೋ ಮಹಾರಾಯ' ದಲ್ಲಿ ಸೀತೆಯ ಮಾನವೋ ಪ್ರಾಣವೋ ಭಂಗವಾಗಿದ್ದರೆ ಪುಟ್ಟಣ್ಣನವರ ದೃಷ್ಟಿ ಸಿನಿಕತನದ್ದೋ, ನಿರಾಶಾವಾದಕ್ಕೆ ಬಗ್ಗುವಂತಹುದೋ ಆಗುತ್ತಿತ್ತು, ಅಂತಹ ಸಂಭವವಂತೂ ಇತ್ತು, ಧರ್ಮಿಷ್ಠರಾದವರನ್ನು ಧರ್ಮವೇ ಕಾಪಾಡುತ್ತದೆ ಎಂಬ ತತ್ತ್ವಕ್ಕೆ ಉದಾಹರಣೆ ಆಗುತ್ತಿರಲಿಲ್ಲ. ಇಲ್ಲಿ ಧರ್ಮ ತಾನಾಗಿ ಮೂರ್ತಿವೆತ್ತಂತೆ ಒದಗಿ ಬರುವುದು ಅಪರಿಗ್ರಹಣದ ಸಾಕಾರರೂಪವಾದ ಒಬ್ಬ ವ್ಯಕ್ತಿಯಿಂದ. ಈ ಆಶಯ ಪುಟ್ಟಣ್ಣನವರ ಮೂರು ಕಾದಂಬರಿಗಳಲ್ಲೂ ಇದೆ. ಅಂತೂ ಪಾರಮಾರ್ಥಿಕತೆಯ ಗೆಲುವಿಗೆ ಮೊದಲ ಮತ. ಕಷ್ಟಕ್ಕೆ ಒದಗಿದ ಸಾತ್ತ್ವಿಕ ಪಾತ್ರಗಳಿಗೆ ಮೂರ್ತಿಮಂತ ಸಾಂಸ್ಕೃತಿಕ ಬೆಂಬಲವನ್ನು ಕಡೆಯಲ್ಲಿ ಒದಗಿಸುತ್ತಾರೆ. ಇಂಥ ಬೆಂಬಲಕ್ಕೆ ಕಾದ ಪಾತ್ರಗಳು ಬೆಂಗಾಡಿನಲ್ಲಿ ಬಳಲಿದವ ನೀರಿಗಾಗಿ ಕಾದಂತೆ ಕಾತರರಾಗಿರುತ್ತಾರೆ. ಪುರುಷಪ್ರಯತ್ನದಿಂದ ಸರ್ವಸಾಧನೆ ಆಗದು, ದೈವೀ ಅನುಗ್ರಹ ಅದಕ್ಕೆ ಆವಶ್ಯಕ ಎಂಬುದು ಇಲ್ಲಿಯ ಧೋರಣೆ.

ಪುಟ್ಟಣ್ಣನವರ ಪ್ರಕಾರ ಒಳ್ಳೆಯ ಜೀವನ ಸಾಧ್ಯವಾಗಲು ಅತ್ಯವಶ್ಯಕವಾದ ಒಂದು ಸ್ಥಿತಿ ಇದೆ.

> "Madiddunno Maharaya posits three centers of living– the Royal court at Mysore, the center of secular and moral authority based on ethical and metaphysical sanctions; the house hold of a Brahmin in a village, the center of moral authority in the community, an authority which is ultimately traceable to the ethical and metaphysical sanctions on which the authority of the king is based; and a temple outside the village, normally the center of the religious and the social life of the community, but which has now become the hide out of a robber gang led by the temple priest. Puttanna's assumption, like that of the community to which he so much belongs, is that good living is possible only when these three

centres are interconnected by a commonly accepted value scheme." [14]

—ಎಂಬ ಎಂ. ಜಿ. ಕೃಷ್ಣಮೂರ್ತಿಯವರ ಮಾತು ಗಮನಾರ್ಹವಾಗಿದೆ.

ಪುಟ್ಟಣ್ಣನವರ ಕಾದಂಬರಿಗಳ ವಿವೇಚನೆಯಿಂದ ಅವರ ಮನಸ್ಸು ಹರಿಯುವ ದಿಕ್ಕನ್ನು ಸುಸ್ಪಷ್ಟವಾಗಿ ಗುರುತಿಸಬಹುದು. ಅವರ ವೈಯಕ್ತಿಕ ಸಾಧನೆ ಹಾಗೂ ಮಿತಿಗಳನ್ನು ಕೂಡ ಗುರುತಿಸಬಹುದು. ಇಂಥ ಕಡೆ ಕೃತಿಗಳ ವಿಮರ್ಶೆ ಕೃತಿಕಾರನ ವಿಮರ್ಶೆಯೂ ಆಗುತ್ತದೆ.

**ಮುಕ್ತಾಯ**

ವಸ್ತುವಿನ ದೃಷ್ಟಿಯಲ್ಲಿ ಪುಟ್ಟಣ್ಣನವರು ನಾವೀನ್ಯ ತೋರಿದ್ದಾರೆ. ಪುರಾಣಗಳು ವಸ್ತುವಾಗುತ್ತಿದ್ದ ಸ್ಥಿತಿಯಿಂದ ಲೌಕಿಕಕ್ಕೆ ಬಂದ ಸಾಹಿತ್ಯ 'ಮಾಡಿದ್ದುಣ್ಣೋ ಮಹಾರಾಯ' ದಂತಹ ಕಾದಂಬರಿಗಳಿಂದ ಜನಸಾಮಾನ್ಯಕ್ಕೆ ಇನ್ನಷ್ಟು ಹತ್ತಿರವಾಯಿತು. ಪುಟ್ಟಣ್ಣನವರು ಒಳ್ಳೆಯದು ಎಲ್ಲಿದ್ದರೂ ಏನಿದ್ದರೂ ಬಿಡುವವರಲ್ಲ. ತಮ್ಮ ಕಾದಂಬರಿಗಳಲ್ಲಿ ಪುರಾಣದ ಸತ್ತ್ವವನ್ನು ತುಂಬಿದ್ದಾರೆ. ಪುರಾಣಗಳಲ್ಲಿ ಆಸಕ್ತಿ ಹೊಂದಿದವರಿಗೆ ಲೌಕಿಕ ವಿಷಯಗಳು ಜುಗುಪ್ಸಿತವಾಗದಂತೆ, ಜನಸಾಮಾನ್ಯರಿಗೆ ಪುರಾಣ ಎಂಬ ಬೇಸರವಾಗದಂತೆ ಸಾಮಾಜಿಕ ಸಂಗತಿಗಳ ನಡುವೆ ಪುರಾಣದ ಸತ್ತ್ವವನ್ನು ಪೀಠಸ್ಥವಾಗಿರಿಸಿದರು. ಸಿದ್ಧಸೂತ್ರಗಳು ಸಂವಹನಕ್ಕೆ ಅನುಕೂಲ ಎಂಬುದನ್ನರಿತು ಹಳೆಯ ಬೇರಿಗೆ ಹೊಸ ಚಿಗುರನ್ನು ಕೂಡಿಸಿ ಪ್ರಯೋಗಗಳನ್ನು ಯಶಸ್ವಿಯಾಗಿ ಮಾಡಿದರು. ತಮ್ಮ ಮೇಲಾದ ಎಲ್ಲ ಪ್ರಭಾವಗಳನ್ನೂ ಅರಗಿಸಿಕೊಂಡು ಕೃತಿರಚನೆ ಮಾಡಿದರು. ಲೋಕಾಚಾರದ ನಂಬಿಕೆಗಳಿಂದ ಹಿಡಿದು ಯಾವುದನ್ನೂ ಹೊರದೂಡದೆ ಅಳವಡಿಸಿಕೊಂಡರು. ಯಾವುದೇ ವಿಚಾರವನ್ನು ಪೂರ್ಣ ಚೌಕಟ್ಟಿನೊಂದಿಗೆ ಗ್ರಹಿಸುವುದರಿಂದ ಅವರ ಕಾದಂಬರಿಗಳಲ್ಲಿ ಇತಿಹಾಸದ ಎಳೆಗಳು ಕಾಣುತ್ತವೆ. ಒಂದು ಕೇಂದ್ರಪ್ರಜ್ಞೆ, ಇರುವುದರಿಂದ ಆಶಯಗಳ ಹರವು ದೊಡ್ಡದಾದರೂ, ಆಳ ಕಡಿಮೆಯಾಗುವ ಭಯವಿಲ್ಲ. ಒಂದು ಸಾಹಿತ್ಯ ಕೃತಿ ಹಾಗೂ ಸುತ್ತಲಿನ ಜೀವನಾನುಭವಗಳ ಸಂಕೀರ್ಣ ಸಂಬಂಧ ಇಂಥ ಮೊದಲ ಕಾದಂಬರಿಗಳಲ್ಲೇ ಕಂಡುಬಂದದ್ದು ಸಂತೋಷದ ಸಂಗತಿ. ಕಾದಂಬರಿಯ ಒಟ್ಟು ಶಿಲ್ಪವೇ ಇದನ್ನು ಧ್ವನಿಸುತ್ತದೆ.

ಪುಟ್ಟಣ್ಣನವರು ತಮ್ಮ ಕೃತಿಗಳಲ್ಲಿ ಮಾಡುವ ತತ್ತ್ವಪ್ರತಿಪಾದನೆಯಿಂದ ಕೃತಿಗಳ ಕಲೆಗಾರಿಕೆಗೆ ಕುಂದಿಲ್ಲ ಎಂಬುದು ಗಮನಾರ್ಹವಾದ ಮಾತಾಗಿದೆ. "The title of the novel proclaims its didactic intent, and its success challenges the facile view that the didactic intentions of an author necessarily lead to artistic failure."[15] ಎಂಬ ಎಂ. ಜಿ. ಕೃಷ್ಣಮೂರ್ತಿಯವರ ಮಾತನ್ನು ಇಲ್ಲಿ ನೆನೆಯಬಹುದು.

ಇಲ್ಲಿ ವಿವೇಚಿಸಲ್ಪಟ್ಟ ಮೂರು ಕಾದಂಬರಿಗಳ ತಂತ್ರವೂ ಇಂದಿಗೆ ಒರಟಾದದ್ದು

ಎಂಬುದು ನಿಸ್ಸಂಶಯವಾದ ಮಾತು. ಕೃತಿಗಳ ರಚನೆಯ ಕಾಲವನ್ನು ಗಮನಿಸಿದರೆ ಇದು ದೊಡ್ಡ ಕೊರೆ ಎನಿಸದು. ಅಲ್ಲದೆ ಜನಜೀವನದ ಸಹಜ ಚಿತ್ರಣ ಈ ಕೊರೆಯನ್ನು ಇನ್ನಷ್ಟು ಅಪ್ರಧಾನವಾಗಿಸುತ್ತದೆ. ಹಲವು ದಶಕಗಳು ಸಂದಿದ್ದರೂ ಈ ಕಾದಂಬರಿಗಳ ಜನಪ್ರಿಯತೆ ಮಸುಳಿಸಿಲ್ಲ. ಆಡುನುಡಿಯನ್ನು ಕಾದಂಬರಿಯಲ್ಲಿ ಸಮರ್ಥವಾಗಿ ಬಳಸಿ ಕಥನ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ಜೋಡಿಸಿದ ಕೀರ್ತಿ ಪುಟ್ಟಣ್ಣನವರಿಗೆ 'ಮಾಡಿದ್ದುಣ್ಣೋ ಮಹಾರಾಯ'ದಿಂದ ಮೊದಲು ದಕ್ಕಿತು. ಮುಂದಿನ ಎರಡು ಕಾದಂಬರಿಗಳು ಈ ಮಾತಿಗೆ ಹೆಚ್ಚಿನ ಪುರಾವೆಯನ್ನು ಒದಗಿಸಿದವು. ಇಂಥ ಪರಿಣಾಮಕಾರಿ ಸತ್ತ್ವವಿರುವುದರಿಂದಲೇ ಈ ಕಾದಂಬರಿಗಳು ಇಂದಿಗೂ ತಮ್ಮ ಕೊರತೆಗಳೊಡನೆಯೇ ಸ್ವೀಕೃತವಾಗಿವೆ. ಬಿ. ವೆಂಕಟಾಚಾರ್ಯರ ಹಾಗೂ ಗಳಗನಾಥರ ಅನುವಾದಗಳಿಂದ ಕನ್ನಡಿಗರಲ್ಲಿ ಕಾದಂಬರಿಯ ಬಗೆಗೆ ಹೊಸ ಆಸಕ್ತಿಗಳು ಚಿಗುರುತ್ತಿದ್ದ ಕಾಲವಲ್ಲಿ ಪುಟ್ಟಣ್ಣನವರ ಈ ಮೂರು ಕೃತಿಗಳು ಕನ್ನಡ ಕಾದಂಬರಿಗಳಿಗೆ ಮುಂದಿನ ದಾರಿದಿಕ್ಕುಗಳನ್ನು ತೋರಿಸಿ ಸುಭದ್ರವಾಗಿ ಅಡಿಪಾಯವನ್ನು ಹಾಕಿದವು.

## ನೀತಿಚಿಂತಾಮಣಿ

ಎಂ. ಎಸ್. ಪುಟ್ಟಣ್ಣನವರ ಕಥನ ಸಾಹಿತ್ಯದಲ್ಲಿ 'ನೀತಿಚಿಂತಾಮಣಿ' (1884) ಮತ್ತು 'ಪುಟ್ಟಣ್ಣ ಹೇಳಿದ ಕಥೆಗಳು' (ಅಚ್ಚಿನಲ್ಲಿ)—ಈ ಎರಡು ಕೃತಿಗಳು ಕಥಾ ಸಂಕಲನಗಳು. 'ಪೇಟೆಮಾತೇನಜ್ಜಿ' (1927) ಒಂದು ರಮ್ಯ ಕಥೆ.

ಮಕ್ಕಳಿಗೆ ಕಥೆ ಬಹಳ ಪ್ರಿಯವಾದುದು ಎಂಬುದು ಸಾಮಾನ್ಯವಾದ ಒಂದು ಹೇಳಿಕೆ. ಈ ಮಾತಿಗೆ ಹಿರಿಯರೂ ಹೊರತಲ್ಲ. ಯಾವುದೇ ಸಾಹಿತ್ಯದಲ್ಲೂ ಕಥನ ಕಲೆಗೆ ಜನಪ್ರಿಯತೆಯ ಕಿರೀಟ ಬೇಗನೇ ಲಭಿಸುತ್ತದೆ. ಕಥೆಗಳನ್ನು ಒಂದು ಪ್ರಕಾರವಾಗಿ ವಿವೇಚಿಸುವುದರಿಂದ ಹಲವು ಕುತೂಹಲಕರ ಅಂಶಗಳು ಹೊರಬೀಳುತ್ತವೆ. ಆಯಾ ದೇಶದ ನಾಗರಿಕತೆಯ ಹೆಜ್ಜೆಗಳನ್ನು ಗುರುತಿಸಬಹುದಲ್ಲದೆ, ಅಲ್ಲಿನ ಸಂಸ್ಕೃತಿಯ ಅಂತಃಸ್ಸತ್ತ್ವವನ್ನು ತಿಳಿಯಲು ಕೂಡ ಸಾಧ್ಯ.

ಬೋಧನೆಯ ಮಾಧ್ಯಮವಾಗಿ ಕಥೆಯ ಬಳಕೆ ಸಾಮಾನ್ಯವಾದುದು. ಉಪನಿಷತ್ತಿನ ತತ್ತ್ವಗಳನ್ನು ವಿಶದವಾಗಿ ನಿರೂಪಿಸಲು ದೃಷ್ಟಾಂತ ಕಥೆಗಳು ಬಹಳ ಜನಪ್ರಿಯವಾದುವು. ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ಕೂಡ ಇಂಥ ಹೇರಳ ಕಥೆಗಳಿವೆ. ಜೈನ ಬೌದ್ಧ ಸಾಹಿತ್ಯಗಳ ಕಥಾಸಾಮಾಗ್ರಿಯೂ ಕಡಮೆ ಇಲ್ಲ. ಯೇಸು, ರಾಮಕೃಷ್ಣ ಪರಮಹಂಸರಂತಹ ಹಲವರು ಪ್ರವಾದಿಗಳೂ ದಾರ್ಶನಿಕರೂ ತಮ್ಮ ತತ್ತ್ವ ಪ್ರಸಾರಕ್ಕಾಗಿ ಹಲವು ಬಾರಿ ಕಥಾಮಾರ್ಗಕ್ಕೇ ಶರಣುಹೋಗಿದ್ದಾರೆ. ಕನ್ನಡದ ಮೊದಲು ಉಪಲಬ್ಧ ಗ್ರಂಥ 'ವಡ್ಡಾರಾಧನೆ' ಕಥೆಗಳ ಗಣಿ. ಪಂಪ, ರನ್ನ, ಹರಿಹರ, ಕುಮಾರವ್ಯಾಸರಲ್ಲಿ ಕಥೆಗಳಿಗೆ ಕೊನೆಮಿತಿ ಎಂಬುದಿಲ್ಲ.

ಬಾಲಸಾಹಿತ್ಯದಲ್ಲಿ ರಂಜನೆ ಹಾಗೂ ವಿದ್ಯಾಭ್ಯಾಸಗಳಿಗಾಗಿ ಕಥೆಯು ಬಳಕೆ ಪರಿಚಿತವಾದ ವಿಚಾರವೇ. ಬಾಲಸಾಹಿತ್ಯ ಮಕ್ಕಳು ಓದುವ ಅಭಿರುಚಿಯನ್ನು ಹೆಚ್ಚಿಸಬೇಕು. ಅವರನ್ನು ಬಹುಶ್ರುತರನ್ನಾಗಿಸಬೇಕು. ಹೊಸ ವಿಷಯಗಳನ್ನು ಬುದ್ಧಿಗ್ರಾಹ್ಯವನ್ನಾಗಿಸಬೇಕು. ಮಕ್ಕಳ ಜನ್ಮಜಾತ ಶಕ್ತಿಗೆ ಸಂಸ್ಕಾರ ಪಟುತ್ವಗಳನ್ನು ಒದಗಿಸಿ ಮನಸ್ಸನ್ನು ಮುದಗೊಳಿಸುವಂತಹುದು ಯೋಗ್ಯ ಶಿಕ್ಷಣದಿಂದ ಮಾತ್ರ ಸಾಧ್ಯ. ಎಳೆತನದಲ್ಲಿ ಮೈಗೂಡಿದ ಗುಣಗಳು ವಜ್ರಗಾರೆಯಾಗಿ ಅಂಟಿಕೊಳ್ಳುತ್ತವೆ.

ಉಲ್ಲಾಸದ ಹೊಸ್ತಿಲಲ್ಲಿ ಕುಣಿಯುತ್ತಿರುವ ಮಗುವೊಂದು ಕಥೆಗಾಗಿ ಕಾತರಿಸಿದಾಗ ಅದನ್ನು ದೊರಕಿಸಲಾಗದಿದ್ದರೆ ಮಗುವಿಗೆ ಎಂಥ ನಿರಾಸೆ, ಹಿರಿಯರಿಗೆ ಎಂಥ ಸೋಲು ! ಮಕ್ಕಳು ಓದಬೇಕೆಂದಾಗ ಅವರಿಗೆ ವಿಪುಲವಾದ ಸಾಹಿತ್ಯರಾಶಿ ಕೈಗೆಟುಕುವಂತಿರಬೇಕು. ಈ ಕಥೆಗಳ ರೀತಿ ಸ್ವಾರಸ್ಯವಾಗಿರಬೇಕು, ನಿರಾಯಾಸಕರವಾಗಿರಬೇಕು. ಮಕ್ಕಳ ವಯೋಮಿತಿಯನ್ನು ಅನುಸರಿಸಿ ಬರೆದಿರುವ ಕೃತಿಗಳು ಅಪೇಕ್ಷಣೀಯ. ಎಂ. ಎಸ್. ಪುಟ್ಟಣ್ಣನವರ 'ನೀತಿಚಿಂತಾಮಣಿ' ಇಂಥದೊಂದು ಕೃತಿ.

ಪುರಾಣ,ಇತಿಹಾಸ,ಕಾವ್ಯ,ಶಾಸ್ತ್ರಗ್ರಂಥಗಳು ಮತ್ತು ಇತರ ಹಲವು ಮೂಲಗಳಿಂದ ಆರಿಸಿದ ನೂರ ಅರವತ್ತೈದು ಕಥೆಗಳ ಸಂಕಲನವೇ 'ನೀತಿಚಿಂತಾಮಣಿ.' ಇದೊಂದು ಅನ್ವರ್ಥನಾಮಕ ಕೃತಿ. ಇದು ಕೆಲವು ದಶಕಗಳ ಕಾಲ ನಾಡಿನ ಎಳೆಯರಿಗೆ ಪಠ್ಯವಾಗಿತ್ತು. ಮೈಸೂರು ಮಹಾರಾಣಿಯವರ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಸ್ವಭಾನು ಸಂವತ್ಸರದ ಫಾಲ್ಗುಣ ಮಾಸದಲ್ಲಿ (1884) ಈ ಕೃತಿ ಮೊದಲು ಸಿದ್ಧವಾಯಿತು. ಇದರಲ್ಲಿ ಬಾಲ್ಯ, ಯೌವನ ಮತ್ತು ಅಪರವಯಸ್ಸು ಎಂಬ ಮೂರು ಭಾಗಗಳಿವೆ. ಈ ಕೃತಿ ರಚನೆಗೆ ಪ್ರೇರಣೆ ಹಾಗೂ ಪ್ರೋತ್ಸಾಹಗಳು ಅರಮನೆಯ ಅಧಿಕಾರಿಯಾದ ಅಂಬಿಲ್ ನರಸಿಂಹಯ್ಯಂಗಾರರಿಂದ ದೊರಕಿತು.

"ವಿದ್ಯಾಭ್ಯಾಸವೆಂಬ ಗಿಡಕ್ಕೆ ನೀತಿಯೇ ಪಕ್ವವಾದ ಫಲ. ತರ್ಕ ವ್ಯಾಕರಣವೇ ಮೊದಲಾದ ಶಾಸ್ತ್ರಗಳಲ್ಲಿಯೂ, ವೇದಗಳು, ಸ್ಮೃತಿಗಳು, ಪುರಾಣಗಳು, ಮೊದಲಾದವುಗಳಲ್ಲಿಯೂ ಎಷ್ಟೇ ಪಾಂಡಿತ್ಯವಿದ್ದಾಗ್ಯೂ ನೀತಿಯಿಲ್ಲದಿದ್ದರೆ, ಈ ವಿದ್ವತ್ತಿನಿಂದ ಸ್ವಪ್ರಯೋಜನವೂ ಅಥವಾ ಪರಪ್ರಯೋಜನವೂ ಇಲ್ಲದೆ, ಸಮಯಾಂತರದಲ್ಲಿ ಇದು ಕೇಡಿಗೆ ಕಾರಣವಾಗಬಹುದು. ನೀತಿಯಿಲ್ಲದ ವಿದ್ವತ್ತಿಗಿಂತಲೂ ನೀತಿಯುಳ್ಳ ಮೌಢ್ಯ ಉತ್ತಮ. ಆದ್ದರಿಂದ ಇತರ ಒಳ್ಳೇ ಅಭ್ಯಾಸಗಳಂತೆಯೇ ನೀತಿಸಂಬಂಧವಾದ ಅಭ್ಯಾಸಗಳೂ ಬಾಲ್ಯದಿಂದಲೂ ಅನುಸರಿಸತಕ್ಕದ್ದು. ಆದಕಾರಣ ಬುದ್ಧಿ ಕೌಶಲ್ಯವೂ ವೈದುಷ್ಯವೂ ಹೆಚ್ಚುವದಕ್ಕೋಸ್ಕರ ವಿದ್ಯಾಭ್ಯಾಸಕ್ರಮದಲ್ಲಿ ಏರ್ಪಾಡಾಗಿರುವಂತೆಯೇ, ಕ್ರಮೇಣ ನೀತಿಯನ್ನು ವೃದ್ಧಿಮಾಡತಕ್ಕ ಏರ್ಪಾಡುಗಳೂ ನಮ್ಮ ಬಾಲಶಿಕ್ಷೆಯ ಕ್ರಮದಲ್ಲಿ ಸೇರಿರಬೇಕು. ಈ ಭಾಗದಲ್ಲಿ ಸಮಸ್ತಪಂಡಿತರೂ ಒಂದೇ ಅಭಿಪ್ರಾಯಪಡುತ್ತಾರೆ. ಆದರೆ ಬಾಲಕರಿಗೆ ನೀತಿಯನ್ನು ಬೋಧಿಸುವ ರೀತಿಯ ವಿಷಯದಲ್ಲಿ ಏಕಮತವಿಲ್ಲ. ಆದಾಗ್ಯೂ ವಿದ್ಯಾಭ್ಯಾಸ ಕ್ರಮದಲ್ಲಿ ಶಾಸ್ತ್ರ ಮುಂತಾದುವುಗಳನ್ನು

ವಿಧಿಯಾಗಲ್ಲದೆ ಒಂದು ಉದಾಹರಣೆ ಅಥವಾ ಲಕ್ಷ್ಯದ ಮೂಲಕ ಲಕ್ಷಣವನ್ನು ತಿಳಿಯಪಡಿಸುವುದು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಚೆನ್ನಾಗಿ ನಾಟುವ ಕಾರಣ. ಈ ಪದ್ಧತಿಯಿಂದ ಉಂಟಾಗತಕ್ಕ ಪ್ರಯೋಜನವು ವಿಧಿವಾಕ್ಯಾಗಿ ಹೇಳುವುದರಿಂದ ಉಂಟಾಗಲಾರದೆಂದು ಆಧುನಿಕರಾದ ಶಾಸ್ತ್ರಜ್ಞರು ಅಂಗೀಕರಿಸಿರುತ್ತಾರೆ," (ನೀ. ಚಿಂ. ಪೀಠಿಕೆ. ಪು. 15 ಮೊ. ಮು. 1884) ಲೇಖಕರ ಉದ್ದೇಶ ಇಲ್ಲಿ ಸ್ಪಷ್ಟವಾಗಿ ಪ್ರತಿಫಲಿತವಾಗಿದೆ.

'ದೇವರು ಸರ್ವಾಂತರ್ಯಾಮಿಯಾಗಿರುವದು', 'ತಂದೆತಾಯಿಗಳ ವಿಷಯದಲ್ಲಿ ವಿಧೇಯತೆ', 'ಒಡಹುಟ್ಟಿದವರ ಮೇಲಿನ ಪ್ರೇಮ', 'ಆರೋಗ್ಯಭಾಗ್ಯ', 'ಮಿತವಾದ ಅನ್ನಪಾನಗಳು', 'ಮೃದುಭಾಷೆ', 'ಹಿರಿಯರಲ್ಲಿ ಮರ್ಯಾದೆ', 'ಗುರುಭಕ್ತಿ', 'ಸತ್ಯ', 'ವಾಗ್ದಾನ', 'ಶಮೆ', 'ತಾಳ್ಮೆ ಅಥವಾ ಸಹನ', 'ಕ್ಷಮೆ', 'ಪ್ರಯತ್ನ ಮತ್ತು ಕಾರ್ಯಸಾಧನೆ', 'ತನ್ನ ಕೆಲಸವನ್ನು ತಾನೇ ಮಾಡಬೇಕು', 'ಕಾಲನಿಯಮವನ್ನು ಅನುಸರಿಸುವುದು', 'ಸತ್ಸಂಗ', 'ಸ್ನೇಹ', 'ಪಾತಿವ್ರತ್ಯ', 'ಗಂಡನಲ್ಲಿ ಪ್ರೀತಿ', 'ಪತಿಗೆ ವಿಧೇಯವಾಗಿರುವುದು', 'ಐಕಮತ್ಯ', 'ಮಿತವಾದ ವೆಚ್ಚ', 'ಅತಿಥಿ ಸತ್ಕಾರ', 'ಮಕ್ಕಳಲ್ಲಿ ಪ್ರೀತಿ', 'ನ್ಯಾಯವಿಮರ್ಶೆ', 'ಧರ್ಮಸೂಕ್ಷ್ಮ', ಋಣವಿಮೋಚನೆ', 'ಸ್ವಾಮಿಭಕ್ತಿ', 'ಕೃತಜ್ಞತೆ', 'ತೃಪ್ತಿ', 'ಸಮಯದಲ್ಲಿ ಧೈರ್ಯಾವಲಂಬನೆ', 'ಪರೋಪಕಾರ', 'ಪಾತ್ರವರಿತು ದಾನ', 'ಶರಣಾಗತ ರಕ್ಷಣೆ', 'ಲೋಕೋಪಕಾರ', 'ಚಿತ್ತಸ್ಥೈರ್ಯ', 'ದೇಶಾಭಿಮಾನ', 'ರಾಜಭಕ್ತಿ', 'ದೇವರಲ್ಲಿ ಭಕ್ತಿ', 'ದೇವರು 'ಆಪತ್ಕಾಲದಲ್ಲಿ ರಕ್ಷಿಸುವುದು', 'ದೇವರ ಸೌಲಭ್ಯ' ಮೊದಲಾದ ಶೀರ್ಷಿಕೆಗಳನ್ನು ಗಮನಿಸಿದರೆ ಕೃತಿಯ ಹೆಸರಿನ ಸಾರ್ಥಕತೆ ಅರಿವಾಗುತ್ತದೆ. ಪ್ರತಿಶೀರ್ಷಿಕೆಯೂ ಒಂದು ನೀತಿಯನ್ನು ಹೇಳುತ್ತದೆ. ಶೀರ್ಷಿಕೆಯ ಅಡಿಯಲ್ಲಿ ಯಾವುದಾದರೂ ಶ್ಲೋಕ, ಸೂಕ್ತಿ, ಪದ್ಯಗಳು, ಅನಂತರ ಒಂದೋ ಎರಡೋ ಮೂರೋ ಕಥೆಗಳು, ಕಥೆಗಳ ಒಡಲಲ್ಲಿ ಅಂತರ್ಗತವಾದ ನೀತಿಯನ್ನು ಪ್ರಕಟಿಸುವ ಸೊಗಸಾದ ಗಾದೆಗಳು–ಇದು ಸ್ಥೂಲವಾದ ವಿನ್ಯಾಸ. ಹೀಗೆ ಒಂದೊಂದು ನೀತಿ ಪ್ರತಿಪಾದನೆಯೂ ಒಂದೊಂದು ಗುಚ್ಛವಾಗಿ ನಿಲ್ಲುತ್ತದೆ. ಶೀರ್ಷಿಕೆಗೆ ತಕ್ಕ ಕಥೆಗಳು, ಕಥೆಗಳಿಗೆ ತಕ್ಕ ಶೀರ್ಷಿಕೆ–ಇದನ್ನು ಮೆಚ್ಚುವುದು ಸಾಮಾನ್ಯ. 'ಲೋಕಾಪವಾದಭೀತಿ' ಎಂಬ ಶೀರ್ಷಿಕೆಯಲ್ಲಿ 'ರಾಮನು ಸೀತೆಯನ್ನು ಕಾಡಿಗೆ ಕಳುಹಿಸಿದ್ದು', 'ಸ್ಯಮಂತಕೋಪಾಖ್ಯಾನ' ಎಂಬ ಕಥೆಗಳಿದ್ದರೆ, 'ಕಾಮಾಂಧತೆ' ಎಂಬ ಶೀರ್ಷಿಕೆಯಲ್ಲಿ 'ನಹುಷನ ಕಥೆ' ಹಾಗೂ 'ಶೂರ್ಪನಖಿಯ ವೃತ್ತಾಂತ' ಸೇರಿವೆ. ಮೂಲಭೂತ ಮೌಲ್ಯಗಳಿಗೆ ಇಲ್ಲಿ ದೊರಕಿರುವ ಒತ್ತು ಸುಸ್ಪಷ್ಟ. ಈ ಕೃತಿ ಮಕ್ಕಳಿಗಾಗಿ ಉದ್ದೇಶಿತವಾದುದರಿಂದ ಇದು ಉಚಿತವಾದುದೇ. ಸಂಕೀರ್ಣತೆ ಇಲ್ಲಿ ಅನಗತ್ಯ. ಮಕ್ಕಳ ಮನಸ್ಸು ಗೊಂದಲಕ್ಕೆ ಸಿಗಬಹುದಾದ ಯಾವ ಅಂಶಕ್ಕೂ ಇಲ್ಲಿ ಪ್ರವೇಶ ಇಲ್ಲ.

ಪ್ರತಿ ಶೀರ್ಷಿಕೆಯ ವಿನ್ಯಾಸದ ಚೆಲುವನ್ನು ಒಂದು ಉದಾಹರಣೆಯ ಮೂಲಕ ತಿಳಿಯಬಹುದು.

"11ನೇ ಪ್ರಕರಣ

ಅಜಾಗರೂಕತೆ

ಎಳ್ಳಷ್ಟು ತಪ್ಪಲು ಯಮನೋರು ನರಕಕ್ಕೆಳೆದೊಯ್ವರೆಚ್ಚರಿಕೆ

(ದಾಸರಪದ)

## 1. ನೃಗ ಚಕ್ರವರ್ತಿಯ ವೃತ್ತಾಂತ

ಕೃತಯುಗದಲ್ಲಿ ನೃಗಚಕ್ರವರ್ತಿಯೆಂಬ ಸೂರ್ಯವಂಶದ ಧೊರೆಯು ಬಹುಧರ್ಮ ದಿಂದ ಆಳುತ್ತಿದ್ದನು. ಈ ಅರಸು ಅನೇಕ ಯಜ್ಞಾದಿಗಳನ್ನು ಮಾಡಿಸಿ, ಅನೇಕ ಕೋಟಿ ಗೋದಾನವನ್ನು ಕೊಟ್ಟಿದ್ದನು. ಒಂದು ದಿನ ಬ್ರಹ್ಮಶರ್ಮನೆಂಬ ಒಬ್ಬ ಬ್ರಾಹ್ಮಣನು ಧೊರೆಯಿಂದ ಒಂದು ಗೋದಾನವನ್ನು ತೆಗೆದುಕ್ಕೊಂಡು ಹೋಗಿ ಆ ಹಸುವನ್ನು ತನ್ನ ಮನೆಯಲ್ಲಿ ಕಟ್ಟಿದ್ದನು. ಆ ಗೋವು ತಪ್ಪಿಸಿಕ್ಕೊಂಡು ಓಡಿ ಬಂದು, ಬಹುದಿವಸದಿಂದಲೂ ತಾನಿದ್ದ ಧೊರೇ ಮನೆಯ ದನದ ಮಂದೆಗೆ ಪುನಃ ಸೇರಿಕ್ಕೊಂಡಿತು. ಅರಸನು ಇದನ್ನು ತಿಳಿಯದೆ ಇದೇ ಗೋವನ್ನು ಮತ್ತೊಬ್ಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು. ಈ ಬ್ರಾಹ್ಮಣನು ಹಸುವನ್ನು ತನ್ನ ಮನೆ ಯಲ್ಲಿ ಕಟ್ಟಿಕೊಂಡಿರಲು, ಬ್ರಹ್ಮಶರ್ಮನು ತನ್ನ ಹಸುವನ್ನು ಹುಡುಕುತ್ತಾ ಬಂದು, ಕೊನೆಗೆ ಆ ವಿಪ್ರನ ಮನೆಯಲ್ಲಿ ಈ ಹಸುವನ್ನು ಕಂಡು, ಅದನ್ನು ಹೆಸರು ಹಿಡಿದು ಕೂಗಲು, ಆ ಹಸುವು ಇವನ ಬಳಿಗೆ ಬಂದು ನಿಂತುಕ್ಕೊಂಡಿತು. ಆಗ ಇವರಿಬ್ಬರೂ ಹಸುವು ನನ್ನದು ತನ್ನದು ಎಂದು ಗುದ್ದಾಡುತ್ತ ನೃಗಚಕ್ರವರ್ತಿಯ ಬಳಿಗೆ ಹೋದರು. ಧೊರೆಯು ತನ್ನ ಅಂತಃಪುರದಲ್ಲಿಯೇ ಇದ್ದುಕ್ಕೊಂಡು ಬಹುದಿವಸದವರಿಗೂ ಇವರ ವಿಚಾರಣೆಯನ್ನೇ ಮಾಡಲಿಲ್ಲ. ಆದಕಾರಣ ಹೀಗೆ ಅಜಾಗರೂಕನಾಗಿಯೂ ಮತ್ತ ನಾಗಿಯೂ ಇದ್ದದ್ದರಿಂದ, ಇವನನ್ನು ಆ ಬ್ರಾಹ್ಮಣರು ಹೆಂಟೇಗೊದ್ದನಾಗೆಂದು ಶಪಿಸಿಬಿಟ್ಟರು. ಹೀಗೆ ಎಷ್ಟು ಧರ್ಮಿಷ್ಠನಾದರೂ ನೃಗಚಕ್ರವರ್ತಿಯು ತನ್ನ ಅಜಾಗ ರೂಕತೆಯಿಂದ ಶಾಪಕ್ಕೆ ಗುರಿಯಾದನು.

## 2. ಮಣಿಮಂತನ ಕಥೆ

ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಧನಕ್ಕೆಲ್ಲಾ ಅಧಿಪತಿಯಾದ ಕುಬೇರನೂ ಇವನ ಸೇನಾಪತಿಯಾದ ಮಣಿಮಂತನೂ ಪರಿವಾರದೊಡನೆ ಪುಷ್ಪಕವಿಮಾನದಲ್ಲಿ ಕೂತು ಹೋಗುತ್ತಿದ್ದರು. ಆಗ ಮಣಿಮಂತನು ಅಜಾಗರೂಕತೆಯಿಂದ ಮಹಾತಪಸ್ವಿಯಾದ ಅಗಸ್ತ್ಯರ ಮೇಲೆ ಉಗುಳಿದನು. ಅಗಸ್ತ್ಯರು ಕತ್ತೆತ್ತಿ ನೋಡಿ, ಕುಬೇರನ ಜೊತೆ ಯಲ್ಲಿ ಹೋಗುತ್ತಿದ್ದ ಮಣಿಮಂತನು ಈ ಕೆಟ್ಟಕೆಲಸವನ್ನು ಮಾಡಿದನೆಂದು ತಿಳಿದು– ಎಲಾ ನೀಚನಾದ ಮಣಿಮಂತನೇ, ನೀನು ಅಜಾಗರೂಕನಾಗಿ ಲಕ್ಷವಿಲ್ಲದೆ ನನ್ನ ಮೇಲೆ ಉಗುಳಿದ ಕಾರಣ, ಮನುಷ್ಯಮಾತ್ರದವನಿಂದ ನೀನೂ ನಿನ್ನ ಸೇನೆಯೂ ನಾಶವಾಗಲಿ

ಎಂದು ಶಪಿಸಿದರು ; ಮತ್ತು ಕುಬೇರನನ್ನು ಕುರಿತು-ಎಲೈ ಕುಬೇರನೇ, ಧನಮದ ದಿಂದ ಅಹಂಕಾರ ಪಟ್ಟು ಈ ಅಚಾತುರ್ಯವನ್ನು ನಿನ್ನ ಕಡೆಯುವನು ಮಾಡುತ್ತಿದ್ದಾಗ್ಯೂ ನೀನು ನೋಡುತ್ತಾ ಸುಮ್ಮನಿದ್ದ ಕಾರಣ, ನಿನ್ನ ಪರಿವಾರವೆಲ್ಲಾ ಮನುಷ್ಯನ ಕೈಯಿಂದ ಹತವಾಗುವುದನ್ನು ನೋಡುವ ದುಃಖವು ನಿನಗೆ ಉಂಟಾಗಲಿ ಎಂದು ಶಾಪ ವನ್ನು ಕೊಟ್ಟರು. ಭೀಮನು ಅರಣ್ಯದಲ್ಲಿ ಈ ಕುಬೇರನ ಪರಿವಾರವನ್ನು ನಾಶ ಮಾಡಿದನು. ಮುನಿಯ ಶಾಪವು ನೆರವೇರಿತು. ಆದಕಾರಣ ಅಜಾಗರೂಕರಾಗಿದ್ದು ಯಾವ ಕೆಲಸವನ್ನು ಮಾಡಿದರೂ, ಮಹತ್ತರವಾದ ಕೇಡು ಸಂಭವಿಸುವುದು.

1. ಸಂತೇ ಹೊತ್ತಿಗೆ ಮೂರು ಮಳಾ ನೇಯಿದ ಹಾಗೆ,"

(ನೀ. ಚಿಂ. ಮೊ. ಮು. 38–40)

'ನೀತಿಚಿಂತಾಮಣಿ'ಯ ಕಥೆಗಳ ಗಾತ್ರ ಬೇರೆ ಬೇರೆ ರೀತಿಯದು. ಹೆಚ್ಚಿನ ಕಥೆಗಳು ಸಣ್ಣವು. ಎರಡು ಪುಟಗಳಿಗಿಂತಲೂ ಮೀರಿದ ಕಥೆಗಳು ದೊಡ್ಡವು, ಅಂತಹವು ಕೆಲವು ಮಾತ್ರ. ಒಂದು ಪುಟದಿಂದ ಐದು ಪುಟಗಳವರೆಗೆ ಕಥೆಯ ವ್ಯಾಪ್ತಿ ಇರುತ್ತದೆ.

'ನೀತಿಚಿಂತಾಮಣಿ'ಯ ಕಥೆಗಳಲ್ಲಿ ಹೆಚ್ಚು ಕಾಳಜಿ ದಕ್ಕಿರುವುದು ಮೂಲಭೂತ ಮೌಲ್ಯಗಳನ್ನು ಪ್ರತಿಪಾದಿಸಲು ಮಾತ್ರ ಎಂದು ಈ ಹಿಂದೆ ಹೇಳಿದೆ. ಸಹಜವಾಗಿ ಪುರಾಣಗಳ ಕಥೆಗಳಿಗೆ ಮನ್ನಣೆ ಹೆಚ್ಚು. ಒಳ್ಳೆಯದು ಮಾಡಿದರೆ ಒಳ್ಳೆಯದು, ಕೆಟ್ಟದ್ದು ಮಾಡಿದರೆ ಕೆಟ್ಟದ್ದು ಎಂಬುದು ಇಲ್ಲಿನ ಸೂತ್ರ. ಈ ಕರ್ಮಸಿದ್ಧಾಂತ ಪುಟ್ಟಣ್ಣನವರಿಗೆ ಬಹು ಪ್ರಿಯ. ಅವರ ಒಂದು ಕಾದಂಬರಿಯ ಹೆಸರೇ 'ಮಾಡಿ ದ್ದುಣ್ಣೋ ಮಹಾರಾಯ' ಎಂದಿರುವುದು ಗಮನಾರ್ಹ. ಬಾಳಿನ ನಿಯಮಗಳು ಬಲು ನಿಷ್ಠುರವಾದುವು. ಬೇವು ಬಿತ್ತಿ ಮಾವು ಬೆಳೆಯಲಾಗದು. ಬೆಲೆ ಕೊಡದೆ ಬಾಳು ಏನನ್ನೂ ನೀಡದು, ಪಡೆಯದು ಎಂಬ ಸತ್ಯ ಇಲ್ಲಿಯ ಬೆನ್ನೆಲುಬು. ಕೃತಿ ಯುದ್ದಕ್ಕೂ ಪುಟ್ಟಣ್ಣನವರು ಈ ಸೂತ್ರಗಳಿಗೆ ಬದ್ಧರು. ಕಥೆಗಳ ಆಯ್ಕೆ, ನಿರೂ ಪಣೆಗಳೆರಡೂ ಕೃತಿಯ ಉದ್ದೇಶಕ್ಕೆ ಅನುಗುಣವಾಗಿ ಮಾತ್ರ.

ದೇವರಲ್ಲಿ ಅನನ್ಯ ಭಕ್ತಿಯಿಟ್ಟಿದ್ದ ಪ್ರಹ್ಲಾದನಿಗೆ ಅಭಯ, ವಿರುದ್ಧವಾಗಿ ನಡೆದ ಹಿರಣ್ಯಕಶಿಪುವಿನ ಸಂಹಾರ ('ಪ್ರಹ್ಲಾದನ ಕಥೆ'), ಮೌರ್ಯರನ್ನು ನಾಶಮಾಡಿ ಗರ್ವದಿಂದ ಬೀಗಿದ ನಂದರನ್ನು ಚಂದ್ರಗುಪ್ತನು ನಾಶಮಾಡಿದ್ದು ('ನವನಂದರು ಮತ್ತು ಮೌರ್ಯರು'), ಕೃಷ್ಣನ ಬಲದಿಂದ ಹಮ್ಮು ಹತ್ತಿ ಮದ್ಯಪಾನ ಮಾಡಿ ವಿನಾಶ ವನ್ನು ಸ್ವಾಗತಿಸಿದ ಯಾದವರ ವೃತ್ತಾಂತ ('ಯಾದವರ ನಾಶ'), ಸತ್ಯಕ್ಕಾಗಿ ರಾಜ್ಯ, ಹೆಂಡತಿ, ಮಕ್ಕಳ ಮೋಹವನ್ನೂ ತೊರೆದುಕೊಂಡ ಹರಿಶ್ಚಂದ್ರನಿಗೆ ಕಡೆಯಲ್ಲಿ ಒದಗಿದ ಸಿದ್ಧಿ, ವಿಜಯ ('ಹರಿಶ್ಚಂದ್ರನ ಕಥೆ'), ಮಲತಾಯಿಯ ಮೂದಲಿಕೆಗೆ ನೊಂದು ತಪಗೈದು ದೇವರನ್ನು ಒಲಿಸಿಕೊಂಡ ಧ್ರುವನ ವಿಚಾರ ('ಧ್ರುವರಾಯನ ಕಥೆ'), ಅಂಬರೀಷನ ಮಗಳು ವೇದಾವತಿಯನ್ನು ಬಯಸಿದ ಪರ್ವತ ನಾರದರು

ಒಬ್ಬರಿಗೊಬ್ಬರು ಮೋಸಮಾಡಲು ಬಯಸಿ ಇಬ್ಬರಿಗೂ ಕಪಿಮುಖ ಆದುದು ('ಪರ್ವತ ನಾರದರ ಕಥೆ'), ಊಟ ಬಟ್ಟೆಗೂ ಇಲ್ಲದೆ, ದಾನಧರ್ಮಗಳನ್ನು ಮಾಡದೆ ಹಣ ಕೂಡಿಟ್ಟು ಕಳೆದುಕೊಂಡ ಜಿಪುಣನ ವೃತ್ತಾಂತ ('ಧರ್ಮಗುಪ್ತನ ಲೋಭಿತನ'), ತನ್ನ ಆಹಾರವನ್ನೆಲ್ಲಾ ಹಸಿದವರಿಗೆ ದಾನಮಾಡಿದ ರಂತಿದೇವನ ವೃತ್ತಾಂತ ('ರಂತಿದೇವನ ಕಥೆ'), ಪಂಕ್ತಿಭೇದ ಮಾಡಿದವನಿಗೆ ಒದಗಿದ ಸ್ಥಿತಿ ('ಶ್ವೇತರಾಯನ ಕಥೆ'), ತನ್ನ ಪದವಿಯನ್ನು ಗಣಿಸದೆ, ಗೆಳೆಯನ ಆಪ್ತ ಮನೋಭಾವವನ್ನು ಮಾತ್ರ ಲಕ್ಷಿಸಿದ ಕೃಷ್ಣನ ಸೌಲಭ್ಯ ('ಕುಚೇಲನು ಶ್ರೀಕೃಷ್ಣನ ಮನೆಗೆ ಹೋದದ್ದು'), ತನ್ನ ಪ್ರಜೆಯ ಒಬ್ಬನೇ ಮಗನನ್ನು ರಕ್ಷಿಸುವ ಸಲುವಾಗಿ ತನ್ನ ಅರ್ಧ ಮೈಯನ್ನು ಕತ್ತರಿಸಿ ಕೊಡಲು ಸಮ್ಮತಿಸಿದ ರಾಜನ ಉಪಕಾರದೃಷ್ಟಿ ('ಮಯೂರಧ್ವಜನ ಕಥೆ'), ಕಪೋತ ವನ್ನು ಕಾಪಾಡಲು ಅದರ ತೂಕದಷ್ಟು ತನ್ನ ಮಾಂಸವನ್ನೇ ಕೊಡಲೊಪ್ಪಿ ಕಡೆಗೆ ತನ್ನ ಪ್ರಾಣವನ್ನೇ ಒಪ್ಪಿಸಲು ಸಿದ್ಧನಾದ ಶಿಬಿಯ ಉಪಕಾರಪರತೆ ('ಶಿಬಿ ಚಕ್ರವರ್ತಿಯ ಕಥೆ'), ವಿನೋದಕ್ಕೆಂದೇ ಜೂಜಾಡಿ, ರಾಜ್ಯಹರಣ, ಅಭಿಮಾನಭಂಗಗಳನ್ನು ಅನು ಭವಿಸಿದ ನಳನ, ಪಾಂಡವರ ವೃತ್ತಾಂತ ('ನಳನು ಜೂಜಾಡಿ ಕೆಟ್ಟದ್ದು' ಮತ್ತು 'ಪಾಂಡವರು ಪಗಡೆಯಾಡಿದ್ದು'), ಮುಗ್ಧಭಕ್ತಿಯಿಂದ ಶಿವನನ್ನು ಮೆಚ್ಚಿಸಿದವನ ಕಥೆ ('ಬೇಡರಕಣ್ಣಪ್ಪನ ಕಥೆ'), ಬಲಿಯ ಭಕ್ತಿಗೆ ಮನಸೋತು ಅವನ ಮನೆಯ ಬಾಗಿಲನ್ನು ಕಾಯ್ದ ವಿಷ್ಣುವಿನ ವೃತ್ತಾಂತ ('ವಿಷ್ಣು ಮತ್ತು ಬಲಿ'), ವಿದುರನ ಮನೆಯ ತೊಟ್ಟು ಹಾಲಿನಿಂದ ತೃಪ್ತನಾದ ಕೃಷ್ಣನ ಸದಾಶಯ ('ಕೃಷ್ಣ ಮತ್ತು ವಿದುರ') ಇವುಗಳ ಆಯ್ಕೆಯಲ್ಲಿ ಲೇಖಕರ ಆಶಯ ಸ್ಪಷ್ಟವಾಗಿ ಪ್ರತಿಫಲಿಸಿದೆ.

ಯಾವ ವಿಷಯದ ಪ್ರತಿಪಾದನೆಯನ್ನು ಮಾಡ-ವಾಗಲೂ ಪುಟ್ಟಣ್ಣನವರು ಸಾಧ್ಯವಿದ್ದಷ್ಟು ಕಡೆಯಲ್ಲಿ ಎರಡು ರೀತಿಗಳಿಂದ ಆ ಕಾರ್ಯವನ್ನು ನೆರವೇರಿಸುತ್ತಾರೆ. ಇತ್ಯಾತ್ಮಕ ರೀತಿ ಹಾಗೂ ನೇತ್ಯಾತ್ಮಕ ರೀತಿಗಳೆರಡೂ ಅವರಲ್ಲಿ ಕಾಣುತ್ತವೆ. ಸೀತೆ, ಲೋಪಾಮುದ್ರೆ, ಅನಸೂಯೆ, ಸಾವಿತ್ರಿ, ಶಾಂಡಿಲಿ ಮತ್ತು ಸುಮನರ ಕಥೆಗಳು ಪತಿವ್ರತೆಯರ ನೇರ ಪರಿಚಯವನ್ನು ಮಾಡಿಕೊಡುತ್ತವೆ. 'ಚಂಡಿಯ ಕಥೆ' ತದ್ವಿರುದ್ಧ ಸ್ಥಿತಿಯನ್ನು ತಿಳಿಸುತ್ತದೆ. 'ರಾಮಲಕ್ಷ್ಮಣರ ವೃತ್ತಾಂತ,' 'ರಾಜ ಒಡೆಯರು ತಮ್ಮ ನನ್ನು ಕಾಪಾಡಿದ್ದು' ಒಡಹುಟ್ಟಿದವರ ಪ್ರೇಮದ ಸುಂದರ ಉದಾಹರಣೆಗಳಾದರೆ, 'ನವನಂದರು ಮತ್ತು ಮೌರ್ಯರು' ಅದೇ ಭಾವದ ಕಠೋರಮುಖದ ಪ್ರತೀಕ. ಪ್ರತಿ ವಿಷಯದ ಎರಡೂ ಮಗ್ಗುಲುಗಳನ್ನು ಪುಟ್ಟಣ್ಣನವರು ಬಿಡಿಸುತ್ತಾರೆ.

ಇಂಥ ಬಿಗಿಯಾದ ನಡೆಯಲ್ಲೂ ಪುಟ್ಟಣ್ಣನವರ ಪೆಡಸಲ್ಲದ ಮನೋಧರ್ಮ ದಿಂದ ರೂಢಿಯ ಕಥೆಗಳಿಂದ ಆರಿಸಿರುವಂಥವು ಅವರ ಲವಲವಿಕೆಗೂ ಹಾಸ್ಯ ದೃಷ್ಟಿಗೂ ದೃಷ್ಟಾಂತಗಳಾಗಿವೆ.

ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಮೈಸೂರಿನ ನಂಜೇಲಿಂಗಭಟ್ಟನೆಂಬಾತ ಒಮ್ಮೆ ತನ್ನ ಮಾವನ ಮಗನ ಉಪ

ನಯನದ ಔತಣಕ್ಕೆ ಹೋದನು. ಈತನ ಮಾವನ ಮನೆ ಚಿಕ್ಕದಾಗಿತ್ತು. ಅಳಿಯನಿದ್ದ ಕೊಟಡಿಯಲ್ಲಿಯೇ ಬಾಗಿನಕ್ಕಾಗಿ ಚಕ್ಕುಲಿ, ಉಂಡೆಗಳು ಮುಂತಾದ ತಿಂಡಿಗಳನ್ನಿರಿಸಿದ್ದರು. ಅಳಿಯನು ಮಲಗುವುದಕ್ಕೋಸ್ಕರ ಆ ಚಿಕ್ಕ ಮನೆಗೆ ಹೋದನು. ತಿಂಡಿ ಎಂದರೆ ಬಹು ಆಸೆ ಪಡುತ್ತಿದ್ದ ಈ ನಂಜೇಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನೂ ಹಣ್ಣುಗಳನ್ನೂ ತಿಂದನು. ಮಧ್ಯೆ ಮಧ್ಯೆ ದೊಡ್ಡ ತಂಬಿಗೆಯಿಂದ ನೀರನ್ನು ಕುಡಿದನು. ಮೊದಲೇ ಮೂರುಬಾರಿ ಉಪಚಾರದ ಊಟವಾಗಿತ್ತು. ಅಜೀರ್ಣದಿಂದ ಸಂಕಟ ಪ್ರಾರಂಭವಾಯಿತು. ಬೆಳಗಾದರೂ ಅಳಿಯ ಏಳದುದನ್ನು ಕಂಡು ಬಾಗಿಲು ತೆಗೆದು ಒಳಬಂದ ಮಾವನ ಮನೆಯವರು ಹಲ್ಲುಗಿಟ್ಟುಗಿರಿದು ಜ್ಞಾನತಪ್ಪಿ ಬಿದ್ದಿದ್ದ ಅಳಿಯನನ್ನು ಕಂಡರು. ತಿಂಡಿಪೋತನಾದ ಅಳಿಯ ಎಲ್ಲರ ಹಾಸ್ಯಕ್ಕೊ ಗುರಿಯಾದನು. 'ಬಿರಿಯ ಉಂಡವನಿಗೆ ಭಿಕ್ಷ ಏತಕ್ಕೆ ?' 'ಬರಗೆಟ್ಟ ಮುತ್ತೈದೆಗೆ ಚೌಲಪಂಕ್ತಿ ಊಟವೇ ?' 'ಒಪ್ಪತ್ತುಂಡವ ಯೋಗಿ, ಎರಡ್ಹೊತ್ತುಂಡವ ಭೋಗಿ, ಮೂರ್ಹೊತ್ತುಂಡವ ರೋಗಿ, ನಾಲ್ಕು ಹೊತ್ತುಂಡವನನ್ನು ಹೊತ್ತುಕೊಂಡು ಹೋಗಿ' ಮತ್ತು 'ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಸೊಗಸಾದ ಗಾದೆಗಳನ್ನು ಪುಟ್ಟಣ್ಣನವರು ಕಥೆಯ ಕೊನೆಗೆ ಕೊಟ್ಟಿದ್ದಾರೆ. ('ತಿಂಡಿಪೋತನಾದ ಬ್ರಾಹ್ಮಣ')

ಒಂದು ಕಾಡಿನಲ್ಲಿ ನವಿಲುಗಳ ನರ್ತನವನ್ನು ನೋಡಿ ಕೆಂಬೂತವೊಂದು ತನ್ನ ಗರಿಗಳನ್ನು ಕಿತ್ತುಹಾಕಿ, ಕೆಳಗೆ ಉದುರಿದ್ದ ನವಿಲುಗರಿಗಳನ್ನು ತನ್ನ ಮೈಯಿಗೆ ಸಿಕ್ಕಿಸಿಕೊಂಡು ನವಿಲುಗಳ ಗುಂಪಿಗೆ ಹೋಯಿತು. ನವಿಲುಗಳು ಇದರ ನಿಜವನ್ನು ಕಂಡು ಹಿಡಿದು ಇದನ್ನು ಓಡಿಸಿದವು. ಆಗ ಆ ಕೆಂಬೂತವು ತನ್ನ ಹಿಂಡಿಗೇ ಹಿಂದಿರುಗಿ ಹೋಯಿತು. ಇತರ ಕೆಂಬೂತಗಳು ತನ್ನ ಹಿಂಡನ್ನು ಅಲಕ್ಷ್ಯವಾಗಿ ಕಂಡದ್ದರಿಂದ ತಮ್ಮ ಗುಂಪಿಗೆ ಸೇರಿಸಬಾರದೆಂದು ಅದನ್ನು ಓಡಿಸಿಬಿಟ್ಟವು. ಕೆಂಬೂತಕ್ಕೆ ಎಲ್ಲೂ ಸ್ಥಳವಿಲ್ಲದೆ ಹೋಯಿತು. ಎಂದಿಗೂ ಡಂಭವನ್ನು ಮಾಡಬಾರದು. ಅರ್ಥವಿಲ್ಲದೆ ಅನುಕರಿಸಬಾರದು ಎಂಬುದನ್ನು 'ಉತ್ತರನ ಪಂಥಾ ಒಲೆಯ ಮುಂದೆ' 'ಅಂಬಲೀ ಕುಡಿಯುವವನಿಗೆ ಮೀಶೇ ಹಿಡಿಯುವವನೊಬ್ಬ', 'ಅಲ್ಪನಿಗೆ ಐಶ್ವರ್ಯ ಬಂದರೆ, ಅರ್ಧರಾತ್ರಿಯಲ್ಲಿ ಕೊಡೇ ಹಿಡಿಸಿಕೊಂಡ', 'ಧೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ ?', 'ಹುಲಿಯ ಬಣ್ಣಕ್ಕೆ ನರಿ ಮೈ ಸುಟ್ಟುಕ್ಕೊಂಡ ಹಾಗೆ', ಮುಂತಾದ ಗಾದೆಗಳ ಮೂಲಕ ಪುಟ್ಟಣ್ಣನವರು ಮನಗಾಣಿಸುತ್ತಾರೆ. ('ನವಿಲು ಮತ್ತು ಕೆಂಬೂತ')

ಒಂದು ಊರಿನಲ್ಲಿ ಒಬ್ಬ ಕಪಟ ಸನ್ಯಾಸಿ ಇದ್ದನು. ಕೂಡಿಟ್ಟ ಹಣವನ್ನು ತಾನು ಹೊದೆದಿದ್ದ ಬೊಂತೆಯಲ್ಲಿ ಅಡಗಿಸಿದ್ದನು. ಆಷಾಢಭೂತಿ ಎಂಬ ಮೋಸಗಾರನಿಗೆ ಈ ಗುಟ್ಟು ಗೊತ್ತಿತ್ತು. ಆ ದುಡ್ಡನ್ನು ಅಪಹರಿಸಲು ಅವನು ಕಾದಿದ್ದನು.

ಏನೂ ತಿಳಿಯದವನಂತೆ ಸನ್ಯಾಸಿಯ ಬಳಿ ಬಂದು ಶಿಷ್ಯನಾಗಿ ಸೇರಿಕೊಂಡನು. ಒಂದು ದಿನ ಇಬ್ಬರೂ ಒಬ್ಬ ಗೃಹಸ್ಥನ ಮನೆಯಲ್ಲಿ ರಾತ್ರಿ ತಂಗಿ ಬೆಳಿಗ್ಗೆ ಎದ್ದು ಮುಂದೆ ಹೊರಟರು. ದಾರಿಯಲ್ಲಿ ಆಷಾಢಭೂತಿಯು ಆ ಗೃಹಸ್ಥನ ಮನೆಯ ಒಂದು ಹುಲ್ಲು ಕಡ್ಡಿ ತನ್ನ ಬಟ್ಟೆಗೆ ತಗುಲಿಕೊಂಡಿದೆಯೆಂದೂ ಅದನ್ನು ಹಿಂದಿರುಗಿಸುವೆನೆಂದೂ ಹೇಳಿ ಹೊರಟು ಒಂದೆಡೆ ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದು ಹಿಂದಿರುಗಿದನು. ಕಪಟ ಸನ್ಯಾಸಿಗೆ ಆಷಾಢಭೂತಿಯಲ್ಲಿ ನಂಬಿಕೆ ಹುಟ್ಟಿತು. ಈ ಕಪಟ ಸನ್ಯಾಸಿ ತಾನು ಬಹಿರ್ದೆಶೆಗೆ ಹೋಗುವಾಗ ಆಷಾಢಭೂತಿಯ ಬಳಿ ತನ್ನ ಹಣವಿದ್ದ ಬೊಂತೆಯನ್ನು ಇರಿಸಿ, ಮರೆಗೆ ಹೋದನು. ಇದಕ್ಕೇ ಕಾದಿದ್ದ ಆಷಾಢಭೂತಿಯು ಬೊಂತೆಯ ಸಮೇತ ಓಡಿಹೋದನು. ಹಿಂದಿರುಗಿ ಬಂದ ಗುರುವಿಗೆ ಶಿಷ್ಯನೂ ಕಾಣಲಿಲ್ಲ, ಬೊಂತೆಯೂ ಕಾಣಲಿಲ್ಲ. ತನ್ನ ಕಾಪಟ್ಯಕ್ಕೆ ತಕ್ಕ ಶಿಕ್ಷೆ ಆಯಿತೆಂದು ರೋದಿಸುತ್ತಾ ಆ ಸನ್ಯಾಸಿ ಮುಂದೆ ತೆರಳಿದನು. 'ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಶರಣಾರ್ಥಿ', 'ಗೋಮುಖ ವ್ಯಾಘ್ರದ ಹಾಗೆ' ಎಂಬ ಗಾದೆಗಳು ಕಥೆಯನ್ನು ಕೊನೆಗಾಣಿಸುತ್ತವೆ. ('ಆಷಾಢಭೂತಿಯ ಕಥೆ')

ಈ ಮೂರೂ ಕಥೆಗಳಲ್ಲಿ ಪುಟ್ಟಣ್ಣನವರ ಶೈಲಿ ಯಾವದೇ ಒತ್ತಡ ತಿಣುಕು ಗಳಿಲ್ಲದೆ ತಿಳಿಯಾಗಿ ಪ್ರವಹಿಸುತ್ತದೆ. ರೂಢಿಯ ಕಥೆಗಳೆಲ್ಲ ಹೆಚ್ಚಿನಮಟ್ಟಿಗೆ ಇದೇ ರೀತಿ ಜೀವಂತಿಕೆಯನ್ನು ಪ್ರದರ್ಶಿಸುತ್ತವೆ. ಈ ಎಲ್ಲ ಕಥೆಗಳಲ್ಲೂ ಮಾನವ ಸ್ವಭಾವದ ಹೊಳಹುಗಳು ಕಾಣುತ್ತವೆ. ಆದ್ದರಿಂದಲೇ ಅವು ಚಿರಪರಿಚಿತವಾಗಿ ಆತ್ಮೀಯವಾಗಿ ಕಾಣುತ್ತವೆ. ದಶಕಗಳ ಮೊದಲು ಪುಟ್ಟಣ್ಣನವರು ಸಂಕಲಿಸಿದ ಈ ಕಥೆಗಳು ಇಂದಿಗೂ ಜನಪ್ರಿಯವಾಗಿರುವುದರ ಗುಟ್ಟೇ ಇದು.

**'ನೀತಿ ಚಿಂತಾಮಣಿ'ಯ ಸಾಧನೆ, ವೈಶಿಷ್ಟ್ಯಗಳು**

ಪುಟ್ಟಣ್ಣನವರಿಗೆ 'ನೀತಿ ಚಿಂತಾಮಣಿ'ಯ ರಚನೆ ಸಾಮಾನ್ಯವಾದ, ಹತ್ತರಲ್ಲಿ ಹನ್ನೊಂದು ಎಂಬಂತಹ ರಚನೆಯಾಗಿರಲಿಲ್ಲ. ತಾವು ಒಪ್ಪಿದ, ಮೆಚ್ಚಿದ ಸತ್ಯವನ್ನು ಮುಂದಿನ ತಲೆಮಾರಿಗೆ ಹಾಯಿಸುವ ಪವಿತ್ರಕಾರ್ಯವಾಗಿತ್ತು. ಪ್ರವರ್ಧಮಾನಕ್ಕೆ ಬರುತ್ತಿರುವ ಎಳೆಯರಿಗೆ ಅನುಕೂಲಪಥವನ್ನು ನಿರ್ಮಿಸಿದ ಶಿಲ್ಪಿಯ ಧನ್ಯತೆ ಅವರದಾಗಿತ್ತು.

'ನೀತಿಚಿಂತಾಮಣಿ' ಯಲ್ಲಿ ಪುರಾಣದ, ಚರಿತ್ರೆಯ, ಕಾವ್ಯದ ಹಾಗೂ ರೂಢಿಯ ಕಥೆಗಳಿವೆ. ಆದರೆ ಪುಟ್ಟಣ್ಣನವರೇ ರಚಿಸಿರುವ ಕಥೆಗಳಿಲ್ಲ; ಇದು ಒಂದು ಪ್ರಮುಖ ವಿಚಾರವನ್ನು ಸೂಚಿಸುತ್ತದೆ. ಪುಟ್ಟಣ್ಣನವರಿಗೆ ಆಸಕ್ತಿ ಇದ್ದುದು—ಇಲ್ಲಿ—ಸೃಜನಾತ್ಮಕ ಸಾಹಿತ್ಯವಲ್ಲ. ಅವರ ಒಲವೆಲ್ಲ ನೀತಿಬೋಧೆ, ಜನಾಂಗದ ಶಿಕ್ಷಣ, ಸಮಾಜ ಸಂಸ್ಕರಣಗಳ ಕಡೆಗೆ. ಅದಕ್ಕಾಗಿ ಅವರು ಸಿದ್ಧವಿರುವ ಸಾಮಾಗ್ರಿಗಳನ್ನು ಬಳಸಿಕೊಂಡರು. ಸಾಂಸ್ಕೃತಿಕ ವಿಚಾರಗಳಿಗೆ ವ್ಯಕ್ತರೂಪವನ್ನು ಸರಳವಾಗಿ ಒದಗಿಸಿ

ದರು. ಕಲ್ಪನೆಗೆ ಕಿಂಚಿತ್ತೂ ಶ್ರಮಕೊಡದೆ ಸುತ್ತಮುತ್ತಲೂ ಪ್ರಚಲಿತವಾಗಿದ್ದ, ರೂಢಿಯಿಂದ ಜಾರಿಹೋಗುತ್ತಿದ್ದ ಹಳೆಯ ಕಥೆಗಳನ್ನು ಬಳಸಿಕೊಂಡರು. ಹೀಗೆ ಒದಗಿಬಂದ ಕಥಾ ಸಾಮಗ್ರಿ ಅಲ್ಪವಾದ್ದೇನೂ ಆಗಿರಲಿಲ್ಲ.

'ನೀತಿಚಿಂತಾಮಣಿ'ಯಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ, ಅದು ಯಾವ ಒಂದು ಕೃತಿಯ ಮೇಲೆಯೂ ಆಧಾರಿತವಾದುದಲ್ಲ. ಹಲವು ಮೂಲ ಗಳಿಂದ ಆಯ್ದು ಪೋಣಿಸಿದ ಕಥಾಸಂಕಲನ ಅದು.

ಕಥೆಯೊಳಗೆ ಕಥೆ ಇಲ್ಲದಿರುವುದು 'ನೀತಿಚಿಂತಾಮಣಿ' ಯ ಒಂದು ಹೆಗ್ಗಳಿಕೆ. ಇದರಿಂದ ಅನಿವಾರ್ಯವಾದ ದೀರ್ಘತೆ ತಾನಾಗಿ ಮಾಯವಾಯಿತು. ಅದರಿಂದಾದ ಪರಿಣಾಮ ಎಂದರೆ ಸಂಕ್ಷಿಪ್ತತೆ ಹಾಗೂ ಅಚ್ಚರಿಯಾಗುವಷ್ಟು ಸರಳತೆ. ಅಲ್ಲದೆ ಇರುವ ಕಥೆಗಳೂ ಚಿಕ್ಕವು. 'ಪಂಚತಂತ್ರ', 'ಹಿತೋಪದೇಶ'ಗಳ ಕಥೆಗಳು ಇಲ್ಲಿದ್ದರೂ 'ಕಥೆಯೊಳಗೆ ಕಥೆ' ಎಂಬ ತಂತ್ರ ಇಲ್ಲಿಲ್ಲ.

ಇದರ ಜೊತೆಗೆ ಪುಟ್ಟಣ್ಣನವರು ಹಲವು ಮಿತಿಗಳನ್ನು ತಾವಾಗಿ ಹಾಕಿಕೊಂಡರು. ಅದರಲ್ಲೇ ಅದ್ಭುತ ಸಿದ್ಧಿಯನ್ನು ಪಡೆದರು. ನೀತಿಗೇ ಪ್ರಾಶಸ್ತ್ಯ ಕೊಟ್ಟಾಗ ಕಥೆಯ ಸೀಮೆ ಚಿಕ್ಕದಾಯಿತು. ಚಮತ್ಕಾರ, ತುಂಟತನಗಳ ಪ್ರವೇಶಕ್ಕೆ ಅಡ್ಡಿಯಾಯಿತು. ಆದರೆ ಘನತೆ, ತೂಕಗಳು ಕೂಡಿಕೊಂಡವು.

ಕಲ್ಪನೆಯ ಅಂಶ ತೆಗೆದುಹಾಕಿದ್ದರಿಂದ ರಂಜನೆಯ ಉದ್ದೇಶ ಕರಗಿ ಕಥೆಗಳ ಉದ್ದೇಶ ಸ್ಪಷ್ಟವಾಗಿ ನೀತಿಯತ್ತ ಮುಖಮಾಡಿತು. ಪುಟ್ಟಣ್ಣನವರು ಎಂತಹ ಕಥೆಯನ್ನೂ ನೀತಿಬೋಧೆಗಾಗಿ ಮಾತ್ರ ಎಂಬಂತೆ ಹೇಳಬಲ್ಲರು. ಕಿನ್ನರಕಥೆಗಳ ಆಕರ್ಷಣೆಯನ್ನೂ ಪೂರ್ಣವಾಗಿ ತೊಡೆದುಹಾಕಿದವರು ಅವರು.

ನೀತಿಗೆ ದೊರೆತ ಪ್ರಾಶಸ್ತ್ಯ, ಹೊಸ ಕಥೆಗಳು ಇಲ್ಲದುದು ಇವೆರಡು ಅಂಶ ಗಳಿಂದ ಕೃತಿಯ ಕಥಾಕ್ಷೇತ್ರ ಮಿತಗೊಂಡಿತು. ಆದರೆ ಕಥನಕಾರರ ಶ್ರಮಕ್ಕೆ ಒಂದು ಒಟ್ಟಂದ, ಅಚ್ಚುಕಟ್ಟು ಉಂಟಾಯಿತು. ಚಿಕ್ಕಗಾತ್ರದ ನೇರನಿರೂಪಣೆಯ ಕಥೆಗಳು, ಗೊಂದಲವಿಲ್ಲದ ಮನಸ್ಸಿನ ಬರವಣಿಗೆ ನೀತಿಪರವಾದರೂ ಜಿಗುಟಲ್ಲದ ಪುಟ್ಟಣ್ಣನವರ ಮನೋಧರ್ಮ ಹಾಗೂ ಶೀರ್ಷಿಕೆ, ಪ್ರಾಚೀನ ಪದ್ಯಮಾಲೆ, ಸೂಕ್ತಿ, ಶ್ಲೋಕ ಗಾದೆಗಳು ಈ ಎಲ್ಲ ಅಂಶಗಳೂ ಕಥೆಯೊಂದಿಗೆ ಏಕಮುಖವಾಗಿ ದುಡಿಯುವುದರಿಂದ ಸಾಧಿತವಾದ ರಾಸಾಯನಿಕ ರಚನೆ — ಈ ಅಂಶಗಳು 'ನೀತಿಚಿಂತಾಮಣಿ' ಯ ಹೆಗ್ಗಳಿಕೆಗೆ ಕಾರಣವಾದುವು.

ಪುಟ್ಟಣ್ಣನವರ ಜೀವನದರ್ಶನ ಇಲ್ಲಿ ಸ್ಪಷ್ಟವಾಗಿ ಪ್ರಕಟವಾಗುತ್ತದೆ. ಪ್ರಾಮಾ ಣಿಕತೆಯೇ ಅದರ ಸ್ಥಾಯಿ. ನೈಷ್ಠುರ್ಯ, ಸಾನುಕಂಪ, ದೃಢನಿಶ್ಚಯ ಹಾಗೂ ನೈರ್ಮಲ್ಯಗಳು ಇಲ್ಲಿನ ಸಂಚಾರಿಗಳು. ಮುಂದೆ ಅವರ ಕಾದಂಬರಿಗಳಲ್ಲಿ ಹಾಗೂ ಜೀವನಚರಿತ್ರೆಗಳಲ್ಲಿ ಈ ಅಂಶಗಳು ಸ್ಪಷ್ಟಗೊಂಡವು. 'ನೀತಿಚಿಂತಾಮಣಿ' ಯಲ್ಲಿ ಕಂಡ ಈ ವಿಚಾರಗಳ ಮೊಳಕೆಗಳೇ ಮುಂದೆ ಚಿಗುರಿ, ಹೂಬಿಟ್ಟು ಫಲಿತಗೊಂಡವು.

ಒಂದು ರೀತಿಯಲ್ಲಿ ಇವು ಪುಟ್ಟಣ್ಣನವರ ಮನೋಧರ್ಮದ ದಾಖಲೆಗಳು. ನಾಡಿನ ಕಾವ್ಯ ಇತಿಹಾಸಗಳಲ್ಲಿನ ಪುಟ್ಟಣ್ಣನವರ ತಲಸ್ಪರ್ಶಿ ಜ್ಞಾನಕ್ಕೂ ಇವು ಉದಾಹರಣೆಗಳು.

'ನೀತಿಚಿಂತಾಮಣಿ' ಯನ್ನು ಬರೆದ ಉದ್ದೇಶ ಪಠ್ಯಕ್ಕಾಗಿ ಎಂದು ಈ ಹಿಂದೆ ಹೇಳಿದೆ. ಈ ಕೃತಿಯನ್ನು ಬರೆಯಲು ತೊಡಗಿದಾಗಲೇ ಪುಟ್ಟಣ್ಣನವರಿಗೆ ಒಂದು ಸ್ಪಷ್ಟ ಉದ್ದೇಶ, ಖಚಿತ ತಿಳುವಳಿಕೆ ಇತ್ತು. ನೀತಿ ಮತ್ತು ಪಾಠ, ಎರಡೂ ಅನಾಕರ್ಷಕ. ಕಥಾರೂಪದ ಆಕರ್ಷಣೆಯನ್ನು ಅದಕ್ಕೆ ಕೂಡಿಸಿದರು. ಕಥೆ ಎಂದರೆ ಪ್ರತಿ ಮಗುವಿನ ಕಣ್ಣೂ ಅರಳುತ್ತದೆ, ಕುತೂಹಲ ಕೊನೆಯಿಲ್ಲದೆ ಕೊನರುತ್ತದೆ. ಈ ಕಥನ ಕುತೂಹಲವನ್ನೇ ಪುಟ್ಟಣ್ಣನವರು ಬಾಲ ಶಿಕ್ಷಣದಲ್ಲಿ ಒಂದು ಖಾತರಿಯಾದ ಅಸ್ತ್ರವನ್ನಾಗಿ ಬಳಸಿಕೊಂಡರು. ಇದೊಂದು ಪುರಾಣ ಎಂಬ ಬೇಸರವುದಯಿಸದಂತೆ ಕಥೆ ಹೇಳಿದರು. ಇಂಥ ಹೊತ್ತಿನಲ್ಲಿ ಏಳುಮಲ್ಲಿಗೆ ತೂಕದ ರಾಜಕುಮಾರಿ, ಕೀಲು ಕುದುರೆ ರಾಜಕುಮಾರ, ಗಿಣಿಮರಿಯಲ್ಲಿ ಜೀವ ಬಚ್ಚಿಟ್ಟ ರಾಕ್ಷಸ ಮುಂತಾದ ಕಥೆಗಳನ್ನು ತ್ಯಜಿಸಿದ್ದು ಪುಟ್ಟಣ್ಣನವರ ಮನೋಧರ್ಮಕ್ಕೆ ಅನಿವಾರ್ಯವಾದ ಪ್ರಕ್ರಿಯೆ. ರಂಜನೆಯಿಂದ ಮನಸ್ಸು ಸೋಲುತ್ತದೆ ಎಂಬ ಭಯ ಪುಟ್ಟಣ್ಣನವರನ್ನು ಮೊದಲಿನಿಂದ ಕಡೆಯವರೆಗೂ ಕಾಡುತ್ತಿದ್ದದ್ದು ಕೃತಿಯ ಉದ್ದಕ್ಕೂ ಗಮನಕ್ಕೆ ಬರುತ್ತದೆ. ಬಾಲಸಾಹಿತ್ಯಕ್ಕೆ ವಿಶಿಷ್ಟವಾದ ಪುನರುಕ್ತಿ ಮತ್ತು ಚಾತುರ್ಯಗಳು ಕೂಡ ಇಲ್ಲಿ ಇಲ್ಲ. ಅಕ್ಲಿಷ್ಟತೆ ಮತ್ತು ಪ್ರಸನ್ನತೆಗಳು ಮಾತ್ರ ಪುಟ್ಟಣ್ಣನವರು ಎಚ್ಚರದಿಂದ ಕೂಡಿಸಿದ ಗುಣಗಳು. ಪುಟ್ಟಣ್ಣನವರ ನೀತಿಪರತೆ ಇಲ್ಲೆಲ್ಲ ಸುಸ್ಪಷ್ಟ. ನೀತಿಕಥೆಗಳಲ್ಲವಾದರೆ ಅಂತಹವುಗಳ ರಹದಾರಿ ಇಲ್ಲಿ ಮುಟ್ಟುಗೋಲು. ಔಷಧಿ ಹಿತ, ಆದರೆ ಪ್ರಿಯವಲ್ಲ. ಈ ಔಷಧಿಯನ್ನು ಪ್ರಿಯವಾಗಿಯೂ ಮಾಡುವ ಹೊಣೆಗಾರಿಕೆಯನ್ನು ಪುಟ್ಟಣ್ಣನವರು ಹೊತ್ತರು. ಇಂಥ ಸೂಕ್ತ ನಿರ್ವಹಣೆಯಿಂದ ಸುಭದ್ರ ವೇದಿಕೆಯ ಮೇಲೆ 'ನೀತಿಚಿಂತಾಮಣಿ' ಸ್ಥಾಪಿತವಾಯಿತು.

ನೀತಿ ಬಾಳಿಗೆ ಮುಖ್ಯ ಎಂಬುದು ಪುಟ್ಟಣ್ಣನವರ ನಿಲುವು. ಬಾಲಕ ಬಾಲಕಿಯರ ಶಿಕ್ಷಣದಲ್ಲಿ ಆದ್ಯಗಮನ ಇದಕ್ಕೇ. ತಾಯಿ ಜೀಜಾಬಾಯಿಯಿಂದ ಕೇಳಿದ ವೀರಕಥೆಗಳಿಂದ ಶಿವಾಜಿಯ ಜೀವನದ ಮೇಲಾದ ಗಾಢ ಪರಿಣಾಮ, ಶ್ರವಣನ ಪಿತೃಭಕ್ತಿಯ ಕಥೆ, ಹರಿಶ್ಚಂದ್ರ ನಾಟಕವನ್ನು ನೋಡಿ ಆದ ಪ್ರಭಾವ ಗಾಂಧಿಯ ಮೇಲೆ ಮಾಡಿದ ರೀತಿ ಇವುಗಳನ್ನು ನೆನೆದರೆ ಇದರ ಔಚಿತ್ಯ ತಿಳಿಯುತ್ತದೆ. ಸಮಾಜದ ಪರಿಷ್ಕರಣ ಇಲ್ಲಿ ಮುಖ್ಯ. ದೋಷೋದ್ಘಾಟನೆ ಇಲ್ಲಿ ಆನುಷಂಗಿಕ ಕೂಡ ಅಲ್ಲ. ಮಕ್ಕಳಿಗೆ ಹೇಳಬಾರದ ಕಥೆಗಳಾಗಲೀ, ಹೇಳದಿದ್ದರೂ ನಡೆದೀತು ಎನ್ನುವ ಕಥೆಗಳಾಗಲೀ ಇಲ್ಲಿ ಇಲ್ಲ. ಎಲ್ಲ ರೀತಿಗಳಿಂದ ಶೋಧಿಸಿದ, ಅಪಾಯರಹಿತ ಹಾಗೂ ಅತ್ಯಗತ್ಯ ಎಂಬ ಹಣೆಪಟ್ಟಿಗಳನ್ನು ಅಂಟಿಸಿಕೊಂಡ ಕಥೆಗಳಿಗೆ ಮಾತ್ರ ಪುಟ್ಟಣ್ಣನವರು ಇಲ್ಲಿ ಪ್ರವೇಶ ದೊರಕಿಸಿಕೊಟ್ಟರು. ಪುಟ್ಟಣ್ಣನವರು ನುರಿತ ಉಪಾಧ್ಯಾಯರು. ತನ್ನ ತೋಟದ ಕಳೆಕಸಗಳನ್ನು ಕಿತ್ತೊಗೆದು ಹೂಗಿಡಗಳ ಬೆಳವಣಿಗೆಗೆ ಅನುವು

ಮಾಡಿಕೊಡುವ ತೋಟಗಾರನಂತೆ ಉಪಾಧ್ಯಾಯರಾದ ಪುಟ್ಟಣ್ಣನವರು ಕೂಡ ಅವಿಚಾರ ದುರ್ವಿಚಾರಗಳನ್ನು ಕಿತ್ತೊಗೆದು ಸುವಿಚಾರಗಳ ಬಿತ್ತನೆ ಮಾಡಿದರು. ಅದ್ಭುತಸಿದ್ಧಿಯನ್ನು ಸಾಧಿಸಿದರು.

ಶಿಶುಸಾಹಿತ್ಯದ ಬಗೆಗೆ ಇಷ್ಟೆಲ್ಲ ಗಂಭೀರವಾದ ಪೂರ್ವಭಾವೀ ಯೋಜನೆ, ಯೋಚನೆಗಳನ್ನಿಟ್ಟುಕೊಂಡು ಪುಟ್ಟಣ್ಣನವರು ತಮ್ಮ ನಿಶ್ಚಿತ ಮಾರ್ಗವನ್ನು ಕಂಡು ಕೊಂಡರು. ಅದರಲ್ಲಿ ಯಾಂತ್ರಿಕ ನೀರಸತೆಯೂ, ಸಪ್ಪೆತನವೂ ಪ್ರವೇಶ ಪಡೆಯು ಬಾರದು. ವಿಕಾಸಮಾರ್ಗದ ಕಲ್ಪನೆ ಇರಬೇಕು. ನೀತಿಯು ಕರೆ ಪ್ರಧಾನವಾಗಿರ ಬೇಕು. ಹಾಸ್ಯದ ಮಿಂಚಿನ ಸ್ಪರ್ಶವಿರಬೇಕು. 'ಮುತ್ಯಾಲಶೆಟ್ಟಿಯ ಕಥೆ', 'ತಿಂಡಿ ಪೋತನಾದ ಬ್ರಾಹ್ಮಣ', 'ಆಷಾಢಭೂತಿಯ ಕಥೆ' ಇಂಥವುಗಳು.

'ನೀತಿ ಚಿಂತಾಮಣಿ' ಯಲ್ಲಿ ರಾಮಾಯಣ, ಮಹಾಭಾರತ, ಭಾಗವತ, ಹರಿ ವಂಶ, ವಿಷ್ಣುಪುರಾಣ, ಸ್ಕಾಂದ ಪುರಾಣ, ಉತ್ತರರಾಮಾಯಣ, ಪಂಚತಂತ್ರ, ಹಿತೋ ಪದೇಶ, ಶಂಕರವಿಜಯ, ಪ್ರಪನ್ನಾಮೃತ, ವಿಕ್ರಮಾರ್ಕಚರಿತ್ರ, ಜೈಮಿನಿ ಭಾರತ, ಬಸವಪುರಾಣ, ಶುಕಸಪ್ತತಿ, ಮುದ್ರಾಮಂಜೂಷ, ಹಿಂದೂ ದೇಶದ ಚರಿತ್ರೆ ಇತ್ಯಾದಿ ಸಂಸ್ಕೃತ ಕನ್ನಡ ಗ್ರಂಥಗಳಿಂದ ಆಯ್ದ ಕಥೆಗಳೊಡನೆ ರೂಢಿಯ ಕಥೆಗಳಿವೆ. ರಾಮಾ ಯಣ ಭಾರತ ಇತ್ಯಾದಿಗಳ ಕಥೆಗಳು ಹೆಚ್ಚು, ರೂಢಿಯ ಕಥೆಗಳು ಕಡಿಮೆ (121 : 44). ಇದು ಆಕಸ್ಮಿಕವಲ್ಲ. ಜಾನಪದ ಸೊತ್ತನ್ನು ಅಲಕ್ಷಿಸಬಾರದೆಂಬ ವಿವೇಚನೆಯಿಂದ ಮಾತ್ರ ರೂಢಿಯ ಕಥೆಗಳು ಸೇರಿವೆ. ಕೃತಿಯ ಮುಖ್ಯ ಉದ್ದೇಶ ಹಾಗೂ ಧಾರ್ಮಿಕ ಕಾವ್ಯ ಇತಿಹಾಸಗಳ ಪರಂಪರೆ ಇವುಗಳಿಂದ ಮೊದಲನೆಯದರ ಸಂಖ್ಯೆ ಹೆಚ್ಚು.

**'ನೀತಿ ಚಿಂತಾಮಣಿ'ಯ ಮಿತಿಗಳು**

'ನೀತಿಚಿಂತಾಮಣಿ' ಯಲ್ಲಿ ಪುಟ್ಟಣ್ಣನವರು ತಮ್ಮ ಉದ್ದೇಶದಿಂದ ಅತ್ತಿತ್ತ ಕಿಂಚಿತ್ತೂ ಸರಿಯುವುದಿಲ್ಲ. ಹಲವು ಬಾರಿ ಇದು ಗುಣದ ಪಕ್ಷವನ್ನು ಬಲಪಡಿಸಿ ದರೂ ಒಮ್ಮೊಮ್ಮೆ ಕಥೆಯ ವಸ್ತು ಸ್ವಲ್ಪ ಬೇರೆಯಾದ ಆಶಯಗಳನ್ನು ಹೊಂದಿದ್ದಾ ಗಲೂ ಪುಟ್ಟಣ್ಣನವರು ತಮಗೆ ಬೇಕಾದ ನೀತಿಯೊಂದನ್ನೇ ಹಿಂಡಿ ತೆಗೆಯಲು ಹೊರ ಡುತ್ತಾರೆ. ಅಂತಹ ಕಡೆ ಪುಟ್ಟಣ್ಣನವರ ಮಿತಿಗಳು ಇಣುಕುತ್ತವೆ.

ದಕ್ಷಬ್ರಹ್ಮನ ಮಗಳು ಸತೀದೇವಿ ಶಿವನನ್ನು ಮದುವೆಯಾಗಿದ್ದಳು. ದಕ್ಷಬ್ರಹ್ಮ ಹಾಗೂ ಶಿವ ಇಬ್ಬರಲ್ಲಿ ಸಾಮರಸ್ಯವಿರಲಿಲ್ಲ. ಒಮ್ಮೆ ದಕ್ಷಬ್ರಹ್ಮನು ಒಂದು ಯಜ್ಞ ವನ್ನು ಮಾಡಲು ಪ್ರಾರಂಭಿಸಿದಾಗ ಮಗಳು ಅಳಿಯನಿಗೆ ಮಾತ್ರ ಆಹ್ವಾನ ಹೋಗ ಲಿಲ್ಲ. ಯಾಗದಲ್ಲಿ ಸಲ್ಲಿಸಬೇಕಾದ ಹವಿರ್ಭಾಗವನ್ನು ಶಿವನಿಗೆ ಸಲ್ಲಿಸಲಿಲ್ಲ. ಸತೀ ದೇವಿ ಯಾಗಕ್ಕೆ ಹೋಗುವ ಇಚ್ಛೆಯನ್ನು ಪತಿಯಲ್ಲಿ ನಿವೇದಿಸಿಕೊಂಡು ಅಪ್ಪಣೆ ಬೇಡಿದಳು. ಆಹ್ವಾನವಿಲ್ಲದೆ ಹೋದರೆ ಅವಮಾನ ಪ್ರಾಪ್ತಿ ಎಂದು ಶಿವನು ಎಚ್ಚ

ರಿಸಿದರೂ ಸತಿದೇವಿ ತಂದೆಯ ಮನೆಗೆ ಹೋದಳು. ಇವಳಿಗೆ ಯಾಗಶಾಲೆಯಲ್ಲಿ ತಿರಸ್ಕಾರ ಮಾತ್ರ ದಕ್ಕಿತು. ಸತೀದೇವಿ ಅವಮಾನ ತಡೆಯಲಾರದೆ, ಪತಿಗೆ ಮತ್ತೆ ಮುಖ ತೋರಿಸಲಾರದೆ ಯಾಗಕುಂಡದಲ್ಲಿ ಬಿದ್ದು ಸತ್ತಳು. ಈ ವರ್ತಮಾನ ದೊರೆತ ಕೂಡಲೇ ಶಿವನು ಮಹಾಕೋಪದಿಂದ ತನ್ನ ಜಟೆಯನ್ನು ಬಡಿಯಲು ವೀರಭದ್ರನು ಹುಟ್ಟಿ ದಕ್ಷಯಜ್ಞನಾಶವನ್ನು ಪೂರೈಸಿದನು. ಆದ್ದರಿಂದ ಮೊಂಡತನ ಮುಷ್ಕರಗಳು ಯಾರಿಗೂ ಒಳ್ಳೆಯದಲ್ಲ (!) ಎಂದು 'ಸತೀ ದೇವಿಯ ಕಥೆ' ಕೊನೆಗೊಳ್ಳುತ್ತದೆ.

ಈ ಕಥೆಯಲ್ಲಿ ಬರುವ ಇನ್ನೊಂದು ಆಶಯ ದಕ್ಷನ ಔದ್ಧತ್ಯ. ಇದನ್ನು ಪುಟ್ಟಣ್ಣನವರು ಲಕ್ಷಿಸಿದಂತೆ ಕಾಣುವುದಿಲ್ಲ. ಅಥವಾ, ಸತೀದೇವಿಯ ಮೊಂಡತನವಿಲ್ಲ ದಿದ್ದರೆ ಈ ದುರಂತ ಅನಿವಾರ್ಯವಾಗುತ್ತಿರಲಿಲ್ಲ ಎಂಬ ಗ್ರಹಿಕೆಯೂ ಕಾರಣವಿರ ಬಹುದು.

ಇನ್ನೊಂದು ಉದಾಹರಣೆ : ಭಾರತ ಯುದ್ಧದಲ್ಲಿ ದ್ರೋಣಾಚಾರ್ಯರು ಕೌರ ವರ ಕಡೆ ಪದ್ಮವ್ಯೂಹ ನಿರ್ಮಾಣ ಮಾಡಿ ಕಾದುವಾಗ ಪಾಂಡವರ ಕಡೆ ಕಾದಲು ಆ ವ್ಯೂಹ ಬಲ್ಲವರಾರೂ ಇರಲಿಲ್ಲ. ಆಗ ಅರ್ಜುನನ ಮಗ ಅಭಿಮನ್ಯು ತನ್ನ ದೊಡ್ಡಪ್ಪ ಯುಧಿಷ್ಠಿರನ ಬಳಿ ಹೋಗಿ ಅಪ್ಪಣೆ ಬೇಡಿದನು. ಧರ್ಮರಾಯನು ಬೇಡವೆಂದು ಎಷ್ಟು ಹೇಳಿದರೂ ಹಗೆಗಳನ್ನು ತಾನು ಜಯಿಸುವುದಾಗಿಯೂ ಬದುಕಿ ಬಂದರೆ ವಿಜಯಲಾಭವೂ ಸತ್ತರೆ ವೀರಸ್ವರ್ಗವೂ ದೊರಕುವುದೆಂದು ಹೇಳಿ ಹೊರಟೇ ಬಿಟ್ಟನು. ಯುದ್ಧದಲ್ಲಿ ಕರ್ಣ ಅಶ್ವತ್ಥಾಮ ಮುಂತಾದ ವೀರರು ಒಟ್ಟಾಗಿ ಬಿದ್ದು ಈ ಬಾಲವೀರನನ್ನು ಕೊಂದುಹಾಕಿದರು. ಆದ್ದರಿಂದ ಹಿರಿಯರ ಮಾತನ್ನು ಮೀರ ಬಾರದು ಎಂದು ಕಥೆ ಕೊನೆಗೊಳ್ಳುತ್ತದೆ ! ('ಅಭಿಮನ್ಯುವು ಯುದ್ಧಕ್ಕೆ ಹೋದದ್ದು')

ಈ ಕಥೆಯಲ್ಲಿ ಪುಟ್ಟಣ್ಣನವರು ಅಭಿಮನ್ಯುವಿನ ಅವಿಧೇಯತೆಯನ್ನು ಅದರ ಫಲವಾದ ದುರಂತವನ್ನು ಮಾತ್ರ ಲಕ್ಷಿಸುತ್ತಾರೆ. ಆದರೆ ಅವನ ಶೌರ್ಯ, ಕೆಚ್ಚುಗಳ ಕಡೆಗೆ ಗಮನವಿಲ್ಲ. ಅನ್ಯಾಯದಿಂದ ಕೊಂದ ಇತರ ವೀರರ ಬಗೆಗೂ ಚಕಾರವೆತ್ತಿಲ್ಲ. ಈ ಆಶಯ ಎಷ್ಟು ನಿರ್ಲಕ್ಷಿಸಲ್ಪಟ್ಟಿದೆ ಎಂದರೆ ಆ ಹೊತ್ತಿನಲ್ಲಿ ಅಭಿಮನ್ಯು ಈ ವೀರೋಚಿತ ನಡೆಯನ್ನು ತೋರಿದ್ದೇ ಒಂದು ಅಪಾಯ, ತಪ್ಪುಹೆಜ್ಜೆ ಎನ್ನಿಸಿಬಿಡು ತ್ತದೆ. ಈ ದುರಂತಕ್ಕೆ ಅಭಿಮನ್ಯುವಿನ ಹಟ ಕಾರಣ ನಿಜವೇ. ಆದರೆ ಅವನ ಶೌರ್ಯ ಅಲಕ್ಷ್ಯಕ್ಕೆ ತುತ್ತಾಗಬೇಕಿಲ್ಲಷ್ಟೇ.

ಮತ್ತೊಂದು ಉದಾಹರಣೆ : ದೇವತೆಗಳಿಗೂ ರಾಕ್ಷಸರಿಗೂ ನಡೆದ ಒಂದು ಯುದ್ಧದಲ್ಲಿ ದಶರಥನು ದೇವತೆಗಳ ಪರವಾಗಿ ಯುದ್ಧ ಮಾಡಿದನು. ಇವನ ಪ್ರೀತಿಯ ಮಡದಿ ಕೈಕೆಯೂ ಜೊತೆಗೇ ಹೋದಳು. ಆ ಘೋರಯುದ್ಧದಲ್ಲಿ ದಶರಥನ ರಥದ ಒಂದು ಗಾಲಿಯೇ ಕಿತ್ತುಹೋಯಿತು. ಕೂಡಲೇ ಕೈಕೆ ಮುರಿದ ಗಾಲಿಗೆ ಬದಲಾಗಿ ತನ್ನ ಕೈಯನ್ನು ಊರೆಕೊಟ್ಟಳು. ರಥ ಬೀಳಲಿಲ್ಲ. ದಶರಥನು ಇದನ್ನು

ನೋಡಿ ಸಂತೋಷಿಸಿ ನಿನ್ನ ಧೈರ್ಯದಿಂದ ಬಂದಿದ್ದ ಅಪಾಯ ದೂರವಾಯಿತು. ನಿನ್ನ ಸಹಾಯಕ್ಕೆ ಮೆಚ್ಚಿದೆ. ನಿನಗೆ ಬೇಕಾದ ಎರಡು ವರಗಳನ್ನು ಕೇಳು ಎಂದನು. ಕೈಕೆ ಸಮಯ ಬಂದಾಗ ಕೇಳುವುದಾಗಿ ಹೇಳಿದಳು. ದಶರಥನು ದೇವತೆಗಳಿಂದ ಮರ್ಯಾದೆ ಹೊಂದಿ ತನ್ನ ರಾಜಧಾನಿಗೆ ಹಿಂದಿರುಗಿದನು. ('ಕೈಕೆಯ ಕಥೆ')

ಕೈಕೆ ಕೈಯನ್ನು ಊರೆಗೊಟ್ಟು ರಥ ಉರುಳುವುದನ್ನು ನಿಲ್ಲಿಸಿದ ಸನ್ನಿವೇಶಕ್ಕೆ ತಡೆ ಹಾಕಿದ್ದರೆ 'ಸಮಯದಲ್ಲಿ ಧೈರ್ಯಾವಲಂಬನೆ' ಎಂಬ ಶೀರ್ಷಿಕೆ ಉಚಿತವಾಗಿರುತ್ತಿತ್ತು. ದಶರಥನು ಸಂತೋಷ ವ್ಯಕ್ತಪಡಿಸುವುದೂ ಸರಿಯೆ. ಆದರೆ ವರಗಳ ಮಾತು ಎಲ್ಲೂ ಹೆಣೆದುಕೊಳ್ಳದ ಒಂದು ತುಂಡು ಎಳೆ ಮಾತ್ರ ಆಯಿತು. ಬೇರೆ ಆಶಯದ ಸುಳಿವು ಕಾಣಿಸಿಕೊಂಡು ಥಟಕ್ಕನೆ ನಿಂತುಬಿಟ್ಟಂತೆ ಆಯಿತು. ವರಗಳೂ ಆಕೆಯ ಧೈರ್ಯದ ಪರಿಣಾಮವೇ ಆದರೂ ಅದರ ಮುಕ್ತಾಯವಲ್ಲ. ಶೀರ್ಷಿಕೆಗೆ ಸಂಬಂಧಿಸಿದ ಮುಖ್ಯ ವಿಚಾರವೂ ಅಲ್ಲ.

ಇಲ್ಲೆಲ್ಲ ಪುಟ್ಟಣ್ಣನವರು ಕಣ್ಣಿಗೆ ಪಟ್ಟಿ ಕಟ್ಟಿಕೊಂಡಿದ್ದಾರೆ ಎನ್ನಿಸಿಬಿಡುತ್ತದೆ. ಮುಂದಿನ ಮುದ್ರಣಗಳಲ್ಲೇನೋ ಕೈಕೆಯ ಕಥೆಯ ಈ ದೋಷದ ನಿವಾರಣೆ ಆಗಿದೆ. ಅಲ್ಲಿ ದಶರಥನ ಮೆಚ್ಚುಗೆಯ ಮಾತೇ ಕಡೆ. ವರಗಳ ಪ್ರಸ್ತಾಪವಿಲ್ಲ.

ಬೇರೆ ಆಶಯಗಳನ್ನು ಕಥೆಯಲ್ಲಿ ತರದೆ ಇದ್ದಾಗ ಕಥೆಗಳ ಮುಕ್ತಾಯದಲ್ಲಿ ಯಾವ ದೋಷವೂ ಇರುವುದಿಲ್ಲ. ಮುಖ್ಯ ವಿಚಾರವಲ್ಲದೆ ಬೇರೆ ಆಶಯಗಳಿದ್ದಾಗ ಅವುಗಳನ್ನು ನಿರ್ಲಕ್ಷಿಸುವುದರಿಂದ ಅಂಥವು ಕಥೆಯಲ್ಲಿ ರಾಸಾಯನಿಕವಾದ ಹೊಂದಾಣಿಕೆಯನ್ನು ಸಾಧಿಸದೆ ಹೊರಗುಳಿಯುತ್ತವೆ. ಈ ದೋಷ 'ನೀತಿಚಿಂತಾಮಣಿ' ಯಲ್ಲಿ ಸಾಮಾನ್ಯವಾಗಿ ಕಣ್ಣಿಗೆ ಬೀಳುವಂತಹುದು.

**'ನೀತಿಬೋಧೆ' ಹಾಗೂ 'ಬಾಲಕರ ನೀತಿ ಕಥಾವಳಿ' ಗಳೊಡನೆ ಹೋಲಿಕೆ** [16]

'ನೀತಿಚಿಂತಾಮಣಿ' ಜನಪ್ರಿಯವಾದೊಡನೆ ಹಲವು ಅಂಥ ಕೃತಿಗಳು ಹೊರ ಬಂದುವು. ಆದರೆ ಸ್ಪರ್ಧೆಯಲ್ಲಿ ಯಾವುವೂ ಗೆಲ್ಲಲಾಗಲಿಲ್ಲ. ಸಂಕ್ಷಿಪ್ತತೆ, ಸರಳತೆ ಎಲ್ಲಕ್ಕಿಂತ ಹೆಚ್ಚು ಕೃತಿಯಲ್ಲಿ ವಿಲೀನಗೊಂಡ ಕೃತಿಕಾರನ ಒಂದು ಸಮರ್ಪಣ ಭಾವ ಈ ಯಾವ ಕೃತಿಗಳಲ್ಲೂ ಇರಲಿಲ್ಲ. 'ನೀತಿಚಿಂತಾಮಣಿ' ಯ ಹಾದಿಯಲ್ಲಿ ಹೆಜ್ಜೆಯಿಟ್ಟ ಎರಡು ಉಪಲಬ್ಧ ಕೃತಿಗಳನ್ನು ಇಲ್ಲಿ ವಿವೇಚಿಸಿದೆ.

'ನೀತಿಚಿಂತಾಮಣಿ', 'ನೀತಿಬೋಧೆ' ಹಾಗೂ 'ಬಾಲಕರ ನೀತಿಕಥಾವಳಿ' ಈ ಮೂರೂ ಕೃತಿಗಳಲ್ಲಿರುವ ಯಯಾತಿ ಪುರುಗಳ ಕಥೆಯನ್ನು ಹೋಲಿಸಿ ನೋಡಬಹುದು. "ದ್ವಾಪರಯುಗದಲ್ಲಿ ಯಯಾತಿ ಮಹಾರಾಯನೆಂಬ ಚಂದ್ರವಂಶದ ದೊರೆಯು ಸುಖದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಅವನಿಗೆ ಐದುಜನ ಗಂಡು ಮಕ್ಕಳಿದ್ದರು. ದೊರೆಯು ಬಹುದಿವಸ ಆಳಿ,ಈ ಪ್ರಪಂಚದಲ್ಲಿ ಇರುವ ಎಲ್ಲಾಸುಖವನ್ನೂ ಅನುಭವಿಸಿ ಮುದುಕನಾದನು. ಆದರೂ ಇವನಿಗೆ ಭೋಗ ಪಡುವ ಆಸೆ ಬಿಡಲಿಲ್ಲ. ಇದಕ್ಕಾಗಿ

ಒಂದು ದಿನ ತನ್ನ ಹಿರೀಮಗನಾದ ಯದುರಾಯನನ್ನು ಕರಿಸಿ ಹೇಳಿದ್ದೇನೆಂದರೆ— ಅಯ್ಯಾ ಪುತ್ರನೇ, ಈಗ ನನಗೆ ಮುಪ್ಪು ಬಂದದ್ದರಿಂದ ಈ ಲೋಕದ ಸುಖವೆಲ್ಲಾ ಕಡಮೆಯಾಯಿತು. ಇಷ್ಟುದಿವಸ ನಾನು ಈ ಭೋಗಗಳನ್ನೆಲ್ಲಾ ಎಷ್ಟು ಅನುಭವಿಸಿದರೂ ತೃಪ್ತಿಯಾಗಲಿಲ್ಲ; ಇನ್ನೂ ಅನುಭವಿಸಬೇಕೆಂಬ ಆಶೆಯುಂಟು. ಇಂಥಾ ಅನುಭವಕ್ಕೆ ಯವ್ವನವು ಅಗತ್ಯ. ಆದ ಕಾರಣ ನೀನು ನಿನ್ನ ಯೌವ್ವನವನ್ನು ಸ್ವಲ್ಪ ಕಾಲ ನನಿಗೆ ಕೊಟ್ಟು, ನನ್ನ ಮುಪ್ಪನ್ನು ನೀನು ತೆಗೆದುಕೊಳ್ಳುವಿಯಾ? ಎಂದು ಕೇಳಿದನು. ಅದಕ್ಕೆ ಅವನು ಒಪ್ಪದೆ—ಯೌವನವನ್ನು ಬಿಟ್ಟು ಮುಪ್ಪನ್ನು ನಾನು ಹೊಂದಿದರೆ, ನನಗೆ ಬಹಳ ಕಷ್ಟ ಸಂಭವಿಸುವುದು; ಆದಕಾರಣ ಬಹುಸುಖಕರವಾದ ಯೌವ್ವನವನ್ನು ನಾನು ಕೊಡಲಾರೆನು, ಎಂದು ಹೇಳಿದನು. ಧೊರೆಯು ಕೂಡಲೇ ಆಗ್ರಹಗೊಂಡು—ಎಲೈ ದುರಾತ್ಮನೇ, ಮನುಷ್ಯನಿಗೆ ತಂದೆತಾಯಿಗಳ ಮಾತನ್ನು ಕೇಳುವದಕ್ಕಿಂತಲೂ ಬೇರೆ ಮತ್ತೊಂದು ಧರ್ಮ ಉಂಟೇ? ತಂದೆ ತಾಯಿಗಳೇ ಪರದೈವವೆಂದು ಭಾವಿಸದೆ ನನ್ನ ಮಾತಿಗೆ ಎದುರು ಮಾತಾಡಿದ್ದರಿಂದ ನಿನಗೂ ನಿನ್ನ ವಂಶದವರಿಗೂ ಅಜ್ಞಾನ ಕೌಚಿಕೊಳ್ಳಲಿ; ರಾಜ್ಯವನ್ನಾಳುವ ಯೋಗ್ಯತೆ ಇಲ್ಲದೆ ಹೋಗಲಿ, ಎಂದು ಶಾಪವನ್ನು ಕೊಟ್ಟನು. ಹೀಗೆಯೇ ಉಳಿದ ಮೂರುಜನ ಮಕ್ಕಳನ್ನೂ ಒಬ್ಬೊಬ್ಬರನ್ನಾಗಿ ಕರೆದು ಇದೇ ಮಾತನ್ನು ಕೇಳಿದನು. ಅವರೂ ಒಪ್ಪದಿದ್ದ ಕಾರಣ, ಹಿರಿಯವನಿಗೆ ಕೊಟ್ಟ ಶಾಪವೇ ಇವರಿಗೂ ಬಂತು. ಆಗ ಧೊರೆಯು ಎಲ್ಲರಿಗಿಂತಲೂ ಕಿರಿಯವನಾದ ಐದನೇ ಮಗ ಪುರೂರವಸ್ಸನ್ನು ಕರೆದು ಕೇಳಲು, ಅವನು ತಂದೆಯ ಮಾತಿಗೆ ಒಪ್ಪಿ ತನ್ನ ಯೌವ್ವನವನ್ನು ತಂದೆಗೆ ಕೊಟ್ಟು, ಆತನ ಮುಪ್ಪನ್ನು ತಾನು ತೆಗೆದುಕೊಂಡನು. ತರುವಾಯ ಯಯಾತಿಯು ಬಹು ದಿವಸದವರಿಗೂ ಯೌವ್ವನದ ಬಲದಿಂದ ಅನೇಕ ದೇಶಗಳನ್ನು ಸಂಚರಿಸಿ, ಬಹು ಭೋಗವನ್ನು ಅನುಭವಿಸಿ, ಕೊನೆಗೆ ಪುರೂರವಸ್ಸನ್ನು ಕರೆದು–ಅಯ್ಯಾ ಸತ್ಯವಂತನಾದ ಮಗನೇ, ನಿನ್ನ ವಿಧೇಯತೆಗೆ ನಾನು ಮೆಚ್ಚಿದೆನು, ನಿನ್ನ ಯೌವ್ವನದಿಂದ ನಾನು ಅನೇಕವಾಗಿ ಸೌಖ್ಯಪಟ್ಟೆನು. ಈ ಪ್ರಪಂಚದಲ್ಲಿ ಎಷ್ಟು ಸೌಖ್ಯಪಟ್ಟರೂ ತೃಪ್ತಿಯಿಲ್ಲ. ಜ್ಞಾನವನ್ನು ಸಂಪಾದಿಸಿ ದೇವರನ್ನು ಭಜಿಸಿ ಅದರ ಮೂಲಕ ಹೊಂದುವ ಸೌಖ್ಯವೇ ಶಾಶ್ವತವಾದದ್ದು. ಆದಕಾರಣ ನಿನ್ನ ಯೌವ್ವನವನ್ನು ಮತ್ತೆ ಸ್ವೀಕರಿಸಿ ನನ್ನ ಮುಪ್ಪನ್ನು ಕೊಡು, ಎಂದು ಆ ಮಗನನ್ನು ಹರಸಿ, ಅವನಿಗೆ ಪಟ್ಟವನ್ನು ಕಟ್ಟಿದನು. ಎಂದಿನಂತೆ ಮುಪ್ಪುಬರಲು, ಯಯಾತಿಯು ಹೆಂಡತಿಯೊಡನೆ ತಪಸ್ಸಿಗೆ ಹೊರಟು ಹೋದನು. ತರುವಾಯ ಈ ಪುರೂರವಸ್ಸು ಸಿಂಹಾಸನಕ್ಕೆ ಬಂದು ರಾಜ್ಯವನ್ನು ಬಹು ಧರ್ಮದಿಂದ ಆಳುತ್ತಿದ್ದನು. ಹೀಗೆ ತಂದೆತಾಯಿಗಳ ಮಾತಿಗೆ ವಿಧೇಯರಾಗಿ ನಡೆದುಕೊಳ್ಳತಕ್ಕ ಮಕ್ಕಳೇ ಬಹು ಧರ್ಮಿಷ್ಠರು." (ಯಯಾತಿ ಮಹಾರಾಯ, ಇವನ ಮಗ ಪುರೂರವಸ್ಸು.)

—ನೀತಿಚಿಂತಾಮಣಿ

"ದ್ವಾಪರಯುಗದಲ್ಲಿ ಯಯಾತಿ ಎಂಬ ರಾಜನು ಹಸ್ತಿನಾವತಿಯಲ್ಲಿ ರಾಜ್ಯವನ್ನು ಆಳುತ್ತಿದ್ದನು. ಆತನಿಗೆ ರಾಕ್ಷಸ ಗುರುವಾದ ಶುಕ್ರಾಚಾರ್ಯರ ಮಗಳಾದ ದೇವಯಾನೆ ಯೆಂಬುವಳೂ ಮತ್ತು ರಾಕ್ಷಸ ರಾಜನ ಮಗಳಾದ ಶರ್ಮಿಷ್ಠೆ ಎಂಬುವಳೂ ಇಬ್ಬರು ಹೆಂಡತಿಯರಿದ್ದರು. ಶರ್ಮಿಷ್ಠೆಯನ್ನು ಮದುವೆಯಾದ ಯಯಾತಿರಾಜನು ಶುಕ್ರಾ ಚಾರ್ಯರ ಶಾಪದಿಂದ ಮುದುಕನಾದನು. ಅದರಿಂದ ಯಯಾತಿರಾಜನು ದುಃಖಿತನಾಗಿ ಶುಕ್ರಾಚಾರ್ಯರನ್ನು ಬೇಡಿಕೊಂಡನು. ಅವರು ಶಾಂತರಾಗಿ "ರಾಜನೆ ! ಋಷಿಯ ಶಾಪವು ತಪ್ಪದು. ಆದರೂ ನಿನ್ನ ಮುದಿತನವನ್ನು ಇತರರಿಗೆ ಕೊಡಲಾಗುವಂತೆ ನಿನಗೆ ಸಾಮರ್ಥ್ಯವನ್ನು ಕೊಟ್ಟಿದ್ದೇನೆ" ಎಂದು ಹೇಳಿದನು.

ಯಯಾತಿರಾಜನು ತನ್ನ ಐದುಮಂದಿ ಮಕ್ಕಳನ್ನು ಕರೆದನು. ದೊಡ್ಡವನಾದ ಯದುರಾಯನ ಸಂಗಡ "ಪುತ್ರನೇ ! ನನಗೆ ದುರದೃಷ್ಟದಿಂದ ಮುದಿತನ ಬಂದಿತು. ಆದರೆ ಇಹಲೋಕದ ಭೋಗದಲ್ಲಿ ಇನ್ನೂ ನನಗೆ ತೃಪ್ತಿಯಾಗಲಿಲ್ಲ. ಆದುದರಿಂದ ನಿನ್ನ ಪ್ರಾಯವನ್ನು ನನಗೆ ಕೊಡು. ನನ್ನ ಮುದಿತನವನ್ನು ನೀನು ತೆಗೆದುಕೋ" ಎಂದು ಕೇಳಿದನು. ಯದುರಾಯನು ಅದಕ್ಕೆ ಒಪ್ಪಲಿಲ್ಲ. ಅದರಿಂದ ಯಯಾತಿಯು ಕೋಪದಿಂದ "ನಿನ್ನ ಮಕ್ಕಳಿಗೆ ನನ್ನ ರಾಜ್ಯದ ಭಾಗವನ್ನು ಕೊಡುವುದಿಲ್ಲ" ಎಂದು ಯದುರಾಯನಿಗೆ ಹೇಳಿದನು. ಆಮೇಲೆ ಮತ್ತೊಬ್ಬ ಮಗನಾದ ತುರ್ವಸು ಎಂಬುವವನನ್ನು ಯಯಾತಿಯು ಕರೆದು, "ನೀನು ನನ್ನ ಮುದಿತನವನ್ನು ತೆಗೆದು ಕೊಂಡು ನಿನ್ನ ಪ್ರಾಯವನ್ನು ನನಗೆ ಕೊಡುತಿಯಾ ?" ಎಂದು ಕೇಳಿದನು. ಅದಕ್ಕೆ ಆತನು "ಬಲರೂಪಗಳನ್ನು ಕೆಡಿಸುವ ಮುದಿತನವು ನನಗೆ ಬೇಡ" ಎಂದು ಹೇಳಿದನು. ಅದನ್ನು ಕೇಳಿ ಯಯಾತಿಯು "ಚಂಡಾಲನೇ ! ನೀನು ಮ್ಲೇಚ್ಛ ಜಾತಿಯಲ್ಲಿ ಸೇರಿ ಕೊಂಡಿರು" ಎಂದು ಶಾಪವನ್ನು ಕೊಟ್ಟನು. ಅನಂತರ ಯಯಾತಿಯು ಇನ್ನೊಬ್ಬ ನಾದ ದ್ರುಹ್ಯು ಎಂಬ ಮಗನನ್ನು ಕುರಿತು. "ನನ್ನ ಮುದಿತನವನ್ನು ತೆಗೆದುಕೊಂಡು ನಿನ್ನ ಪ್ರಾಯವನ್ನು ಕೊಡುತಿಯಾ ?" ಎಂದು ಕೇಳಿದನು. ಆಗ ದ್ರುಹ್ಯು "ಆನೆ, ಕುದುರೆ ಮೊದಲಾದ ಭೋಗಗಳಿಗೆ ಅರ್ಹವಾಗದ ಮುದಿತನವು ನನಗೆ ಬೇಡ" ಎಂದು ಹೇಳಿದನು. ಯಯಾತಿಯು ರೋಷದಿಂದ "ನೀನು ಆನೆ, ಕುದುರೆ ಮೊದಲಾದ ವಾಹನಗಳಲ್ಲಿ ಸಂಚಾರವಿಲ್ಲದೆ, ದೋಣಿ ನಾವೆಗಳಲ್ಲಿ ಸರಕನ್ನು ಸಾಗಿಸುವ ಸ್ಥಳದಲ್ಲಿ ವಾಸಮಾಡು. ನಿನ್ನ ವಂಶೀಯರಿಗೆ ರಾಜ್ಯವು ದೊರೆಯಲಾರದು." ಎಂದು ಶಾಪವನ್ನು ಕೊಟ್ಟನು. ತರುವಾಯ ಯಯಾತಿಯು "ನನ್ನ ಮುದಿತನವನ್ನು ತೆಗೆದುಕೊಂಡು ನಿನ್ನ ಪ್ರಾಯವನ್ನು ಕೊಟ್ಟು ನನ್ನ ಇಚ್ಛೆಯನ್ನು ನೆರವೇರಿಸುವೆಯಾ?" ಎಂದು ಬೇರೊಬ್ಬ ಮಗನಾದ ಅನುವನ್ನು ಕೇಳಿದನು. "ಶುಚಿಯಿಲ್ಲದ ಹುಡುಗರಂತೆ ಅನ್ನಪಾನಗಳನ್ನು ತೆಗೆದುಕೊಳ್ಳುವ ಮುದಿತನವು ನನಗೆ ಬೇಡ" ಎಂದು ಅನುವು ಹೇಳಿದನು. ಅದನ್ನು ಕೇಳಿ ಯಯಾತಿಯು "ಎಲೋ ಮೂರ್ಖನೇ ! ನಿನಗೆ

ಇಷ್ಟವಲ್ಲದ ಮುದಿತನವು ಈಗಲೇ ನಿನಗೆ ಬರಲಿ, ಮತ್ತು ನೀನು ನಾಸ್ತಿಕನಾಗು" ಎಂದು ಶಾಪವನ್ನು ಕೊಟ್ಟನು.

ಹೀಗೆ ನಾಲ್ಕುಮಂದಿ ಮಕ್ಕಳಿಂದ ಇಷ್ಟಾರ್ಥವನ್ನು ಪಡೆಯದೆ ಹೋದ ಯಯಾತಿರಾಜನು ಕೊನೆಯ ಮಗನಾದ ಪೂರುವನ್ನು ಕರೆದು, "ಮಗನೇ ! ನೀನಾದರೂ ನನ್ನ ಮುದಿತನವನ್ನು ತೆಗೆದುಕೊಂಡು ನಿನ್ನ ಪ್ರಾಯವನ್ನು ನನಗೆ ಕೊಡುತಿಯಾ ?" ಎಂದು ಕೇಳಿದನು. ಆ ಮಾತನ್ನು ಕೇಳಿ ಪೂರುವು ಮಹಾ ವಿನಯದಿಂದ "ತಂದೆಯೇ ನಿಮ್ಮ ಅಪ್ಪಣೆಯು ನನಗೆ ಮಾನ್ಯವಾದುದು. ನಿಮ್ಮ ಮುದಿತನವನ್ನು ನಾನು ಆನಂದದಿಂದ ತೆಗೆದುಕೊಳ್ಳುವೆನು, ಚಿಂತೆ ಪಡಬೇಡಿರಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಯಯಾತಿರಾಜನು ಪರಮಾನಂದದಿಂದ "ಎಲೈ ಪೂರುವೇ ! ನಾನು ನಿನಗೆ ಪ್ರಸನ್ನನಾಗಿದ್ದೇನೆ. ನಿನ್ನ ಮಕ್ಕಳ ಮತ್ತು ಪ್ರಜೆಗಳ ಇಚ್ಛೆಗಳು ಕೈಗೂಡುವುವು. ನನ್ನ ರಾಜ್ಯವು ಪಿತೃಭಕ್ತಿಯುಳ್ಳ ನಿನ್ನ ಮಕ್ಕಳಿಗೇ ದೊರೆಯುವುದು. ಮಗನೇ ! ನೀನು ಮೂರು ಲೋಕಗಳಲ್ಲಿಯೂ ಧನ್ಯನಾಗುವೆ" ಎಂದು ಹರಿಸಿ, ಭಕ್ತಿಯಿಂದ ಶುಕ್ರಾಚಾರ್ಯರನ್ನು ಸ್ಮರಿಸಿ, ಅವರು ಕೊಟ್ಟ ವರದ ಬಲದಿಂದ ತನ್ನ ಮುದಿತನವನ್ನು ಪೂರುವಿಗೆ ಕೊಟ್ಟು, ಆ ಪೂರುವಿನ ಪ್ರಾಯವನ್ನು ತಾನು ತೆಗೆದು ಕೊಂಡನು.

ಹಾಗೆ ಯಯಾತಿರಾಜನು ಪ್ರಾಯವನ್ನು ತೆಗೆದುಕೊಂಡ ಮೇಲೆ ಒಂದು ಸಾವಿರ ವರ್ಷಗಳು ವಿವಿಧ ಭೋಗಗಳನ್ನು ಅನುಭವಿಸಿ, ಮಗನಾದ ಪೂರುವನ್ನು ಕರೆದು, "ಅಪ್ಪಾ ! ನೀನು ನನಗೆ ಪ್ರಾಯವನ್ನು ಕೊಟ್ಟ ಕಾರಣದಿಂದ, ನಾನು ಸಮಸ್ತ ಭೋಗಗಳನ್ನೂ ಅನುಭವಿಸಿ ತೃಪ್ತನಾದೆನು. ಇನ್ನು ನೀನು ಈ ಪ್ರಾಯವನ್ನು ತೆಗೆದು ಕೊಂಡು ನನ್ನ ಮುದಿತನವನ್ನು ಕೊಡು" ಎಂದು ಹೇಳಿದನು. ಆ ಪುರುವಿಗೆ ಮೊದಲಿ ನಂತೆಯೇ ತಿರುಗಿ ಪ್ರಾಯವು ಬಂದಿತು. ಆಮೇಲೆ ಯಯಾತಿರಾಜನು ಮಗನನ್ನು ಹರಿಸಿ ತಾನು ತಪಸ್ಸಿಗೆ ಹೋದನು. ಆಮೇಲೆ ಪೂರುವು ಅನೇಕ ವರ್ಷಗಳು ಸುಖ ವಾಗಿ ರಾಜ್ಯವನ್ನಾಳಿದನು." ('ಯಯಾತಿರಾಜನು ಮತ್ತು ಪೂರು ಮೊದಲಾದ ಆತನ ಐವರು ಪುತ್ರರು')

—ನೀತಿಬೋಧೆ

"ಭಾಮಿನೀ ॥ ವಿನುತ ಜನನೀ ಜನಕರು ಸುತಗೆ ।
ಘನತರದ ದೇವರೆನೆ ತಿಳಿವುದು ।
ತನಯ ವಿನಯದೊಳಗವರಾಣತಿಗಳ ನಡಸಿದೊಡೆ ॥
ಅನುಪಮ ಯಶೋವಂತನಾಗುತೆ ।
ವಿನುತ ಬಲಶಾಲಿಯೆನಿಸುತೆ ತಾ ।
ನನುವಿನಿಂ ಸೌಖ್ಯದೊಳು ಬಾಳ್ವನು ಸತತ ಧರೆಯೊಳಗೆ ॥ 1 ॥

ತಾತ್ಪರ್ಯ :– ತಂದೆತಾಯಿಗಳನ್ನು ಮಗನು ಪ್ರತಿ ದೇವರೆಂದು ತಿಳಿಯಬೇಕು. ಸುತನು

ಅವರು ಕೊಟ್ಟ ಅಪ್ಪಣೆಗಳನ್ನು ನೆರವೇರಿಸಿದುದಾದರೆ ಕೀರ್ತಿಯನ್ನು ಹೊಂದಿ, ಬಲಶಾಲಿಯೆನಿಸಿಕೊಂಡು ಸುಖದಿಂದ ಭೂಮಿಯಲ್ಲಿ ಜೀವಿಸಿಕೊಂಡಿರುವನು.

ಪೂರ್ವದಲ್ಲಿ ಯಯಾತಿ ಎಂಬ ಒಬ್ಬ ರಾಜನಿದ್ದನು. ಈತನು ಹಿಂದೆ ಏನೋ ಕೆಟ್ಟ ಕೆಲಸಗಳನ್ನು ಮಾಡಿ ಶಾಪವನ್ನು ಹೊಂದಿದುದರಿಂದ ಅವನ ದೇಹವು ರೋಗದಿಂದ ಗಳಿತವಾಗಿ ನರಳುತ್ತಿದ್ದನು. ಇವನಿಗೆ ಅಷ್ಟೇನೂ ವಯಸ್ಸಾಗಿರದಿದ್ದರೂ ಮುದುಕನಂತೆ ಕಾಣಿಸಿಕೊಳ್ಳುತ್ತಿದ್ದನು. ತಲೆಯು ಬೆಳ್ಳಗಾಗಿತ್ತು. ಮುಖದ ಮೇಲೆ ಚರ್ಮವು ಸುಕ್ಕುಬಿದ್ದಿತ್ತು. ತ್ರಾಣವಿಲ್ಲದೆ ನಡೆಯಲಾಗುತ್ತಿರಲಿಲ್ಲ. ಯಾವ ಸುಖದ ಮೇಲೆಯೂ ಅವನಿಗೆ ಅಪೇಕ್ಷೆಯಿರಲಿಲ್ಲ. ಮನಸ್ಸಿಗೆ ಸಂತೋಷವೇ ಇರುತ್ತಿರಲಿಲ್ಲ. ಹೀಗಿದ್ದಾಗ್ಯೂ ರಾಜನು ಮನಸ್ಸಿನಲ್ಲಿ ಸಂತೋಷದಿಂದ ಕಾಲ ಕಳೆಯುವುದಕ್ಕೆ ಅವಕಾಶವೇ ಇಲ್ಲವಲ್ಲ ಎಂದು ಬಹಳ ಪೇಚಾಡುತ್ತಿದ್ದ ಸಮಯಕ್ಕೆ ಸರಿಯಾಗಿ ಮಹಾತ್ಮನಾದ ಒಬ್ಬ ಬ್ರಾಹ್ಮಣನು ಬಂದು ರಾಜನ ಸ್ಥಿತಿಯನ್ನೆಲ್ಲಾ ವಿಚಾರಿಸಿದ ಮೇಲೆ ಬಹು ಕನಿಕರಪಟ್ಟುಕೊಂಡು

ಬ್ರಾಹ್ಮಣ–ರಾಜನೆ! ನೀನು ಸುಖದಿಂದ ಬಹುಕಾಲವಿರಬೇಕೆಂಬ ಆಶೆಯಿದ್ದರೆ ಹೇಳು, ನಾನು ಒಂದು ಉಪಾಯವನ್ನು ಹೇಳುವೆನು ಕೇಳು, ಎಂದು ಹೇಳಿದನು. ಅದಕ್ಕೆ ರಾಜನು ಒಪ್ಪಿಕೊಂಡ ಮೇಲೆ, ನಿನಗಿರುವ ಐವರು ಮಕ್ಕಳಲ್ಲಿ ಯಾರಾದರೂ ಒಬ್ಬರು ನಿನ್ನ ಈ ಸ್ಥಿತಿಯನ್ನು ವಹಿಸಿಕೊಂಡು ಕನಿಕರಪಟ್ಟುಕೊಂಡು ತನ್ನ ಪ್ರಾಯವನ್ನು ನಿನಗೆ ಕೊಡುವುದಾದರೆ, ನೀನು ಬಹುಕಾಲ ಜೀವಿಸಿಕೊಂಡಿರುತ್ತಾ ರಾಜ್ಯವಾಳುತ್ತಾ ಸುಖದಿಂದಿರುವೆ ಎಂದು ಹೇಳಿ ಹೊರಟುಹೋದನು.

ರಾಜನಾದರೊ, ತನ್ನ ಮಕ್ಕಳನ್ನು ಬಹು ಮಮತೆಯಿಂದ ಸಾಕಿ ಸಲಹುತ್ತಿದ್ದನು. ಒಂದು ದಿನ ರಾಜನು ತನ್ನ ಐವರು ಮಕ್ಕಳಲ್ಲಿ ಒಬ್ಬೊಬ್ಬನನ್ನಾಗಿ ಕರೆದು ಕೇಳೋಣವೆಂದು ಯೋಚಿಸಿ, ಮರುದಿವಸ ದೊಡ್ಡಮಗನನ್ನು ಕುರಿತು–ಎಲೈ ಯದುವೆ! ನಾನು ಹಿಂದೆ ಮಾಡಿದ ತಪ್ಪಿತಕ್ಕಾಗಿ ಮಹನೀಯರು ಕೊಟ್ಟ ಶಾಪದಿಂದ ನಾನು ಈ ರೀತಿಯಾಗಿದ್ದೇನೆ. ನಾನು ಇನ್ನೂ ವಯೋವಂತನಾಗಿದ್ದು ರಾಜ್ಯವಾಳಬೇಕೆಂದಾಶಿಸುವೆನು. ಮುದ್ದು ಕುಮಾರನೆ! ನನ್ನ ವಯೋಧರ್ಮವನ್ನು ನೀನು ತೆಗೆದುಕೊಂಡು ನಿನ್ನ ಪ್ರಾಯವನ್ನು ನನಗೆ ಕೊಡುವೆಯಾ? ಎಂದು ಪ್ರಶ್ನೆ ಮಾಡಿದನು. ಈ ಮಾತುಗಳನ್ನು ಕೇಳಿದ ಯದುವು ಒಂದು ಮಾತೂ ಆಡದೆ ನಿಂತಿರುವುದನ್ನು ನೋಡಿ–ಮಗನೆ! ಅನೇಕ ವರುಷಗಳಾದ ಮೇಲೆ ನಿನ್ನಲ್ಲಿದ್ದ ಬಲಹೀನತೆಯನ್ನು ಪುನಃ ನಾನೇ ವಹಿಸಿಕೊಂಡು, ನಿನ್ನ ಪ್ರಾಯವನ್ನು ನಿನಗೇ ಪುನಃ ಹಿಂದಿರುಗಿ ಕೊಡುವೆನು. ಯೋಚಿಸಬೇಡ, ಎಂದು ಹೇಳಲು, ಯದು–ತಂದೆಯೆ! ವಯಸ್ಸಾದ ಮೇಲೆ ಯಾವ ಸಂತೋಷವೂ ಮನಸ್ಸಿಗೆ ರುಚಿಸುವುದಿಲ್ಲವಲ್ಲಾ ಎಂದು ಯೋಚಿಸುತ್ತಿರುವೆನು. ನನಗೆ ಇನ್ನೂ ತಮ್ಮಂದಿರಿರುವರಷ್ಟೆ! ಅವರನ್ನು ಕೇಳು, ಎಂದು ಹೊರಟುಹೋದನು.

ರಾಜನು ಎರಡನೆಯ ಕುಮಾರನಾದ ತುರುವಸು ಎಂಬಾತನನ್ನು ಕರೆದು ಕೇಳಿದನು. ಅವನು ತಂದೆಯಾಡಿದ ಮಾತುಗಳನ್ನು ಕೇಳಿ,

ತುರುವಸು–ತಂದೆಯೆ ! ಈಗಾಗಲೆ ನನಗೆ ವೃದ್ಧಾಪ್ಯವು ಬೇಕಾಗಿಲ್ಲ. ಇಹ ಲೋಕದಲ್ಲಿ ಹುಟ್ಟಿದವನಿಗೆ ಸಂತೋಷ ಹೊಂದಬೇಕೆಂಬುದರ ಮೇಲೆಯೇ ಅಭಿಲಾಷೆ. ಮುದಿತನದಲ್ಲಿ ಶಕ್ತಿ ಕಡಿಮೆಯಾಗಿ ಸಂತೋಷದ ಮೇಲೆ ಅಷ್ಟು ಅಭಿಲಾಷೆ ಹುಟ್ಟುವುದಿಲ್ಲ. ನಡೆಯಲು ಶಕ್ತಿ ಇರುವುದಿಲ್ಲ. ಅಲ್ಲದೆ ಆಗ್ಗೆ ಎಲ್ಲರೂ ನನ್ನನ್ನು ನೋಡಿ ಹಾಸ್ಯ ಮಾಡುವರು. ಹೀಗೆಲ್ಲಾ ಆಗುವುದರಿಂದ ಮುದಿತನವು ನನಗೆ ಬೇಡ, ಎಂದು ಹೇಳಿ ಹೊರಟುಹೋದನು.

ರಾಜನು ಮೂರನೆಯವನಾದ ಧ್ರುವ ಎಂಬಾತನನ್ನು ಕರೆದು ಕೇಳಿದನು. ಆಗ ಧ್ರುವನು–ತಂದೆಯೆ ! ಪ್ರಾಯವು ಕಳೆದುಹೋದ ಮೇಲೆ ವೃದ್ಧಾಪ್ಯದ ಅಶಕ್ತತೆಯಿಂದ ಕುದುರೆ ಸವಾರಿಯಾಗಲಿ, ಆನೆಯ ಸವಾರಿಯಾಗಲಿ ಯಾವುದೂ ನಾನು ಮಾಡುವ ಹಾಗಿಲ್ಲ. ನಿತ್ರಾಣದಿಂದ ಕೈ ಕಾಲುಗಳು ನಡುಗುವುವು ; ಬಹಳ ಭಯ ; ಮನಸ್ಸಿಗೆ ವ್ಯಸನ ; ಹೀಗೆಲ್ಲಾ ಆಗುವುದರಿಂದ ನಾನು ಒಪ್ಪುವುದಿಲ್ಲ ಎಂದು ಹೇಳಿ ಹೋದನು

ರಾಜನು ನಾಲ್ಕನೆಯವನಾದ ಅಣು ಎಂಬುವನನ್ನು ಕುರಿತು ಪ್ರಶ್ನೆ ಮಾಡಿದನು. ಅವನು ತಂದೆಯ ವಿಜ್ಞಾಪನೆಯನ್ನು ಕೇಳಿ,

ಅಣು–ತಂದೆಯೇ ! ರೋಗ ಬಂದ ಮೇಲೆ ನೋಡುವುದಕ್ಕೆ ಚಿಕ್ಕವನಾಗಿದ್ದರೂ ಅವನು ಮೊಗುವಂತಿರುವನು. ಶುಚಿಯಾಗಿರುವುದಿಲ್ಲ, ಸಕಾಲದಲ್ಲಿ ಭಗವಂತನನ್ನು ಸೇವಿಸಲು ಪೂಜಾದಿಗಳನ್ನು ಮಾಡಲು, ಸಾಧ್ಯವಿರುವುದಿಲ್ಲ. ಆದುದರಿಂದ ನಿನ್ನ ಅಭಿಪ್ರಾಯಕ್ಕೆ ನಾನು ಒಡಂಬಡುವ ಹಾಗಿಲ್ಲ, ಎಂದು ಹೇಳಿ ಹೊರಟುಹೋದನು.

ಅನಂತರ ರಾಜನು ಹತ್ತಿರ ನಿಂತಿದ್ದ ಕೊನೆಯವನಾದ ಪುರು ಎಂಬುವನನ್ನು ನೋಡಿ–ಎಲೈ ಪ್ರಾಣಕ್ಕೆ ಸದೃಶನಾದ ಪುರುವೆ ! ನೀನು ಹತ್ತಿರದಲ್ಲಿಯೇ ನಿಂತಿದ್ದು ಇತರರು ಆಡಿದ ಮಾತುಗಳನ್ನು ಕೇಳಿರುವೆಯಷ್ಟೆ ; ಈಗ ನಿನ್ನ ಅಭಿಪ್ರಾಯವನ್ನು ಕೊಡುವೆಯಾ ? ಎಂದು ಕೇಳಲು ಪುರುವು ತುಂಬಾ ಯೋಚಿಸಿ, ಮನಸ್ಸಿನಲ್ಲಿ ಈ ತಂದೆಯಿಂದಲ್ಲವೆ ನಾನು ಜನಿಸಿರುವುದು ! ತಂದೆಯ ತೊಂದರೆಯ ಕಾಲದಲ್ಲಿ ನಾವು ಸಹಾಯಮಾಡದಿದ್ದರೆ ಮಗನು ಜೀವಿಸಿ ಪ್ರಯೋಜನವೇನು ? ನನ್ನನ್ನು ಸಾಕಿ ಇಷ್ಟುದೊಡ್ಡವನನ್ನಾಗಿ ಮಾಡಿ, ನನಗೋಸ್ಕರ ಶ್ರಮವನ್ನು ವಹಿಸಿ ವಿದ್ಯಾ ಬುದ್ಧಿಗಳನ್ನು ನನಗೆ ಕಲಿಸಿರುವನಲ್ಲವೆ ? ನಾನು ಹುಟ್ಟಿದುದಕ್ಕೆ ಪರೋಪಕಾರ ಮಾಡಲೇ ಬೇಕು. ಈತನು ನನ್ನ ತಂದೆ. ಇವನು ಸುಖವಾಗಿದ್ದರೆ ನಮ್ಮ ತಾಯಿಯೂ ಸುಖವಾಗಿರುವಳು. ಇವರಿಗೆ ಕ್ಷೇಮವನ್ನು ಬಯಸುವುದೇ ನನ್ನ ಕರ್ತವ್ಯ ಎಂದು ಯೋಚಿಸಿ, ತಂದೆಗೆ ನಮಸ್ಕರಿಸಿ,

ಪುರು—ತಂದೆಯೇ ನಿನ್ನ ಇಷ್ಟವನ್ನು ನೆರವೇರಿಸುವುದೇ ಮಗನಾದ ನನ್ನ

ಕರ್ತವ್ಯವು. ಹಾಗಿಲ್ಲದಿದ್ದ ಮೇಲೆ ನಾನು ಹುಟ್ಟಿ ಎಷ್ಟುಕಾಲ ಬದುಕಿದ್ದರೂ ಪ್ರಯೋಜನವೇನು ? ನೋಡು, ವಯಸ್ಸಾದ ಆಲದ ಮರದಲ್ಲಿ ಬೆಳೆದು ಬಿಟ್ಟ ಬಿಳಲು ಕೊನೆಗೆ ಕೊಂಬೆಗಳಿಗಾಧಾರವಾಗಿ ನಿಂತಿರುವುದಿಲ್ಲವೆ ? ಆ ಮರಕ್ಕಿಂತಲೂ ನಾನು ಕೇಡೆ ? ನೀನೇ ಹೇಳು ಎಂದು ಉತ್ತರ ಹೇಳಿ, ನಮಸ್ಕಾರವನ್ನು ಮಾಡಿ, ಇತರ ಸಹೋದರರನ್ನು ಕುರಿತು, ಮಗನು ತಂದೆತಾಯಿಗಳ ಅಭಿಲಾಷೆಗಳನ್ನು ಈಡೇರಿಸುವುದರಿಂದ ಭಗವಂತನ ಪ್ರೀತಿಗೆ ಪಾತ್ರನಾಗುವನು.ಅಲ್ಲದೆ ಇಹದಲ್ಲಿ ಒಳ್ಳೆಯ ಹೆಸರನ್ನೂ ಪಡೆದು, ಪರದಲ್ಲಿ ಮುಕ್ತಿಯುಂಟಾಗುವುದೆಂದು ಓದಿರುವೆನು. ಹೀಗಿರುವುದರಿಂದ ಇದೊ ! ನನ್ನ ಪ್ರಾಯವನ್ನು ನಿನಗೆ ಕೊಡಲು ಸಿದ್ಧನಾಗಿದ್ದೇನೆ ತೆಗೆದುಕೋ, ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ ಮಿಕ್ಕವರು ನಾಚಿಗೊಂಡರು. ವೈದ್ಯರ ಸಹಾಯದಿಂದ ಮಗನ ಶರೀರದಲ್ಲಿದ್ದ ರಕ್ತದ ಬಹುಭಾಗವನ್ನೆಲ್ಲಾ ತಂದೆಯ ಶರೀರಕ್ಕೆ ಸೇರಿಸಲ್ಪಟ್ಟಿತು. ಇತ್ತ ಕಾಲಕ್ರಮದಲ್ಲಿ ಪುರುವು ಬಲದಲ್ಲಿ ಕಡಿಮೆಯಾಗುತ್ತಾ ಮುದುಕನಂತೆ ಕಾಣಿಸಿಕೊಂಡು ಬಹುಕಾಲ ಬದುಕಿದ್ದನು. ತಂದೆಯಾದರೋ, ವಯೋವಂತನಂತೆ ಕಾಣಿಸಿಕೊಳ್ಳುತ್ತಾ ಸುಖವಾಗಿ ರಾಜ್ಯಭಾರವನ್ನು ಬಹಳ ಕಾಲವಾಳುತ್ತಾ, ತನ್ನ ಕರ್ಮಗಳಿಂದ ಭಗವಂತನನ್ನು ಸೇವಿಸುತ್ತಾ, ಪ್ರೀತಿಸುತ್ತಾ, ಪ್ರಜೆಗಳಿಂದ ಒಳ್ಳೆಯ ಯಶಸ್ಸನ್ನು ಸಂಪಾದಿಸಿದನು.

ಒಂದು ದಿವಸ ರಾಜನು ಪುರುವನ್ನು ಕರೆದು—ನನ್ನ ಪ್ರಾಣಪದಕನೆ ! ನೀನು ಕೊಟ್ಟ ಬಲದಿಂದ ನನ್ನ ಜೀವಿತ ಕಾಲವನ್ನು ಬಹು ಸಂತೋಷದಿಂದ ಇದುವರೆಗೂ ಕಳೆದೆನು. ಅನೇಕ ಸೌಖ್ಯಗಳನ್ನು ಇದುವರೆಗೂ ಅನುಭವಿಸಿದೆನು. ಕೊನೆಗೆ ಇಹಲೋಕದ ಆಶೆಯನ್ನು ತ್ಯಜಿಸಿದರೆ ಮೋಕ್ಷಸುಖವು ಪರಮಾತ್ಮನ ಕೃಪೆಯಿಂದ ದೊರೆವುದೆಂದು ತಿಳಿದೆನು. ಇನ್ನು ನೀನು ಬಹುಕಾಲ ಸುಖದಿಂದ ಜೀವಿಸಿಕೊಂಡಿರು. ನಿನ್ನ ಯೌವನವನ್ನು ಹಿಂದಿರುಗಿ ಕೊಡುವೆನು, ತೆಗೆದುಕೋ. ಉಳಿದ ಕಾಲದಲ್ಲಿ ನಾನು ಅರಣ್ಯದಲ್ಲಿದ್ದು ದೇವರನ್ನು ಭಜಿಸುತ್ತಾ ಕಾಲಕ್ಷೇಪವನ್ನು ಮಾಡಿಕೊಂಡಿರುವೆನು. ನನ್ನ ರಾಜ್ಯವು ಮುಂದಕ್ಕೆ ನಿನ್ನದೇ, ನೀನೇ ಮುಂದಕ್ಕೆ ರಾಜನಾಗಲು ಅರ್ಹನು. ನೀನು ನನ್ನ ಆಜ್ಞೆಯನ್ನು ನೆರವೇರಿಸಿರುವೆ, ಎಂದು ಹೇಳಿದನು.

ಆ ಸಮಯದಲ್ಲಿ ಬಂದ ಕೆಲವು ಪ್ರಜಾಪ್ರಮುಖರು—ಎಲೈ ರಾಜನೆ ! ನಿನಗೆ ದೊಡ್ಡ ಮಗನಿರುವಾಗ್ಗೆ ಕೊನೆಯವನಿಗೆ ರಾಜ್ಯವು ಹೇಗೆ ದೊರೆಯುವುದು ? ನೀನು ರಾಜಧರ್ಮವನ್ನು ತಿಳಿದವನಾಗಿರುವಾಗ್ಗೆ ವಿಶೇಷ ಹೇಳಲಾರೆವು, ಎಂದು ಹೇಳಿದರು. ಈ ಮಾತುಗಳನ್ನು ಕೇಳಿದ ಯಯಾತಿ ಮಹಾರಾಜನು—ಮಹನೀಯರಾದ ನೀವೆಲ್ಲರೂ ಕೇಳಿ. ಈ ಪುರುವೇ ನನ್ನ ಹೆಚ್ಚು ವಿಶ್ವಾಸಕ್ಕೆ ಪಾತ್ರನಾದ ಸುತನು. ಹೇಗೆಂದರೆ—ನನ್ನ ಸ್ಥಿತಿಯನ್ನು ತಿಳಿದು ತನ್ನ ಕಷ್ಟವನ್ನು ಯೋಚಿಸದೆಯೇ ನನ್ನ ಅಪ್ಪಣೆಯನ್ನು ನೆರವೇರಿಸಿ, ಕೊನೆಗೆ ಸಂತೋಷವನ್ನುಂಟುಮಾಡಿರುವನು. ಮಿಕ್ಕವ

ರೆಲ್ಲರೂ ಸ್ವಾರ್ಥಪರರಾಗಿಯೂ, ನನಗೆ ಅವಿಧೇಯರಾಗಿಯೂ ನಡೆದಿರುವರು. ಯಾರು ತಂದೆಗೆ ಅವಿಧೇಯರಾಗಿ ನಡೆಯುವರೋ ಅವರು ತಂದೆಗೆ ನಿಜವಾದ ಮಕ್ಕಳೆಂದೆನಿಸಿಕೊಳ್ಳುವುದಿಲ್ಲ, ಎಂದು ಜ್ಞಾನಿಗಳೂ ಹೇಳಿರುವರು, ಯಾವನು ಮಾತಾಪಿತೃಗಳಿಗೆ ವಿಧೇಯನಾಗಿ ನಡೆಯುತ್ತಾ,ಅವರನ್ನು ಪ್ರೀತಿಸುತ್ತಾ.ಅವರ ಶ್ರೇಯಸ್ಸನ್ನೇ ಕೋರುತ್ತಾ ಇರುವನೋ, ಅವನೇ ನಿಜವಾದ ಮಗನು ಎಂದು ಹೇಳಿಸಿಕೊಳ್ಳುವನು. ಈ ರೀತಿಯಲ್ಲಿ ನಡೆದಿರುವವನೇ ಈ ಪುರುವು. ಆದುದರಿಂದ ಇವನು ಕೊನೆಯ ಮಗನಾಗಿದ್ದರೂ ಇವನೇ ಈ ರಾಜ್ಯಕ್ಕೆ ಮುಂದೆ ದೊರೆಯಾಗಿರಬೇಕು, ಎಂದು ಹೇಳಿದನು. ಅಲ್ಲಿ ನೆರೆದಿದ್ದ ಬ್ರಾಹ್ಮಣ ವೊದಲಾದ ಜಾತಿಯ ಮುಖಂಡರೆಲ್ಲಾ ರಾಜನನ್ನು ಕುರಿತು—ರಾಜನೆ ! ನೀನು ಹೇಳಿದುದೇ ನಿಜ. ಯಾವನು ತನ್ನ ತಂದೆ ತಾಯಿಗಳ ಮಾತುಗಳನ್ನು ಕೇಳುವನೋ, ಯಾವನು ಅವರ ಶ್ರೇಯಸ್ಸಿಗಾಗಿ ಸ್ವಾರ್ಥತೆಯನ್ನು ಬಿಟ್ಟಿರುವನೋ ಅವನೇ ರಾಜ್ಯಕ್ಕೆ ರಾಜನಾಗಲು ತಕ್ಕವನು. ಅವನೇ ಎಲ್ಲರಿಂದಲೂ ಮರ್ಯಾದೆಗೆ ಪಾತ್ರನು, ಎಂದು ಎಲ್ಲರೂ ಹೇಳಿದರು. ಪುರುವು ತಂದೆಗೆ ಕೊಟ್ಟ ರಕ್ತವನ್ನು ವೈದ್ಯರ ಸಹಾಯದಿಂದ ತಾನು ಹೊಂದಿ, ಯೌವನವನ್ನು ಪುನಃ ತಾನು ಸ್ವೀಕರಿಸಿ. ಬಹಳ ಕಾಲ ರಾಜ್ಯವಾಳಿ ಯಶೋವಂತನಾದನು. ಅನಂತರ ಯಯಾತಿಯು ಅರಣ್ಯ ಪ್ರವೇಶಮಾಡಿ, ಆಶ್ರಮದಲ್ಲಿದ್ದುಕೊಂಡು ಭಗವಂತನನ್ನು ಸ್ತೋತ್ರಮಾಡುತ್ತಾ, ಸಮಸ್ತ ವಿಷಯಗಳ ಮೇಲಣ ಆಶೆಯನ್ನು ತ್ಯಜಿಸಿ, ಅಲ್ಲಿಯೇ ಕಾಲ ಕಳೆಯಲು ಹೊರಟುಹೋದನು.

ಬುದ್ಧಿವಾದ—ತಂದೆತಾಯಿಗಳು ಹೇಳುವ ಮಾತುಗಳು ಕಷ್ಟವೆಂದು ವೊದಲು ತೋರಿಬರುವುದು. ತಾಳ್ಮೆಯಿಂದ ಲಾಲಿಸಿ ನಡೆದರೆ, ಮುಂದಕ್ಕೆ ಸೌಖ್ಯವುಂಟಾಗಿ, ಬಹುಕಾಲ ಜೀವಿಸಿ ಖ್ಯಾತಿ ಹೊಂದುವನು," ('ಯಯಾತಿ ಮತ್ತು ಪುರು') — ಬಾಲಕರ ನೀತಿಕಥಾವಳಿ.

ಎಂ. ಎಸ್. ಪುಟ್ಟಣ್ಣನವರ 'ನೀತಿಚಿಂತಾಮಣಿ' ಯ ಕಥೆ ಸಂಕ್ಷಿಪ್ತ, ಸರಳ ಹಾಗೂ ಅನಗತ್ಯ ಪ್ರಶ್ನೆಗಳಿಗೆ ಆಸ್ಪದ ಕೊಡುವುದಿಲ್ಲ. 'ನೀತಿಬೋಧೆ' (ಜಿ. ಸಿದ್ದಪ್ಪ) ಯಲ್ಲಿ ಈ ಗುಣಗಳು ಕಡಿಮೆ. 'ಬಾಲಕರ ನೀತಿಕಥಾವಳಿ' (ಆನವಟ್ಟಿ ರಾಮರಾಯು) ಯಲ್ಲಾದರೋ ಇದಕ್ಕೆ ತೀರ ವಿರುದ್ಧಗುಣಗಳಿವೆ. ಪುರು ತನ್ನ ಯೌವನವನ್ನು ತಂದೆಗೆ ದಾನ ಮಾಡಿದನೆಂಬುದನ್ನು ಹೇಳುವಾಗ ಅದನ್ನು ವೈದ್ಯರ ಸಹಾಯದಿಂದ ರಕ್ತದಾನದ ಮೂಲಕ ನೆರವೇರಿಸಿದನೆಂಬ ಬಾಲಿಶವಾದ ಹೇಳಿಕೆಗೂ ಇಲ್ಲಿ ಸ್ಥಳವಿದೆ. ಜೊತೆಗೆ, ಯಯಾತಿಯನ್ನು ಪ್ರಾರಂಭದಲ್ಲೇ ಕೆಟ್ಟ ಕೆಲಸ ಮಾಡಿದವ ಎಂದು ಹೇಳುವುದರ ಜೊತೆಗೆ ಇಂಥ ವ್ಯಕ್ತಿ ದಾನಾರ್ಹನೆ ಎಂಬ ಪ್ರಶ್ನೆಗೆ ಉತ್ತರ ಕೊಡುವುದಿಲ್ಲ. 'ನೀತಿಚಿಂತಾಮಣಿ' ಯದೇ ಹಾದಿಯಲ್ಲಿ ನಡೆಯಲು ಯತ್ನಿಸಿದರೂ ಅಲ್ಲಿನ ಗುಣಬಾಹುಲ್ಯವಿಲ್ಲದೆ ಈ ಕೃತಿಗಳು ಸೋಲನ್ನು ಗಳಿಸಿದವು. 'ನೀತಿಚಿಂತಾ

ಮಣಿ' ಯ ಜನಪ್ರಿಯತೆ ಇವುಗಳಿಗೆ ದಕ್ಕಲಿಲ್ಲ. ಇಂದಿಗೂ ಉಳಿದಿರುವ ಹೆಸರು 'ನೀತಿಚಿಂತಾಮಣಿ' ಯದು ಮಾತ್ರ.

ನೀತಿ ಕಥೆಗಳಲ್ಲಿ ಪ್ರಾಣಿಗಳು ಮನುಷ್ಯನ ಸಂಕೇತವಾಗುವುದು ಪುಟ್ಟಣ್ಣನವರಿಗೆ ಅಷ್ಟೇನೂ ಒಪ್ಪಿಗೆಯಾದ ತತ್ತ್ವವಲ್ಲ. ಇದರ ಕುರುಹುಗಳು ನೀತಿಚಿಂತಾಮಣಿಯಲ್ಲಿಯೇ ಕಾಣಿಸಿಕೊಳ್ಳುತ್ತವೆ. ಪ್ರಾಣಿಗಳೇ ಪಾತ್ರಧಾರಿಗಳಾಗಿರುವ ಕಥೆಗಳು ಇಲ್ಲಿ ತೀರ ಕಡಿಮೆ. ಮುಂದೆ ಈ ಮನೋಧರ್ಮ ಇನ್ನಷ್ಟು ಬಿಗಿಯಾಗಿ 'ಸುಮತಿ ಮದನಕುಮಾರರ ಚರಿತ್ರೆ' ಯಂಥ ಕೃತಿ ಕನ್ನಡಕ್ಕೆ ಲಭಿಸಿತು. "ವಿದ್ಯಾಭ್ಯಾಸ ಮಾಡುವ ರೀತಿಯನ್ನು ವಿ ಧಿ ವಾ ಕ್ಯಾ ಗಿ ಹೇಳದೆ, ಒಳ್ಳೇ ಮಾರ್ಗವನ್ನು ಹುಡುಗರು ಗ್ರಹಿಸುವ ಹಾಗೆ ಕಥಾರೂಪವಾಗಿ ದೊಡ್ಡ ವಿಷಯಗಳನ್ನು ತಿಳಿಸುವುದಕ್ಕೆ ನಮ್ಮ 'ಹಿತೋಪದೇಶ' ಅಥವಾ 'ಪಂಚತಂತ್ರ' ವನ್ನು ಬಿಟ್ಟರೆ ಬೇರೇ ಯಾವ ಗ್ರಂಥವೂ ನಮ್ಮಲ್ಲಿಲ್ಲ. ಆದರೆ 'ಪಂಚತಂತ್ರ' ದಲ್ಲಿ ಮಾತನಾಡಲು ಶಕ್ತಿ ಇಲ್ಲದ ಜಂತುಗಳು ಮಾತನಾಡುವ ಹಾಗೆ ತೋರಿಸಿರುವ ಕಾರಣ, ಲೋಕದಲ್ಲಿಲ್ಲದ ಸುಳ್ಳನ್ನು ಹೇಳುವುದರ ಮೂಲಕ ನಿಶ್ಚಯವನ್ನು ಬೋಧಿಸಿದಂತಾಗುವುದು. ಇದು ಆಧುನಿಕರ ಮತವಲ್ಲ." (ಸುಮಚ. ಪೀಠಿಕೆ. ಪು. IV) [17] ಎಂದು ಪುಟ್ಟಣ್ಣನವರು ಹೇಳುತ್ತಾರೆ.

ಪುಟ್ಟಣ್ಣನವರ ಈ ಮಾತು ಅವರ ವ್ಯಕ್ತಿತ್ವದ ಒಂದು ಪ್ರತೀಕವಾಗಿ ತೋರುತ್ತದೆ. ಏಕೆಂದರೆ ಅವರ ಸಮಕಾಲೀನರಾಗಲೀ ಅನಂತರದ ಶಿಶು ಸಾಹಿತ್ಯದಲ್ಲಿ ಕೆಲಸ ಮಾಡಿದವರಾಗಲಿ, ಅವರಂತೆ ರಂಜನೆಯ ಅಂಶವನ್ನು ಹೀಗೆ ಪಟ್ಟು ಹಿಡಿದು ಹೊರದೂಡಲಿಲ್ಲ. ಇದಕ್ಕೆ ಸಾಕ್ಷ್ಯವಾಗಿ ತೀ. ನಂ. ಶ್ರೀ. ಅವರ ಮಾತನ್ನು ಇಲ್ಲಿ ನೆನೆಯಬಹುದು."ಈ ಸಂದರ್ಭದಲ್ಲಿ ಗಮನಿಸತಕ್ಕ ಅಂಶ ಮತ್ತೊಂದುಂಟು.ಕೋತಿ ಮಾತಾಡಿತೆಂದು ಕಥೆ ಹೇಳಿದರೆ "ಅದೆಲ್ಲಿ ಮಾತಾಡುತ್ತದೆ ?" ಎಂದು ಸಂಶಯದ ಪ್ರಶ್ನೆ ಹಾಕುವ ಮಗುವನ್ನು ನಾನು ಇದುವರೆಗೂ ಕಂಡಿಲ್ಲ. ಮಕ್ಕಳ ಪ್ರಪಂಚ ಯಕ್ಷಿಣಿಯ (fairy) ಪ್ರಪಂಚ. ನಮ್ಮ ಪ್ರಪಂಚದಲ್ಲಿ ಅಸಂಭವವಾದ ಸಂಗತಿಗಳೆಲ್ಲ ಅಲ್ಲಿ ಸುಲಭವಾಗಿ ನಡೆದುಬಿಡುತ್ತವೆ. ಅದರಲ್ಲಿ ಮೃಗಪಕ್ಷಿಗಳು ಮಾತಾಡುತ್ತವೆ ; ಬೇಕಾದಷ್ಟು ಜನ ರಾಕ್ಷಸರು ಸಂಚರಿಸುತ್ತಾರೆ; ಅವರನ್ನು ಪುಟ್ಟ ರಾಜಕುಮಾರರು ನಿಮಿಷ ಮಾತ್ರದಲ್ಲಿ ಸಂಹರಿಸಿಬಿಡುತ್ತಾರೆ. ಒಬ್ಬನ ಪ್ರಾಣ ಅವನ ಹೃದಯದಲ್ಲಿರದೆ, ದ್ವೀಪಾಂತರದಲ್ಲಿರುವ ಯಾವುದೋ ಒಂದು ಪಂಜರದ ಪಕ್ಷಿಯಲ್ಲಿರುತ್ತದೆ. ಇಂಥ ಅದ್ಭುತಗಳೇ ಮಕ್ಕಳ ರಾಜ್ಯದ ದಿನಚರ್ಯೆ. ಯಾವ ನಿಜವಾದ ಮಗುವಿಗೂ ಇವುಗಳಲ್ಲಿ ಸಂದೇಹ ಹುಟ್ಟುವುದಿಲ್ಲ." [18]

ಪುಟ್ಟಣ್ಣನವರ ಉದ್ದೇಶ ನೀತಿಬೋಧೆ ಮಾತ್ರ. ರಂಜನೆ ಆನುಷಂಗಿಕವಾಗಿಯೂ ಕಾಣದು. ತೀ. ನಂ. ಶ್ರೀ. ಅವರ ಉದ್ದೇಶ ಮಕ್ಕಳಿಗೆ ಪ್ರಿಯವಾದ ರಂಜನೆ. ಇಬ್ಬರ ದೃಷ್ಟಿಯೂ ಬೇರೆ ಬೇರೆ.

'ನೀತಿಚಿಂತಾಮಣಿ'ಯ ಕಥೆಗಳ ಗಾತ್ರ ಕಡಿಮೆ, ವಿಷಯ ಸರಳವಲ್ಲ, ನಿರೂಪಣೆ ಸರಳ. ಉದ್ದೇಶ ನೀತಿ, ರಂಜನೆ ಇದ್ದಲ್ಲಿ ಅದು ಅನುದ್ದೇಶಿತ. ರಂಜನೆಯ ಕಥೆಗಳಲ್ಲಿ ಗಾತ್ರ ಹೆಚ್ಚು, ವಿಷಯ ನಿರೂಪಣೆಗಳೆರಡೂ ಸರಳ. ಉದ್ದೇಶ ಪ್ರಮುಖ ವಾಗಿ ರಂಜನೆ, ನೀತಿ ಇದ್ದಲ್ಲಿ ಅದು ಆನುಷಂಗಿಕ. 'ನೀತಿಚಿಂತಾಮಣಿ'ಯ ಕಥೆಗಳ ಆಯ್ಕೆಯಲ್ಲೇ ಪುಟ್ಟಣ್ಣನವರ ಒಲವು ಏನು ಎಂಬುದು ವಿಶದವಾಗಿ ವ್ಯಕ್ತವಾಗಿದೆ. ಅವರ ಮನೋಧರ್ಮದ ಪ್ರಕಟಣೆಯಾಗಿ ಇಲ್ಲಿನ ಮೂಲಭೂತ ಮೌಲ್ಯಗಳ ಕಥೆಗಳು ಕಾಣಿಸಿಕೊಳ್ಳುತ್ತವೆ. ಅವರ ಬಾಳಿನ ಉಸಿರು ಪ್ರಾಮಾಣಿಕತೆ. ಈ ಕೃತಿಯಲ್ಲಿ ಸತ್ಯ, ಪಾತಿವ್ರತ್ಯ, ಸ್ವಾಮಿಕಾರ್ಯನಿರ್ವಾಹ, ಸ್ವಾಮಿಭಕ್ತಿ ಮೊದಲಾದ ಶೀರ್ಷಿಕೆಗಳಲ್ಲಿ ಈ ಮುಖ್ಯ ಆಶಯ ಕಾಣಿಸಿಕೊಳ್ಳುತ್ತದೆ. ಒಂದು ತತ್ತ್ವಕ್ಕಾಗಿ ಜೀವನವನ್ನೇ ಮೀಸಲಿಟ್ಟ ಪುಟ್ಟಣ್ಣನವರಂಥವರಿಗೆ 'ನೀತಿಚಿಂತಾಮಣಿ' ಯನ್ನು ಸಿದ್ಧಪಡಿಸುವುದು ಕೂಡ ಒಂದು ಮಹತ್ತ್ವದ ಕೈಂಕರ್ಯ.

'ನೀತಿಚಿಂತಾಮಣಿ' ಪ್ರಚುರವಾಗುವ ಮೊದಲು 'ಕಥಾಸಪ್ತತಿ', 'ಕಥಾ ಸಂಗ್ರಹ'ದ ಎರಡು ಸಂಪುಟಗಳು ಮೊದಲಾದ ಮಿಶನರಿಗಳ ಕಥಾಸಂಕಲನಗಳು ಬಹಳ ಜನಪ್ರಿಯವಾಗಿದ್ದುವು. ಶಾಲೆಗಳಲ್ಲೂ ಅವೇ ಪಠ್ಯಗಳಾಗಿದ್ದವು. ಆದರೆ 'ನೀತಿ ಚಿಂತಾಮಣಿ' ಹೊರಬಿದ್ದ ಮೇಲೆ ಈ ಕೃತಿಗಳು ಹಿಂದೆ ಸರಿದವು. "ಮಿಶನರಿಗಳ ಈ ಬಗೆಯ ಎತ್ತುಗಡೆಗೆ ಪ್ರತಿಯಾಗಿಯೋ ಎಂಬಂತೆ ಎಂ. ಎಸ್. ಪುಟ್ಟಣ್ಣ ಮತ್ತು ಎಂ. ಬಿ. ಶ್ರೀನಿವಾಸಯ್ಯಂಗಾರ್ ಇವರು ಸೇರಿ 'ನೀತಿಚಿಂತಾಮಣಿ'ಯ ಮೂರು ಸಂಪುಟಗಳನ್ನು ಸಿದ್ಧಗೊಳಿಸಿದರು."[19] ಎಂಬ ಶ್ರೀನಿವಾಸ ಹಾವನೂರರ ಮಾತನ್ನು ನೆನೆಯಬಹುದು. 'ನೀತಿಚಿಂತಾಮಣಿ' ಬಹುಬೇಗ ಜನಪ್ರಿಯವಾಗಿದ್ದಲ್ಲದೆ, ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ, ಬೊಂಬಾಯಿ, ಮದರಾಸು ಪ್ರಾಂತಗಳ ಕನ್ನಡ ಶಾಲೆಗಳಲ್ಲಿಯೂ ಬಹುಕಾಲ ಪಠ್ಯವಾಗಿ ಮುಂದುವರೆಯಿತು.

'ನೀತಿಚಿಂತಾಮಣಿ'ನೀತಿಕಥೆಗಳ ಒಂದು ಅನರ್ಘ್ಯ ಗಣಿ.ಈ ಕೃತಿಯ ರಚನೆಯಲ್ಲಿ ಪುಟ್ಟಣ್ಣನವರು ತಮ್ಮ ಸ್ನೇಹಿತರಾದ ಎಂ.ಬಿ. ಶ್ರೀನಿವಾಸಯ್ಯಂಗಾರರ ಸಹಾಯವನ್ನು ಪಡೆದಿದ್ದರು.ಒಂಬತ್ತು ದಶಕಗಳಿಗೂ ಹೆಚ್ಚಾಗಿ ಮಕ್ಕಳ ಮನಸ್ಸನ್ನು ಮುದಗೊಳಿಸಿದ, ತಿದ್ದಿದ ಈ ಕೃತಿ ಬಾಲಸಾಹಿತ್ಯದ ಒಂದು ದಾಖಲೆಯಾಗಿದೆ. ನೀತಿಯ ಹೂರಣವನ್ನು ಕಥೆಯ ಕಣಕದಲ್ಲಿಟ್ಟು ಪುಟ್ಟಣ್ಣನವರು ಸಿದ್ಧಗೊಳಿಸಿದ ಈ ರುಚಿಕರವಾದ ಭಕ್ಷ್ಯವಿಶೇಷ ಹಿರಿಯರ ಪ್ರೀತಿ, ಆಸ್ವಾದನೆಗಳಿಗೂ ಹೊರತಾಗಿಲ್ಲ. 'ನೀತಿಚಿಂತಾಮಣಿ'ಯ ಕಥೆಗಳ ಹಲವು ಪಾತ್ರಗಳು—ಆಷಾಢಭೂತಿ, ನಂಜೇಲಿಂಗಭಟ್ಟ ಇತ್ಯಾದಿ—ಈಗಲೂ ಜನಮನದಲ್ಲಿ ಉಳಿದಿರುವ ವ್ಯಕ್ತಿಗಳು. ಸುಮಾರು ಮೂವತ್ತಕ್ಕೂ ಹೆಚ್ಚು ಮುದ್ರಣಗಳನ್ನು ಕಂಡ ಈ ಕೃತಿ ಇಂದಿಗೂ, ಜನಪ್ರಿಯವಾಗಿದೆ. ಪುಟ್ಟಣ್ಣನವರ ಈ ಕೊಡುಗೆ ಕನ್ನಡದ ಚಿಣ್ಣರಿಗೆ ಇಂದಿಗೂ, ಎಂದಿಗೂ ಪ್ರಿಯವಾದುದೇ. ಈ ಕೃತಿಯ ಮೂಲಕವೇ ಪುಟ್ಟಣ್ಣನವರಿಗೆ ಮಕ್ಕಳ ಸಾಹಿತ್ಯ ನಿರ್ಮಾಪಕರೆಂಬ ಪಟ್ಟ ಲಭಿಸಿತು.

## ಅನುಬಂಧ

'ನೀತಿಚಿಂತಾಮಣಿ'ಯ ಮೊದಲ ಮುದ್ರಣದಲ್ಲಿ (1884) ಒಟ್ಟು 85 ಶೀರ್ಷಿಕೆಗಳಲ್ಲಿ 165 ಕಥೆಗಳಿವೆ. ಆಯಾ ಶೀರ್ಷಿಕೆಯ ಅಡಿಯಲ್ಲಿರುವ ಕಥೆಗಳ ಸಂಖ್ಯೆ ಒಂದರಿಂದ ಮೂರು.

ಒಂದು ಕಥೆಯನ್ನು ಹೊಂದಿರುವ ಶೀರ್ಷಿಕೆಗಳ ಸಂಖ್ಯೆ—17 (17 ಕಥೆಗಳು)
ಎರಡು ಕಥೆಗಳನ್ನು ಹೊಂದಿರುವ ಶೀರ್ಷಿಕೆಗಳ ಸಂಖ್ಯೆ—56 (112 ಕಥೆಗಳು)
ಮೂರು ಕಥೆಗಳನ್ನು ಹೊಂದಿರುವ ಶೀರ್ಷಿಕೆಗಳ ಸಂಖ್ಯೆ—12 (36 ಕಥೆಗಳು)

ಒಟ್ಟು 85 (165 ಕಥೆಗಳು)

ಈ 165 ಕಥೆಗಳನ್ನು ಬಾಲ್ಯ, ಯೌವನ ಮತ್ತು ಅಪರವಯಸ್ಸು ಎಂಬ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಬಾಲ್ಯ ವಿಭಾಗದಲ್ಲಿ 30 ಶೀರ್ಷಿಕೆಗಳಲ್ಲಿ 62 ಕಥೆಗಳೂ, ಯೌವನ ವಿಭಾಗದಲ್ಲಿ 25 ಶೀರ್ಷಿಕೆಗಳಲ್ಲಿ 44 ಕಥೆಗಳೂ ಅಪರವಯಸ್ಸು ವಿಭಾಗದಲ್ಲಿ 30 ಶೀರ್ಷಿಕೆಗಳಲ್ಲಿ 59 ಕಥೆಗಳೂ ಇವೆ. ಕಥೆಗಳ ಆಕರಗಳು ಹೀಗಿವೆ.

### ಮಹಾಭಾರತದ ಕಥೆಗಳು

1. ಕುಂತಿದೇವಿ ಮತ್ತು ಪಾಂಡವರು, 2. ಯಜ್ಞೇಶ್ವರನಿಗೆ ಅಜೀರ್ಣವಾದದ್ದು, 3. ಅಭಿಮನ್ಯು ಯುದ್ಧಕ್ಕೆ ಹೋದದ್ದು, 4. ಎರಡು ಪಕ್ಷಿಗಳ ವೃತ್ತಾಂತ, 5. ಮಣಿಮಂತನ ಕಥೆ, 6. ಆಸ್ತಿಕನ ಕಥೆ, 7. ಅಷ್ಟಾವಕ್ರ ಋಷಿ ಮತ್ತು ವಂದಿ, 8. ಉತ್ತರನ ಕಥೆ, 9. ಅರ್ಜುನ ಮತ್ತು ಹದ್ದು, 10. ಉದಂಕ ಋಷಿ, 11. ಧರ್ಮರಾಯನ ಸತ್ಯ, 12. ಹರಿಶ್ಚಂದ್ರ, 13.ಸಪ್ತರ್ಷಿಗಳ ಕಥೆ, 14. ಶಂಖ ಲಿಖಿತರ ಕಥೆ, 15. ಭೀಮ ಮತ್ತು ನಾರದರು, 16. ಗರುಡ ಮತ್ತು ಶಾಂಡಿಲಿ, 17. ಅಣಿಮಾಂಡವ್ಯ ಋಷಿ, 18. ಗೌತಮಿ ಎಂಬ ಋಷಿ ಪತ್ನಿ ಮತ್ತು ಸರ್ಪ 19. ಚ್ಯವನ ಋಷಿ ಮತ್ತು ಕುಶಿಕರಾಯ, 20. ಚಿರಕಾರಿಕೋಪಾಖ್ಯಾನ, 21. ಶಕುನಿಯ ಕಥೆ, 22. ಶಾಕುಲ ಕಥೆ, 23. ನಕ್ಷತ್ರವರ್ಮನ ಕಥೆ, 24. ಹಂಸ ಮತ್ತು ಕಾಗೆಗಳು, 25. ಲೋಪಾಮುದ್ರೆಯ ಕಥೆ, 26. ಸಾವಿತ್ರಿಯ ಕಥೆ, 27. ಶಾಂಡಿಲಿ ಮತ್ತು ಸುಮನ, 28. ಚಂಡಿಯ ಕಥೆ, 29. ಭೀಷ್ಮ ಮತ್ತು ಯುಧಿಷ್ಠಿರ, 30. ಎರಡು ಪಾರಿವಾತಗಳು, 31. ಕುಂತಿಯು ಮಕ್ಕಳನ್ನು ಸಾಕಿದ್ದು, 32. ಬ್ರಾಹ್ಮಣ ಮತ್ತು ಕಳ್ಳರು, 33. ಪತಿವ್ರತೆ ಮತ್ತು ಬ್ರಾಹ್ಮಣ, 34. ಬೇಡನು ರಾಕ್ಷಸನನ್ನು ಕೊಂದದ್ದು, 35. ಶಲ ಮತ್ತು ವಾಮದೇವ, 36. ಹರಿಶ್ಚಂದ್ರನ ಕಾರ್ಯನಿರ್ವಾಹ, 37. ಬ್ರಾಹ್ಮಣ ಮತ್ತು ಬಕಪಕ್ಷಿ, 38. ಧರ್ಮರಾಯನ ಆಶಾರಾಹಿತ್ಯ, 39. ನಹುಷನ ಕಥೆ, 40. ಕಶ್ಯಪ ಮತ್ತು ನರಿ, 41. ಒಬ್ಬ ಋಷಿಯ ವೃತ್ತಾಂತ, 42. ಕುಂತಿಯ ಅನುತಾಪ, 43.ದಧೀಚಿ,44. ಮಯೂರಧ್ವಜ,45. ವ್ಯಾಧನು ಅನ್ನದಾನ ಮಾಡಿದ್ದು, 46. ಕರ್ಣನ ತ್ಯಾಗ, 47. ಶಿಬಿ ಚಕ್ರವರ್ತಿ, 48. ಗಯೋಪಾಖ್ಯಾನ, 49. ಭೀಷ್ಮಾಚಾರ್ಯ, 50. ಕರ್ಣನ ಚಿತ್ತಸ್ಥೈರ್ಯ, 51. ಕಾಲಕ ವೃಕ್ಷ, 52. ನಳನ ವೃತ್ತಾಂತ, 53. ಪಾಂಡವರು, 54. ಕೃಷ್ಣ ಮತ್ತು ನಾರದರ ಸಂವಾದ, 55. ದ್ರೌಪದಿಯ ಕಥೆ, 56. ಕೃಷ್ಣ ಮತ್ತು ವಿದುರ.

(ಚಂಡಿಯ ಕಥೆ ಮತ್ತು ಮಯೂರಧ್ವಜ—ಈ ಎರಡು ಕಥೆಗಳು ಜೈಮಿನಿಭಾರತದವು)

### ರಾಮಾಯಣದ ಕಥೆಗಳು

1. ಶ್ರೀರಾಮನ ಕಥೆ, 2. ಮೂರ್ಛೆ ಹೋಗಿದ್ದ ಲಕ್ಷ್ಮಣನನ್ನು ಕಂಡು ರಾಮ ದುಃಖಪಟ್ಟದ್ದು, 3. ನಂದಿಕೇಶ್ವರ ಮತ್ತು ರಾವಣ, 4. ನೃಗ ಚಕ್ರವರ್ತಿ, 5. ಹನುಮಂತನು ಸೀತೆ

ಯನ್ನು ಲಂಕೆಯಲ್ಲಿ ಹುಡುಕಿದ್ದು, 6. ಮಾರೀಚನ ಕಥೆ, 7. ಕಾಕಾಸುರನ ಕಥೆ, 8. ಹನುಮಂತನು ಸೀತೆಯನ್ನು ಕಂಡದ್ದು, 9. ಭಗೀರಥ, 10. ವಿಶ್ವಾಮಿತ್ರ, 11. ಹನುಮಂತನು ಸಂಜೀವನ ಪರ್ವತವನ್ನು ತಂದದ್ದು, 12. ಭರತನು ರಾಮನನ್ನು ನಿರೀಕ್ಷಿಸುತ್ತಿದ್ದದ್ದು, 13. ಸೀತಾ ವೃತ್ತಾಂತ, 14. ಇಂದ್ರ ಕಾಮಧೇನುಗಳ ಸಂವಾದ, 15. ಸಗರ ಮತ್ತು ಅಸಮಂಜ, 16. ರಾಮನು ಸೀತೆಯನ್ನು ಕಾಡಿಗೆ ಕಳುಹಿಸಿದ್ದು, 17. ಲಕ್ಷ್ಮಣನು ಆಜ್ಞೆಯನ್ನು ಉಲ್ಲಂಘಿಸಿದ್ದು, 18. ಹೈರಾವಣ ಮೈರಾವಣರ ಕಥೆ, 19. ಶೂರ್ಪನಖಿಯ ವೃತ್ತಾಂತ, 20. ಕೈಕೆಯ ಕಥೆ, 21. ಶುನಶ್ಶೇಫನ ಕಥೆ, 22. ವಿಭೀಷಣ, 23. ಶಬರಿಯ ವೃತ್ತಾಂತ.

(ನಂದಿಕೇಶ್ವರ ಮತ್ತು ರಾವಣ, ನೃಗ ಚಕ್ರವರ್ತಿ, ರಾಮನು ಸೀತೆಯನ್ನು ಕಾಡಿಗೆ ಕಳುಹಿಸಿದ್ದು ಮತ್ತು ಲಕ್ಷ್ಮಣನು ಆಜ್ಞೆಯನ್ನು ಉಲ್ಲಂಘಿಸಿದ್ದು—ಈ ನಾಲ್ಕು ಕಥೆಗಳು ಉತ್ತರ ರಾಮಾಯಣದವು. ಹೈರಾವಣ ಮೈರಾವಣರ ಕಥೆ ತೆಲುಗು ರಾಮಾಯಣದ್ದು.)

## ಭಾಗವತದ ಕಥೆಗಳು

1. ಪ್ರಹ್ಲಾದನ ಕಥೆ, 2. ಪರೀಕ್ಷಿದ್ರಾಯನ ಕಥೆ, 3. ಜಡಭರತ ಋಷಿ, 4. ಜಯ ವಿಜಯರು ಮತ್ತು ಸನಕಾದಿಗಳು, 5. ಬಲಿ ಚಕ್ರವರ್ತಿ, 6. ಧ್ರುವರಾಯನ ಕಥೆ, 7. ರಂತಿದೇವನ ಕಥೆ, 8. ಚಿತ್ರಕೇತುವಿನ ಕಥೆ, 9. ಕುಚೇಲನು ಕೃಷ್ಣನ ಮನೆಗೆ ಹೋದದ್ದು, 10. ಭರತ ಮತ್ತು ಜಿಂಕೆ, 11. ಪೃಥು ಚಕ್ರವರ್ತಿ, 12. ಗಜೇಂದ್ರನ ಕಥೆ, 13. ವಿಷ್ಣು ಮತ್ತು ಬಲಿ.

## ಹರಿವಂಶದ ಕಥೆಗಳು

1. ಯಯಾತಿ ಮತ್ತು ಪುರೂರವಸ್ಸು, 2. ಯಾದವರ ನಾಶ, 3. ಸತೀದೇವಿಯ ಕಥೆ, 4. ಹಂಸಡಿಂಭಕರ ಕಥೆ, 5. ಪೂಜನೀಯೋಪಾಖ್ಯಾನ, 6. ಸ್ಯಮಂತಕೋಪಾಖ್ಯಾನ, 7. ಧನ್ವಂತರಿಯ ಕಥೆ,

## ಹಿತೋಪದೇಶದ ಕಥೆಗಳು

1. ಆನೆ ಮತ್ತು ಮೊಲಗಳು, 2. ಕಾಗೆ ಮತ್ತು ಸರ್ಪ, 3. ಪಕ್ಷಿಗಳ ಐಕಮತ್ಯ.

## ಮುದ್ರಾಮಂಜೂಷದ ಕಥೆಗಳು

1. ನವನಂದರು ಮತ್ತು ಮೌರ್ಯರು, 2. ನವನಂದರು ಮತ್ತು ಚಾಣಕ್ಯ, 3. ಅಮಾತ್ಯ ರಾಕ್ಷಸ ಮತ್ತು ಚಂದನದಾಸ.

## ಚರಿತ್ರೆಯ ಕಥೆಗಳು

1. ರಾಜ ಒಡೆಯರು ತಮ್ಮನನ್ನು ಕಾಪಾಡಿದ್ದು (ಮೈಸೂರಿನ ಚರಿತ್ರೆ), 2. ಅಚ್ಯುತರಾಯ ಮತ್ತು ಕೃಷ್ಣರಾಯ (ಹಿಂದೂ ಚರಿತ್ರೆ), 3. ಢಿಳ್ಳಿಯ ಚಕ್ರವರ್ತಿ (ಹಿಂದೂ ಚರಿತ್ರೆ).

## ಶುಕ ಸಪ್ತತಿಯ ಕಥೆಗಳು

1. ಪರ್ವತ ನಾರದರ ಕಥೆ, 2. ಶ್ವೇತರಾಯನ ಕಥೆ.

## ಸ್ಕಾಂದಪುರಾಣದ ಕಥೆಗಳು

1. ಘಂಟಾಕರ್ಣ, 2. ಕಣ್ಣಪ್ಪನ ಕಥೆ.

## ವಿಕ್ರಮಚರಿತ್ರದ ಕಥೆಗಳು

1. ಬ್ರಾಹ್ಮಣ ಮತ್ತು ಇವನ ಮಗ ಶಿವದತ್ತ, 2. ವಿಕ್ರಮಾದಿತ್ಯರಾಯ ಮತ್ತು ಬ್ರಾಹ್ಮಣ.

## ಕೆಳಗಿನ ಕಥೆಗಳು ಆಯಾ ಕೃತಿಯಿಂದ ಒಂದೇ ಒಂದಾಗಿ ಆಯ್ದುವು

1. ಭಟ್ಟಪಾದರು (ಶಂಕರವಿಜಯ), 2. ಗೃಧ್ರ ಮತ್ತು ಬೆಕ್ಕು (ಪಂಚತಂತ್ರ), 3. ವತ್ಸಚಿನ್ನನ ವೃತ್ತಾಂತ (ಪ್ರಪನ್ನಾಮೃತ), 4. ದೇವೇಂದ್ರನ ಅಹಂಕಾರ (ವಿಷ್ಣು ಪುರಾಣ), 5. ಅನುಸೂಯೆಯ ಕಥೆ (ಇತಿಹಾಸ ಸಮುಚ್ಚಯ), 6. ಸುಶರ್ಮ ಮತ್ತು ಧರ್ಮಕುಶಲ (ಪಂಪಾ ತೀರದ ಸ್ಥಳಪುರಾಣ), 7. ಚಿತ್ತೂರು ರಾಜಪುತ್ರಿಯ ವೃತ್ತಾಂತ (ರಾಜಾಸ್ಥಾನ).

## ರೂಢಿಯ ಕಥೆಗಳು

1. ಒಬ್ಬ ಒಕ್ಕಲಿಗನಿಗೆ ಜ್ವರ ಬಂದಿದ್ದು, 2. ಮುತ್ಯಾಲಶೆಟ್ಟಿಯ ಕಥೆ, 3. ತಿಂಡಿಪೋತನಾದ ಬ್ರಾಹ್ಮಣ, 4. ದುಷ್ಟನಾದ ಹುಡುಗ, 5. ವೀರಸೇನನ ಕಥೆ, 6. ದೇವದತ್ತನ ಕಥೆ, 7. ಚಂದ್ರೈಯ್ಯನ ಕಥೆ, 8. ಯತೀಶ್ವರ ಮತ್ತು ವರ್ತಕರು, 9. ಕಡಜನ ಗೂಡು, 10. ಚಂದ್ರಕಾಂತೆ ವಿದ್ಯಾವಳಿಯರ ವೃತ್ತಾಂತ, 11. ಮೂರುಜನ ಋಷಿಗಳು, 12. ರಡ್ಡಿ ಸುಬೇದಾರ 13. ಪೆದ್ದಭಟ್ಟನ ಕಥೆ, 14. ಸರಸ್ವತೀ ಲಕ್ಷ್ಮಿಯರ ಸಂವಾದ, 15. ಚಂದ್ರಶೇಖರರಾಯ ಮತ್ತು ಧನಪಾಲಶೆಟ್ಟಿ, 16. ನವಿಲು ಮತ್ತು ಕೆಂಬೂತ, 17. ಸತ್ಯಗುಪ್ತ ಮತ್ತು ಕಮಲಾಪೀಡ, 18. ಬೆಕ್ಕು ಸನ್ಯಾಸ ತೆಗೆದುಕೊಂಡದ್ದು, 19. ವಿರೋಚನ ಮತ್ತು ಪುರಕ, 20. ಭವಭೂತಿ ವಿವಿಲಶರ ಕಥೆ, 21. ಸೂರ್ಯಶರ್ಮ ಮತ್ತು ಕುಮತಿ, 22. ನಂಬಿಕೆಯಾದ ನಾಯಿ ಮತ್ತು ಕುರುಬ, 23. ಉಪಾಧ್ಯಾಯ ಮತ್ತು ಶಿಷ್ಯರು, 24. ಸಾಲ್ವನು ದ್ವಾರಕೆಗೆ ಲಗ್ಗೇ ಹಾಕಿದ್ದು, 25. ಎರಡು ಗುಬ್ಬಿಗಳು, 26. ಬ್ರಾಹ್ಮಣ ಮತ್ತು ಕ್ಷತ್ರಿಯರು, 27. ಮಲ್ಲಪ್ಪ ಮತ್ತು ಬೀರಕ್ಕ, 28. ಧರ್ಮಗುಪ್ತನ ಲೋಭಿತನ, 29. ವೀರಗುಪ್ತ ಮತ್ತು ಕಳಿಂಗ, 30. ಸವತಿಯರು ಮಗುವಿಗೋಸ್ಕರ ಜಗಳವಾಡಿದ್ದು, 31. ಚಂದ್ರಶರ್ಮ ಮತ್ತು ಅವನ ಮಗ, 32. ಕಳ್ಳಹುಡುಗ ಮತ್ತು ಅವನ ತಾಯಿ, 33. ನಾಗೋಜಿ ದೀಕ್ಷಿತ, 34. ಇಂಗ್ಲೆಂಡ್ ದೇಶದ ಧೊರೆಮಗ ಮತ್ತು ನ್ಯಾಯಾಧಿಪತಿ, 35. ಪ್ರಾಮಾಣಿಕನಾದ ವರ್ತಕ, 36. ಪುತ್ರಕನ ಕಥೆ, 37. ಸತ್ಯಾತ್ಮ ಮತ್ತು ಬ್ರಾಹ್ಮಣ, 38. ವಜ್ರಬಾಹು, 39. ಒಬ್ಬ ಹುಡುಗನು ಹುಲಿಯನ್ನು ಕೊಂದದ್ದು, 40. ಕುದುರೆ ಮತ್ತು ಆಳು, 41. ಒಬ್ಬ ವೈಶ್ಯನು ದಾನ ಕೊಟ್ಟದ್ದು, 42. ದಿವೋದಾಸನ ಕಥೆ, 43. ಮತಂಗ ಋಷಿಯು ಮತ್ತು ವಾಲಿ, 44. ರಾಮದಾಸನ ಕಥೆ.

| | |
|---|---|
| ಮಹಾಭಾರತದ ಕಥೆಗಳು | 56 |
| ರಾಮಾಯಣದ ಕಥೆಗಳು | 23 |
| ಭಾಗವತದ ಕಥೆಗಳು | 13 |
| ಹರಿವಂಶದ ಕಥೆಗಳು | 7 |
| ಹಿತೋಪದೇಶದ ಕಥೆಗಳು | 3 |
| ಮುದ್ರಾಮಂಜೂಷದ ಕಥೆಗಳು | 3 |
| ಚರಿತ್ರೆಯ ಕಥೆಗಳು | 3 |
| ಶುಕಸಪ್ತತಿಯ ಕಥೆಗಳು | 2 |

| | |
|---|---|
| ಸ್ಕಾಂದಪುರಾಣದ ಕಥೆಗಳು | 2 |
| ವಿಕ್ರಮಚರಿತ್ರೆಯ ಕಥೆಗಳು | 2 |
| ಶಂಕರವಿಜಯ, ಪಂಚತಂತ್ರ, ಪ್ರಪನ್ನಾಮೃತ, ವಿಷ್ಣುಪುರಾಣ, ಇತಿಹಾಸ ಸಮುಚ್ಚಯ, ಪಂಪಾತೀರದ ಸ್ಥಳಪುರಾಣ ಮತ್ತು ರಾಜಾಸ್ಥಾನದ ಕಥೆಗಳು (ಒಂದೊಂದು ಕೃತಿಯಿಂದ ಒಂದೊಂದು ಕಥೆ) | 7 |
| ರೂಢಿಯ ಕಥೆಗಳು | 44 |
| ಒಟ್ಟು ಕಥೆಗಳು | 165 |

## ಮೊದಲ ಮುದ್ರಣದಲ್ಲಿದ್ದು ಈಗಿನ ಮುದ್ರಣಗಳಲ್ಲಿ ಬಿಟ್ಟುಹೋಗಿರುವ ಕಥೆಗಳು

1. ನವನಂದರು ಮತ್ತು ಮೌರ್ಯರು, 2. ಅಭಿಮನ್ಯು ಯುದ್ಧಕ್ಕೆ ಹೋದದ್ದು, 3. ದೇವದತ್ತನ ಕಥೆ, 4. ನವನಂದರು ಮತ್ತು ಚಾಣಕ್ಯ, 5. ಮೂರುಜನ ಋಷಿಗಳು, 6. ನವಿಲು ಮತ್ತು ಕಂಬೂತ, 7. ಗರುಡ ಮತ್ತು ಶಾಂಡಿಲಿ, 8. ಸಾಲ್ವನು ದ್ವಾರಕೆಗೆ ಲಗ್ಗೇ ಹಾಕಿದ್ದು, 9. ಪೂಜನೀಯೋಪಾಖ್ಯಾನ, 10. ಶಾಂಡಿಲಿ ಮತ್ತು ಸುಮನ, 11. ಬ್ರಾಹ್ಮಣ ಮತ್ತು ಕ್ಷತ್ರಿಯರು, 12. ಭೀಷ್ಮ ಮತ್ತು ಯುಧಿಷ್ಠಿರ, 13. ಬ್ರಾಹ್ಮಣರು ಮತ್ತು ಇವನ ಮಗ ಶಿವದತ್ತ, 14. ಇಂಗ್ಲೆಂಡ್ ದೇಶದ ಧೊರೆಮಗ ಮತ್ತು ನ್ಯಾಯಾಧಿಪತಿ, 15. ಬೇಡನು ರಾಕ್ಷಸನನ್ನು ಕೊಂದದ್ದು, 16. ವತ್ಸಚಿನ್ನನ ವೃತ್ತಾಂತ, 17. ಪುತ್ರಕನ ಕಥೆ, 18. ಕುಚೇಲನು ಕೃಷ್ಣನ ಮನೆಗೆ ಹೋದದ್ದು, 19. ಚಿತ್ತೂರು ರಾಜಪುತ್ರಿಯ ವೃತ್ತಾಂತ, 20. ಒಬ್ಬ ಹುಡುಗನು ಹುಲಿಯನ್ನು ಕೊಂದದ್ದು, 21. ಕುದುರೆ ಮತ್ತು ಆಳು, 22. ಭರತ ಮತ್ತು ಜಿಂಕೆ, 23. ಒಬ್ಬ ವೈಶ್ಯನು ದಾನ ಕೊಟ್ಟದ್ದು, 24. ಗಯೋಪಾಖ್ಯಾನ, 25. ಪೃಥು ಚಕ್ರವರ್ತಿ, 26. ಧನ್ವಂತರಿಯ ಕಥೆ, 27. ಕಾಲಕ ವೃಕ್ಷ, 28. ಮತಂಗ ಋಷಿ ಮತ್ತು ವಾಲಿ 29. ರಾಮದಾಸನ ಕಥೆ.

## ಮೊದಲ ಮುದ್ರಣಗಳಲ್ಲಿಲ್ಲದೆ ಈಗಿನ ಮುದ್ರಣಗಳಲ್ಲಿ ಸೇರಿರುವ ಕಥೆಗಳು

1. ಕೃಷ್ಣಸಂಧಿ, 2. ಆಷಾಢಭೂತಿ, 3. ಆದಿಸೆಟ್ಟಿಯ ಕಥೆ, 4. ಸುಮನಸೆಯ ಕಥೆ, 5. ಗರಳ ವೃಕ್ಷನ ಕಥೆ, 6. ಗಾಲವ ಋಷಿಯ ಕಥೆ, 7. ನಾಲ್ಕು ಜನ ಜಡರು, 8. ಕೃಷ್ಣ ಸುಧಾಮರ ವೃತ್ತಾಂತ, 9. ಕೀಚಕ, 10. ಅಗ್ಗೀ ತಿಮ್ಮನಾಯಕ, 11. ಕೆನೂಟೆಂಬ ದೊರೆಯ ಕಥೆ, 12. ಯವನಾಧಿಪತಿ, 13. ಮುತ್ತೈದೆಯರ ಕಥೆ, 14. ಅಣಿಮಾಂಡವ್ಯನ ಲೋಕೋಪಕಾರ 15. ಪನ್ನೆಯ ಕಥೆ, 16. ಪಂಡರಪುರದ ಅಕ್ಕಸಾಲೆ.

# ಪುಟ್ಟಣ್ಣ ಹೇಳಿದ ಕಥೆಗಳು

'ನೀತಿಚಿಂತಾಮಣಿ'ಯಲ್ಲಿ ರಾಮಾಯಣ, ಮಹಾಭಾರತ, ಭಾಗವತ ಇತ್ಯಾದಿಗಳ ಕಥೆಗಳು ಪ್ರಮುಖ ಪಾತ್ರ ವಹಿಸಿದ್ದರೆ ಇಲ್ಲಿ ಆ ಪ್ರಾಧಾನ್ಯ ರೂಢಿಯ ಕಥೆಗಳಿಗೆ

ದಕ್ಕಿದೆ. ಜೊತೆಗೆ ಇಲ್ಲಿರುವ ಇತಿಹಾಸದ ಕಥೆಗಳಲ್ಲಿ ಹೆಚ್ಚಿನವು ವಿದೇಶೀಯ ಮೂಲಗಳಿಗೆ ಋಣಿಯಾದುವು ಮತ್ತು ಇಲ್ಲಿಯವರೆಗೆ ಹಸ್ತಪ್ರತಿಯಲ್ಲಿದ್ದವು.

ಇಲ್ಲಿನ ಕಥೆಗಳು 'ನೀತಿಚಿಂತಾಮಣಿ'ಯ ಕಥೆಗಳಷ್ಟು ಆಕರ್ಷಕವಲ್ಲ. 'ನೀತಿ ಚಿಂತಾಮಣಿ'ಯಲ್ಲಿನ ಕಥೆಗಳ ಹರವು, ಆಶಯ ಹಾಗೂ ಸಿದ್ಧಿಗಳು ಇಲ್ಲಿಗಿಂತಲೂ ಹೆಚ್ಚು. ಎರಡು ಕೃತಿಗಳನ್ನೂ ಓದಿ ನೋಡಿದರೆ ಈ ಕೃತಿ 'ನೀತಿಚಿಂತಾಮಣಿ'ಯ ಕಥೆಗಳನ್ನು ಓದಿದ ಮೇಲೆ, ಓದಬೇಕಾದ ಭಾಗವೇನೋ ಎಂಬ ಅನಿಸಿಕೆಗೆ ಪಕ್ಕಾಗುತ್ತೇವೆ. 'ನೀತಿ ಚಿಂತಾಮಣಿ' ಕೆನೆಯಾದರೆ ಇಲ್ಲಿನದು ಹಾಲು ಮಾತ್ರ. ಅಲ್ಲದೆ ಹಲವೆಡೆ ಹಾಲು ಗಟ್ಟಿಯಾದ್ದಲ್ಲ ಎಂಬುದೂ ನಿಜವೇ. ಹಳೆಯ ದಾಖಲೆಗಳು ಕಳೆಯಬಾರದೆಂಬ ಉದ್ದೇಶ ಈ ಪ್ರಕಟನೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. 'ನೀತಿ ಚಿಂತಾಮಣಿ'ಯ ಮೊದಲ ಮುದ್ರಣದಲ್ಲಾಗಲೀ ಇತ್ತೀಚಿನ ಇತರ ಮುದ್ರಣಗಳಲ್ಲಾಗಲೀ ಇಲ್ಲಿನ ಕಥೆಗಳು ಸೇರಿಲ್ಲ. ಉಪಲಬ್ಧ ಆಧಾರಗಳು ಇದನ್ನು ದೃಢೀಕರಿಸುತ್ತವೆ.

ಕಾಳಿಯ ಸಹಸ್ರಮುಖಗಳನ್ನು ಕಂಡು ನೆಗಡಿ ಬಂದರೆ ಹೇಗಿರಬಹುದೆಂದು ನೆನೆಸಿ ನಕ್ಕ 'ತೆನ್ನಾಲಿ ರಾಮಕೃಷ್ಣನ ಕಥೆ'; ಮಾನವ, ಸ್ವಾರ್ಥದಿಂದ ಹೆಗ್ಗಣದಂತಾಗಿದ್ದಾನೆ ಎಂದು ತಿಳಿಸುವ 'ಹಸು ಮತ್ತು ಹೆಗ್ಗಣ'; ತನ್ನ ಜನರೆಲ್ಲ ಸತ್ತಮೇಲೆ ತಾನೊಬ್ಬ ಬದುಕಿ ಸುಖವಿಲ್ಲ ಎಂದರಿತ 'ವಿಕ್ರಮಾರ್ಕನ ಕಥೆ'; ಪರಸ್ಪರ ಜಗಳದಿಂದ ಪರಸ್ಪರ ನಾಶ ಎಂದು ತಿಳಿಸುವ 'ಗಂಡಭೇರುಂಡ ಪಕ್ಷಿ'; ಹಿರಿಯರನ್ನು ತೇಜೋವಧೆ ಮಾಡಬಾರದು ಎಂದು ತಿಳಿಸುವ 'ನಸೀರುದೀನ್ ಮಹಮೂದ್ ಮತ್ತು ಮೌಲ್ವಿ'; ತೃಪ್ತಿಯೇ ಸಕಲ ಸಂಪತ್ತು ಎಂದು ತಿಳಿಸುವ 'ಸದ್ಗುಣವುಳ್ಳವರಿಗೆ ದೈವ ಸಹಾಯವುಂಟಾಗುವುದು'; ಒಬ್ಬರನ್ನೊಬ್ಬರು ಮೀರಿಸುವ 'ಮೂರುಮಂದಿ ಅಣ್ಣತಮ್ಮಂದಿರು'; ವಿನಯದ ಗೆಲುವನ್ನು ತೋರಿಸುವ 'ಧರ್ಮಕ್ಕೆ ಭಾಗಿಗಳು'; ಹೆಸರಿನಲ್ಲಿ ಮಹತ್ವವಿಲ್ಲವೆಂದು ತಿಳಿಸುವ 'ಕಾಚಯ ಪೋಚಯರ ಕಥೆ'; ತನಗೆ ತಾನೇ ದಿಕ್ಕು ಎಂದು ಸೊಗಸಾಗಿ ನಿರೂಪಿಸುವ 'ಆತ್ಮಾವಲಂಬನೆ'; ಪ್ರಾಮಾಣಿಕತೆಯ ಗೆಲುವನ್ನು ತಿಳಿಸುವ 'ಬಡವರಾದರೂ ಪ್ರಾಮಾಣಿಕರಾಗಿರುವುದು'; ಹಾಗೂ 'ದಿಟಸಟೆ'; ಮನೋಧರ್ಮದ ಹಿಡಿತವನ್ನು ತಿಳಿಸುವ 'ಮಹಾಕವಿ ಡ್ಯಾಂಟಿಯ ಕಥೆ'; ನ್ಯಾಯದಲ್ಲಿ ಬಡವ ಬಲ್ಲಿದರ ಭೇದವಿಲ್ಲ ಎಂದು ನಿರೂಪಿಸುವ 'ನ್ಯಾಯಾಧಿಪತಿಯ ಯುಕ್ತಿ'; ಪ್ರಾಣರಕ್ಷಣೆಯ ದೃಷ್ಟಿ ಎಲ್ಲ ಜೀವಿಗಳಲ್ಲಿ ಸಮಾನ ಎಂದು ಹೇಳುವ 'ಹಕ್ಕಿಯ ಬುದ್ಧಿ'; ಹಿರಿಯರ ತೇಜೋವಧೆ ಮಾಡದೆ ತನ್ನ ಸರದಿಗಾಗಿ ಕಾಯುವ 'ಒಬ್ಬ ಬಾಲಕನ ಉದಾರವಾದ ಮನಸ್ಸು'; ಕಾರ್ಯನಿಷ್ಠರಾಗಿದ್ದ 'ತಂತೀ ವರ್ತಮಾನದ ಹುಡುಗ' ಹಾಗೂ 'ವಾಷಿಂಗ್‌ಟನ್ನನ ಸ್ಥೈರ್ಯ'; ಕ್ಷಮೆಯಿಂದ ನಡತೆ ಸುಧಾರಿಸಿದ 'ಕ್ಷಮಾಗುಣದ ಶಕ್ತಿ'; ಸುತ್ತಣ ವಿಚಾರಗಳನ್ನು ಗಮನಿಸಿ ಅರಿಯಬೇಕೆಂದು ತಿಳಿಸುವ 'ನೋಡಿ ತಿಳಿದುಕೊಳ್ಳುವುದು'; ಪ್ರಾಮಾಣಿಕತೆಯ





ಹಿರಿಮೆಯನ್ನು ತಿಳಿಸುವ 'ಪದವಾಕ್ಯ ಪ್ರಾಮಾಣಿಕತೆ'; ಮತ್ತು ಅರಿವು ಹೆಚ್ಚಾದಷ್ಟೂ ವಿನಯ ಹೆಚ್ಚು ಎಂಬುದನ್ನು ನಿರೂಪಿಸುವ 'ನಿರಹಂಕಾರ'–ಇಲ್ಲಿ ಒಟ್ಟುಗೂಡಿರುವ ಇಪ್ಪತ್ತೆರಡು ಕಥೆಗಳು.

ಈ ಇಪ್ಪತ್ತೆರಡು ಕಥೆಗಳಲ್ಲಿ ಹದಿಮೂರು ಕಥೆಗಳು 'ಹಿತಬೋಧಿನಿ' ಮತ್ತು 'ವಿದ್ಯಾದಾಯಿನಿ' ಮಾಸಪತ್ರಿಕೆಗಳಲ್ಲಿ ಪ್ರಕಟವಾದುವು. ಎಂ. ಎಸ್. ಪುಟ್ಟಣ್ಣನವರು ತಮ್ಮ ಸ್ನೇಹಿತರಾಗಿದ್ದ ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ 'ಹಿತಬೋಧಿನಿ'ಯನ್ನು ಅಕ್ಟೋಬರ್ 1883ರಲ್ಲಿ ಪ್ರಾರಂಭಿಸಿ ಆರು ತಿಂಗಳ ಕಾಲ ನಡೆಸಿ ಅನಂತರ ಅದನ್ನು ಎಂ. ವೆಂಕಟಕೃಷ್ಣಯ್ಯನವರಿಗೆ ಒಪ್ಪಿಸಿದರು. 'ವಿದ್ಯಾದಾಯಿನಿ'ಯ ಸಂಪಾದಕರಾದ ಎಂ. ಶಾಮರಾಯರು ಪುಟ್ಟಣ್ಣನವರ ಆಪ್ತಮಿತ್ರ ವರ್ಗದಲ್ಲಿ ಸೇರಿದವರು. ಈ ಕಾರಣಗಳಿಂದ ಈ ಎರಡು ಪತ್ರಿಕೆಗಳಲ್ಲಿ ಪುಟ್ಟಣ್ಣನವರ ಕಥೆಗಳು ಬೆಳಕು ಕಾಣಲು ಹೆಚ್ಚಿನ ಕಾರಣ ದೊರೆಯಿತು. 'ಹಿತಬೋಧಿನಿ' ಹಾಗೂ 'ವಿದ್ಯಾದಾಯಿನಿ' ಮಾಸಪತ್ರಿಕೆಗಳಲ್ಲಿ ಬೆಳಕು ಕಂಡ ಇಲ್ಲಿನ ಕಥೆಗಳ ವಿವರಗಳು ಹೀಗಿವೆ :

1. ತೆನ್ನಾಲ ರಾಮಕೃಷ್ಣನ ಕಥೆ (ಹಿತಬೋಧಿನಿ 1–1 ; 1883)
2. ಹಸು ಮತ್ತು ಹೆಗ್ಗಣ (ಹಿತಬೋಧಿನಿ 1–1 ; 1883)
3. ವಿಕ್ರಮಾರ್ಕನ ಕಥೆ (ಹಿತಬೋಧಿನಿ 1–1 ; 1883)
4. ಗಂಡಭೇರುಂಡ ಪಕ್ಷಿ (ಹಿತಬೋಧಿನಿ 1–2 ; 1883)
5. ನಸೀರುದೀನ್ ಮಹಮೂದ್ ಮತ್ತು ಮೌಲ್ವಿ (ಹಿತಬೋಧಿನಿ 1–2 ; 1883)
6. ಸದ್ಗುಣವುಳ್ಳವರಿಗೆ ದೈವಸಹಾಯವುಂಟಾಗುವದು (ಹಿತಬೋಧಿನಿ 1–9 ; 1884)
7. ಮೂರುಮಂದಿ ಅಣ್ಣತಮ್ಮಂದಿರು (ಹಿತಬೋಧಿನಿ 1–9 ; 1884)
8. ಧರ್ಮಕ್ಕೆ ಭಾಗಿಗಳು (ವಿದ್ಯಾದಾಯಿನಿ 3–5 ; 1895)
9. ಕಾಚಯ ಪೋಚಯರ ಕಥೆ (ವಿದ್ಯಾದಾಯಿನಿ 3–6 ; 1895)
10. ಆತ್ಮಾವಲಂಬನೆ (ವಿದ್ಯಾದಾಯಿನಿ 23–12 ; 1915)
11. ಬಡವರಾದರೂ ಪ್ರಾಮಾಣಿಕರಾಗಿರುವದು (ವಿದ್ಯಾದಾಯಿನಿ 24–2 ; 1916)
12. ದಿಟಸಟೆ (ವಿದ್ಯಾದಾಯಿನಿ 24–2 ; 1916)
13. ಮಹಾಕವಿ ಡ್ಯಾಂಟಿಯ ಕಥೆ (ವಿದ್ಯಾದಾಯಿನಿ 24–3 ; 1916)

ಮಿಕ್ಕ ಒಂಬತ್ತು ಕಥೆಗಳು (ನ್ಯಾಯಾಧಿಪತಿಯ ಯುಕ್ತಿ, ಹಕ್ಕಿಯ ಬುದ್ಧಿ, ಒಬ್ಬ ಬಾಲಕನ ಉದಾರವಾದ ಮನಸ್ಸು, ತಂತೀ ವರ್ತಮಾನದ ಹುಡುಗ, ವಾಷಿಂಗ್‌ಟನ್ನನ ಸ್ಥೈರ್ಯ, ಕ್ಷಮಾಗುಣದ ಶಕ್ತಿ, ನೋಡಿ ತಿಳಿದುಕೊಳ್ಳುವುದು, ಪದ

ವಾಕ್ಯ ಪ್ರಾಮಾಣಿಕತೆ. ನಿರಹಂಕಾರ) ಪುಟ್ಟಣ್ಣನವರ ಹಸ್ತಾಕ್ಷರಗಳಲ್ಲಿ ದೊರೆತಿವೆ. ಈ ಕಥೆಗಳನ್ನು ಬರೆದ ಕಾಲ ಆಯಾ ಹಸ್ತಪ್ರತಿಗಳಲ್ಲಿ ಸೂಚಿತವಾಗಿಲ್ಲ. ಇವು ಎಲ್ಲಿಯಾದರೂ ಪ್ರಕಟವಾಗಿರುವುದು ತಿಳಿದುಬಂದಿಲ್ಲ.

ಇಲ್ಲಿನ ಕಥೆಗಳಲ್ಲಿ 'ಧರ್ಮಕ್ಕೆ ಭಾಗಿಗಳು' ಕಥೆ ಒಂದೇ ಒಂದು ದೊಡ್ಡದಾದ ಕಥೆ. 'ಬಡವರಾದರೂ ಪ್ರಾಮಾಣಿಕರಾಗಿರುವುದು', 'ಒಬ್ಬ ಬಾಲಕನ ಉದಾರ ವಾದ ಮನಸ್ಸು', 'ಕಾಚಯ ಪೋಚಯರ ಕಥೆ', 'ದಿಟಸಟೆ', 'ಹಕ್ಕಿಯ ಬುದ್ಧಿ', 'ಕ್ಷಮಾಗುಣದ ಶಕ್ತಿ', 'ನೋಡಿ ತಿಳಿದುಕೊಳ್ಳುವುದು', 'ನ್ಯಾಯಾಧಿಪತಿಯ ಯುಕ್ತಿ', 'ನಿರಹಂಕಾರ', 'ಆತ್ಮಾವಲಂಬನೆ'. 'ಪದವಾಕ್ಯ ಪ್ರಾಮಾಣಿಕತೆ', 'ವಾಷಿಂಗ್‌ಟನ್ನನ ಸ್ಥೈರ್ಯ', 'ಮೂರುಮಂದಿ ಅಣ್ಣತಮ್ಮಂದಿರು', 'ಮಹಾಕವಿ ಡ್ಯಾಂಟಿಯ ಕಥೆ' ಮತ್ತು 'ಸದ್ಗುಣವುಳ್ಳವರಿಗೆ ದೈವ ಸಹಾಯವುಂಟಾಗುವುದು'–ಈ ಹದಿನೈದು ಕಥೆಗಳು ಮಧ್ಯಮ ಗಾತ್ರದವು. ಮಿಕ್ಕ ಆರು ಕಥೆಗಳು–'ವಿಕ್ರಮಾರ್ಕನ ಕಥೆ', 'ತೆನ್ನಾಲ ರಾಮಕೃಷ್ಣನ ಕಥೆ', 'ಗಂಡಭೇರುಂಡ ಪಕ್ಷಿ', 'ನಸೀರುದೀನ್ ಮಹಮೂದ್ ಮತ್ತು ಮೌಲ್ವಿ', ಹಸು ಮತ್ತು ಹೆಗ್ಗಣ', ಮತ್ತು 'ತಂತೀ ವರ್ತಮಾನದ ಹುಡುಗ' ತೀರ ಚಿಕ್ಕವು.

'ತೆನ್ನಾಲ ರಾಮಕೃಷ್ಣನ ಕಥೆ', 'ಹಸು ಮತ್ತು ಹೆಗ್ಗಣ', 'ವಿಕ್ರಮಾರ್ಕನ ಕಥೆ', 'ಗಂಡಭೇರುಂಡ ಪಕ್ಷಿ', 'ನಸೀರುದೀನ್ ಮಹಮೂದ್ ಮತ್ತು ಮೌಲ್ವಿ', 'ಸದ್ಗುಣವುಳ್ಳವರಿಗೆ ದೈವಸಹಾಯವುಂಟಾಗುವದು', 'ಮೂರುಮಂದಿ ಅಣ್ಣ ತಮ್ಮಂದಿರು', 'ಧರ್ಮಕ್ಕೆ ಭಾಗಿಗಳು', 'ಕಾಚಯ ಪೋಚಯದ ಕಥೆ', 'ಮಹಾಕವಿ ಡ್ಯಾಂಟಿಯ ಕಥೆ', 'ನ್ಯಾಯಾಧಿಪತಿಯ ಯುಕ್ತಿ', 'ಹಕ್ಕಿಯ ಬುದ್ಧಿ', 'ಒಬ್ಬ ಬಾಲಕನ ಉದಾರವಾದ ಮನಸ್ಸು' ಈ ಹದಿಮೂರು ಕಥೆಗಳು ನೇರವಾಗಿ ಪ್ರಾರಂಭ ವಾಗುತ್ತವೆ. ಕಥೆಯ ವಿಷಯಕ್ಕೆ ಸಂಬಂಧಿಸಿದ ಪೀಠಿಕೆ ಇಲ್ಲ. 'ಕ್ಷಮಾಗುಣದ ಶಕ್ತಿ', 'ತಂತೀ ವರ್ತಮಾನದ ಹುಡುಗ', 'ಪದವಾಕ್ಯ ಪ್ರಾಮಾಣಿಕತೆ', 'ವಾಷಿಂಗ್‌ಟನ್ನನ ಸ್ಥೈರ್ಯ', 'ಆತ್ಮಾವಲಂಬನೆ', 'ಬಡವರಾದರೂ ಪ್ರಾಮಾಣಿಕರಾಗಿರುವುದು', 'ದಿಟಸಟೆ', 'ನೋಡಿ ತಿಳಿದುಕೊಳ್ಳುವುದು', 'ನಿರಹಂಕಾರ'–ಈ ಒಂಬತ್ತು ಕಥೆ ಗಳಿಗೂ ಕಥೆಯ ಮೊದಲಿನಲ್ಲೇ ವಿಷಯಕ್ಕೆ ಸಂಬಂಧಿಸಿದಂತೆ ಪೀಠಿಕೆಯಿದೆ. ಪುಟ್ಟಣ್ಣ ನವರ ಚಿಂತನೆಯ ಧಾಟಿ ಇಲ್ಲಿ ವಿಸ್ಮಯಗೊಳಿಸುವಂತೆ ಪ್ರಕಟವಾಗಿದೆ. ಒಂದು ಉದಾಹರಣೆಯನ್ನು ನೋಡಬಹುದು.

"ಮನುಷ್ಯರ ನಡತೆಯಲ್ಲಿ ಪ್ರಾಮಾಣಿಕತೆಯು ಮುಖ್ಯವಾದ ಸುಗುಣ. ಮತ್ತೊಬ್ಬರ ಪದಾರ್ಥವನ್ನು ಕದಿಯದೇ ಇರುವುದೊಂದೇ ಅಲ್ಲ. ಯಾವ ಇತರ ವಿಧದಲ್ಲಿ ಸುಳ್ಳು ಹೇಳಿ, ಮೋಸಮಾಡಿ, ನಂಬಿಸಿ ದ್ರೋಹಮಾಡಿ, ಕೊಡುವುದು ತೆಗೆದುಕೊಳ್ಳುವುದರಲ್ಲಿ ವಂಚನೆ ಮಾಡಿ, ಇತರರು ಮರವಿನಿಂದ ಮೋಸಹೋದರೆ ಅದರ ಪ್ರಯೋಜನವನ್ನು ಹೊಂದುತ್ತಾ ನಾನಾವಿಧದಲ್ಲಿ ಇತರರ ಸ್ವತ್ತಿಗೆ ನಾವು

ಆಶೆಪಟ್ಟರೂ ನಮ್ಮ ಒಳ್ಳೇ ನಡತೆಗೆ ಲೋಪ ಬಂದಂತಾಗುವುದು. ಯಾವ ವಿಷಯದಲ್ಲಿಯೂ ನಮ್ಮಂತೆಯೇ ಇತರರೂ ಎಂದು ನಾವು ಭಾವಿಸಿಕೊಂಡಿದ್ದರೆ ಅಪ್ರಾಮಾಣಿಕತೆ ನಮ್ಮಲ್ಲಿ ಹುಟ್ಟುವುದಿಲ್ಲ. ಯಾವ ವಿಧದಲ್ಲಿಯಾದರೂ ಸರಿಯೆ ಹೆರರು ನಮ್ಮ ವಸ್ತುವನ್ನು ನಮ್ಮ ಇಷ್ಟವಿಲ್ಲದೆ ತೆಗೆದುಕೊಂಡರೆ ನಾವು ಹೇಗೆ ವ್ಯಸನ ಪಡುವೆವೋ ಇತರರೂ ಹಾಗೆಯೇ ತಮ್ಮ ವಸ್ತು ಹೋದರೆ ವ್ಯಸನಪಡುವರು.ಇಂಥಾ ದುಃಖವನ್ನು ಇತರರಿಗೆ ಕೊಡದೇ ಇರುವುದು ನಮ್ಮ ಧರ್ಮ. ಅದರಲ್ಲಿಯೂ ಇತರರು ತಮಗೆ ನಷ್ಟ ಉಂಟಾಯಿತೆಂದು ಅರಿಯದೇ ಇದ್ದರೂ, ಆ ನಷ್ಟವನ್ನು ನಾವು ತಿಳಿದು ಅದನ್ನು ಅವರಿಗೆ ತೋರಿಸಿಕೊಟ್ಟು ಅವರಿಗೆ ಉಪಕಾರ ಮಾಡತಕ್ಕದ್ದು ನಮಗೆ ಪರಮ ಧರ್ಮ. ಹೀಗೆ ನಾವು ನಡೆದುಕೊಳ್ಳುವುದರಿಂದ ಇಹದಲ್ಲಿ ನಮಗೆ ಗೌರವ ಹೆಚ್ಚುವುದು; ಅಲ್ಲದೆ ನಮ್ಮ ಒಳ್ಳೇ ನಡತೆಗೆ ದೇವರು ಕೂಡ ಮೆಚ್ಚುವನು, ಇದಕ್ಕೆ ಅನೇಕ ದೃಷ್ಟಾಂತಗಳಿವೆ."

( ಬಡವರಾದರೂ ಪ್ರಾಮಾಣಿಕರಾಗಿರುವುದು )

ಏಕತಾನತೆ ಇರಬಾರದು, ವೈವಿಧ್ಯವಿರಬೇಕು ಎಂಬ ದೃಷ್ಟಿಯಿಂದ ಕಥೆಯ ಉದ್ದೇಶಕ್ಕೆ ಅನುಗುಣವಾಗಿ ಶೀರ್ಷಿಕೆಗಳನ್ನು ಕೊಟ್ಟು ವಿಂಗಡಿಸಿಲ್ಲ. ಒಂದು ಚೌಕಟ್ಟಿಗೆ ಸ್ಥೂಲವಾಗಿಯಾದರೂ ಹೊಂದಬಹುದಾದುವುಗಳನ್ನು ಶೀರ್ಷಿಕೆಗಳಿಗೆ ಒಳಪಡಿಸಿದರೆ, ಕಥೆಗಳ ಆಶಯವನ್ನು ಈ ರೀತಿ ಗುರುತಿಸಬಹುದು. ವಿನಯ (ಒಬ್ಬ ಬಾಲಕನ ಉದಾರವಾದ ಮನಸ್ಸು, ಧರ್ಮಕ್ಕೆ ಭಾಗಿಗಳು, ನಿರಹಂಕಾರ, ನಸೀರುದೀನ್ ಮಹಮೂದ್ ಮತ್ತು ವಶೌಲ್ವಿ),ಚಾತುರ್ಯ(ತೆನ್ನಾಲ ರಾಮಕೃಷ್ಣನ ಕಥೆ, ಹಕ್ಕಿಯ ಬುದ್ಧಿ, ನ್ಯಾಯಾಧಿಪತಿಯ ಯುಕ್ತಿ, ಮೂರುಮಂದಿ ಅಣ್ಣತಮ್ಮಂದಿರು), ಪ್ರಾಮಾಣಿಕತೆ (ಬಡವರಾದರೂ ಪ್ರಾಮಾಣಿಕರಾಗಿರುವುದು, ದಿಟಸಟೆ, ಪದವಾಕ್ಯ ಪ್ರಾಮಾಣಿಕತೆ), ಕಾರ್ಯನಿಷ್ಠೆ (ವಾಷಿಂಗ್‌ಟನ್ನನ ಸ್ಥೈರ್ಯ, ತಂತೀ ವರ್ತಮಾನದ ಹುಡುಗ), ಹಂಚಿಕೊಂಡರೆ ಹಲವು ಸುಖ (ವಿಕ್ರಮಾರ್ಕನ ಕಥೆ), ಹೆಸರಲ್ಲಿ ಏನೂ ಇಲ್ಲ (ಕಾಚಯ ಪೋಚಯರ ಕಥೆ), ಕ್ಷಮೆಯಿಂದ ಕಾರ್ಯಸಾಧನೆ (ಕ್ಷಮಾಗುಣದ ಶಕ್ತಿ), ಗಮನಿಸುವುದು (ನೋಡಿ ತಿಳಿದುಕೊಳ್ಳುವುದು), ದ್ವೇಷದಿಂದ ಅನರ್ಥ (ಗಂಡಭೇರುಂಡ ಪಕ್ಷಿ), ಸ್ವಾವಲಂಬನೆ (ಆತ್ಮಾವಲಂಬನೆ), ಮಾನವನ ಸ್ವಾರ್ಥ (ಹಸು ಮತ್ತು ಹೆಗ್ಗಣ), ಮನೋಧರ್ಮ (ಮಹಾಕವಿ ಡ್ಯಾಂಟಿಯ ಕಥೆ), ತೃಪ್ತಿ (ಸದ್ಗುಣವುಳ್ಳವರಿಗೆ ದೈವ ಸಹಾಯವುಂಟಾಗುವುದು).

ಪುಸ್ತಕವನ್ನು ಪ್ರಕಟಿಸುತ್ತಿರುವುದು ಮಕ್ಕಳಿಗಾಗಿ ಎಂಬ ಉದ್ದೇಶಕ್ಕೆ ಮಾನ್ಯತೆ ನೀಡಿ ಕಥೆಗಳ ಕ್ಲಿಷ್ಟವಾದ ಕಾಗುಣಿತವನ್ನೂ ಈಗ ರೂಢಿಯಲ್ಲಿ ಇಲ್ಲದ ಪದರೂಪ ಗಳನ್ನೂ ತೆಗೆದು ಹಾಕಿ ಸೌಲಭ್ಯದ ಕಡೆಗೆ ಗಮನ ನೀಡಲಾಗಿದೆ. ಹೀಗೆ ಮಾಡುವಾಗ ಪುಟ್ಟಣ್ಣನವರ ಶೈಲಿಗೆ ಯಾವ ಧಕ್ಕೆಯೂ ಉಂಟಾಗದಂತೆ ಎಚ್ಚರವಹಿಸಿದೆ.

ಇಲ್ಲಿನ ಕಥೆಗಳಲ್ಲಿನ ನಿಂತುಕ್ಕೊಂಡಿತು, ಹೊಕ್ಕೊಳ್ಳುವುದು, ತೆಗೆದು

ಕ್ಕೊಳ್ಳುವವರು, ನನಿಗೋಸ್ಕರವೇ, ನನಿಗೆ, ಕೂತುಕ್ಕೊಂಡು, ಹ್ಯಾಗೆ, ವೋಡಿಸಿಕೋಂಡು, ಬೈಸುವುದು, ವೂದು, ಕಿರಕುಳ, ವೂರು, ಮುಂತಾದ ರೂಪಗಳನ್ನು ನಿಂತುಕೊಂಡಿತು, ಹೋಗುವುದು, ತೆಗೆದುಕೊಳ್ಳುವವರು, ನನಗೋಸ್ಕರ, ನನಗೆ, ಕೂತುಕೊಂಡು, ಹೇಗೆ, ಓಡಿಸಿಕೊಂಡು, ಬಯ್ಯಿಸುವುದು, ಊದು, ಕಿರುಕುಳ, ಊರು ಎಂಬುದಾಗಿ ಮಾಡಿದೆ. ದೇಹಲೀ, ಜೀವವಂತ, ಬದಕು, ಸವುದೆ, ಮಹಾದೇವೈಯ, ಚೆರಂಡಿ, ಬೈಲು ಮುಂತಾದ ರೂಪಗಳನ್ನು ದೆಹಲಿ, ಜೀವಂತ, ಬದುಕು, ಸೌದೆ, ಮಹಾದೇವಯ್ಯ, ಚರಂಡಿ, ಬಯಲು ಎಂಬುದಾಗಿ ಈಗ ರೂಢಿಯಲ್ಲಿರುವ ರೀತಿಗನುಸಾರವಾಗಿ ಉಪಯೋಗಿಸಿದೆ. ಚಕ್ರವರ್ತಿ, ದರ್ಬಾರು, ಪಿತರಾರ್ಜಿತ, ನಿರ್ಮಲ, ಧರ್ಮ ಎಂದಿರುವವನ್ನು ಚಕ್ರವರ್ತಿ,ದರ್ಬಾರು, ಪಿತ್ರಾರ್ಜಿತ, ನಿರ್ಮಲ, ಧರ್ಮ ಎಂದಾಗಿಸಿ ರಕಾರದ ಒತ್ತಕ್ಷರಗಳಲ್ಲಿ ಏಕರೂಪತೆಯನ್ನು ಬಳಸಿದೆ. ಸಂಣ, ಮಂಣು, ಕಂಣು, ಬಂಣ, ಹಂಣು, ಮುಂತಾದುವುಗಳಿಗೆ ಸಣ್ಣ, ಮಣ್ಣು, ಕಣ್ಣು, ಬಣ್ಣ, ಹಣ್ಣು ಎಂದು ಬಳಸಿದೆ. ನೋಡಿ ಇದ್ದೀಯಾ, ನೋಡಿಯಿಲ್ಲ, ನಿಂತು ಇದ್ದ ಮುಂತಾದ ರೂಪಗಳಿಗೆ ನೋಡಿದ್ದೀಯಾ, ನೋಡಿಲ್ಲ, ನಿಂತಿದ್ದ ಎಂಬ ರೂಪಗಳನ್ನು ಹಾಕಿದೆ. ನಸೀರುದ್ದೀನ್, ಫ್ರಾನ್ಸು, ಸ್ಪೈನ್, ಮೊದಲಾದವುಗಳಿಗೆ ನಸೀರುದೀನ್, ಫ್ರಾನ್ಸ್, ಸ್ಪೇನ್ ಮುಂತಾಗಿ ಬಳಸಿದೆ.

ವ್ಯಾಕರಣದ ವಿಷಯಗಳಲ್ಲಿ ಇದು ಸರಿ, ಇದು ಸರಿಯಲ್ಲ ಎನ್ನುವ ಮಾತು ಸಾಪೇಕ್ಷವಾದುದು. ಇದೇ ಸರಿ ಎಂಬ ಯಾವ ನಿರ್ಧಾರವೂ ಭಾಷಾಪ್ರವಾಹದಲ್ಲಿ ಕೊಚ್ಚಿ ಹೋಗುವ ಸಾಧ್ಯತೆಯೇ ಹೆಚ್ಚು. ಕಾಲಕ್ಕೆ ತಕ್ಕಂತೆ, ಕೃತಿಯ ಉದ್ದೇಶಕ್ಕೆ ಹೊಂದುವಂತೆ ವ್ಯಾಕರಣದ ನಿಯಮಗಳನ್ನು ಅಳವಡಿಸಿಕೊಳ್ಳುವುದೊಂದೇ ಸೂಕ್ತ ಮಾರ್ಗ ಎಂದು ಹೇಳಬಹುದು. ಪುಟ್ಟಣ್ಣನವರು ಸದಾಕಾಲವೂ ಈ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟರು. ತಮ್ಮ ಕಾಲದ ಮಿಕ್ಕ ಹಲವರಿಗಿಂತ ಹೆಚ್ಚು ಬಿಗುವಿಲ್ಲದ ಕಾಗುಣಿತವನ್ನು ಬಳಸಿದರು. ಆಡುಮಾತನ್ನು ಗ್ರಂಥಸ್ಥವಾಗಿಸಲು ಶ್ರಮಿಸಿದರು.

ಕಥೆಯ ಮುಖ್ಯ ಉದ್ದೇಶಕ್ಕೆ ಯಾವ ರೀತಿಯಿಂದಲೂ ಹೊಂದದ, ಆದರೆ ಅನಗತ್ಯವಾದ ಪರಿಣಾಮವನ್ನು ಉಂಟುಮಾಡುವ ಭಾಗಗಳನ್ನು ತೆಗೆದುಹಾಕಿದೆ. ಉದಾಹರಣೆಗೆ 'ಮೂರುಮಂದಿ ಅಣ್ಣತಮ್ಮಂದಿರು' ಕಥೆಯ ಕಡೆಯ ವಾಕ್ಯವನ್ನು ತೆಗೆದುಹಾಕಿದೆ. ತಮ್ಮ ಮೂವರ ಚಾತುರ್ಯವನ್ನು ತಂದೆಗೆ ತೋರಿಸಿ ಮೆಚ್ಚುಗೆ ಗಳಿಸಬೇಕೆನ್ನುವುದು ಈ ಅಣ್ಣತಮ್ಮಂದಿರ ಉದ್ದೇಶ, ಅದಕ್ಕನುಗುಣವಾಗಿ ಕಥೆಯ ಬೆಳವಣಿಗೆ. ಇವರ ಚಾತುರ್ಯ ಪ್ರದರ್ಶನದ ನಂತರ ಕಥೆಯ ಮುಕ್ತಾಯವಾಗ ಬೇಕಿದ್ದುದು "ಹೀಗೆ ಅವರು ಮುದುಕರಾಗುವವರಿಗೂ ಒಟ್ಟಿಗೆ ವಾಸಮಾಡುತ್ತಿದ್ದು ಅವರಲ್ಲಿ ಒಬ್ಬನು ಸತ್ತು ಹೋಗುತ್ತಲೇ ಮಿಕ್ಕ ಇಬ್ಬರೂ ಅವನ ಸಾವಿನಲ್ಲೇ ಕೊರಗಿ ತಾವೂ ಸತ್ತರು" ಎಂದು ಕೊನೆಗಂಡಿದೆ. ಇದೇ ರೀತಿ 'ತೆನಾಲಿ ರಾಮಕೃಷ್ಣನ ಕಥೆ'ಯು ಒರಟುತನದಿಂದ ಕೂಡಿದ ಭಾಗವನ್ನು ತೆಗೆದುಹಾಕಿದೆ.

ಪುಟ್ಟಣ್ಣನವರ ನಿರಾಯಾಸವಾದ ಶೈಲಿಗೆ ಒಂದ ಉದಾಹರಣೆಯನ್ನು ನೋಡ ಬಹುದು.

"ಒಂದೂರಿನಲ್ಲಿ ಒಬ್ಬ ಕಲ್ಲ ಒಡ್ಡನು ಒಂದು ಕೊರಟು ಬಂಡಿಯನ್ನು ಮಾಡಿ ಕೊಂಡು ಅದರಲ್ಲಿ ಕಲ್ಲ ಹೇರಿಕೊಂಡು ಬರುವಾಗ ಚಕ್ರವು ಚರಂಡಿಯಲ್ಲಿ ಹೂತು ಕೊಂಡಿತು.ಗಿಡ್ಡಗಳು ಎಳೆಯಲಾರದೆ ಹೋದವು.ಒಡ್ಡನು ದಾರಿಯಲ್ಲಿ ಹೋಗುವವರಿ ಗೆಲ್ಲಾ ಗಾಡಿಯನ್ನು ಮೇಲಕ್ಕೆ ಎತ್ತಿಕೊಡಿಯಪ್ಪಾ ಎಂದು ಗೋಗರಿಯುತಾ ಬಂದನು. ಯಾರೂ ಸಹಾಯ ಮಾಡಲಾರದೇ ಹೋದರು. ಆಗ ಆ ಒಡ್ಡಬೋಯಿಯು ಅಯ್ಯೋ, ದೇವರೇ, ನೀನೇ ಕಾಪಾಡಪ್ಪಾ, ಈ ಚಕ್ರಗಳನ್ನು ಮೇಲಕ್ಕೆ ಎತ್ತಿಕೊಡು ಎಂದು ಮೊರೆಯಿಟ್ಟನು. ಅದೇ ದಾರಿಯಲ್ಲಿ ಒಬ್ಬ ಮುದುಕನು ಒಡ್ಡನನ್ನು ನೋಡಿ ಎಲೆ ಹುಚ್ಚ, ನಿನ್ನ ಕೈಲಾಗದ ಕೆಲಸ ಇತರರಿಂದ ಹೇಗೆ ಆದೀತು? ಇತರರು ಯಾರು ತಾನೇ ನಿನ್ನ ಕೆಲಸ ಮಾಡಿಯಾರು ? ದೇವರಲ್ಲಿ ಮೊರೆ ಇಟ್ಟರೆ, ಅವನು ಬಂದು ನಿನ್ನ ಗಾಡಿಯನ್ನು ಎತ್ತುತಾನೆಯೆ? ನಿನ್ನ ಕೆಲಸವನ್ನು ನೀನೇ ಮಾಡಬೇಕು. ಚಕ್ರಕ್ಕೆ ಹೆಗಲನ್ನು ಕೊಟ್ಟು ನಿನ್ನ ಬಲವನ್ನೆಲ್ಲಾ ಬಿಟ್ಟು ಮೇಲಕ್ಕೆ ಎತ್ತು, ಆಗ ದೇವರು ಸಹಾಯ ಮಾಡುತ್ತಾನೆ ಎಂದನು. ಆಗ ಒಡ್ಡನು ಹಾಗೆ ಮಾಡಲು ಗಾಡಿಯು ಬದಿಯಿಂದ ಮೇಲಕ್ಕೆ ಎದ್ದಿತು. ಆಮೇಲೆ ಗಾಡಿಯನ್ನು ಮುಂದಕ್ಕೆ ಹೊಡೆದು ಕೊಂಡು ಹೋದನು. ಹೀಗೆ ಆತ್ಮಾವಲಂಬನೆಗೆ ಸಮಾನವಾದ ಸಹಾಯ ಯಾವುದೂ ಇಲ್ಲ." (ಆತ್ಮಾವಲಂಬನೆ)

ಪುಟ್ಟಣ್ಣನವರ ಹೆಸರಿನಲ್ಲಿ ಇರುವುವು ಒಟ್ಟು ಹದಿಮೂರು ಕಥೆಗಳು. 'ವಿದ್ಯಾ ದಾಯಿನಿ' ಯಲ್ಲಿ ಪ್ರಕಟವಾದ ನಾಲ್ಕು ಕಥೆಗಳು (ಆತ್ಮಾವಲಂಬನೆ, ಬಡವರಾದರೂ ಪ್ರಾಮಾಣಿಕರಾಗಿರುವುದು, ದಿಟಸಟೆ ಮತ್ತು ಮಹಾಕವಿ ಡ್ಯಾಂಟಿಯ ಕಥೆ) ಮತ್ತು ಹಸ್ತಪ್ರತಿಯಲ್ಲಿನ ಒಂಬತ್ತು ಕಥೆಗಳು. ಖಚಿತ ಆಧಾರಗಳ ಮೇಲೆ ಅವರದೆಂದು ತೀರ್ಮಾನಿಸಿರುವುದು ಒಂಬತ್ತು ಕಥೆಗಳು. ಅವುಗಳಲ್ಲಿ ಏಳು 'ಹಿತಬೋಧಿನಿ'ಯ ಮೊದಲ ಸಂಪುಟದವು. (ಐದು ಕಥೆಗಳು ಪುಟ್ಟಣ್ಣನವರ ಸಂಪಾದಕತ್ವದ ಕಾಲದ್ದು, ಎರಡು ಕಥೆಗಳು ಎಂ. ವೆಂಕಟಕೃಷ್ಣಯ್ಯನವರ ಸಂಪಾದಕತ್ವದ್ದು) ಇನ್ನೆರಡು ಕಥೆಗಳು 'ವಿದ್ಯಾದಾಯಿನಿ' ಯಲ್ಲಿ ಪ್ರಕಟವಾದವುಗಳು.

ಕೃತಿಕಾರರ ಮನೋಧರ್ಮ, ಪುಟ್ಟಣ್ಣನವರ ಇತರ ಕೃತಿಗಳಲ್ಲಿನ ಸನ್ನಿವೇಶಗಳ ಹೋಲಿಕೆಗಳು, ಕಾಗುಣಿತ, ವಾಕ್ಯರಚನೆ, ಶೈಲಿ ಹಾಗೂ ಆಯಾ ಕಥೆಯನ್ನು ಓದಿ ದಾಗ ಆಗುವ ಒಟ್ಟು ಅನುಭವ ಈ ಆಧಾರಗಳ ಮೇಲೆ ಇಲ್ಲಿನ ಒಂಬತ್ತು ಕಥೆಗಳನ್ನು ಪುಟ್ಟಣ್ಣನವರ ಲೆಕ್ಕಕ್ಕೆ ಸೇರಿಸಿದೆ. ಆಂತರಿಕ ಪ್ರಾಮಾಣ್ಯಕ್ಕೆ ಹೆಚ್ಚು ಒತ್ತನ್ನು ಕೊಟ್ಟಿದೆ. ಈ ಮೇಲಿನ ಅಂಶಗಳಲ್ಲಿ ಯಾವುದೊಂದರಲ್ಲಿ ನಿಷೇಧಾತ್ಮಕ ಗುಣ ಕಂಡುಬಂದಂಥ ಹಲವು ಕಥೆಗಳನ್ನು ಕೈಬಿಡಲಾಗಿದೆ.

'ಹಿತಬೋಧಿನಿ' ಯ ಮೊದಲ ಸಂಪುಟದಲ್ಲಿ ಹಲವು ಕಥೆಗಳಿವೆ. ಕೆಲವು ಕಥೆ

ಗಳಿಗೆ ಹೆಸರಿಲ್ಲ. ಅಂತಹವುಗಳನ್ನು ಒಂದೊಂದನ್ನಾಗಿ ಸೂಕ್ಷ್ಮ ಪರಿಶೀಲನೆಗೆ ಒಳಪಡಿಸಿ ಅವುಗಳಲ್ಲಿ ಕೆಲವು ಪುಟ್ಟಣ್ಣನವರ ಕರ್ತೃತ್ವದ್ದು ಎಂದು ದೃಢಪಡಿಸಿಕೊಳ್ಳಲಾಗಿದೆ. ಅವುಗಳು 'ತೆನ್ನಾಲ ರಾಮಕೃಷ್ಣನ ಕಥೆ', 'ಹಸು ಮತ್ತು ಹೆಗ್ಗಣ', 'ವಿಕ್ರಮಾರ್ಕನ ಕಥೆ', 'ಗಂಡಭೇರುಂಡ ಪಕ್ಷಿ', 'ನಸೀರುದೀನ್ ಮಹಮೂದ್ ಮೌಲ್ವಿ', 'ಸದ್ಗುಣವುಳ್ಳವರಿಗೆ ದೈವಸಹಾಯವುಂಟಾಗುವುದು' ಮತ್ತು 'ಮೂರು ಮಂದಿ ಅಣ್ಣತಮ್ಮಂದಿರು'. ಆಡುಮಾತನ್ನು ಬರವಣಿಗೆಗೆ ಇಳಿಸಿರುವುದು (ಹ್ಯಾಗೆ, ತೆಗೆದುಕ್ಕೊಳ್ಳುವುದು, ಹೊಕ್ಕೊಳ್ಳುವುದು, ಉರಟಿಸು, ನಿಂತುಕ್ಕೊಂಡಿತು, ನನಿಗೋಸ್ಕರವೇ, ಗಂಡಭೇರುಂಡ, ನನಿಗೆ, ಆಚೇತಲೆಯು, ಕೂತುಕ್ಕೊಂಡು, ಲಾಳಾಕಟ್ಟು, ವೋಡಿಸಿಕೊಂಡು, ಇತ್ಯಾದಿ), ಕಥೆಗಳ ಚಿಕ್ಕ ಗಾತ್ರ, ಮೂಲಭೂತ ಮೌಲ್ಯಗಳಿಗೆ ಕೊಟ್ಟಿರುವ ಒತ್ತು—ಇವು ಈ ಏಳೂ ಕಥೆಗಳಲ್ಲಿ ಕಂಡುಬರುವ ವಿಚಾರಗಳು. ಜೊತೆಗೆ ಮೊದಲ ಐದು ಕಥೆಗಳಿಗೆ ಪುಟ್ಟಣ್ಣನವರ ಸಂಪಾದಕತ್ವದ ಬೆಂಬಲವೂ ಇದೆ. ಅಲ್ಲದೆ ಈ ಕಥೆಗಳ ಗುಂಪಿನಲ್ಲಿ ಸೇರಿದ್ದ 'ಭರತಮಹಾರಾಯ ಮತ್ತು ಜಿಂಕೆಯು ಮರಿ' ಮತ್ತು 'ಕುದುರೆ ಮತ್ತು ಆಳು' ಎಂಬ ಕಥೆಗಳು 'ನೀತಿಚಿಂತಾಮಣಿ' ಯ ಮೊದಲ ಮುದ್ರಣದಲ್ಲಿ ಸೇರಿವೆ. ಇದೇ ಗುಂಪಿನ 'ಆತ್ಮದೋಷ' ಎಂಬ ಕಥೆ 'ನೀತಿಚಿಂತಾಮಣಿ' ಯ ಎಲ್ಲ ಉಪಲಬ್ಧ ಮುದ್ರಣಗಳಲ್ಲೂ'ಒಬ್ಬ ಋಷಿಯ ವೃತ್ತಾಂತ' ಎಂಬ ಹೆಸರಿನಿಂದ ಸೇರಿದೆ. 'ಆತ್ಮದೋಷ' ಎಂಬುದು ಕಥಾಗುಚ್ಛದ ಶೀರ್ಷಿಕೆಯಾಗಿದೆ. ಎಲ್ಲ ಬರಹಗಳಿಗೆ ಲೇಖಕರ ಹೆಸರಿದ್ದು, ಕೆಲವು ಕಥೆಗಳಿಗೆ ಮಾತ್ರ ಹೆಸರಿಲ್ಲದಿರುವುದು, ಇಂಥ ಹೆಸರಿಲ್ಲದ ಕಥೆಗಳಲ್ಲಿ ಎರಡು ಕಥೆಗಳು ಪುಟ್ಟಣ್ಣನವರದೇ ಎಂಬ ಮೇಲಿನ ಸ್ಪಷ್ಟ ದಾಖಲೆಯಿರುವುದು—ಈ ಹಿನ್ನೆಲೆಯ ಸಹಾಯವಿದ್ದರೂ ಹೆಸರಿಲ್ಲದ ಬರಹಗಳೆಲ್ಲ ಸಂಪಾದಕರದ್ದು ಎಂಬ ಅನುಕೂಲಗ್ರಹಿಕೆಯ ಸೌಲಭ್ಯವನ್ನು ಪಡೆಯದೆ ಕಥೆಗಳಿಂದಲೇ ಹೊರಪಡುವ ಅಂಶಗಳಿಗೆ ಒತ್ತುಕೊಟ್ಟು ಅವುಗಳಿಂದ ಮಾತ್ರ ಪುಟ್ಟಣ್ಣನವರ ಕರ್ತೃತ್ವವನ್ನು ತೀರ್ಮಾನಿಸುವ ಪ್ರಯತ್ನವನ್ನು ಮಾಡಲಾಗಿದೆ.

'ವಿದ್ಯಾದಾಯಿನಿ'ಯ ಎರಡು ಕಥೆಗಳು ಪುಟ್ಟಣ್ಣನವರದೆಂದು ತಿಳಿಯಲು ಸಹಾಯಕವಾದ ಅಂಶಗಳು :

**ಧರ್ಮಕ್ಕೆ ಭಾಗಿಗಳು**

1. ಈ ಕಥೆಯ ಮೊದಲರ್ಧ ಭಾಗ 'ಪೇಟೆಮಾತೇನಜ್ಜಿ' ಯ ಮೊದಲ ಪುಟಗಳ ಸಂಕ್ಷಿಪ್ತಭಾಗ. ಮುಂದಿನ ಸ್ವಲ್ಪಭಾಗ 'ಅವರಿಲ್ಲದೂಟ'ದ ಒಗಟಿನ ಪ್ರಸಂಗದ್ದು. ಅಲ್ಲಿ ಅಪೂರ್ಣವಾಗಿದೆ. ಇಲ್ಲಿ ಪೂರ್ಣರೂಪದಲ್ಲಿದೆ. ರಾಜ ಪರಿವಾರದೊಡನೆ ಬೇಟೆಗೆ ಹೋಗುವುದು, ಜಿಂಕೆಯೊಂದನ್ನು ಬೆನ್ನಟ್ಟಿ ದೂರ ಹೋಗುವುದು, ಬಾಯಾರಿಕೆಯನ್ನು ತಡೆಯದೆ ಸೋಲುವುದು, ಆಗ ಮಂತ್ರಿ ಅಲ್ಲಿದ್ದ ಹಳ್ಳದಿಂದ ನೀರು ತಂದುಕೊಡುವುದು, ಈ ಭಾಗಗಳು 'ಪೇಟೆಮಾತೇನಜ್ಜಿ' (ಪು. 3–5)ಯಲ್ಲೂ

ಲಾಹುಕ, ಕಾಡುಹಂದಿ. ಕಾಡೆಮ್ಮೆ ಮತ್ತು ಆನೆಗಳು ಮಾಡಿದ ಹಳ್ಳ ದೊಡ್ಡದಾಗಿ ನಿರ್ಮಲವಾದ ನೀರು ಅಲ್ಲಿ ನಿಲ್ಲುವಂತಾಗುವುದು 'ಅವರಿಲ್ಲದೂಟ' (ಪು. 59–61) ದಲ್ಲೂ ಬರುವ ಪ್ರಸಂಗಗಳು.

2. ಕಥೆಯು ಪ್ರಾರಂಭ ಒಂದು ಶ್ಲೋಕದಿಂದಾಗಿದೆ. 'ನೀತಿಚಿಂತಾಮಣಿ'ಯ ಕಥೆಗಳಲ್ಲಿ ಇದು ತೀರ ಪರಿಚಿತ ಅಂಶ.

3. ವಾಕ್ಯರಚನೆ / ಕಾಗುಣಿತ / ಪದಗಳ ವಿಶಿಷ್ಟ ಅರ್ಥದ ಬಳಕೆ.

(1) ಕಾಲಿನಲ್ಲಿ ನೆಲವನ್ನು ಕೆರೆದು ಸಣ್ಣಗುಂಡಿಯನ್ನು ಮಾಡಿಕೊಂಡು ಆ ಗುಂಡಿಯಲ್ಲಿ ಕೂತುಕೊಳ್ಳುವ ಸ್ವಭಾವ ಈ ಪಕ್ಷಿಗೆ ಇದೆ. (ಧರ್ಮಕ್ಕೆ ಭಾಗಿಗಳು)

ಯಾವಾಗಲೂ ನೀರಿನಲ್ಲಿಯೇ ಇದ್ದುಕೊಂಡು ಕೆಸರಿನಲ್ಲಿ ಹೊರಳಾಡಿ ಸಂತೋಷ ಪಡುವ ಸ್ವಭಾವವು ಎಮ್ಮೇ ಜಾತಿಯಲ್ಲಿ ಇರುವ ಕಾರಣ, ಈ ಕಾಡೆಮ್ಮೆಯು ಆ ನೀರನ್ನು ಕಂಡು ಸುಮ್ಮನಿರದೆ, ಅಲ್ಲಿ ಬಿದ್ದು ಒದ್ದಾಡಿ, ಕಾಲಲ್ಲಿ ಕೆದಕಿ ಕೊಂಬಿನಲ್ಲಿ ತಿವಿದು ಹಳ್ಳವನ್ನು ಇನ್ನೂ ದೊಡ್ಡದಾಗಿ ಮಾಡಿತು. (ಧರ್ಮಕ್ಕೆ ಭಾಗಿಗಳು)

ಹೋಲಿಸಿ : ಒಂದಾನೊಂದು ಕುದುರೆಯಲ್ಲಿ ತನ್ನ ನೆಳಲನ್ನು ನೋಡಿ ತಾನೇ ಬೆಚ್ಚುವ ಕೆಟ್ಟ ಸ್ವಭಾವವಿತ್ತು. ('ಕುದುರೆ ಮತ್ತು ಆಳು' 'ನೀತಿಚಿಂತಾಮಣಿ' ಪು. 253; 1884)

(2) ಆಗ ಆ ಕೃಷ್ಣಮೃಗವು ಒಂದು ಸಾರಿ ಫಣ್ಣನೆ ಹಾರುವುದಲ್ಲಾ, ಒಂದು ಸಾರಿ ಹಳ್ಳಕೊಳ್ಳಗಳನ್ನು ನೆಗೆಯುವುದಲ್ಲಾ, ಮತ್ತೊಂದು ಕಾಲದಲ್ಲಿ ಹೊದರಿ ನೊಳಕ್ಕೆ ನುಗ್ಗುವುದಲ್ಲಾ, ಇನ್ನೊಂದು ಕಾಲದಲ್ಲಿ ಗಾಳಿಗಿಂತಲೂ ವೇಗವಾಗಿ ಭರ್ರನೆ ಓಡುವುದಲ್ಲಾ, ಹೀಗೆಲ್ಲಾ ಮಾಡುತ್ತಾ, ಮುಂದೆ ಮುಂದೆ ಹೋಯಿತು. (ಧರ್ಮಕ್ಕೆ ಭಾಗಿಗಳು)

ಹೋಲಿಸಿ : ಮಗುವನ್ನು ಎತ್ತಿಕೊಳ್ಳುವವಳಲ್ಲ,ಆಡಿಸುವವಳಲ್ಲ, ಮುದ್ದಾಡು ವವಳಲ್ಲ, ತಲೆಯ ಮೇಲೆ ಕೂರಿಸಿಕೊಳ್ಳುವವಳಲ್ಲ, ಭುಜದ ಮೇಲೆ ಏರಿಸಿ ಕೊಳ್ಳುವವಳಲ್ಲ, ಹೀಗೆಲ್ಲಾ ಮಾಡುತ್ತಿದ್ದಳು. (ಮಾಡಿದ್ದುಣ್ಣೋ ಮಹಾರಾಯ, ಪು. 129)

(3) ಅದರ ನೀರು ಉಪ್ಪು, ಇದರ ನೀರು ಸಿಞ (ಧರ್ಮಕ್ಕೆ ಭಾಗಿಗಳು)

'ಸಿಹಿ' ಎಂಬುದನ್ನು ಪುಟ್ಟಣ್ಣನವರು ಒಪ್ಪುತ್ತಿರಲಿಲ್ಲ. " 'ಕಞ' 'ಸಿಞ'ಗೆ ಕಹಿ, ಸಿಹಿ ಎಂದು ಯಾವ ಪುರಾತನ ಗ್ರಂಥದಲ್ಲಿದೆಯೋ ನಾನರಿಯೆ. ಇಲ್ಲಿ ಅಂತ್ಯಾಕ್ಷರಕ್ಕೆ ಅನುನಾಸಿಕ ಉಚ್ಚಾರಣೆ ನಿತ್ಯವಾದ್ದು."

(ಕನ್ನಡ : ಕೆಲವು ವಿಚಾರಗಳು ; ಪ್ರ. ಕ. 60—1; 1978; ಪು. 20)

ಹೋಲಿಸಿ : ಅದು ಅಡಿಯಲ್ಲಿ ದಪ್ಪವಾದ ಪೊದ್ದಿನಿಂದ ಹಾಲಿನ ಹಾಗೆ ಬೆಳ್ಳಗೂ ಜೇನುತುಪ್ಪದ ಹಾಗೆ ಸೀಞಾಗಿಯೂ ಇದ್ದ ರಸ ಹರಿಯುತ್ತಿತ್ತು. (ಹಾತೀಂತಾಯ್ ಹಸ್ತಪ್ರತಿ—ಪು. 286)

(4) ವಾಸಾ ಮಾಡಿಕೊಂಡಿತ್ತು, ಮಂಡೀ ಉದ್ದ, (ಧರ್ಮಕ್ಕೆ ಭಾಗಿಗಳು)

ನಾಮಪದಗಳಲ್ಲಿ ಅಂತ್ಯಾಕ್ಷರಗಳ ದೀರ್ಘಗಳು ಪುಟ್ಟಣ್ಣನವರಲ್ಲಿ ತೀರ ಸಾಮಾನ್ಯ.

ಹೋಲಿಸಿ : ಇತ್ತ ಉಪಾದ್ರಿಯು ಗದ್ದಿಗೇ ಮೇಲೆ ನೋಡಲಾಗಿ ಇವನು ಕೂತು ಕೊಳ್ಳುತ್ತಿದ್ದ ಕಡೆ ದೊಡ್ಡದಾಗಿ ಹಳ್ಳವನ್ನು ತೋಡಿದ್ದರು. ಅದರೊಳಗೆ ಗೊಬ್ಬಳೀ ಮುಳ್ಳು, ಕೊಳವಳಿಕೇ ಮುಳ್ಳು, ಗುಬ್ಬೀಮುಳ್ಳು, ಇವುಗಳನ್ನು ತಂದು ತುಂಬಿದ್ದರು. (ಮಾಡಿದ್ದುಣ್ಣೋ ಮಹಾರಾಯ, ಪು. 51)

(5) ಅದು ಶುದ್ಧವಾಗಿ ಪಾಪ ಭೂಯಿಷ್ಟ. (ಧರ್ಮಕ್ಕೆ ಭಾಗಿಗಳು; ವಿದ್ಯಾದಾಯಿನಿ; 3–5 ಪು. 102)

ಹೋಲಿಸಿ : ನಾವು ಇದ್ದದು ಶುದ್ಧವಾಗಿ ಮಲೆಸೀಮೆ. (ಮಾಡಿದ್ದುಣ್ಣೋ ಮಹಾರಾಯ, ಪು. 176)

'ಶುದ್ಧ' ಎಂಬ ಪದವನ್ನು ಪೂರ್ತಿಯಾಗಿ ಎಂಬರ್ಥದಲ್ಲಿ ಪುಟ್ಟಣ್ಣನವರು ಬಳಸಿದ್ದಾರೆ.

4. 'ಮಾಡಿದ್ದುಣ್ಣೋ ಮಹಾರಾಯ'ದ ಭಟಜಿಯಂತೆ, 'ಮುಸುಗ ತೆಗೆಯೇ ಮಾಯಾಂಗನೆ' ಯ ಆತ್ಮಾರಾಂ ಬಾವಾಜಿಯಂತೆ 'ಅವರಿಲ್ಲದೂಟ' ದ ಫಕೀರನಂತೆ ಇಲ್ಲಿನ ಮುನಿಯೂ ಫಲಾಪೇಕ್ಷೆಯಿಲ್ಲದವನೂ, ಅಪರಿಗ್ರಹದಲ್ಲಿ ನಂಬಿಕೆಯಿಟ್ಟವನೂ ಆಗಿದ್ದಾನೆ. ಈತನೂ ಅವರಂತೆಯೇ ರಾಜಮರ್ಯಾದೆಯನ್ನು ನಿರಾಕರಿಸುತ್ತಾನೆ. ಈ ಮನೋಧರ್ಮ ಪುಟ್ಟಣ್ಣನವರ ಬರಹಗಳಲ್ಲಿ ಹಲವೆಡೆ ಸುವ್ಯಕ್ತ. ಇಂಥ ವ್ಯಕ್ತಿಗಳಲ್ಲಿ ಅವರಿಗೆ ಬಹಳ ಗೌರವ. 'ಹಸು ಮತ್ತು ಹೆಗ್ಗಣ' ದಲ್ಲಿ ಹೀಗಿಲ್ಲದಿರುವವರನ್ನು ಟೀಕಿಸುವ ಇದೇ ಮನೋಭಾವದ ಇನ್ನೊಂದು ಮುಖ ಪ್ರಕಟವಾಗಿದೆ. ಈ ಆಂತರಿಕ ಪ್ರಾಮಾಣ್ಯ ಈ ಕಥೆಯನ್ನು ಪುಟ್ಟಣ್ಣನವರ ಕರ್ತೃತ್ವವನ್ನು ನಿಶ್ಚಯಿಸುವುದರಲ್ಲಿ ಬಹಳ ಸಹಾಯಕವಾದ ನಿರ್ದುಷ್ಟ ಅಂಶ.

ಕಾಚಯ ಪೋಚಯರ ಕಥೆ :

1. ಕಥೆಯ ಪ್ರಾರಂಭ ಶ್ಲೋಕದಿಂದ ಆಗಿದೆ. 'ನೀತಿಚಿಂತಾಮಣಿ' ಯಲ್ಲಿ ಇದು ತೀರಾ ಪರಿಚಿತ ಅಂಶ.

2. ವಾಕ್ಯರಚನೆ / ಕಾಗುಣಿತ / ಪದಗಳ ವಿಶಿಷ್ಟ ಅರ್ಥದ ಬಳಕೆ

(1) ಇವರಿಬ್ಬರೂ ಕೂತುಕೊಂಡು ತಮ್ಮ ಮನಸ್ಸಿನಲ್ಲಿ ಯೋಚಿಸಿಕೊಂಡದ್ದು ಹ್ಯಾಗೆಂದರೆ :—(ಕಾಚಯ ಪೋಚಯರ ಕಥೆ)

ಹೋಲಿಸಿ :......ಆ ಹುಡುಗನು ತನ್ನ ಕಥೆಯನ್ನು ಹೇಳುತಾ ಬಂದದ್ದು ಹೇಗೆಂದರೆ :—(ಮಾಡಿದ್ದುಣ್ಣೋ ಮಹಾರಾಯ ಪು. 176)

ದಾರಿಯಲ್ಲಿ ಒಬ್ಬರಿಗೊಬ್ಬರು ಮಾತನಾಡಿಕೊಂಡದ್ದು ಹೇಗೆಂದರೆ :—(ಮಾಡಿದ್ದುಣ್ಣೋ ಮಹಾರಾಯ ಪು. 194)

(2) ಶುದ್ಧವಾಗಿ ಕಾಡ ಹೆಸರಾಗಿದೆ (ಕಾಚಯ ಪೋಚಯರ ಕಥೆ)
ಹೋಲಿಸಿ : ಹತೀಮ—ದೇವರ ಕೃಪೆ, ನನ್ನ ಕಾರ್ಯವೆಲ್ಲಾ ಶುದ್ಧವಾಗಿ ಜಯಪ್ರದವಾಯಿತು (ಹಾತಿಂತಾಯ್—ಪು. 303, ಹಸ್ತಪ್ರತಿ)

(3) ಇವರ ಎದುರಿಗೆ ಒಬ್ಬ ಮನುಷ್ಯನು ಸವುದೇ ಹೊರೆಯನ್ನು ಹೊತ್ತು ಕೊಂಡು ಮಾರುವುದಕ್ಕಾಗಿ ಬೀದಿಬೀದಿಯಲ್ಲಿ ಸಾರುತ್ತಾ ಬಂದ. (ಕಾಚಯ ಪೋಚಯರ ಕಥೆ )
ಹೋಲಿಸಿ : ಹವುದು, ಹೋಗಿದ್ದೆ; ಅವರೆಲ್ಲಾ ನನ್ನನ್ನು ಬಹುವಾಗಿ ಲಾಲಿಸಿದರು. (ಸುಮತಿಮದನಕುಮಾರರ ಚರಿತ್ರೆ ಪು. 17)

(4) ಮಹಾದೇವೈಯ್ಯ (ಕಾಚಯ ಪೋಚಯರ ಕಥೆ )
ಹೋಲಿಸಿ : ಏನೈಯ್ಯ, ಬಂದಿ, ಸಂಗಣ್ಣ ? (ಮಾಡಿದ್ದುಣ್ಣೋ ಮಹಾ ರಾಯ, ಪು. 14)

3, 4 ನೆಯ ಅಂಶಗಳಲ್ಲಿ ಕಾಣುವುದು ಸುಲಭ ಕಾಗುಣಿತ. ಉಚ್ಚಾರದಂತೆ ಬರಹ ಎಂಬುದು ಪುಟ್ಟಣ್ಣನವರು ಒಂದು ನಿಯಮವಾಗಿ ಪಾಲಿಸುತ್ತಿದ್ದ ಅಂಶ.

ಇಂಥ ಸೂಕ್ಷ್ಮವಾದ ಹೋಲಿಕೆಗಳು ಈ ಕಥೆಗಳ ಕರ್ತೃತ್ವವನ್ನು ಪುಟ್ಟಣ್ಣನವರಿಗೆ ಸಲ್ಲುವಂತೆ ಮಾಡುತ್ತವೆ. ಒಬ್ಬ ಬರಹಗಾರನಿಗೆ ಆತನದೇ ಶೈಲಿ ಎಂಬ ಮಾತು ಇಂಥ ಕಡೆಗಳಲ್ಲಿ ನೂರಕ್ಕೆ ನೂರು ಸತ್ಯ.

ಪುಟ್ಟಣ್ಣನವರು ತಮ್ಮ ವೃತ್ತಿ ಜೀವನವನ್ನು ಆರಂಭಿಸಿದ್ದು ಉಪಾಧ್ಯಾಯರಾಗಿ. ಅವರ ಪ್ರವೃತ್ತಿಯೂ ಇದಕ್ಕೆ ಹೊರತಾದ್ದಲ್ಲ ಮಾತ್ರವಲ್ಲ, ಹೇಳಿ ಮಾಡಿಸಿದಂತೆ ಇತ್ತು. ಮಕ್ಕಳಿಗಾಗಿ ಪುಟ್ಟಣ್ಣನವರು ಅತ್ಯಂತ ನಿಷ್ಠೆಯಿಂದ ಕೆಲಸ ಮಾಡಿದರು. ಮಕ್ಕಳಲ್ಲಿ ಅವರಿಗೆ ಅತೀವ ಪ್ರೇಮವಿತ್ತು. ಮಕ್ಕಳ ಮನಸ್ಸಿಗೆ ಹೊರೆಯಾಗದಂತೆ ಕ್ಲಿಷ್ಟತತ್ತ್ವಗಳನ್ನು ಸರಳವಾಗಿ ಕಥೆಯ ಮೂಲಕ ಹೇಳುವುದು ಅವರ ಪ್ರಿಯವಾದ ಹವ್ಯಾಸವಾಗಿತ್ತು. ಇದರ ಪ್ರತೀಕವಾಗಿ 'ನೀತಿಚಿಂತಾಮಣಿ' ಯ ರಚನೆಯ ನಂತರವೂ ಪುಟ್ಟಣ್ಣನವರು ಹಲವು ಕಥೆಗಳನ್ನು ಬರೆದರು. ಉಪಲಬ್ಧವಾಗಿರುವ ಅಂಥ ಕಥೆಗಳನ್ನು ಒಟ್ಟುಗೂಡಿಸಿದ ಮೊದಲ ಪ್ರಯತ್ನ 'ಪುಟ್ಟಣ್ಣ ಹೇಳಿದ ಕಥೆಗಳು'.

### ಪೇಟೆಮಾತೇನಜ್ಜಿ

ಕಥನ ಸಾಹಿತ್ಯದಲ್ಲಿ ಪುಟ್ಟಣ್ಣನವರಿಗೆ ಇದ್ದ ಆಸಕ್ತಿಯು ವಿವಿಧರೀತಿಯ ಕೃತಿಗಳ ರಚನೆಯಲ್ಲಿ ಅಭಿವ್ಯಕ್ತವಾಯಿತು. 'ಪೇಟೆ ಮಾತೇನಜ್ಜಿ'ಯ ರಚನೆಯಲ್ಲಿ ಮನರಂಜನೆಯೇ ಪ್ರಮುಖ ಉದ್ದೇಶ ಎಂದು ಪುಟ್ಟಣ್ಣನವರು ಹೇಳಿಕೊಂಡಿದ್ದಾರೆ (ಪೇ. ಮಾ. ಪು. iii)

ಕಥಾಸಾರ : ಮಾನಸಪುರದ ರಾಜ ಸತ್ಯಗುಪ್ತರಾಯನಿಗೆ ಇಬ್ಬರು ಹೆಂಡಿರು. ಮಕ್ಕಳಿಲ್ಲವೆಂಬುದೊಂದೇ ಆತನ ಚಿಂತೆ. ಒಮ್ಮೆ ರಾಜ ತನ್ನ ಮಂತ್ರಿ ವೀರಸಿಂಹ

ನೊಡನೆ ಬೇಟೆಗೆ ಹೊರಟನು. ಕಾಡಿನಲ್ಲಿ ರೂಪಸಿಯಾದ ಷೋಡಶಿಯೊಬ್ಬಳನ್ನು ಇಬ್ಬರೂ ನೋಡಿದರು. ದೊರೆಗೆ ಈ ಯುವತಿಯ ರೂಪೂ ನಿಲುವೂ ಮೆಚ್ಚುಗೆಯಾಯಿತು. ತನ್ನ ಅಭಿಮತವನ್ನು ಮಂತ್ರಿಗೆ ತಿಳಿಸಿ ಆಕೆಯ ಪೂರ್ವೋತ್ತರಗಳನ್ನು ವಿಚಾರಿಸಲು ಹೇಳಿದನು. ಮಂತ್ರಿಯ ದೌತ್ಯ ಫಲಿಸಿ ರಾಜನಿಗೂ ಆ ಸುಂದರಿಗೂ ಮದುವೆಯಾಯಿತು.

ರಾಜನು ಹೊಸ ಹೆಂಡತಿ ಚೆಲುವಾಜಿಯೊಡನೆ ಒಮ್ಮೆ ಮಾತನಾಡುವಾಗ ಆಕೆಯ ಸರಳತೆ, ನೇರಮಾತುಗಳನ್ನು ತಪ್ಪಾಗಿ ತಿಳಿದು ಆಕೆಯನ್ನು ದೂರವಿಟ್ಟನು. ಚೆಲುವಾಜಿ ಸಗ್ಗಲಿಲ್ಲ. ತನ್ನ ತಪ್ಪನ್ನರಿತ ರಾಜ ರಾಣಿಯನ್ನು ಒಲಿಸಿಕೊಳ್ಳಲು ಏನಾದರೂ ಉಪಾಯ ಮಾಡೆಂದು ಮಂತ್ರಿಗೆ ಹೇಳಿದನು. ದೊರೆಗೆ ಆಲಸ್ಯವೆಂದು ಮಂತ್ರಿ ಹಬ್ಬಿಸಿದ ವಾರ್ತೆಯನ್ನು ನಂಬಿ, ಆತನನ್ನು ನೋಡಲು ಚೆಲುವಾಜಿ ಬಂದಾಗ ಇದೆಲ್ಲ ನಾಟಕವೆಂದು ಅರಿತಳು. ಆಕೆಯ ಮಾತಿಗೆ ಕಿನಿಸಿದ ರಾಜ ಅವಳನ್ನು ದೇಶ ಭ್ರಷ್ಟಳನ್ನಾಗಿಸಿ ಶಿರಚ್ಛೇದನ ಮಾಡಲು ಆಜ್ಞೆ ಇತ್ತನು. ತನ್ನ ಸದುದ್ದೇಶದ ಕಾರ್ಯ ಹೀಗೆ ಪರಿಣಮಿಸಿತೆಂದು ಮಂತ್ರಿಗೆ ಬಹಳ ವ್ಯಸನವಾಯಿತು. ಚೆಲುವಾಜಿಯಾದರೋ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡು ತನ್ನ ಇಬ್ಬರು ಗಂಡುಮಕ್ಕಳಿಂದ ತನ್ನ ಮಂಚದ ಕಾಲಿಗೆ ದೊರೆಯನ್ನು ಬಿಗಿಸಿ ತಾನಿರುವ ಕಡೆ ಕರೆಸಿಕೊಳ್ಳುವೆನೆಂದು ಪ್ರತಿಜ್ಞೆ ಮಾಡಿದಳು. ಮೂರುದಿನದ ಮೇಲೆ ರಾಣಿಯನ್ನು ಕಾಡಿನಲ್ಲಿ ಕೊಲ್ಲಿಸಲಾಯಿತೆಂದು ಮಂತ್ರಿ ರಾಜನಿಗೆ ತಿಳಿಸಿದನು.

ಕೋಪವಿಳಿದ ರಾಜ ಆವೇಶದಲ್ಲಿ ದುಡುಕಿದ್ದಕ್ಕಾಗಿ ಬಹುವಾಗಿ ಕೊರಗಿ ಮನೋವ್ಯಥೆ, ದೇಹಾಲಸ್ಯಗಳನ್ನು ಮರೆಯಲೆಂದು ಸಮುದ್ರಯಾನಕ್ಕೆಂದು ಹೊರಟನು. ಚಂಡಮಾರುತದ ದೆಸೆಯಿಂದ ಒಂದು ಎಡತಿಟ್ಟಿನ ಬಳಿ ಬಂದು ಸೇರಬೇಕಾಯಿತು. ಅಲ್ಲಿ ಒಬ್ಬ ಸುಂದರ ತರುಣಿಯ ದರ್ಶನವಾಯಿತು. ತನ್ನ ತಂದೆ ಸೂಚಿಸಿದ ವರನನ್ನು ಒಪ್ಪದುದರಿಂದ ತಾನು ಇಲ್ಲಿ ಬಂಧಿತಳಾಗಿರುವುದನ್ನೂ, ಯಾರಾದರೊಬ್ಬ ದೊರೆಯನ್ನೇ ವರಿಸಬೇಕೆಂದು ತಂದೆ ವಿಧಿಸಿರುವುದನ್ನೂ ಹೇಳಿ, ತಾನು ಮೆಚ್ಚಿದಾತನನ್ನು ಮದುವೆಯಾಗುವುದಾಗಿ ಆಕೆ ತಿಳಿಸಿದಳು. ರಾಜ, ತಾನೊಬ್ಬ ದೊರೆಯೆಂದು ತಿಳಿಸಿ ಆಕೆಯೊಡನೆ ಗಾಂಧರ್ವವಿವಾಹವನ್ನು ಮಾಡಿಕೊಂಡನು. ಮೂರು ದಿನಗಳಾದ ಮೇಲೆ ತನ್ನ ವಸ್ತ್ರ, ಮುದ್ರೆಯುಂಗುರಗಳನ್ನು ಆಕೆಯ ಇಚ್ಛೆಯಂತೆ ಕೊಟ್ಟು ರಾಜಧಾನಿಗೆ ಹಿಂತಿರುಗಿದನು.

ಕೆಲವು ವರ್ಷಗಳ ನಂತರ, ಮುತ್ಯಾಲಸೆಟ್ಟಿ, ಪಗಡಾಲ ಸೆಟ್ಟಿ ಎಂಬ ಒಂದೇ ವಯಸ್ಸಿನ ಇಬ್ಬರು ಯುವಕರು ರತ್ನಪಡಿವ್ಯಾಪಾರಕ್ಕೆಂದು ಮಾನಸಪುರಕ್ಕೆ ಬಂದು ಒಬ್ಬ ಅಡುಗೂಲಜ್ಜಿಯ ಮನೆಯಲ್ಲಿ ಉಳಿದುಕೊಂಡರು. ಒಂದು ದಿನ ಅವರಿಗೆ ಅಡುಗೂಲಜ್ಜಿಯಿಂದ ರಾಣಿಯ ವಜ್ರದ ಮೂಗುಬಟ್ಟು ಕಳುವಾದುದೂ, ಎರಡು ಮೂರು ದಿನಗಳ ನಂತರ ರಾಜನ ವಜ್ರದುಂಗುರ ಕಳುವಾದುದೂ ಕಳ್ಳನನ್ನು ಹಿಡಿ

ಯುವ ಪ್ರಯತ್ನ ವಿಶೇಷವಾಗಿ ಸಾಗುತ್ತಿರುವುದೂ ತಿಳಿಯಿತು. ಅದರ ಮರುದಿನ ಕೋಟುಗಸ್ತಿಯಲ್ಲಿದ್ದ ಗುರಿಕಾರನನ್ನು ಚಾವಡಿಕಂಬಕ್ಕೆ ಕಟ್ಟಿಹಾಕಿ ಬಾಯಿಗೆ ಚಂಡು ಗಿಡಿದಿದ್ದ ವಿಚಾರವೂ ಆ ದಿನ ಚದುರೆಯಾದ ವೇಶ್ಯೆಯು ಕಳ್ಳರನ್ನು ಹಿಡಿಯಲೆಂದು ನಿಯೋಜಿತಳಾಗಿರುವುದೂ ತಿಳಿಯಿತು. ಮಾರನೆಯ ದಿನ ಆ ವೇಶ್ಯೆಗೆ ಒದಗಿದ ಆಪತ್ತೂ, ಎರಡು ದಿನದ ಮೇಲೆ ಕಳ್ಳನನ್ನು ಹಿಡಿಯುವೆನೆಂದು ಪಂಥ ಕಟ್ಟಿದ ಪ್ರಧಾನಿಪುತ್ರಿಗೊದಗಿದ ಪರಾಭವವೂ ತಿಳಿಯಿತು. ಅಂದಿನ ದಿನ ರಾಜನೇ ಕಳ್ಳನನ್ನು ಹಿಡಿಯಲು ಹೊರಡುವ ಸುದ್ದಿಯೂ ತಿಳಿಯಿತು. ಆಗ ಮುತ್ಯಾಲ ಸೆಟ್ಟಿ ಪಗಡಾಲ ಸೆಟ್ಟಿ ಇಬ್ಬರೂ ಇನ್ನು ತಮ್ಮ ಕಾರ್ಯ ಆದಂತೆ ಎಂದು ಸಂತೋಷಿಸಿದರು. ಅವರಿಬ್ಬರೂ ಚೆಲುವಾಜಿಯ ಮಕ್ಕಳು, ನಗರದಲ್ಲಿ ಈವರೆಗೆ ನಡೆದ ಕಳ್ಳತನಗಳಿಗೆ ಕಾರಣರು. ತಮ್ಮ ತಾಯಿಯ ಪ್ರತಿಜ್ಞೆಯನ್ನು ಪೂರೈಸಲು ಬಂದಿದ್ದರು. ಇದೇನನ್ನೂ ಬಹಿರಂಗ ಪಡಿಸದೆ ಅಡುಗೂಲಜ್ಜಿಗೆ ಕೊಡಬೇಕಾದ, ಹಣ, ಇನಾಮುಗಳನ್ನು ಸಲ್ಲಿಸಿ ತಮ್ಮೂರಿಗೆ ಹೋಗುವುದಾಗಿ ತಿಳಿಸಿ ಹೊರಟರು.

ಮಾರನೆಯ ದಿನ ದೊರೆ ಗಸ್ತಿಗೆ ಬಂದಾಗ ಊರಾಚೆ ತಿಂಡಿ ಪದಾರ್ಥಗಳನ್ನು ಮಾರುತ್ತ ಕುಳಿತಿದ್ದ ಅವರಿಬ್ಬರೂ ಕಳ್ಳರು ಮಧ್ಯರಾತ್ರಿಯಲ್ಲಿ ಬರುವುದಾಗಿಯೂ ದುಬಾರಿ ಬೆಲೆಗೆ ತಿಂಡಿಪದಾರ್ಥಗಳನ್ನು ಕೊಳ್ಳುವರೆಂದೂ ತಿಳಿಸಿದರು. ಕಳ್ಳರನ್ನು ಹಿಡಿಯಲು ಸಹಾಯಮಾಡಬೇಕೆಂಬ ದೊರೆಯ ಮಾತಿಗೆ ಒಪ್ಪಿ ಒಳಗೆ ವಿಶ್ರಮಿಸಿಕೊಳ್ಳಬೇಕೆಂದೂ ಕಳ್ಳರು ಬಂದಾಗ ಎಬ್ಬಿಸುವುದಾಗಿ ವಿನಂತಿಸಲು ದೊರೆ ಒಪ್ಪಿ ಸಂತೋಷಪಟ್ಟು ನಿದ್ರಿಸಿದನು. ಈ ಇಬ್ಬರು ಯುವಕರು ರಾಜನ ನಿದ್ರಾಭಂಗವಾಗದಂತೆ ಅವನ ಕೈ ಕಾಲುಗಳನ್ನು ಮಂಚಕ್ಕೆ ಕಟ್ಟಿ ಮಂಚವನ್ನು ಹೊತ್ತುತಂದು ತಾಯಿಯ ಮುಂದೆ ಇರಿಸಿದರು.

ದೊರೆಗೆ ಎಚ್ಚರವಾದ ಮೇಲೆ ತಾನಿದ್ದ ಸೌಧವನ್ನು ಕಂಡು ಅಚ್ಚರಿಪಟ್ಟನು. ಮುತ್ಯಾಲಸೆಟ್ಟಿಯೂ ಪಗಡಾಲಸೆಟ್ಟಿಯೂ ಬಂದು ಹಗ್ಗವನ್ನು ಬಿಚ್ಚಿದರು. ದೊರೆ ಎದ್ದು ಕೂತನು. ಚೆಲುವಾಜಿ ಬಂದು ನಮಿಸಿ, ಹಿಂದೆ ಎಡತಿಟ್ಟಿನಲ್ಲಿ ಗಾಂಧರ್ವ ವಿವಾಹ ಮಾಡಿಕೊಂಡಿದ್ದು ತನ್ನೊಡನೆಯೇ ಎಂದೂ ಆ ವಿವಾಹಫಲವೇ ಈ ಅವಳಿ ಮಕ್ಕಳೆಂದೂ ತಿಳಿಸಿದಳು. ಆನಂದಬಾಷ್ಪಗಳನ್ನು ಸುರಿಸುತ್ತ ರಾಜ ಪತ್ನೀಪುತ್ರರೊಡನೆ ರಾಜಧಾನಿಗೆ ಬಂದನು. ಮಂತ್ರಿ ವೀರಸಿಂಹನಿಗೆ ವಿಶೇಷವಾಗಿ ಮರ್ಯಾದೆ ಮಾಡಿದನು. ಎಲ್ಲರೂ ಸುಖವಾಗಿದ್ದರು.

**ಕಥಾವಿನ್ಯಾಸ**

ಒಬ್ಬ ಬಡಹುಡುಗಿಯ ಸೌಂದರ್ಯಕ್ಕೆ ಮೆಚ್ಚಿ ಆಕೆಯನ್ನು ದೇಶದ ರಾಜ ವರಿಸುವುದು, ಆಕೆಯ ಸರಳತೆಗೆ, ಸ್ಪಷ್ಟಮಾತಿಗೆ ಕಿನಿಸಿ ಆಕೆಯನ್ನು ದೂರವಾಗಿಸಿಕೊಳ್ಳುವುದು, ಕೋಪದ ಅಮಲಿನಲ್ಲಿ ಆಕೆಗೆ ಮರಣದಂಡನೆಯನ್ನು ವಿಧಿಸುವುದು–

ಇವುಗಳು ಕಥೆಯಲ್ಲಿ ಒಂದು ಘಟ್ಟ. ರಾಣಿಗೆ ಮಂತ್ರಿಯ ಸಹಾಯ ದೊರಕುವುದು, ತಾನಿಂಥವಳೆಂಬುದನ್ನು ಮರೆಸಿ ರಾಜನನ್ನು ಸೇರುವುದು, ಅವಳಿ ಮಕ್ಕಳನ್ನು ಪಡೆದು (ಮಕ್ಕಳಾದುದು, ಅವರನ್ನು ಬೆಳೆಸಿದುದು–ಇವುಗಳು ಕಥಾಗರ್ಭದಲ್ಲಿ ಅಡಗಿ ಹೋಗಿವೆ) ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುವುದು, ಗಂಡಹೆಂಡಿರ ಹಾಗೂ ತಂದೆ ಮಕ್ಕಳ ಮಿಲನದಲ್ಲಿ ಕಥೆ ಸುಖಾಂತವಾಗುವುದು, ಇನ್ನೊಂದು ಘಟ್ಟ.

ದೊರೆಯ ಬಳಿ ಶ್ರೀಮಂತಿಕೆ ಇದೆ. ಆದರೆ ಮಕ್ಕಳಿಲ್ಲದ ಅವನ ಸ್ಥಾನಮಾನ ಪ್ರತಿಷ್ಠೆಗಳು ನಿರ್ಜೀವ ಮಾತ್ರ. ಈ ದೃಷ್ಟಿಯಿಂದ ಅವನ ಇಬ್ಬರು ರಾಣಿಯರೂ ಕಾಗದದ ಹೂಗಳಂತೆ ವ್ಯರ್ಥರಾಗಿದ್ದಾರೆ. ಜೀವಂತವಾದ, ಅವನೆಂದೂ ಕಂಡರಿಯದ ಮುಗ್ಧ ಸೊಗಸು ಇರುವುದು ರಾಜಾಸ್ಥಾನದಿಂದ ದೂರವಾದ ಕಾಡಿನ ಪರಿಸರದಲ್ಲಿ, ನೈಸರ್ಗಿಕ ಜಗತ್ತಿನಲ್ಲಿ, ಜನಪದದಲ್ಲಿ. ಆದರೆ ಇಲ್ಲೂ ಹೊರಸೊಬಗಿಗೆ ಮೆಚ್ಚಿದ ರಾಜ ಒಳಸೊಬಗನ್ನು ಅರಿಯದಾಗುತ್ತಾನೆ. ಬರಿಯ ಒಳಸೊಬಗಿದ್ದು ಹೊರ ರೂಪಿಲ್ಲದಿದ್ದರೆ ರಾಜನ ಪ್ರಜ್ಞೆಗೇ ಅದು ನಿಲುಕದೆ ಹೋಗುವ ಸಂಭವವಿತ್ತು. ಆದರೆ ಈಗ ಒಳಸೊಬಗನ್ನು ಅರಿಯುವ ಪ್ರಯತ್ನವನ್ನೇ ಮಾಡದಿರುವುದು, ಕಥೆಗೆ ವ್ಯಂಗ್ಯದ ಲೇಪವನ್ನು ಕೊಟ್ಟಿದೆ.

ದೊರೆ ಚೆಲುವಾಜಿಯನ್ನು ತಿರಸ್ಕರಿಸಿ ಆಕೆಗೆ ಸಾಧ್ಯವಾದಷ್ಟು ನಿಕೃಷ್ಟಸ್ಥಿತಿಯನ್ನು ಒದಗಿಸುತ್ತಾನೆ. ಆದರೆ ತನಗೆ ನಿಕೃಷ್ಟವಾದುದು ಇತರರ ಸಹಜಸ್ಥಿತಿಗಿಂತ ಮೇಲು ಎಂಬ ಸತ್ಯದ ಅರಿವು ಆತನಿಗೆ ಇಲ್ಲ. ಅದು ಚೆಲುವಾಜಿಯ ಅರಿವು ಅನುಭವಗಳಿಗೆ ನಿಲುಕಿದ ಸತ್ಯ. ಜೊತೆಗೇ ಅವಳು ಕೇವಲ ಕೆಲವೇ ದಿನಗಳಲ್ಲಿ ಎರಡುಬಾರಿ ಸ್ಥಿತ್ಯಂತರ ಗಳಿಗೆ ಒಳಗಾಗಿದ್ದಾಳೆ, ಒಮ್ಮೆ ರಾಜನನ್ನು ವರಿಸಿದಾಗ, ಮತ್ತೊಮ್ಮೆ ರಾಜನ ಕೋಪಕ್ಕೆ ಪಾತ್ರಳಾದಾಗ. ಇದರ ಅರಿವು ಕಷ್ಟದಲ್ಲಿ ನುರುಗದ ರಾಜನಿಗಿಲ್ಲ, ತನ್ನ ಹೆಂಡತಿಗೆ ಇರಬಹುದೆಂದೂ ಆತ ತಿಳಿಯಲಾರದವನಾಗಿದ್ದಾನೆ.

ಚೆಲುವಾಜಿಯ ಮಕ್ಕಳು, ರಾಜ ಮತ್ತು ಹಿರಿಯರಾಣಿ—ಇವರ ಒಡವೆಗಳನ್ನು ಮೊದಲು ಕದಿಯುತ್ತಾರೆ. ಅವರ ಉದ್ದೇಶ ಸ್ಪಷ್ಟ, ಅದು ಜನಹಿಂಸೆಯಲ್ಲ, ರಾಜನ ಮೇಲೆ ಅವರ ಕಣ್ಣು. ಆದ್ದರಿಂದ ಬಿಸಿ ಅವನಿಗೇ ತಾಕುವಂತೆ ಮಾಡುತ್ತಾರೆ. ರಾಜನಿಗೆ ರಕ್ಷಣೆ ಇದೆ. ಪರಿವಾರದ, ಬಲದ ರಕ್ಷಣೆ ಹಾಗೂ ಬುದ್ಧಿವಂತಿಕೆಯ ಚಾತುರ್ಯದ, ರಕ್ಷಣೆ. ಈ ಎರಡೂ ಕೋಟೆಗಳನ್ನು ಭೇದಿಸಿದರೆ ಮಾತ್ರ ರಾಜ ಅವರಿಗೆ ದಕ್ಕುತ್ತಾನೆ. ಚಾವಡಿಕಾರರನ್ನು ಕಟ್ಟಿಹಾಕಿದಾಗ ರಾಜನ ಬಲ ಟೊಳ್ಳು ಎನ್ನುವುದು ಸ್ಪಷ್ಟ. ಅಲ್ಲಿಗೆ ಒಂದು ಮೆಟ್ಟಿಲು ಹತ್ತಿದಂತಾಯಿತು. ಚತುರೆಯಾದ ವೇಶ್ಯೆ, ಹೆಮ್ಮೆ ಪಡುವ ಪ್ರಧಾನಿಯ ಪುತ್ರಿ ಇಬ್ಬರೂ ಸೋತಾಗ ರಾಜನ ಚಾತುರ್ಯದ ಸೋಲು ಸ್ಪಷ್ಟ. ಮುಂದೆ ಅವನು ಅರಕ್ಷಣೀಯ. (ಕೃತಿಯ ಪ್ರಾರಂಭ ಮತ್ತು ಅಂತ್ಯದಲ್ಲಿ ಕಾಣಿಸಿಕೊಂಡ ಬುದ್ಧಿವಂತನಾದ ಮಂತ್ರಿ ವೀರಸಿಂಹ ಈ ಘಟ್ಟದಲ್ಲಿ

ಇಲ್ಲದಿರುವುದು ಕುತೂಹಲಕರವಾಗಿದೆ, ಇವನಿಗೆ ನಿಜ ತಿಳಿದಿರಬಹುದು, ಇಲ್ಲವಾದಲ್ಲಿ ಪರಿಸ್ಥಿತಿಯ ಗಾಂಭೀರ್ಯವನ್ನು ಗ್ರಹಿಸದಿರುವುದು ಕಾರಣ.) ಮುಂದೆ ಮಕ್ಕಳಿಬ್ಬರೂ ರಾಜನನ್ನು ಹಗ್ಗದಿಂದ ಬಂಧಿಸಿದಾಗಲೇ ಈ ಮೊದಲು ಬಿಚ್ಚಿಹೋಗಿದ್ದ ದಾಂಪತ್ಯದ ಗಂಟನ್ನು ಹಾಕುತ್ತಾರೆ ಎನ್ನಬಹುದು.

## ಗದ್ಯಶೈಲಿ

ತಾನಿರುವ ಪಾತ್ರೆಯ ಆಕಾರವನ್ನೇ ನೀರು ತಳೆಯುವಂತೆ ಬರೆಯುತ್ತಿರುವ ಪ್ರಕಾರದ ಉದ್ದೇಶಕ್ಕೆ ತಕ್ಕಂತೆ ಪುಟ್ಟಣ್ಣನವರ ಶೈಲಿ ಒಗ್ಗುತ್ತದೆ. ಪುಟ್ಟಣ್ಣನವರ ಶೈಲಿ ಎಂದೂ ಕಷ್ಟಕರವಾದ ತಿಣುಕಾಟವನ್ನಾಗಲೀ ಒಗ್ಗದ ಅಸಹಜತೆಯನ್ನಾಗಲೀ ತೋರುವುದಿಲ್ಲ. ಈ ಕೆಳಗಿನ ಉದಾಹರಣೆಯನ್ನು ನೋಡಬಹುದು :

"ಆಗ ಮಂತ್ರಿಯು–ಬುದ್ಧಿ, ಮಹಾಪ್ರಸಾದ, ಅಪ್ಪಣೆಯಾದ್ದಕ್ಕೆ ಅನ್ಯಥಾ ಉಂಟೆ ? ಸವಾರಿ ಹೊರಡುವಾಗ ಎಲ್ಲಾ ಸಿದ್ಧವಾಗಿದ್ದೀತು, ಎಂದು ಅರಿಕೇ ಮಾಡಿ ತನ್ನ ಮನೆಗೆ ಬಂದು ತನಗೆ ಬೇಕಾದ ಇಲಾಖಾ ಗುರಿಕಾರರುಗಳನ್ನು ಕರೆಯಿಸಿ ಅವರನ್ನು ಕುರಿತು—ಅಯ್ಯಾ, ಗುರಿಕಾರರುಗಳಿರ, ನಾಳೆ ಪ್ರಾತಃಕಾಲಕ್ಕೆ ಐದುಗಳಿಗೆ ಇರುವಾಗಲೇ ಬೆಳಗಿನ ಜಾವದ ಗಸ್ತೀ ಕಾವಲಿನವರು ಹೊರಡುವ ಹೊತ್ತಿಗೆ ಸರಿಯಾಗಿ ನೀವೆಲ್ಲರೂ ನಿಮ್ಮ ನಿಮ್ಮ ಕೈ ಕೆಳಗಿನ ಭಟರು ಸಮೇತವಾಗಿ ಖಾಸ ಸವಾರಿಯ ಹಿಂದೆ ಬೇಟೆಗೆ ಹೊರಡ ಬೇಕು; ಕರ್ಣಾಟಕ ಕೋವಿಯವರು ಮದ್ದು ಗುಂಡು ಸಹಾ ತೆಗೆದುಕೊಂಡು ಜಾವಿಗೆ ಬತ್ತಿಯೊಡನೆ ಹೊರಡಲಿ; ಚಕ್ಕಮುಕ್ಕಿ ಕಲ್ಲಿನ ತುಪಾಕಿಯವರು ತಮ್ಮ ಆಯುಧ ಸಲಕರಣ ಸಮೇತ ತೆರಳಲಿ; ಸಿಂಗಾಡಿ ಬಿಲ್ಲಿನವರೂ, ದಟ್ಟೇ ಬಿಲ್ಲಿನವರೂ, ಕೈ ಅಂಬಿನವರೂ, ಈಟಿಯವರೂ, ಭರ್ಜಿಯವರೂ ಮುಂದೆ ನಡೆಯಲಿ; ಪಟ್ಟಾ ಕತ್ತಿಯವರು ಸಂಗಡ ಇರಲಿ; ಕಠಾರಿಯವರೂ ಕೈ ಭಾಕಿನವರೂ, ಗುಪ್ತಿಯವರೂ, ಬಡಿಗೋಲಿನವರೂ, ಹಣೆಮಟ್ಟದ ದೊಣ್ಣೆಯವರೂ, ಸಿದ್ಧವಾಗಲಿ; ಬಗೆಬಗೇ ಬಲೆಯವರು ಹೊರಟು ಅನುಕೂಲವಾದ ಸ್ಥಳಗಳನ್ನು ನೋಡಿಕೊಂಡಿರಲಿ ; ಬೇಟೆ ನಾಯಿಗಳವರೂ ಗಿಡಗನವರೂ ಮುಂದೆ ಮುಂದೆ ಹೋಗುತಿರಲಿ; ಕಾಮಾಟಿ ಚೆಂಗೂಲಿಗಳು ಸಹಾ ಅವರವರ ಸದ್ದಿವಾಲರ ಸಮೇತ ಸಮಯಬಿದ್ದ ಹಾಗೆ ಕೆಲಸ ಮಾಡಲು ಬರುತಿರಲಿ; ಮಿಕ್ಕ ಸಲಕರಣಗಳೆಲ್ಲಾ ವಾಡಿಕೆ ಪ್ರಕಾರ ಹೊರಡಲಿ. ಹೀಗೆ ಮಂತ್ರಿ ಅಪ್ಪಣೆ ಕೊಟ್ಟು ತಾನು ಸಿದ್ಧವಾದನು." (ಪೇ. ಮಾ. ಪು. 2–3)

ಬೇಟೆಗೆ ಸಂಬಂಧಿಸಿದ ಪ್ರಾರಂಭದ ವಿವರಗಳನ್ನು ರಾಜಮನೆತನದ ಪರಿಚಯ ವಿದ್ದ ಪುಟ್ಟಣ್ಣನವರು ತಮ್ಮ ಮುಕ್ತಶೈಲಿಯಿಂದ ಹಂತಹಂತವಾಗಿ ಅಚ್ಚೊತ್ತಿದಂತೆ ಕೊಡುತ್ತಾರೆ. ದಿನಬಳಕೆಯ ಮಾತುಗಳನ್ನು ಅಚ್ಚರಿಯಾಗುವಂತೆ ಹಿಡಿದಿಡುತ್ತಾರೆ. ಅವರ ಜೀವನಾವಲೋಕನ ಭಾವಚಿತ್ರದಂತೆ. ಅತಿ ಸಣ್ಣ ವಿವರಗಳನ್ನೂ ಹಿಡಿಯು ತ್ತದೆ. ಮಿಥುನ ಲಗ್ನ, ಚೌಲಕರ್ಮಗಳ ಪ್ರಸ್ತಾಪದ ನಡುವೆ "ಮಗನಿಗೆ ಚೌಲ

ವಾಗುವುದಕ್ಕೆ ಮುಂಚೆ ನನಗೇ ಚೌಲವಾಗಿದೆ" (ಪೇ. ಮಾ. ಪು. 23) ಎಂಬ ಉದ್ಗಾರ ಪರಿಸ್ಥಿತಿಯ ಪರಿಚಯುವನ್ನು ಸೂಕ್ತರೀತಿಯಲ್ಲಿ ಮಾಡಿಕೊಡುತ್ತದೆ. ಕಥೆಯ ಎಳೆಗಳು ಎಲ್ಲೂ ತುಂಡಾಗುವುದಿಲ್ಲ. ಗಟ್ಟಿವಿವರಗಳನ್ನು ನೇಯುವುದು ಪುಟ್ಟಣ್ಣನವರಿಗೆ ಸಹಜವಾಗಿ ಸಿದ್ಧಿಸಿದ ಒಂದು ಸಂಗತಿ. ಈ ಕೃತಿಯಲ್ಲಿ ಸಂಭಾಷಣೆಗೆ ಗಮನಾರ್ಹ ಪ್ರಾಧಾನ್ಯ ದೊರೆತಿದೆ.

**'ಪೇಟೆಮಾತೇನಜ್ಜ' ಯೊಡನೆ ಇತರ ಹಲವು ಕೃತಿಗಳ ಹೋಲಿಕೆಗಳು**

'ಪೇಟೆಮಾತೇನಜ್ಜ' ಯ ಕಥೆ ಪುಟ್ಟಣ್ಣನವರ ಸ್ವಂತ ಸೃಷ್ಟಿಯಲ್ಲ. ಜಾನಪದ ಕಥೆ [20] ಗಳಲ್ಲಿ, ರಮ್ಯಕಥೆಯ ಮಾರ್ಗ ಕಾವ್ಯ [21] ವೊಂದರಲ್ಲಿ ಹಾಗೂ ಷೇಕ್ಸ್‌ಪಿಯರನ ಒಂದು ನಾಟಕ[22]ದಲ್ಲಿ ಇಲ್ಲಿನ ಎಲ್ಲ ಆಶಯಗಳೂ ಕಂಡುಬರುತ್ತವೆ. ಮೊದಲನೆಯದಾಗಿ 'ತಕ್ಕೊಂಡಪ್ಪನ ಕಥೆ', 'ಹೆಂಡತಿಯ ಪಣ' ಮತ್ತು 'ಯಾರಮಕ್ಕಳು' ಈ ಜಾನಪದ ಕಥೆಗಳನ್ನು ಪರಿಶೀಲಿಸಬಹುದು.

**ತಕ್ಕೊಂಡಪ್ಪನ ಕಥೆ**

ಚಂದ್ರಾವತಿ ಪಟ್ಟಣದ ರಾಜಕುಮಾರ ಸೋಮಶೇಖರ ತಾನು ಮೆಚ್ಚಿದ ಅಮರಾವತಿ ಪಟ್ಟಣದ ಹುಡುಗಿ ತನಗಿಂತಲೂ ಬುದ್ಧಿವಂತೆ ಎಂದು ತಿಳಿದು ಆಕೆಯುನ್ನು ಮದುವೆಯಾಗಿ ಅವಳಿಗೆ ಅರಬಾಳು ಬಾಳುತ್ತೇನೆಂದು ಪ್ರತಿಜ್ಞೆ ಮಾಡಿದ. ಆತನನ್ನೇ ಮದುವೆಯಾಗಿ, ಮಗನನ್ನು ಪಡೆದು, ಆತನ ಚಿನ್ನದ ನೂಲೇಣಿಯಲ್ಲಿ ಆತನನ್ನು ಹಿಂಗಟ್ಟು ಮುರಿಕಟ್ಟಿಸಿ, ಊರುಚಾವಡಿಯಲ್ಲಿ ಹಾಕಿಸಿ ಅವಮಾನ ಮಾಡಿಸುತ್ತೇನೆಂದು ಆ ಹುಡುಗಿ ಪ್ರತಿಜ್ಞೆ ಮಾಡಿದಳು. ಧಾರೆಯ ಹೊತ್ತಿಗೆ ತನ್ನಮನೆಗೆ ಹಿಂದಿರುಗಿ ಬಂದಿದ್ದ ಹುಡುಗ. ಮದುವೆ ಸುದ್ದಿ ಎತ್ತಿದರೆ ಸಾಯುತ್ತೇನೆಂದು ಬೆದರಿಸಿದ್ದರಿಂದ ಹಿರಿಯರು ಸುಮ್ಮನಾದರು. ಸ್ವಲ್ಪಕಾಲದ ಮೇಲೆ ತನ್ನೂರಿನಿಂದ ಹೊರಟ ದೊಂಬರೊಡನೆ ಈ ಹುಡುಗಿ ಆಗ ರಾಜನಾಗಿದ್ದ ಸೋಮಶೇಖರನ ಬಳಿಗೆ ಹೋಗಿ ಆತನನ್ನು ಆಕರ್ಷಿಸಿ, ಸಮಾಗಮಿಸಿ ಅವನಿಂದ ಮುದ್ರೆ ಉಂಗುರ, ಪಟ್ಟದ ಕತ್ತಿ, ಚಿನ್ನದ ನೂಲೇಣಿಗಳನ್ನು ಬಹುಮಾನವಾಗಿ ಪಡೆದಳು, ಗಂಡು ಮಗುವಿನ ತಾಯಾದಳು. ಮುಂದೆ ಮಗ ಅಮರಶೇಖರನಿಗೆ ತಾಯಿಯಿಂದ ಎಲ್ಲ ವಿಷಯ ತಿಳಿದು ಮುದ್ರೆಯುಂಗುರ, ಪಟ್ಟದ ಕತ್ತಿ ಮತ್ತು ಚಿನ್ನದ ನೂಲೇಣಿಯೊಂದಿಗೆ ಹೊರಟ. ದಾರಿಯಲ್ಲಿ ಅಡುಗೂಲಜ್ಜಿಗೂ ಅವಳ ಮೊಮ್ಮಗಳಿಗೂ ಮೋಸಮಾಡಿ ಕಜ್ಜಾಯವನ್ನೆಲ್ಲಾ ಹಾರಿಸಿಕೊಂಡು, ಅರಮನೆಯ ಅಗಸರಿಗೆ ಮೋಸಮಾಡಿ ಬಟ್ಟೆಗಳನ್ನೆಲ್ಲಾ ತೆಗೆದುಕೊಂಡು, ಒಬ್ಬ ಸಿಪಾಯಿಗೆ ಮೋಸಮಾಡಿ ಸಾವಿರರೂಪಾಯಿ ತೆಗೆದುಕೊಂಡು ಊರ ಗೌಡನಿಂದ ನಾಲ್ಕುಸಾವಿರರೂಪಾಯಿಗಳನ್ನು ಹಾರಿಸಿಕೊಂಡು, ದನ ಮೇಯಿಸುತ್ತಿದ್ದ ಹುಡುಗರಿಗೆ ಮೋಸಮಾಡಿ ಒಂದು ಕುರಿಮರಿ ತೆಗೆದುಕೊಂಡು, ರಾಟೆಯಿಂದ ನೂಲು ತೆಗೆಯುತ್ತಿದ್ದ

ಅಜ್ಜಿಯರಿಗೆ ಮೋಸಮಾಡಿ ತಿಂಡಿಯನ್ನು ಹಾರಿಸಿ ಚಂದ್ರಾವತಿಯನ್ನು ಸೇರಿದ. ಅಲ್ಲಿ ತನ್ನ ಸಹಾಯಕ ಕೊಲೆಯಾದಾಗ ಚಾತುರ್ಯದಿಂದ ಅಂತ್ಯವಿಧಿಗಳನ್ನು ಮಾಡಿದ. ಊರಿನ ತಳವಾರ, ವೇಶ್ಯೆ, ಮಂತ್ರಿ—ಈ ಮೂವರನ್ನೂ ಸೋಲಿಸಿದ. ರಾಜನೇ ಬಂದಾಗ ಚಾತುರ್ಯದಿಂದ ಅವನ ಬಟ್ಟೆ ಒಡವೆಗಳನ್ನು ತನ್ನದರ ಜೊತೆ ಬದಲಾಯಿಸಿ ಕೊಂಡು ಕಾವಲುಗಾರರಿಗೆ ರಾಜನನ್ನೇ ಕಳ್ಳ ಎಂಬಂತೆ ಹೇಳಿ ಚಿನ್ನದ ನೂಲೇಣಿಯಲ್ಲಿ ಕಟ್ಟಿಹಾಕಿಸಿ, ಚಾವಡಿಯಲ್ಲಿ ಹಾಕಿಸಿದ. ಆ ವೇಳೆಗೆ ತಾಯಿ, ಅಜ್ಜಿ, ತಾತ, ಬಂದರು. ಎಲ್ಲ ವಿಷಯ ಜನರಿಗೆ ತಿಳಿದು ರಾಜನಿಗೆ ಶಾಸ್ತ್ರೋಕ್ತವಿವಾಹವನ್ನು ಮಾಡಿದರು. ಅಮರಶೇಖರ ಯುವರಾಜನಾದ.

**1 ಪೇಟೆಮಾತೇನಜ್ಜಿ**

ವರ್ತಕರು—ಅಜ್ಜಿ, ಪೇಟೆ ಮಾತೇನಜ್ಜಿ ? (ಪು. 35)
ಮುತ್ಯಾಲಸೆಟ್ಟಿ—ಪೇಟೆಮಾತೇನಜ್ಜಿ ? (ಪು. 35)
ಪಗಡಾಲ ಸೆಟ್ಟಿ—ಈ ದಿವಸದ ವಿಶೇಷ ವರ್ತಮಾನವೇನಜ್ಜಿ ? (ಪು. 36)
ಮುತ್ಯಾಲ ಸೆಟ್ಟಿ—ಅಜ್ಜಿ, ಈ ದಿವಸದ ವರ್ತಮಾನವೇನು ? (ಪು. 36)
ಪಗಡಾಲ ಸೆಟ್ಟಿ—ಏನಜ್ಜಿ, ಊರ ಸಮಾಚಾರ ? (ಪು. 38)
ಪಗಡಾಲ ಸೆಟ್ಟಿ—...ಅಜ್ಜಿ; ಪೇಟೆಮಾತೇನಜ್ಜಿ ? (ಪು. 39)

**ತಕ್ಕೊಂಡಪ್ಪನ ಕಥೆ**

ಅಜ್ಜಿ, ಪೇಟೇಲೇನಜ್ಜಿ ಸಮಾಚಾರ ? (ಪು. 23)
ಊರಿನಲ್ಲಿ ಏನಜ್ಜಿ ಸಮಾಚಾರ ಇವೊತ್ತು ? (ಪು. 25)
ಏನಜ್ಜಿ, ಇವತ್ತು ಸಮಾಚಾರ ಈ ಊರಲ್ಲಿ ? (ಪು. 26)
ಏನಜ್ಜಿ, ಊರಲ್ಲಿ ಸಮಾಚಾರ ? (ಪು. 27).

ಕಥೆಯ ಒಂದೊಂದು ಘಟ್ಟಕ್ಕೂ ಈ ಮೇಲಿನ ವಿಚಾರಗಳು ಇಣಿಕುತ್ತವೆ. 'ಪೇಟೆಮಾತೇನಜ್ಜಿ' ಯಲ್ಲಿ ಇಬ್ಬರು ಅವಳಿಮಕ್ಕಳೂ ತಮ್ಮ ಹಿಂದಿನ ದಿನದ ಕಾರ್ಯ ವನ್ನು, ಅದರ ವರದಿಯನ್ನು ತಾವೇ ಕೇಳುತ್ತಾರೆ. ಓದುಗರಿಗೂ ಆಗಲೇ ಹಿಂದಿನ ದಿನದ ಕಥೆ ತಿಳಿಯುವುದು. 'ತಕ್ಕೊಂಡಪ್ಪನ ಕಥೆ' ಯಲ್ಲಿ ಅಂದಿನ ವಿಚಾರವನ್ನು, ಅಜ್ಜಿ ಹೇಳಿದ ಮೇಲೆ ಅಂದಿನದೇ ವಿವರ ನೇರವಾಗಿ ಬರುತ್ತದೆ, ನಡೆದ ಘಟನೆ ಅಲ್ಲ, ಇದೊಂದು ವ್ಯತ್ಯಾಸ.

**2 ಪೇಟೆಮಾತೇನಜ್ಜಿ**

1ನೇ ಸೆಟ್ಟಿ—ಕೆರೆಯ ನೀರಿನಲ್ಲಿ ದಾರಿ ಕಾಣುವುದಕ್ಕಾಗಿ ದೀಪಗಳನ್ನು ಸೋರೆ ಬುರುಡೆಗಳಲ್ಲಿ ಹತ್ತಿಸಿಕೊಂಡು ಬರುತಾ ಇದಾರೆ, ನೋಡಿ ತೇಲುವ ಬುರುಡೆಯ ದೀಪವೇ ಕಳ್ಳರು. (ಪು. 43)

**ತಕ್ಕೊಂಡಪ್ಪನ ಕಥೆ**

"ಅಗೋ ನೋಡಿ, ಕೆರೆಯಲ್ಲಿ ಸೋರೆಬುರುಡೆಗಳು ತೇಲಿ ಬರ್‍ತಾ ಇವೆ. ಕಳ್ಳರು ಬರೋದಕ್ಕೆ ಮುಂಚೆ ಅವರು ಈ ರೀತಿ ಸೂಚನೆ ಕೊಡ್ತಾರೆ. (ಪು. 27).

**ಹೆಂಡತಿಯ ಪಣ :** ಈ ಕಥೆಯಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಮಾಟದ ಪಂದ್ಯದಲ್ಲಿ ಸೋತು ಬೇರೆ ರಾಜ್ಯದಲ್ಲಿ ಸೆರೆಯಾಳುಗಳಾಗಿದ್ದ ಅಣ್ಣಂದಿರನ್ನು ತಂಗಿ ಗಂಡುವೇಷದಲ್ಲಿ ಹೋಗಿ ಬಿಡಿಸುತ್ತಾಳೆ. ಈಶ್ವರ ವರಪ್ರದಾನದ ಪ್ರಕಾರ ನಡೆಯುತ್ತಿದ್ದ ರೀತಿ, ಒಂದು ಕ್ರಮ ಒಬ್ಬ ಸ್ತ್ರೀಯಿಂದ ಸುಳ್ಳು ಆಗುತ್ತದೆ, ಎಂದು ತಿಳಿಸುವ ಉಲ್ಲೇಖದಂತೆ ಈ ವ್ಯಕ್ತಿ ಸ್ತ್ರೀಯಾಗಿರಬೇಕು ಎಂಬ ಸಂದೇಹದಿಂದ ಹಲವು ಪರೀಕ್ಷೆಗಳು ನಡೆದು ಎಲ್ಲದರಲ್ಲೂ ತಾನು ಗಂಡೆಂದೇ ನಂಬಿಸಿ, ಕಡೆಗೆ ನಿಜ ವಿಷಯ ತಿಳಿಸಿ ಹೊರಟುಹೋಗುತ್ತಾಳೆ.

ಹಿಂದಿರುಗಿ ಹೋಗುವಾಗ ಅವಳಿಗೂ ರಾಜನಿಗೂ ಪಂದ್ಯವೇರ್ಪಡುತ್ತದೆ. ಆಕೆಯನ್ನು ಮದುವೆಯಾಗಿ ಕೊಲ್ಲುವುದಾಗಿ ರಾಜ ಪಣತೊಟ್ಟರೆ, ಆಕೆ ಆತನ ಮಗನಿಂದಲೇ ಅವನನ್ನು ಕಟ್ಟಿ ಹಾಕಿಸುವ ಪಣ ತೊಟ್ಟು ಅದನ್ನು ಪೂರೈಸುತ್ತಾಳೆ. ಈ ಎರಡನೇ ಭಾಗದ ಕಥೆಗೂ 'ಪೇಟೆಮಾತೇನಜ್ಜಿ' ಗೂ ನಿಕಟವಾದ ಹೋಲಿಕೆ ಇದೆ.

ತನ್ನನ್ನು ಸೋಲಿಸಿದ ಹುಡುಗಿಯನ್ನು ಮದುವೆಯಾಗಿ ಅರಗಿನ ಆಲಯದಲ್ಲಿ ಕೊಚ್ಚಿ, ಬೆಂಕಿ ಹಾಕಿ ಸುಡುವುದಾಗಿ ರಾಜ ಶಪಥ ಮಾಡಿದರೆ, ಆ ಹುಡುಗಿ ರಾಜನನ್ನು ಸಮಾಗಮಿಸಿ ಪಡೆದ ಮಗನ ಸಹಾಯದಿಂದ, ರಾಜನನ್ನು ಅವನ ಮಲಗುವ ಮಂಚಕ್ಕೆ ಅವನ ಮನೆಯ ಭಾವಿಹಗ್ಗದಿಂದ ಬಿಗಿಸಿ, ಅವನ ಆಳುಗಳಿಂದ ನೂರು ಬೆತ್ತದೇಟು ಹೊಡಿಸುವೆನೆಂದು ಶಪಥ ಮಾಡುತ್ತಾಳೆ. ಮದುವೆಯಲ್ಲಿ ವರನಿಗೆ ಮತ್ತು ಬರಿಸಿ ತನ್ನ ಬದಲು ಒಳಗೆ ಬಾಳೆದಿಂಡನ್ನಿಟ್ಟ ಗೊಂಬೆಯನ್ನು ಕೊಚ್ಚುವಂತೆ ಮಾಡುತ್ತಾಳೆ. ದಶಾವತಾರ ಮೇಳದವರಂತೆ ಹೋಗಿ ಅವನ ಸಂಪರ್ಕ ಪಡೆದು ಗಂಡು ಮಗನನ್ನು ಪಡೆಯುತ್ತಾಳೆ. ಮಗ ದೊಡ್ಡವನಾದ ಮೇಲೆ ಇಬ್ಬರೂ ಬಂದು ರಾಜನ ಊರಿನಲ್ಲಿ ಕಳ್ಳತನ ಪ್ರಾರಂಭಿಸುತ್ತಾರೆ. ಹಿಡಿಯಲು ಬಂದವರನ್ನು ಭಾವಿಗೆ ನೂಕಿ, ರಾಜನ ಮನೆಯ ದನಗಳನ್ನು ಬಿಡಿಸಿ ಬೆಟ್ಟದ ಬದಿಯಲ್ಲಿ ಕಟ್ಟಿಹಾಕುತ್ತಾರೆ. ರಾಜನೇ ಕಳ್ಳರನ್ನು ಹಿಡಿಯಲು ಬಂದಾಗ ನೂರಾರು ಮಣ್ಣಿನ ಪಾತ್ರೆಗಳನ್ನು ಮಾಡಿ ಅವುಗಳಲ್ಲಿ ಬತ್ತಿ ಹಚ್ಚಿಟ್ಟು ಹೊಳೆಯಲ್ಲಿ ತಾಯಿ ತೇಲಿ ಬಿಡುತ್ತಾಳೆ. ಕತ್ತಲೆಯಲ್ಲಿ ಅವುಗಳನ್ನು ತೋರಿಸಿ ಕಳ್ಳರೆಂದು ಮಗ ರಾಜನಿಗೆ ಹೇಳುತ್ತಾನೆ. ಅವರನ್ನು ಹಿಡಿಯಲು ವಸ್ತ್ರ ಬಿಚ್ಚಿಟ್ಟು ರಾಜ ನೀರಿಗಿಳಿದಾಗ, ಮಗ ರಾಜನ ವೇಷ ಹಾಕಿಕೊಂಡು ಅರಮನೆಗೆ ಹೋಗುತ್ತಾನೆ. ಅರಮನೆಯ ಕಾವಲುಗಾರರ ಬಳಿ ಈಗ ಕಳ್ಳ ರಾಜನೆಂದು ಹೇಳಿಕೊಂಡು ಬರುತ್ತಾನೆ. ಅವನನ್ನು ಭಾವಿಹಗ್ಗದಿಂದ ಕಟ್ಟಿಹಾಕಿ ನನ್ನ ಮಂಚಕ್ಕೆ ಕಟ್ಟಿ ನೂರು ಬೆತ್ತದೇಟು ಹೊಡೆಯಿರಿ ಎನ್ನುತ್ತಾನೆ. ಅವರು ರಾಜ ಬಂದಾಗ ಅದೇ ರೀತಿ

ಮಾಡುತ್ತಾರೆ. ಬೆಳಗಾದ ಮೇಲೆ ಎಲ್ಲರಿಗೂ ನಿಜವಿಷಯ ತಿಳಿಯುತ್ತದೆ. ಕಥೆ ಸುಖಾಂತವಾಗುತ್ತದೆ.

**ಯಾರ ಮಕ್ಕಳು**

ಒಂದು ರಾಜ್ಯದಲ್ಲಿ ಬಡವನೊಬ್ಬನು ಅಡವಿಯಲ್ಲಿ ಕುಮರಿ ಬಿತ್ತಬೇಕು ಎಂದು ಬೆಟ್ಟಕ್ಕೆ ಬೆಂಕಿ ಹಾಕಿದನು. ಅಲ್ಲಿದ್ದ ಗಿಳಿಯ ಸಂಸಾರದಲ್ಲಿ ಗಂಡುಗಿಳಿ ತನ್ನ ಪ್ರಾಣವನ್ನುಳಿಸಿಕೊಳ್ಳಲು ಹಾರಿಹೋಯಿತು. ಹೆಣ್ಣುಗಿಳಿ ತನ್ನ ಜೀವವನ್ನು ಒತ್ತೆ ಇಟ್ಟು ಮರಿಗಳನ್ನು ಕಟ್ಟಿಕೊಂಡು ಹಾರಿತು. ಗಂಡುಗಿಳಿಯೊಡನೆ ಆದ ಜಗಳದಲ್ಲಿ ಊರಿನ ರಾಜ ಕೊಟ್ಟ ತೀರ್ಮಾನಕ್ಕೆ ಬೇಸರಿಸಿ ತಾನೇ ಬೆಂಕಿಯಲ್ಲಿ ಬಿದ್ದು ಸತ್ತುಹೋಯಿತು. ಮುಂದಿನ ಜನ್ಮದಲ್ಲಿ ಈ ಜೀವ ಪ್ರಧಾನಿಯ ಮಗಳು. ಈಕೆ ರಾಜನ ಮಾತುಗಳು ರಾಜನ ಮೇಲೇ ಬರುವಂತೆ ಮಾಡಿದಳು. ಸೇಡಿನಿಂದ ಆಕೆಯನ್ನು ಮದುವೆಯಾಗಿ ಕತ್ತಲೆಕೋಣೆಯಲ್ಲಿ ಕೂಡಿ, ನೀನಿನ್ನು ಸಾಯುತ್ತೀಯೆ ಎಂದು ಹೇಳಿದಾಗ ನಿನ್ನ ಮಗನಿಂದ ನಿನಗೆ ಮೂರುಮೆಟ್ಟು ಹೊಡೆಸುತ್ತೇನೆ ಎಂದಳು. ಮುಂದಿನ ಕಥಾಭಾಗ 'ಪೇಟೆ ಮಾತೇನಜ್ಜಿ' ಯನ್ನು ಹೋಲುತ್ತದೆ.

ರಾಜ ತನ್ನನ್ನು ಬಂಧಿಸಿಟ್ಟ ಕೊಠಡಿಗೂ ಪ್ರಧಾನಿಯ ಮನೆಗೂ ತನ್ನ ಒಡನಾಡಿಗಳಾದ ಮುಂಗುಲಿಗಳಿಂದ ಸುರಂಗ ಮಾಡಿಸಿ, ತಂದೆಯ ಮನೆಗೆ ಬಂದು ಹೋಗುತ್ತಿದ್ದಳು. ಆ ಊರ ವೇಶ್ಯೆಯ ಅಕ್ಕನ ಮಗಳಂತೆ ನಟಿಸಿ, ರಾಜನೊಡನೆ ಸಂಪರ್ಕ ಮಾಡಿ ಅವನ ಮುದ್ರೆಯುಂಗರವನ್ನು ಪಡೆದುಕೊಂಡಳು. ಗಂಡುಮಗುವೂ ಆಯಿತು. ಮಗ ಬೆಳೆದು ದೊಡ್ಡವನಾದ. ರಾತ್ರಿವೇಳೆ ತಾಯಿ ಮಗ ಇಬ್ಬರೂ ಅರಮನೆಗೆ ಕಲ್ಲು ಬೀರುತ್ತಿದ್ದರು. ರಾಜ ಸೇನೆಯೊಡನೆ ಕಳ್ಳರನ್ನು ಹಿಡಿಯಲು ಹೊರಟನು. ತಾಯಿ ಮಗ ಇಬ್ಬರೂ ಬಾಳೆಹಂಬೆಯ ಮೇಲೆ ದೀಪ ಇಟ್ಟು ಹೊಳೆಯಲ್ಲಿ ತೇಲಿಬಿಟ್ಟಿದ್ದರು. ಕಳ್ಳರೆಂದು ಭ್ರಮಿಸಿದ ರಾಜ ವಸ್ತ್ರ ಕಳಚಿಟ್ಟು ಈಜಿ ಹಿಡಿಯಲು ಹೋದನು. ಮಗ ತಂದೆಯ ಉಡುಪನ್ನು ಹಾಕಿಕೊಂಡು ಕುದುರೆಯ ಮೇಲೆ ಕೂತನು. ಕುದುರೆಗೆ ಹುಲ್ಲು ಹಾಕುವ ಹೂಳಿಯಲ್ಲಿ ತಾಯಿ ಅಡಗಿದಳು. ಇಬ್ಬರೂ ಸೇನಾ ಸಮೇತ ಅರಮನೆಗೆ ಬಂದರು. ರಾಜ ಅರಮನೆಗೆ ಬಂದಾಗ ಕಾವಲುಗಾರರು, ಆ ಮೊದಲು ರಾಜನಂತೆ ಬಂದಿದ್ದ ಮಗ ಹೇಳಿದಂತೆ ಅವನನ್ನು ಚೆನ್ನಾಗಿ ಹೊಡೆದು, ಮಗ ಮಲಗಿದ್ದ ಮಂಚದ ಕಾಲಿಗೆ ಕಟ್ಟಿಹಾಕಿದರು. ಬೆಳಗಾದ ಮೇಲೆ ಹುಡುಗ ತಾಯ ಪ್ರತಿಜ್ಞೆಯಂತೆ ಅವನಿಗೆ ಮೆಟ್ಟಿನಿಂದ ಮೂರು ಬಾರಿ ಹೊಡೆದನು. ತಾಯಿ ಸಾಕು ಎಂದು ತಡೆದಳು. ಮುದ್ರೆಯುಂಗುರದಿಂದ ಇವರು ತನ್ನ ಹೆಂಡತಿ ಮಗ ಎಂದು ರಾಜನಿಗೆ ತಿಳಿಯಿತು. ರಾಜ ತನ್ನ ಬೇರೆ ಮಕ್ಕಳನ್ನು ಬಿಟ್ಟು ಇವನಿಗೇ ರಾಜ್ಯವನ್ನು ಕೊಟ್ಟನು.

ರಾಜರಾಣಿಯರ ಮನಸ್ತಾಪ, ಪ್ರತಿಜ್ಞೆ ಮತ್ತು ಅಗಲುವಿಕೆ; ರಾಣಿ ವೇಷ ಮರೆಸಿಕೊಂಡು ರಾಜನಿಂದ ಮಗನನ್ನು ಪಡೆದು ಪ್ರತಿಜ್ಞೆಯನ್ನು ಪೂರೈಸುವುದು;

ಕಡೆಗೆ ಸುಖಾಂತವಾಗುವುದು ಇವಿಷ್ಟು ಆಶಯಗಳು 'ಪೇಟೆ ಮಾತೇನಜ್ಜಿ' ಹಾಗೂ ಮಿಕ್ಕ ಮೂರು ಜಾನಪದ ಕಥೆಗಳಲ್ಲೂ ಸಮಾನವಾದ ಅಂಶಗಳು.

'ಪೇಟೆ ಮಾತೇನಜ್ಜಿ'ಯಲ್ಲಿ ವಿವರಗಳು, ಚಾತುರ್ಯದ ಅಂಶಗಳು ಕಡಿಮೆ. "Much of details and descriptions are purposely omitted." (ಪೇ. ಮಾ. Preface p. iii) ಎಂದು ಪುಟ್ಟಣ್ಣನವರು ಹೇಳಿದ್ದಾರೆ. ಭಾಷೆಯ ಲವಲವಿಕೆಯಿಂದ ಕಥೆ ಓದಿಸಿಕೊಂಡು ಹೋಗುತ್ತದೆ. 'ತಕ್ಕೊಂಡಪ್ಪನ ಕಥೆ', 'ಹೆಂಡತಿಯ ಪಣ' ಹಾಗೂ 'ಯಾರ ಮಕ್ಕಳು' ಕಥೆಗಳಲ್ಲಿ ವಿವರಗಳು, ಚಾತುರ್ಯದ ಅಂಶಗಳು ಹೆಚ್ಚು. ಈ ಕಥೆಗಳ ಚೆಲುವು ಇರುವುದೇ ಅಂಥ ಕಡೆಗಳಲ್ಲಿ. ಈ ಮೂರು ಕಥೆಗಳಲ್ಲಿ ಮೊದಲನೆಯದು ಮಿಕ್ಕ ಎರಡು ಕಥೆಗಳಿಗಿಂತ ಸೊಗಸಾದ ನಿರೂಪಣೆಯನ್ನು ಹೊಂದಿದೆ. "ಸಮಗ್ರ ಕಥೆಯಲ್ಲೆಲ್ಲ ಈ ಬುದ್ಧಿವಂತಿಕೆಯ ಸೊಗಸು ತುಂಬಿರುವುದರಿಂದ ಕಥೆಯ ಮೂಲ ಮಿಡಿತವೇ ಅದಾದುದರಿಂದ ಇದು ಇಂಥ ಕಥೆಗಳ ಸಾಲಿನಲ್ಲಿ ಅತ್ಯುತ್ತಮವಾದುದು."[23] ಎಂಬ ಜೀ. ಶಂ. ಪರಮ ಶಿವಯ್ಯನವರ ಮಾತನ್ನು ಇಲ್ಲಿ ನೆನೆಯಬಹುದು.

ಒಂದು ಮಾರ್ಗಕಾವ್ಯದ ಕಥೆಯನ್ನು ಇಲ್ಲಿ ಅವಲೋಕಿಸಬಹುದು.

ಕಲಾವತೀ ಪರಿಣಯ: ಇದನ್ನು ಬರೆದವನು ಯಾದವ (ಸು. 1830). ಈತನ ಸ್ಥಳ ದೊಡ್ಡಬಳ್ಳಾಪುರ. ಈತ ಮುಮ್ಮಡಿಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಕೆಲವು ಕಾಲ ಇದ್ದವನು. 'ಕಲಾವತಿ ಪರಿಣಯ'ದ ಸಂಕ್ಷಿಪ್ತ ಕಥೆ ಹೀಗಿದೆ :

ಸೌವೀರದೇಶದ ರಾಜ ಬೃಹದ್ರಥ. ಓರ್ವ ಸಿದ್ಧನಿಂದ ರಾಜನಿಗೆ ಅದೃಶ್ಯ ಅಂಜನ, ಶಕ್ತಿಯುಳ್ಳ ಹಾರ, ಶಿವಖಡ್ಗಗಳು ದೊರಕುತ್ತವೆ. ಸೌರಾಷ್ಟ್ರದ ರಾಜ ಕುವಲಯಾಪೀಡ. ಅವನ ಮಗಳು ಕಲಾವತಿ. ಬೃಹದ್ರಥ ಅಂಜನದ ಸಹಾಯ ದಿಂದ ಅದೃಶ್ಯನಾಗಿ ಕುವಲಯಾಪೀಡನ ಅರಮನೆಯನ್ನು ಪ್ರವೇಶಿಸಿ, ಕಲಾವತಿ ಯನ್ನು ಕಂಡು ಮೋಹಗೊಳ್ಳುತ್ತಾನೆ. ಕಲಾವತಿಯೂ ಆತನನ್ನು ಪ್ರೇಮಿಸು ತ್ತಾಳೆ. ಆದರೆ ಮದುವೆಯಾಗಲಿ ಎಂದು ಹಿಂದೆ ಸರಿಯುತ್ತಾಳೆ. ಬೃಹದ್ರಥ ವಿಪರೀತ ಕೋಪಗೊಂಡು ನಿನ್ನನ್ನು ಮದುವೆಯಾಗಿ ಅನಂತರ ತೊರೆಯುತ್ತೇನೆ ಎನ್ನುತ್ತಾನೆ. ಕಲಾವತಿ ಸಗ್ಗದೆ, ಧರ್ಮವಶಳಾಗಿ ನಾನು ತಡೆದೆನಷ್ಟೇ, ಇಷ್ಟು ಮಾತ್ರಕ್ಕೇ ಕೋಪಗೊಂಡು, ನನ್ನನ್ನು ಮದುವೆಯಾಗಿ ತೊರೆದರೆ, ನಿಮ್ಮ ಸಮಾಗಮ ವನ್ನು ಮಾಡಿ, ನಿಮ್ಮಿಂದ ನನ್ನಲ್ಲಿ ಜನಿಸಿದ ಪುತ್ರನಿಂದ ನಿಮ್ಮನ್ನು ನಿಗ್ರಹಿಸುವೆ ಎನ್ನು ತ್ತಾಳೆ. ಮುಂದೆ ಇಬ್ಬರಿಗೂ ಮದುವೆಯಾಗುತ್ತದೆ. ಬೃಹದ್ರಥ ತನ್ನ ಮಾತಿನಂತೆ ನಡೆಯುತ್ತಾನೆ. ಗಂಡನಿಂದ ತ್ಯಜಿಸಲ್ಪಟ್ಟ ಕಲಾವತಿ ದೇವಕನ್ಯೆಯೊಬ್ಬಳ ಸಹಾಯ ದಿಂದ ರೂಪಪರಿವರ್ತನೆ ಮಾಡಿಕೊಂಡು ಮದನಮಂಜರಿಯಾಗಿ ಬಂದು ಬೃಹದ್ರಥ ನನ್ನು ಒಲಿಸಿಕೊಂಡು ಗರ್ಭತಾಳಿ ತನ್ನೂರಿಗೆ ಬಂದು ಗಂಡುಮಗುವಿನ ತಾಯಾಗು ತ್ತಾಳೆ. ಕಲಾವತಿಯ ಮಗ ಕುಂಡಲಶ್ರವ ಯುದ್ಧದಲ್ಲಿ ತಂದೆಯನ್ನು ಸೋಲಿಸಿ

ತಾಯಿಬಳಿಗೆ ಕರೆತಂದು ಅವಳ ಪ್ರತಿಜ್ಞೆಯನ್ನು ಪೂರೈಸುತ್ತಾನೆ. ಕಥೆ ಸುಖಾಂತವಾಗುತ್ತದೆ.

ಷೇಕ್ಸ್‌ಪಿಯರನ 'All's well that ends well' ನಾಟಕದಲ್ಲೂ ಇದೇ ಆಶಯಗಳನ್ನು ಗುರುತಿಸಬಹುದು. ಒಲ್ಲೆನೆಂಬ ಗಂಡನನ್ನು ಛಲ ಹಿಡಿದು ಒಲಿಸಿಕೊಂಡ ಕಥೆ ಇಲ್ಲಿಯೂ ಇದೆ. ಮದುವೆಯಾದ ಹೆಣ್ಣನ್ನು ತ್ಯಜಿಸಿ, ನಿನ್ನ ಕೈ ಬೆರಳಲ್ಲಿ ನನ್ನ ಉಂಗುರ, ಒಡಲಿನಲ್ಲಿ ನನ್ನ ಮಗು ಇದ್ದ ದಿನ ನಾನು ನಿನ್ನ ಗಂಡ ಎಂದು ಮೂದಲಿಸಿ ಪತ್ರ ಬರೆದ ಪತಿ ಬರ್ಟ್ರಾಮ್. ಆತನಿಗೆ ಅರಿವಾಗದಂತೆ ಬೇರೊಬ್ಬಳ ಹೆಸರಿನಲ್ಲಿ ಸಮಾಗಮಿಸಿ ಗರ್ಭಿಣಿಯಾಗಿ ಅವನು ಒಡ್ಡಿದ ಪಂದ್ಯವನ್ನೂ ಆ ಮೂಲಕ ಪತಿಯ ಒಲವನ್ನೂ ಗೆದ್ದ ಸತಿ ಹೆಲಿನಾ. ಈ ಸ್ಥೂಲಕಥೆ 'ಪೇಟೆಮಾತೇನಜ್ಜಿ'ಯ ಕಥೆಯನ್ನು ಹೋಲುತ್ತದೆ. "The subject-matter of two or three of his plays was familiar in the kannada country long before it got acquainted with Shakespeare. Some of us have learnt from our grand-mothers-who could not have heard of Shakespeare-the story of the exiled youngest daughter(the seventh daughter, not the third as in King Lear). We may remind ourselves that the main events of All's well that ends well are to be found in the Kathasaritsagara, of which Shakespeare had never heard." [24] ಎಂಬ ಎ. ಎನ್. ಮೂರ್ತಿರಾಯರ ಮಾತು ಗಮನಾರ್ಹವಾಗಿದೆ.

ಮೊದಲ ಮೂರು ಜಾನಪದ ಕಥೆಗಳಲ್ಲಿ ಹಾಗೂ 'ಕಲಾವತೀ ಪರಿಣಯ'ದಲ್ಲಿ ಕಾಣುವ, ತಂದೆಯನ್ನು ತಾಯಿಯ ಎದುರಿಗೆ ಮಗ ದಂಡಿಸುವ ಅಂಶ 'ಪೇಟೆಮಾತೇನಜ್ಜಿ'ಯಲ್ಲಿ ಮರೆಯಾಗಿದೆ. ಈ ಆಶಯ ಅಲ್ಲಿ ಗೌಣವಾಗಿ ಕೂಡ ಕಾಣದು. ಇದಕ್ಕೆ ಪುಟ್ಟಣ್ಣನವರ ಆಧುನಿಕವಾದ, ನಗರದ ನಯಗಾರಿಕೆ ಕಾರಣವಿರಬಹುದು.

**ಮನೋಧರ್ಮ**

ಪುಟ್ಟಣ್ಣನವರ ಮನೋಧರ್ಮ 'ಪೇಟೆಮಾತೇನಜ್ಜಿ' ಕೃತಿಯಲ್ಲಿ ಸುವ್ಯಕ್ತವಾಗಿದೆ. ಪ್ರಾಮಾಣಿಕತೆ ಎಂಬುದು ಪುಟ್ಟಣ್ಣನವರ ಜೀವದುಸಿರು. ಸ್ತ್ರೀಯ ಪಾತಿವ್ರತ್ಯ ಇಲ್ಲಿ ಪ್ರಾಮಾಣಿಕತೆಯ ವ್ಯಕ್ತರೂಪವಾಗಿದೆ. ಚೆಲುವಾಜಿ ತನ್ನ ಮಕ್ಕಳಿಂದ ರಾಜನನ್ನು ಮಂಚದ ಕಾಲಿಗೆ ಕಟ್ಟಿಹಾಕಿಸುತ್ತೇನೆಂದು ಪ್ರತಿಜ್ಞೆ ಮಾಡಿದಾಗ (ಪೇ.ಮಾ.ಪು. 22), ಅದನ್ನು ಪೂರೈಸಿದಾಗ (ಪೇ.ಮಾ.ಪು. 47) ಎರಡುಬಾರಿಯೂ ತನ್ನ ಪಾತಿವ್ರತ್ಯದ ಪ್ರಸ್ತಾಪ ಮಾಡುತ್ತಾಳೆ. ಇದು ಅನುದ್ದೇಶಿತವಲ್ಲ. ಅವಳ ಕಾರ್ಯಗಳೆಲ್ಲ ಪಾತಿವ್ರತ್ಯದ ಪ್ರಭಾವಳಿಯಲ್ಲೇ ಅವಿನಾಸಂಬಂಧವನ್ನು ಪಡೆದವು. ಸೀತೆ ದ್ರೌಪದಿಯರ ಗೋಳು ತಟ್ಟಿ ಲಂಕೆ ಕೌರವರು ಹಾಳಾದದ್ದು ಎಂಬ ಪ್ರಜೆಯೊಬ್ಬನ ಉದ್ಗಾರ (ಪೇ. ಮಾ. ಪು. 24) ಕೂಡ ಇಂಥ ವಿಷಯಕ್ಕೇ ದುಡಿಯು

ತ್ತದೆ. ತನ್ನ ಪಾತಿವ್ರತ್ಯದ ಬಲದಿಂದ ಎಂಥ ಕಷ್ಟವನ್ನೂ ಎದುರಿಸಬಲ್ಲ ಪಾತ್ರ ಚೆಲುವಾಜಿಯದು ಎಂಬುದೇ ಪುಟ್ಟಣ್ಣನವರಿಗೆ ಈ ಕಥಾನಕದ ಮುಖ್ಯ ಆಕರ್ಷಣೆ. ಧರ್ಮದ ಮುದ್ರೆ ಹಾಗೂ ಲೌಕಿಕದ ಕಟ್ಟುಗಳೆರಡನ್ನೂ ಗೌರವಿಸಿ ಬಾಳಿದರೆ ಮಾತ್ರ ಸಮಾಜಕ್ಷೇಮ ಎಂದು ತಮ್ಮ ಕಾದಂಬರಿಗಳಲ್ಲಿ ಪ್ರಕಟಿಸಿದ ನಂಬುಗೆಯನ್ನು ಇಲ್ಲೂ ಅವರು ಮನಗಾಣಿಸಿದ್ದಾರೆ.

## ಟಿಪ್ಪಣಿಗಳು

1. ಭಾಷಣಗಳು ಮತ್ತು ಲೇಖನಗಳು ; ಎ. ಆರ್. ಕೃಷ್ಣಶಾಸ್ತ್ರೀ; ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು 570004; 1960 ; ಮೈಸೂರು ಚರಿತ್ರೆಯ ಮೇಲಣ ಕಾದಂಬರಿಗಳಿಗೆ ಸಾಮಗ್ರಿಗಳು, ಪು. 247.

   'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಮಿಕ್ಕ ಅನೇಕ ಸಾಧ್ಯತೆಗಳನ್ನು ಆಗಿನ ವಿಮರ್ಶಕರು ಗುರುತಿಸದಿದ್ದರೂ ಜನಜೀವನ ಚಿತ್ರಣವೇ ಇತಿಹಾಸದ ಚಿತ್ರಣ ಎಂಬುದನ್ನು ಗುರುತಿಸಿರುವುದು ಇಲ್ಲಿ ಕಾಣುತ್ತದೆ.
2. ಪೀಠಿಕೆಗಳು ಲೇಖನಗಳು ; ಡಿ. ಎಲ್. ನರಸಿಂಹಾಚಾರ್; ಡಿ. ವಿ. ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು 570004; 1971 ; ಮರಳಿ ಮಣ್ಣಿಗೆ, ಪು. 628.
3. ಕನ್ನಡ ಕಾದಂಬರಿ ಪ್ರವರ್ತಕರು ಎಂ. ಎಸ್. ಪುಟ್ಟಣ್ಣನವರು ; ಡಿ. ವಿ. ಗುಂಡಪ್ಪ; ಕನ್ನಡ ನುಡಿ, ಸಂಪುಟ 26, ಸಂಚಿಕೆ 6; ಜೂನ್ 1963 ; ಪು. 128.
4. ಇಂಥ ಸ್ಥಿತಿ ತೀರ ವಿರಳ ಎಂದೂ ಈ ಸ್ಥಿತಿಯೊಂದನ್ನು ಬಿಟ್ಟರೆ ಸಾಂಕುಶ ಪ್ರಭುತ್ವವೇ ಕ್ಷೇಮ ಎಂದೂ ಪುಟ್ಟಣ್ಣನವರು ಹೇಳುತ್ತಾರೆ. ಅಲ್ಲದೆ ಸುಭದ್ರವಾದ ನಿರಂಕುಶ ಪ್ರಭುತ್ವದಲ್ಲಿ ಪ್ರಜೆಗಳ ಶಕ್ತಿ ಸಾಮರ್ಥ್ಯಗಳು ಬೆಳಕಿಗೆ ಬರದೆ ಹೋಗುವ ಅಪಾಯವನ್ನೂ ಅವರು ಗುರುತಿಸುತ್ತಾರೆ. ನೋಡಿ : ಎಂ. ಎಸ್. ಪುಟ್ಟಣ್ಣನವರ ಎರಡು ಲೇಖನಗಳು, ಸಂಗ್ರಹ : ಎಚ್. ಎಸ್. ಸುಜಾತಾ; ಮಾನವಿಕ ಕರ್ನಾಟಕ, ಸಂಪುಟ 9, ಸಂಚಿಕೆ 2; 1979 ; ಪು. 77-88.
5. ಎಂ. ಎಸ್. ಪುಟ್ಟಣ್ಣನವರ ಕಾದಂಬರಿಗಳು ; ತೀ. ನಂ. ಶ್ರೀಕಂಠಯ್ಯ; ಮೈಸೂರು ಆಕಾಶವಾಣಿ ಭಾಷಣ, ಅಪ್ರಕಟಿತ; 1947.

   ಹಸ್ತಪ್ರತಿಯಲ್ಲಿದ್ದ ಈ ಭಾಷಣವನ್ನು ದೊರಕಿಸಿಕೊಟ್ಟದ್ದಕ್ಕಾಗಿ ಎಂ. ಚಿದಾನಂದ ಮೂರ್ತಿಗಳಿಗೂ ತೀ. ಶ್ರೀ. ನಾಗಭೂಷಣ ಅವರಿಗೂ ನಾನು ಕೃತಜ್ಞನಾಗಿದ್ದೇನೆ.
6. ಘಟನೆಗಳ ನಿಷ್ಠುರತೆ ಮತ್ತು ಮಾಡಿದ್ದುಣ್ಣೋ ಮಹಾರಾಯ ; ಕೆ. ವಿ. ನಾರಾಯಣ; ಸಾಕ್ಷಿ 17; ಅಕ್ಟೋಬರ್ 1972 ; ಪು. 111-119;
7. ಸಮಕಾಲೀನ; ಜಿ. ಎಚ್. ನಾಯಕ; ಅಕ್ಷರ ಪ್ರಕಾಶನ, ಸಾಗರ; 1973; ಭಾಷಾಪ್ರಯೋಗ: ನವೋದಯ ಕಾವ್ಯದಲ್ಲಿ, ಪು .19-20.

8. Modern Kannada Fiction: A Critical Anthology; (Ed) M. G. Krishnamurthy, Grammatical notes by A. K. Ramanujan; The Department of Indian Studies, The University of Wisconsin, Madison; 1967; preface p. xviii.
9. ಇದು ಅಸಹಜವಲ್ಲ. ಸತತಾಭ್ಯಾಸದಿಂದ ಕರಗತಗೊಳಿಸಿಕೊಳ್ಳಬಹುದಾದ ಒಂದು ಕೌಶಲ್ಯ, ಮೈಸೂರಿನ ಖ್ಯಾತನಟ ಲಕ್ಷ್ಮೀಪತಿಶಾಸ್ತ್ರಿಗಳು ವಿವಿಧ ಪಾತ್ರಗಳಿಗೆ ತಕ್ಕಂತೆ ಮುಖದ ಚೌಕಟ್ಟನ್ನು ಬದಲಾಯಿಸುತ್ತಿದ್ದರೆಂದು ಎ. ಎನ್. ನರಸಿಂಹಯ್ಯನವರು ತಿಳಿಸಿದರು. ಈ ದಿನಗಳಲ್ಲಿ ಎಸ್. ಆರ್. ರಾವ್ ಅವರು ಇಂಥ ಮುಖಭಂಗಿ ಬದಲಾವಣೆಯ ಪ್ರದರ್ಶನ ನೀಡುತ್ತಾರೆ.
10. ನೋಡಿ : ಎಂ. ಎಸ್. ಪುಟ್ಟಣ್ಣನವರ ಜೀವನ ಮತ್ತು ವ್ಯಕ್ತಿತ್ವ, ಪು. 7.
11. ಎಂ. ಎಸ್. ಪುಟ್ಟಣ್ಣನವರ ಹಿರಿಯಮಗ ಎಂ. ಪಿ. ಸೋಮಶೇಖರರಾಯರು ಡಿ. ವಿ. ಗುಂಡಪ್ಪನವರಿಗೆ ಬರೆದ 7–9–1961 ರ ಪತ್ರದಿಂದ ಈ ಸಂಗತಿ ಸ್ಪಷ್ಟವಾಗಿದೆ. ಇದನ್ನು ದೊರಕಿಸಿ ಕೊಟ್ಟದ್ದಕ್ಕಾಗಿ ಬಿ. ಜಿ. ಎಲ್. ಸ್ವಾಮಿ ಅವರಿಗೆ ನಾನು ಕೃತಜ್ಞಳಾಗಿದ್ದೇನೆ.
12. ನೋಡಿ : ಎಂ. ಎಸ್. ಪುಟ್ಟಣ್ಣನವರ ಜೀವನ ಮತ್ತು ವ್ಯಕ್ತಿತ್ವ, ಪು. 26-27.
13. ಶ್ರೀನಿವಾಸ ; (ಸಂ.) ಮಾವಿನಕೆರೆ ರಂಗನಾಥನ್, (ಗೌರವ ಸಂ.) ತಿ. ತಾ. ಶರ್ಮ; ಪುರೋಗಾಮಿ ಸಾಹಿತ್ಯ ಸಂಘ, 10 ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು 560003; 1972; ಮಾಸ್ತಿಯವರ ಸಣ್ಣಕಥೆಗಳು (ಎಂ. ಜಿ. ಕೃಷ್ಣಮೂರ್ತಿ), ಪು. 128.
14. Modern Kannada Fiction : A Critical Anthology, op. cit., preface p. xvii.
15. Ibid.
16. ನೀತಿಬೋಧೆ (ಭಾಗ-3) ; ರಚನೆ : ಜಿ. ಸಿದ್ದಪ್ಪ, ಪರಿಶೋಧನೆ : ಜಿ. ಕೆ. ತಿಮ್ಮಣ್ಣಾಚಾರ್ಯ; ಭಾರತೀ ಪ್ರಕಾಶನ ಮಂದಿರ, ಅವೆನ್ಯೂ ರಸ್ತೆ, ಬೆಂಗಳೂರು; ಮೂ. ಮು. 1937; x + 98.

    ಬಾಲಕರ ನೀತಿಕಥಾವಳಿ (ಭಾಗ-2) ; ಆನವಟ್ಟಿ ರಾಮರಾಯ; ಕೆ. ವಿ. ರಾಮಶೆಟ್ಟಿ ಮತ್ತು ಕಂಪೆನಿ, ಮೈಸೂರು ಮತ್ತು ಬೆಂಗಳೂರು; ಮೂ. ಮು. 1938 ; 64.
17. ಸುಮತಿ ಮದನಕುಮಾರರ ಚರಿತ್ರೆ; ಎಂ. ಎಸ್. ಪುಟ್ಟಣ್ಣ; ಕಾವ್ಯಾಲಯ, ಮೈಸೂರು; ನಾ. ಮು. 1949 ; ಪೀಠಿಕೆ ಪು. iv.
18. ಸಮಾಲೋಕನ ; ತೀ. ನಂ. ಶ್ರೀಕಂಠಯ್ಯ; ಶಾರದಾ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು 570004; ಎ. ಮು. 1974 ; ಮಕ್ಕಳಿಗೆ ಹೇಳುವ ಕಥೆಗಳು ಪು. 127-128.
19. ಹೊಸಗನ್ನಡದ ಅರುಣೋದಯ ; ಶ್ರೀನಿವಾಸ ಹಾವನೂರ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1974 ; ಪು. 527.

    'ನೀತಿಚಿಂತಾಮಣಿ' ಮೊದಲಿಗೆ ಒಂದೇ ಸಂಪುಟವಾಗಿತ್ತು. ಅನಂತರ ಮೂರು ಸಂಪುಟಗಳಾದುವು. ಈಗ ಹದಿನೈದು ಸಂಪುಟಗಳಲ್ಲಿ ದೊರೆಯುತ್ತಿದೆ.
20. ಆಯ್ದ ಜನಪದ ಕಥೆಗಳು ; (ಸಂ.) ಜೀ. ಶಂ. ಪರಮಶಿವಯ್ಯ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1970 ; ತಕ್ಕೊಂಡಪ್ಪನ ಕಥೆ, ಪು. 1-29.

    ನಮ್ಮ ಜನಪದ ಕಥೆಗಳು ; (ಸಂ.) ಎಲ್. ಆರ್. ಹೆಗ್ಗಡೆ; ಕನ್ನಡ ಅಧ್ಯಯನ ಸಂಸ್ಥೆ,

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1976 ; ಹೆಂಡತಿಯ ಪಣ, ಪು. 33-48.
ಅದೇ, ಯಾರ ಮಕ್ಕಳು, ಪು. 149-158.
21. ಕಲಾವತೀ ಪರಿಣಯ ; ಯಾದವ; ?; ?; ?
22. All's well that ends well; William Shakespeare; The English Language Book society and collins, London and Glasgow; 1964 ; pp. 316-348
23. ಆಯ್ದ ಜನಪದ ಕಥೆಗಳು, ಪೂರ್ವೋಕ್ತ, ಪ್ರಸ್ತಾವನೆ, ಪು. xv
24. Shakespeare in Kannada; A. N. Murthy Rao; Indian Literature: vol. vii. No. 1; 1964 ; p. 69.

## 2. ಜೀವನಚರಿತ್ರೆಗಳು

ಎಂ. ಎಸ್. ಪುಟ್ಟಣ್ಣನವರಿಗೆ ಜೀವನಚರಿತ್ರೆಗಳ ರಚನೆಯಲ್ಲಿ ಬಹಳವಾದ ಆಸಕ್ತಿ ಇತ್ತು. ಕಾಲ ದೇಶಗಳ ಭೇದವಿಲ್ಲದೆ ತಾವು ಮೆಚ್ಚಿದ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಅವರು ಬರೆದಿದ್ದಾರೆ. ಇವುಗಳು ಕ್ರಮವಾಗಿ ಚೀಣಾದೇಶದ ತತ್ತ್ವಜ್ಞಾನಿ ಕನ್‌ಫ್ಯೂಷಿಯಸ್‌ನನ್ನು ಕುರಿತ 'ಕಾಂಪೂಷನ ಚರಿತ್ರೆ' (1892), ಮುಮ್ಮಡಿಯವರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದ 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' (1910), ಹೈದರಾಬಾದಿನ ಮಂತ್ರಿ 'ಸರ್ ಸಾಲಾರ್‌ಜಂಗನ ಚರಿತ್ರೆ' (1917), ಬಹಮನಿ ಸಂಸ್ಥಾನದ ಮಂತ್ರಿ 'ಮಹಮೂದ್ ಗವಾನನ ಚರಿತ್ರೆ' (1922) ಮತ್ತು ಪರಾಕ್ರಮಶಾಲಿಯಾದ 'ಛತ್ರಪತಿ ಶಿವಾಜಿ ಮಹಾರಾಜ'. ಹಸ್ತಪ್ರತಿಯಲ್ಲಿ ದೊರೆತಿರುವ ಈ ಕೃತಿಯ ಕಾಲ ಸೂಚಿತವಾಗಿಲ್ಲ.

**ಕಾಂಪೂಷನ ಚರಿತ್ರೆ**

ಕಾಂಪೂಷನು ಕ್ರಿ. ಶ. 550 ರಲ್ಲಿ ಲೂ ಎಂಬ ರಾಜ್ಯದಲ್ಲಿ ಜನಿಸಿದನು. ತಂದೆ ಹೇ, ತಾಯಿ ಯನ್ ಚಿಂಗುತ್ಸಾಯಿ. ಕಾಂಪೂಷನು ಬಾಲ್ಯದಲ್ಲಿ ಬಹಳ ನಿಧಾನ ಸ್ವಭಾವದವನು. ಗುರುಹಿರಿಯರಲ್ಲಿ ಪೂರ್ವಾಚಾರದಲ್ಲಿ ಬಹಳ ಭಕ್ತಿ. ಸಿಂಹದ ಮರಿಯಾದರೂ ಪರಾಕ್ರಮದ ಬೀಜ ಅದರಲ್ಲಿ ಇದ್ದೇ ಇರುವಂತೆ ಕಾಂಪೂಷನಲ್ಲಿ ಮುಂದೆ ಕಾಣಿಸಿಕೊಂಡ ಗುಣಗಳ ಮೊಳಕೆಗಳೆಲ್ಲಾ ಬಾಲ್ಯದಲ್ಲೇ ಇದ್ದವು. ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಕಾಂಪೂಷನು ಧರ್ಮಬೋಧೆಯನ್ನು ಆರಂಭಿಸಿದನು. ಆತನ ವಿವೇಕ, ಪಾಂಡಿತ್ಯಗಳು ಎಲ್ಲೆಡೆಗೆ ಹರಡಿದ್ದವು. ಅವನ ಕಾಲದಲ್ಲಿ ಚೀಣಾರಾಜ್ಯದ ರಾಜಕೀಯ ಸಾಮಾಜಿಕ ಸ್ಥಿತಿಗಳು ಬಹಳ ಕೆಟ್ಟಿದ್ದವು. ಕಾಂಪೂಷನು ಇದರ ಶುದ್ಧೀಕರಣಕ್ಕೆ ತೊಡಗಿದನು. ಲೂ, ಜೋ ಮತ್ತು ತ್ಸಿ ಮೊದಲಾದ ಹಲವು ರಾಜಾಸ್ಥಾನಗಳ ಪರಿಚಯ ಇವನಿಗಿತ್ತು. ಆದರೆ ಯಾವ ರಾಜನೂ ಇವನ ನಿಜವಾದ ಯೋಗ್ಯತೆಯನ್ನು ಅರಿಯಲಿಲ್ಲ. ಇವನ

ಶಿಷ್ಯರಿಗೆ ಮಾತ್ರ ಇವನ ದರ್ಶನದಲ್ಲಿ ಆಸಕ್ತಿ ಇತ್ತು. ಕಾಂಪೂಷನಿಗೆ ಸಂಗೀತದಲ್ಲಿ ಬಹಳ ಆಸಕ್ತಿ ಇತ್ತು. ಅನುಕೂಲ ದಾಂಪತ್ಯವಿಲ್ಲದ ಕಾಂಪೂಷ ಲಿ ಎಂಬ ಒಬ್ಬನೇ ಮಗನ ಜನನದ ನಂತರ ತನ್ನ ಪತ್ನಿಯಿಂದ ದೂರವಾದನು. ದೊರೆಯ ಉಗ್ರಾಣದ ಪಾರುಪತ್ಯದಿಂದ ಪ್ರಾರಂಭಿಸಿ ದಂಡನಾಧಿಕಾರಿಯ ಪದವಿಯವರೆಗೂ ಕಾರ್ಯನಿರ್ವಹಣೆ ಮಾಡಿದನು.

ಕಾಂಪೂಷನು ಬಹಳ ಕರುಣಾಶಾಲಿ. ಅನಾಥರು ಯಾರಾದರೂ ಸತ್ತರೆ ಅವರಿಗೆ ಉತ್ತರಕ್ರಿಯಾದಿಗಳನ್ನು ಮಾಡಿಸುತ್ತಿದ್ದನು. ಪಕ್ಷಪಾತಕ್ಕೆ ಈತ ಬಹು ದೂರನಾಗಿದ್ದನು. ಮರಣದಂಡನೆ ಈತನ ಅಭಿಪ್ರಾಯದಲ್ಲಿ ಸರಿಯಲ್ಲ. ಆ ಶಿಕ್ಷೆ ಬಹು ಹೆಚ್ಚಿನದು, ಅಲ್ಲದೆ ಅಪರಾಧಿಗೆ ತಿದ್ದಿಕೊಳ್ಳುವುದಕ್ಕೂ ಅವಕಾಶವಿಲ್ಲ ಎಂದು ಆತನ ಅಭಿಪ್ರಾಯವಾಗಿತ್ತು. ಈತನು ಯಾವ ಹೊಸಮತವನ್ನೂ ಸ್ಥಾಪಿಸಲಿಲ್ಲ. ಹೊಸ ಬೋಧನೆಯನ್ನೂ ಮಾಡಲಿಲ್ಲ, ಧರ್ಮಾಚರಣೆ ಮುಖ್ಯ ಎಂದು ಒತ್ತಿ ಹೇಳಿದನು. ಆದರೆ ಕಾಂಪೂಷನ ವಿಚಾರ ಆತ ಬದುಕಿದ್ದಾಗ ಜನರಿಗೆ ತಿಳಿಯದೆ ಹೋಯಿತು. ಅನಂತರ ಅವನ ಬಗೆಗೆ ಗೌರವ, ಮರ್ಯಾದೆಗಳು ಹರಡಿ ಅವನನ್ನು ಪೂಜಿಸುವವರೆಗೂ ಭಕ್ತಿ ಬೆಳೆಯಿತು. ಆತನ ವಂಶಸ್ಥರಿಗೂ ವಿಶೇಷ ಮರ್ಯಾದೆ ಜಾರಿಗೆ ಬಂದಿತು. ಕಿನ್‌ಪೊ ಎಂಬ ಪಟ್ಟಣ್ಣದಲ್ಲಿ ಈತನ ಸಮಾಧಿಯಿದೆ. ಕಾಂಪೂಷನನ್ನು ಚೀಣಾದಲ್ಲಿ ಈಗಲೂ ಜನ ಪೂಜಿಸುತ್ತಾರೆ.

ಒಂದು ಕೃತಿಯಲ್ಲಿ ಲೇಖಕನ ಅಂತರಂಗ ಪ್ರತಿಬಿಂಬಿತ ಎಂಬ ಮಾತು ನಿಜ. ಪುಟ್ಟಣ್ಣನವರ ಧರ್ಮಪರವಾದ ನಿಲುವು, ಗಾಢವಾದ ಸೂಕ್ಷ್ಮಚಿಂತನಗಳಿಗೆ ಈ ಕೃತಿ ಒಂದು ವೇದಿಕೆಯಾಗಿದೆ. ತಮ್ಮ ಆಲೋಚನಾಲಹರಿಗೆ 'ಕಾಂಪೂಷನ ಚರಿತ್ರೆ' ಯನ್ನು ಒಂದು ನಿಮಿತ್ತವನ್ನಾಗಿಸಿಕೊಂಡಿದ್ದಾರೋ ಎಂಬಷ್ಟು ಹೆಚ್ಚಿನ ಪ್ರಮಾಣದಲ್ಲಿ ಪುಟ್ಟಣ್ಣನವರ ಮಾನಸಿಕಲಹರಿ ಇಲ್ಲಿ ಕಾಣುತ್ತದೆ. ಕೃತಿಯ ಮೂಲ ವಿಚಾರ ಹಾಗೂ ಪುಟ್ಟಣ್ಣನವರ ಮನೋಧರ್ಮಗಳೆರಡೂ ರಾಸಾಯನಿಕವಾಗಿ ಒಂದೇ ರಚನೆಯಾಗಿದೆ. ತಮ್ಮ ಧೋರಣೆಗಳನ್ನು ಕೃತಿಯ ಭಾಗವಾಗಿಸಿರುವುದು ಹೊಸದೆಂದು ಪುಟ್ಟಣ್ಣನವರು ಬಲ್ಲರು. " As some of the few prose works existing in Kannada, mostly abound in descriptions of concrete objects even to a fault, the present attempt at a discursive style treating of abstract questions, may appear a departure from the beaten path. " (ಕಾಂ.ಚ. Preface) ಎಂಬ ಅವರ ಮಾತು ಗಮನಾರ್ಹ.

ಪುಟ್ಟಣ್ಣನವರ ಮನೋಧರ್ಮ ಪ್ರಕಟಣೆಯ ಕೆಲವು ಉದಾಹರಣೆಗಳು:

1. "ಶಿಶುಪಶುಗಳಿಗೂ, ಖಗನಾಗಗಳಿಗೂ ರುಚಿಕರವಾದ ಗಾನವು ಮನುಷ್ಯನನ್ನು ಎದೆಗೊಳಿಸುವುದು ಏನಾಶ್ಚರ್ಯ? ಅದರಲ್ಲಿಯೂ ಗಾನಕ್ಕೂ ಆರ್ದ್ರಹೃದಯಕ್ಕೂ ಪರಸ್ಪರ ಮೈತ್ರಿಯುಂಟು. ಇದು ತಾಯಿಮಕ್ಕಳ ಹಾಗೆ ಜನ್ಯಜನಕ ಸಂಬಂಧವೋ

ಗಾಳಿ ಧೂಳಿನ ಹಾಗೆ ಸಾಮಾನಾಧಿಕರಣ್ಯ ಸಂಬಂಧವೋ ಹೇಳಲಾಗದು. ಅಂತೂ ಒಳ್ಳೇ ಜಮಾಪಟ್ಟಿನ ಮುಕ್ತಾಯಕ್ಕೆ ತಲೆದೂಗದವನಲ್ಲಿ ಮೂರ್ಖನೆಗೆ ಕಂಣಂಮುಚ್ಚಿ ಅರೆನಿದ್ರೆಯಂ ಮಾಡುವನಂತೆ ಅಪ್ರಯತ್ನವಾಗಿ ಸ್ತಬ್ಧವಾಗದವನಲ್ಲಿ, ಕಂಡವರ ಮಕ್ಕಳನ್ನು ಭಾವಿಗೆ ತಳ್ಳಿ ಅವು ತೇಲಿ ಮುಳುಗುವುದನ್ನು ನೋಡಿ ಲಲ್ಲೇ ಹಾಕುವ ಗುಣವಿಲ್ಲವೆಂದು ನಾವು ಹೇಳುವಾಗ್ಯೆ, ನಾಲ್ಕು ಸಾರಿ ಯೋಚಿಸಿಯೇ ಹೇಳಬೇಕು."

(ಕಾಂ. ಚ. ಪು. 11)

2. "ಆದರೆ ಉದಾತ್ತ ಸ್ವಭಾವವು ಇಂಥಾ ಉಪಹಾರಗಳನ್ನು ಸ್ವೀಕರಿಸುವಂಥಾದ್ದಲ್ಲ. ಸ್ವತಃ ಶ್ರಮಪಟ್ಟು ಸಂಪಾದನೆ ಮಾಡತಕ್ಕ ಶಕ್ತಿಯೂ, ಉದಾರವಾದ ಮನಸ್ಸೂ, ಇವೆರಡೂ ಪರದ್ರವ್ಯಾಣಿ ಲೋಷ್ಟವತ್ ಎಂಬ ಮಾತನ್ನು ದೃಢೀಕರಿಸುವುದಕ್ಕೆ ಸಹಕಾರಿಗಳು. ಉಪಹಾರವು ಹಿಂದೆ ಮಾಡಿದ ಕಾರ್ಯಕ್ಕೆ ಪ್ರತಿಯಾಗಿರಬೇಕು. ಇಲ್ಲ ಭೋಕ್ತನೂ ಶಿಶುಪಶುಗಳ ಹಾಗೆ ಸಾಮರ್ಥ್ಯಲೋಪದಿಂದ ಸಂರಕ್ಷಣಾರ್ಹನಾಗಿರಬೇಕು. ಹಿಂದೆ ಮಾಡಿದ ಕಾರ್ಯವಿಲ್ಲದೆ ಕೊಟ್ಟದ್ದನ್ನು ಸ್ವೀಕರಿಸುವುದು ಎಂದರೆ ಸಾಮರ್ಥ್ಯಲೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡ ಹಾಗಾಯಿತು. ಶಕ್ತಿಯೂ ಇದ್ದು ಅದು ತನಗೆ ಇದೆ ಎಂಬ ಜ್ಞಾನವೂ ಇದ್ದು ಕೊಡತಕ್ಕ ದಾತನಿಗೆ ಸಮಯಾಂತರದಲ್ಲಿ ಇಲ್ಲದೇ ಹೋದೀತೆಂಬ ಬೆಣ್ಣೆಯಂಥಾ ಮನಸ್ಸೂ ಇರತಕ್ಕವರಿಗೆ ಇಂಥಾ ಅಂಗೀಕಾರವು ಹೇಯವಾದ್ದೆಂದು ಖಂಡಿತವಾಗಿ ತೋರುವುದು." (ಕಾಂ.ಚ. ಪು. 20)

3. "ಅಪರಿಮಿತವಾದ ಐಶ್ವರ್ಯದಿಂದಲೂ ನಿರಂಕುಶವಾದ ಅಧಿಕಾರದಿಂದಲೂ ಹುಟ್ಟುವ ಕೆಟ್ಟ ಫಲಗಳನ್ನು ಮಾತ್ರ ತಿಂದು ಜ್ಞಾನತಪ್ಪುವ ರಾಜಕೀಟಗಳಿಗೆ ಪೂರ್ವ ವಯಸ್ಸೆಲ್ಲಾ ಸಂಕಟಸಂಪಾದನೆಗೂ ಅಪರ ವಯಸ್ಸೆಲ್ಲಾ ಅದರ ಅನುಭವಕ್ಕೂ ಹೀಗೆ ಅವರ ಆಯುಸ್ಸೆಲ್ಲಾ ಎರಡು ಭಾಗವಾಗಿದೆ. ಇವರಿಗಿಂತ ಸ್ವಲ್ಪ ಮೇಲ್‌ತರದ ಅರಸರು ತಮ್ಮ ಕೈಗೆ ಸಿಕ್ಕಿದ ಗಂಟನ್ನು ಹೇಗೆ ಕಾಪಾಡಿಕೊಳ್ಳುವದಪ್ಪಾ ಎಂದು ಸಂಶಯಾತ್ಮರಾಗಿ ಏನು ಮಾಡಿದರೇನೋ ಯಾರನ್ನು ನಂಬಿದರೇನೋ ಎಂದು ಯೋಚನೆಯಲ್ಲಿಯೇ ಕಾಲವನ್ನುಕಳೆಯುತಾ ಮೋಸದಿಂದ ತನ್ನ ದಾರಿದ್ರ್ಯವಿಚ್ಛಿತ್ತಿಯನ್ನು ಮಾಡಿಕೊಂಡು ಕಳ್ಳನಹಾಗೆ ಎಡಗೈ ಬಲಗೈಯನ್ನು ನಂಬದೆ ಹೆಚ್ಚು ಕೆಲಸಕ್ಕೂ ಹೋಗದೆ ತಮ್ಮ ಪದವಿ ಎಲ್ಲಿ ಹೋದೀತೋ ಎಂದು ಭಯಪಡುವರು. ಆದರೆ ಇವರೇ ಆಗಲಿ ಅವರೇ ಆಗಲಿ ಉಳಿದ ಕೆಲಸವನ್ನೇನಾದರೂ ಮಾಡಿಯಾರು. ತಮ್ಮ ಹಿತಚಿಂತಕರ ಮಾತನ್ನು ಮಾತ್ರ ಕೇಳುವುದಿಲ್ಲ. ಯಾರ ಮಾತನ್ನಾದರೂ ಕೇಳದೆ ಇದ್ದಾರು. ಕೃತ್ರಿಮಗಳ ಮಾತನ್ನು ಮಾತ್ರ ಕೇಳದೆ ಇರುವುದಿಲ್ಲ. ಕುರಿಗೆ ಬುದ್ಧಿ ಇಲ್ಲವೆನ್ನುವುದು ಪ್ರಕಾಶವಾಗಿಯೇ ಇದೆ.ಅನೇಕ ಪ್ರಾಣಿವಧೆಯನ್ನು ಮಾಡಿದ್ದರಿಂದ ರಕ್ತಗಟ್ಟಿ ಮಣ್ಣಾಗಿ ಕೊಳಕು ಮೆತ್ತಿಗೊಂಡಿರುವ ಕೈಯನ್ನೇ ನೆಕ್ಕುತ್ತಾ ಆ ಕೊಳೆಯ ಕ್ಷಾರವೇ ಬಹುರುಚಿ ಎಂದು ತಿಳಿದು ಬಿಸ್‌ಮಿಲ್ಲಾ ಮಾಡುವುದಕ್ಕೆ ಸಿದ್ಧವಾಗಿರುವವನ ಹಿಂದೆ ಹೋಗುವುದೇ ಹೊರತು ಮತ್ತೆ ಯಾರು ಎಷ್ಟು ಬಗೆಯಲ್ಲಿ ಕರೆದರೂ ಹೋಗದು. ತಾತ್ಕಾಲಿಕವಾದ

ಕೈ ಕೊಳೆಯೇ ಪಾವನವಾಯಿತು. ಅತ್ತ ಇತರರು ಹಿಡಿದಿರುವ ಗರಿಕೆಹುಲ್ಲು ಬೇಡವಾಯಿತು. ಒಂದು ನಿಮಿಷದಲ್ಲಿ ತನ್ನ ತಲೆಯೂ ದೇಹವೂ ಬೇರೆಯಾಗುವುದೆಂದು ಅದೇನು ಬಲ್ಲದು ? ಭವಿಷ್ಯತ್‌ಜ್ಞಾನದ ಪರಿಮಾಣವೇ ವಿವೇಕದ ಪರಿಮಾಣ ಅಥವಾ ಬುದ್ಧಿಶಕ್ತಿಯು ಪರಿಮಾಣವಾದ ಕಾರಣ ಹಲವು ರಾಜರೂ ಆಜರಾಜನೂ ಬುದ್ಧಿಯಲ್ಲಿ ನಾನು ಹೆಚ್ಚು ತಾನು ಹೆಚ್ಚೆಂದು ಸೆಣಗಾಡಬಹುದು." (ಕಾಂ. ಚ. ಪು. 36–37)

ಮೊದಲ ಉದಾಹರಣೆಯಲ್ಲಿ ಸಂಗೀತದ ಶಕ್ತಿ ಎರಡನೆಯದರಲ್ಲಿ ಅಪರಿಗ್ರಹಣದ ಶ್ರೇಷ್ಠತೆ ಮೂರನೆಯದರಲ್ಲಿ ರಾಜತ್ವದ ಒಂದು ಮುಖವನ್ನು ಅರ್ಥೈಸಿರುವ ರೀತಿ ಗಮನಾರ್ಹ.

ಕಾಂಪೂಷನ ಜೀವನದ ಘಟನೆಗಳನ್ನು ಕುರಿತು ಪುಟ್ಟಣ್ಣನವರಿಗೆ ದೊರೆತಿರುವ ಸಾಮಗ್ರಿ ಅತ್ಯಲ್ಪ. ಅವನ ತತ್ತ್ವ, ಬೋಧನೆ, ಆಸಕ್ತಿಗಳನ್ನು ಕುರಿತು ಹೇಳುವಾಗೆಲ್ಲ ತಮ್ಮ ಮನೋಧರ್ಮವನ್ನು ತಿಳಿಯಾದ ಶೈಲಿಯಲ್ಲಿ ನಿರೂಪಿಸುತ್ತ ಕೃತಿಗೆ ಒಂದು ಚೌಕಟ್ಟನ್ನು ತರಲು ಪುಟ್ಟಣ್ಣನವರು ಯತ್ನಿಸಿದ್ದಾರೆ. ಲೋಕಾನುಭವ ನಿರೂಪಣೆ ಹಾಗೂ ತಾತ್ತ್ವಿಕ ವಿವೇಚನೆಗಳಿಂದ ಈ ಕೃತಿ ಒಂದು ರಸಘಟ್ಟಿಯಾಗಿದೆ. "ಈ ಚರಿತ್ರ ಗ್ರಂಥವು ಚಿಕ್ಕದಾದರೂ ಮನುಷ್ಯನ ಬದುಕಿಗೆ ಸಂಬಂಧಿಸಿದ ಹಲವಾರು ಅಂಶಗಳ ವಿವೇಚನೆಯನ್ನು ಒಳಗೊಂಡ ತಾತ್ತ್ವಿಕ ಪ್ರಬಂಧಮಾಲೆಯಂತಿದೆ. ಮೇಲ್ಮಟ್ಟದ ಯಾವುದೇ ಆಧುನಿಕ ಚರಿತ್ರೆಗೆ ಸರಿಮಿಗಿಲೆನಿಸುವಷ್ಟು ಗುಣಗೌರವದಿಂದ ಕೂಡಿದೆ."[1] ಎಂಬ ಶ್ರೀನಿವಾಸ ಹಾವನೂರರ ಮಾತನ್ನು ನೆನೆಯಬಹುದು.

**ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ**

ಕುಣಿಗಲ ರಾಮಶಾಸ್ತ್ರಿಯು 1807 ರಲ್ಲಿ ಶಿವಗಂಗೆಯಲ್ಲಿ ಜನಿಸಿದನು. ತಂದೆ ನರಸಿಂಹಶಾಸ್ತ್ರಿ. ಈತನದು ಬಾಲ್ಯದಿಂದ ದೃಢಕಾಯ, ಚೇಷ್ಟೆಯ ಸ್ವಭಾವ, ಆಟದಲ್ಲಿ ವಿಶೇಷ ಇಚ್ಛೆ. ಉಪನಯನವಾದ ಮೇಲೆ ತಾತ ಪಾಪಶಾಸ್ತ್ರಿಯಿಂದ ವೇದಾಧ್ಯಯನ ಪ್ರಾರಂಭವಾಗಿ ಮುಂದೆ ಬಾಪುಶಾಸ್ತ್ರಿ, ಪುಣೆಯಲ್ಲಿ ಆಸ್ಥಾನ ವಿದ್ವಾಂಸರಾಗಿದ್ದ, ಈತನ ತಂದೆ ತ್ರಿಯಂಬಕಶಾಸ್ತ್ರಿ, ಮೈಸೂರಿನ ತಿರುಪತಿ ಶ್ರೀನಿವಾಸಾಚಾರ್ಯ ಇವರಲ್ಲಿ ರಾಮಶಾಸ್ತ್ರಿಯ ವಿದ್ಯಾಭ್ಯಾಸ ನಡೆಯಿತು. ಅನಂತರ ಅರಮನೆಯಲ್ಲಿ ರಾಮಶಾಸ್ತ್ರಿಗಳಿಗೆ ಐದು ವರಹಗಳ ಕೆಲಸ ಸಿಕ್ಕಿತು. ಹಲವು ಮಠಗಳ ಮಾಸಾಶನ, ವರ್ಷಾಶನಗಳೂ ಲಭಿಸಿದವು. ರಾಮಶಾಸ್ತ್ರಿಗಳ ಶಿಷ್ಯವರ್ಗ ಬಹಳ ದೊಡ್ಡದು. ಯಾವ ಮತ ವೈಷಮ್ಯವೂ ಇಲ್ಲದೆ ರಾಮಶಾಸ್ತ್ರಿಗಳು ಬೋಧನೆಯನ್ನು ಮಾಡುತ್ತಿದ್ದರು. ಪರಸ್ಥಳದ ಹಲವು ಶಿಷ್ಯರಿಗೆ ಅವರ ಮನೆಯಲ್ಲೇ ಊಟವಾಗುತ್ತಿತ್ತು. ಎಲ್ಲ ವಿದ್ಯಾರ್ಥಿಗಳಿಗೂ ತಾವೇ ಪಾಠ ಹೇಳಿ ಚಿಂತನೆ ಮಾಡಿಸಲು ಮಾತ್ರ ಬೇರೆಯವರನ್ನು ಗೊತ್ತುಮಾಡಿದ್ದರು. ಆಗಿನ ರೂಢಿಯಂತೆ ಕಿರಿಯ ವಿದ್ಯಾರ್ಥಿಗಳಿಗೆ ಹಿರಿಯ ವಿದ್ಯಾರ್ಥಿಗಳಿಂದ ಪಾಠ ಮಾಡಿಸುತ್ತಿರಲಿಲ್ಲ. ಹೋದೆಡೆಗಳಲ್ಲೆಲ್ಲ ಅವರ ಪಾಂಡಿತ್ಯವು ಪ್ರಕಾಶಕ್ಕೆ ಬರುತ್ತಿತ್ತು. ಅವರ ವಾದಗಳಿಗೆ

ಎದುರು ನಿಲ್ಲುವವರು ಯಾರೂ ಇರಲಿಲ್ಲ. ರಾಮಶಾಸ್ತ್ರಿಗಳ ಬುದ್ಧಿಪ್ರಖರತೆ, ತರ್ಕ ಜ್ಞಾನಗಳಿಗೆ ಬೆದರಿ ಅವರ ಎದುರಾಳಿಗಳಲ್ಲಿ ಹಲವರು ತಲೆತಪ್ಪಿಸಿಕೊಂಡು ಓಡಿ ಹೋಗಬೇಕಾಯಿತು. ಜೊತೆಗೆ ಅಕಾರಣ ವೈರವನ್ನು ಸಾಧಿಸುವವರ ಮುಖಭಂಗ ಮಾಡದೆ ರಾಮಶಾಸ್ತ್ರಿಗಳು ಬಿಡುತ್ತಿರಲಿಲ್ಲ. ಇವರ ಶಿಷ್ಯರಲ್ಲಿ ಕವಿ ವರದಾಚಾರ್ಯ,ವಿಜಯ ರಾಘವಾಚಾರ್ಯ, ಕುರಚ್ಚಿ ರಂಗಾಚಾರ್ಯ, ರಾಮಗಿರಿ ಶಾಮಾಚಾರ್ಯ ಮುಂತಾದವರು ದಿಗ್ದಂತಿ ಪಂಡಿತರು. ಸುತ್ತಲಿನವರ ಅಸೂಯೆ ಬಹಳವಾಗಿ ಹೆಚ್ಚಾಗುತ್ತಿತ್ತು. ಜೊತೆಗೆ ದೊರೆಗಳ ಅಸಮಾಧಾನ ಇವರ ಗಮನಕ್ಕೆ ಬಂದಾಗ ಮೈಸೂರು ರಾಜ್ಯವನ್ನೇ ಬಿಟ್ಟು ದೊರೆಗಳನ್ನೂ ಲೆಕ್ಕಿಸದೆ ಹೊರಟುಹೋದರು. ಮುಂದೆ ಕಂಚಿ, ಮದರಾಸುಗಳಲ್ಲಿ ರಾಮಶಾಸ್ತ್ರಿಗಳು ನಾರಾಯಣ ಶಬ್ದಕ್ಕೆ ಶಿವಪರವಾದ ಅರ್ಥ ಮಾಡಿದ್ದನ್ನು ಯಾರೂ ವಿರೋಧಿಸಲಾಗಲಿಲ್ಲ. ಅವರ ಪಾಂಡಿತ್ಯದ ಪ್ರಕಾಶ ದಿನೇ ದಿನೇ ಹೆಚ್ಚಾಗುತ್ತಿತ್ತು. ಮುಮ್ಮಡಿಯವರಿಗೆ ಈ ಸಮಾಚಾರವೆಲ್ಲ ತಿಳಿದು ಇನ್ನೆಂದಿಗೆ ಅಂಥ ವಿದ್ವಾಂಸರು ಪುನಃ ನಮ್ಮಲ್ಲಿ ಬಂದಾರೋ ಎಂದು ಕಳವಳಿಸಿದರು. ರಾಮಶಾಸ್ತ್ರಿಗಳು ಅಕಸ್ಮಾತ್ತಾಗಿ ಶ್ರೀರಂಗಪಟ್ಟಣಕ್ಕೆ ಬಂದ ಸುದ್ದಿ ತಿಳಿದು ಮುಮ್ಮಡಿಯವರು ತಾವೇ ಬಂದು ಅವ ರನ್ನು ಮಾತನಾಡಿಸಿ ಮೈಸೂರಿಗೆ ಕರೆತಂದರು.

ರಾಮಶಾಸ್ತ್ರಿಗಳು ಶತಕೋಟಿ ಎಂಬ ತರ್ಕಶಾಸ್ತ್ರ ಗ್ರಂಥವನ್ನೂ ನ್ಯಾಯಶಾಸ್ತ್ರ, ವೇದಾಂತ ಶಾಸ್ತ್ರಗಳ ಉದ್ಗ್ರಂಥಗಳ ಮೇಲೆ ಕ್ರೋಡಪತ್ರಗಳನ್ನೂ ಬರೆದರು. ಅವರು ಅಂತರ್ಮುಖಿಗಳಾಗಿದ್ದು ಆತ್ಮಚಿಂತನೆಯಲ್ಲಿ ಮೈಮರೆಯುತ್ತಿದ್ದರು. ಶಿಷ್ಯರಲ್ಲಿ ಬಹಳ ವಾತ್ಸಲ್ಯವಿತ್ತು. ಅಪಾರವಾದ ಸಹನೆ ಇದ್ದರೂ ವೇದಶಾಸ್ತ್ರಗಳ ಬಗೆಗೆ ಯಾರಾ ದರೂ ಅಪಶಬ್ದ ಹೇಳಿದರೆ ಬಹು ಕೋಪ ಬರುತ್ತಿತ್ತು. ಸಾಧಾರಣವಾಗಿ ಸಂತೋಷ ಚಿತ್ತರಾಗಿರುತ್ತಿದ್ದರು. ಎಷ್ಟು ದುಡ್ಡು ಬಂದರೂ ಕೂಡಿಡದೆ ದಾನ, ವೆಚ್ಚಗಳಲ್ಲಿ ವ್ಯಯಿಸುತ್ತಿದ್ದರು. ಕಾಲವಾದಾಗ ಅವರಿಗೆ ಮೂರುಸಾವಿರ ರೂಪಾಯಿಗಳಷ್ಟು ಸಾಲವಿತ್ತು. ರಾಮಶಾಸ್ತ್ರಿಗಳ ಹಿರಿಯಮಗ ಲಕ್ಷ್ಮೀನರಸಿಂಹಶಾಸ್ತ್ರಿ ಅರಮನೆಯ ಉದ್ಯೋಗದಲ್ಲಿ ಸೇರಿದರು. ಕಡೆಯ ಮಗ ಶಿವಸ್ವಾಮಿ ರಾಮಶಾಸ್ತ್ರಿಗಳ ಭವಿಷ್ಯದಂತೆ ಶೃಂಗೇರಿಮಠದ ಸ್ವಾಮಿಯಾಗಿ ಶ್ರೀ ಶಿವಾಭಿನವ ನೃಸಿಂಹಭಾರತಿ ಎನಿಸಿದರು. ರಾಮ ಶಾಸ್ತ್ರಿಗಳು ಕಡೆಗಾಲದಲ್ಲಿ ಕೆಲವೇ ದಿನಗಳ ಅನಾರೋಗ್ಯದಿಂದ ಮಲಗಿದ್ದು 1860ರಲ್ಲಿ ದೈವಾಧೀನರಾದರು.

'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' ಯ ಉಪಶೀರ್ಷಿಕೆ 'ಮುಮ್ಮಡಿ ಶ್ರೀಕೃಷ್ಣ ರಾಜ ಒಡೆಯರವರ ಆಸ್ಥಾನ' ಎಂದಿರುವುದು ಉಚಿತವಾಗಿದೆ. "ಕುಣಿಗಲ ರಾಮ ಶಾಸ್ತ್ರಿಗಳು ಮೈಸೂರ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ್ ಪ್ರಭುಗಳ ಆಸ್ಥಾನದಲ್ಲಿ ಮುಖ್ಯ ವಿದ್ವಾಂಸರಾಗಿದ್ದ ಕಾರಣ, ಈ ಚರಿತ್ರೆಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷ ವಾಗಿ ಸಂಬಂಧಿಸಿದ ದರಬಾರಿನ ರೀತಿ, ರಾಜಸಭೆಯ ಸ್ಥಿತಿ, ಆಗಿದ್ದ ಮುಖಂಡರಾದ ವೈದಿಕ ಲೌಕಿಕರ ಯೋಗ್ಯತೆ ಮತ್ತು ಸದ್ಗುಣಗಳು, ಆಗಿನ ಗ್ರಂಥವ್ಯಾಸಂಗಕ್ರಮ,

ಸಮಕಾಲಿಕರಾದ ಪಂಡಿತರ ಯೋಗ್ಯತೆ, ಇವೆಲ್ಲಕ್ಕೂ ಮುಖ್ಯ ಆಧಾರಭೂತರಾಗಿದ್ದ ಕೃಷ್ಣರಾಜ ಪ್ರಭುಗಳ ಅಮೋಘವಾದ ಗುಣಾತಿಶಯಗಳು, ಇವೇ ಮೊದಲಾದ ವಿಷಯಗಳನ್ನು ಸಂಗತವಾದ ಕಡೆ ವರ್ಣಿಸಿದೆ. ವಿಕ್ರಮ ಭೋಜಾದಿಗಳನ್ನೂ ಪೇಶ್ವೆ ಶ್ರೀಮಂತರನ್ನೂ ಮರೆಯಿಸುತಾರೊ ಎನ್ನುವ ಹಾಗೆ ಪಂಡಿತರಿಗೋಸ್ಕರವೇ ಬದುಕಿದ ಆ ರಾಜಋಷಿಯ ಚರಿತ್ರೆಯನ್ನು ಶುದ್ಧವಾಗಿ ಬಿಟ್ಟು ಈ ಪಂಡಿತರ ಕಥೆಯನ್ನು ಹೇಳುವುದಾದರೆ, ಅದರಲ್ಲಿ ಸ್ವಾರಸ್ಯವಿರಲಾರದು." (ಕು.ರಾ.ಚ. ಪೀಠಿಕೆ, ಪು. 3–4) ಎಂಬ ಮಾತು ಪುಟ್ಟಣ್ಣನವರ ನಿಲುವನ್ನು ಸೂಚಿಸುತ್ತದೆ. ಯಾವುದೇ ವಿಚಾರವನ್ನು ಒಂದು ಚೌಕಟ್ಟಿನಲ್ಲಿ, ಒಂದು ಹಿನ್ನೆಲೆಯಲ್ಲಿ ಗ್ರಹಿಸುವ ಪುಟ್ಟಣ್ಣನವರ ದೃಷ್ಟಿಯೂ ಇಲ್ಲಿ ಸುಸ್ಪಷ್ಟವಾಗಿದೆ. ಇದರ ಪರಿಣಾಮವಾಗಿ ರಾಮಶಾಸ್ತ್ರಿಗಳ ವಿಚಾರವನ್ನು ತಿಳಿಸುವಾಗ ಆನುಷಂಗಿಕವಾಗಿ ಮೈಸೂರಿನ ಆಸ್ಥಾನದ ಹಲವು ಸ್ವಾರಸ್ಯಕರ ವಿಚಾರಗಳು ನುಸುಳುತ್ತವೆ, ಗತಕಾಲಕ್ಕೆ ಒಂದು ಕಿಂಡಿಯನ್ನು ಕೊರೆಯಲು ಸಹಕರಿಸುತ್ತವೆ.

ಎಂ. ಎಸ್. ಪುಟ್ಟಣ್ಣನವರು ದರಬಾರಿನ ಸ್ಥಿತಿಗತಿಗಳನ್ನು ರೋಚಕವಾಗಿ ನಿರೂಪಿಸಿದ್ದಾರೆ. ದೌಲತ್ತು ರಾಜರ ಕೈ ತಪ್ಪಿದ್ದ ಕಾಲದಲ್ಲಿ ಕಂಪನಿ ಸರಕಾರದವರು ನಿಯಮಿತವಾಗಿ ಕೊಡುತ್ತಿದ್ದ ಹಣ ಮುಮ್ಮಡಿಯವರ ಗುಣಗೌರವ, ಔದಾರ್ಯಗಳಿಗೆ ಸಾಲದೆ ಇಕ್ಕಟ್ಟಿನ ಪರಿಸ್ಥಿತಿ ಏರ್ಪಟ್ಟಿತ್ತು. ಈ ಹೊತ್ತಿನಲ್ಲಿ ದೌಲತ್ತನ್ನು ಹಿಂದೆ ಪಡೆಯಬೇಕೆಂಬ ದೊರೆಯ ಮನೋಗತವನ್ನು ದುರುಪಯೋಗಿಸಿಕೊಂಡು ಸ್ವಕಾರ್ಯ ಧುರಂಧರರಾದ ಅನೇಕರು ರಾಜಾಸ್ಥಾನದಲ್ಲಿ ಮಾಡುತ್ತಿದ್ದ ಕುತಂತ್ರಗಳನ್ನು ಪುಟ್ಟಣ್ಣನವರು ಗುರುತಿಸಿದ್ದಾರೆ. ಮುಮ್ಮಡಿಯವರಿಗೆ ಇದ್ದ ಇಂಥ ಒಳಸಂಕಟಗಳನ್ನು ಅವರು ಬೆರಳುಮಾಡಿ ತೋರಿದ್ದಾರೆ. ಉತ್ತರದ ಗಲಭೆಗಳು ದಕ್ಷಿಣಕ್ಕೆ ಹಬ್ಬಬಾರದೆಂಬ ದೃಷ್ಟಿಯಿಂದ ಕಂಪನಿಯವರು ರಾಜ್ಯದ ಹುಟ್ಟುವಳಿಯಲ್ಲಿನ ಪಂಚಮಾಂಶವನ್ನು ಮುಮ್ಮಡಿಯವರಿಗೆ ಕೊಡಲು ಸಿದ್ಧರಾದರು. ರಾಜ್ಯವ್ಯವಹಾರಗಳಲ್ಲಿ ಪರಿಸ್ಥಿತಿ ಹೀಗಿದ್ದರೂ ವಿದ್ವಾಂಸರ ಕಲಾವಿದರ ಸನ್ನಿಧಿಯಲ್ಲಿ ಮುಮ್ಮಡಿಯವರು ಬಹಳ ಸಂತೋಷವಾಗಿಯೇ ಇದ್ದರು. ಪ್ರತಿದಿನ ನಾಮತೀರ್ಥತೊಟ್ಟಿಯಲ್ಲಿ ಶಿವಪೂಜೆ ಮುಗಿದ ಮೇಲೆ ದೊರೆಗಳು ವಿದ್ವಾಂಸರನ್ನು ಭೆಟ್ಟಿಯಾಗುವುದು ಸಾಮಾನ್ಯವಾಗಿತ್ತು, ಒಮ್ಮೊಮ್ಮೆ ಅಂಬಾವಿಲಾಸದಲ್ಲಿ ಇಂಥ ಕಾರ್ಯಕ್ರಮ ನಡೆಯುತ್ತಿತ್ತು.

ಮುಮ್ಮಡಿಯವರ ಔದಾರ್ಯ ಪ್ರಕಾಶಕ್ಕೆ ಬರುವ ಹಲವು ಸಂಗತಿಗಳನ್ನು ಪುಟ್ಟಣ್ಣನವರು ಉಲ್ಲೇಖಿಸಿದ್ದಾರೆ. ಕಲ್ಯಾಣದುರ್ಗದಿಂದ ಬಂದ ತ್ರಿಯಂಬಕಶಾಸ್ತ್ರಿಗಳು ಆಸ್ಥಾನದ ರಾಮಶೇಷ ಶಾಸ್ತ್ರಿಗಳಿಂದ ಸೋತರೂ, ಸೋಲುಗೆಲುವುಗಳನ್ನು ಮಾತ್ರ ನೆಚ್ಚದೆ ಗುಣಮನ್ನಣೆಯ ದೃಷ್ಟಿಯಿಂದ ಮುಮ್ಮಡಿಯವರು ತ್ರಿಯಂಬಕಶಾಸ್ತ್ರಿಗಳಿಗೆ ಸನ್ಮಾನ ಮಾಡಿದರಂತೆ. ಅದೇ ರೀತಿ ಬಂಗಾಳದ ನವದ್ವೀಪದಲ್ಲಿ ಶಾಸ್ತ್ರಾಭ್ಯಾಸ ಮಾಡಿ ಅನುಗಮಭಟ್ಟಾಚಾರಿ ಎಂದು ಹೆಸರಾಗಿದ್ದ ವೆಂಕಟರಾಯಾ ಶಾಸ್ತ್ರಿಗಳು ಮೈಸೂರಿಗೆ ವಾಕ್ಯಾರ್ಥಕ್ಕಾಗಿ ಬಂದಾಗ ರಾಮಶಾಸ್ತ್ರಿಗಳೊಬ್ಬರೇ ಅವರನ್ನು ಸೋಲಿ

ಸಿದರು. ಆಗಲೂ ಪ್ರಭುಗಳು ವೆಂಕಟರಾಯಾ ಶಾಸ್ತ್ರಿಗಳಿಗೆ ಮನ್ನಣೆ ಮಾಡಿದ್ದನ್ನು ಪುಟ್ಟಣ್ಣನವರು ಉಲ್ಲೇಖಿಸುತ್ತಾರೆ. ಪ್ರಭುಗಳ ಔದಾರ್ಯ ವಿದ್ವಾಂಸರಿಗೆ ಮಾತ್ರ ಮೀಸಲಾಗದೆ ಸಾರ್ವಜನಿಕರಿಗೂ ಲಭ್ಯವಾಗುತ್ತಿತ್ತು. ಪಾವಗಡದ ಗಂಗಾಧರ ಸೋಮಯಾಜಿಗಳು ಮಾಡಿದ ಸರ್ವತೋಮುಖವೆಂಬ ಯಾಗಕ್ಕೆ ಒದಗಿಸಿದ ಸಹಾಯ, ಭಾಗವತ ಸುಬ್ಬರಾಯರಂಥ ಖಾಸಬೊಕ್ಕಸದ ಅಧಿಕಾರಿಗಳು ಧರ್ಮಕಾರ್ಯಕ್ಕಾಗಿ ಮಾಡಿದ ಸಾಲ ವಿಪರೀತವಾದಾಗೆಲ್ಲ ಅರಮನೆಯ ಬೊಕ್ಕಸದಿಂದ ಅದನ್ನು ತೀರಿಸು ತ್ತಿದ್ದುದು ಇಂಥ ಮಾತನ್ನು ಸ್ಫುಟವಾಗಿಸುತ್ತದೆ. ವಿದ್ವತ್ತಿಗೆ ಮೆಚ್ಚಿ ಮರ್ಯಾದೆ ಮಾಡುವುದು, ಬಹುಮಾನ ಜಹಗೀರುಗಳನ್ನು ಕೊಡುವುದು, ವಿದ್ವಾಂಸರಿಗೆ ಜೀವನೋಪಾಯವನ್ನು ಕಲ್ಪಿಸುವುದು, ಅವರ ಸಾಲ ತೀರಿಸುವುದು ಮುಮ್ಮಡಿ ಯವರ ಸಹಜಗುಣಗಳಾಗಿದ್ದುವು. ಇವರ ಈ ಗುಣ ಹೊರನಾಡಿನಲ್ಲೂ ಹರಡಿತ್ತು.

ಅರಮನೆಯ ವಿದ್ವಾಂಸರಲ್ಲಿ ಹಲವರು ಇಂಥ ಮನ್ನಣೆಗೆ, ಮರ್ಯಾದೆಗೆ ತಕ್ಕವ ರಾಗಿರಲಿಲ್ಲ ಎಂದು ತಿಳಿಸಿ, ತಿಂಗಳ ಸಂಬಳ ಪಡೆಯಲೂ ವಿಶೇಷ ಸಂದರ್ಭಗಳ ವರಮಾನ ಪಡೆಯಲೂ ಮಾತ್ರ ಸಿದ್ಧರಿದ್ದ ಹಲವರನ್ನು ಪುಟ್ಟಣ್ಣನವರು ಬಲವಾಗಿ ಖಂಡಿಸಿದ್ದಾರೆ. ರಾಮಶಾಸ್ತ್ರಿಗಳಂಥವರು ರಾಜಾವಲಂಬನೆಯ ಅನಿವಾರ್ಯತೆಯನ್ನು ಬಲ್ಲವರಾಗಿದ್ದು ಆಸ್ಥಾನದಲ್ಲಿದ್ದರೂ, ರಾಜಸ್ವತ್ತು ದೋಷಯುಕ್ತವಾದುದೆಂದು ಭಾವಿಸಿ ರಾಜನಿಂದ ದತ್ತವಾದುದಕ್ಕೆ ಪ್ರತಿಯಾಗಿ ಶಾಸ್ತ್ರವ್ಯಾಸಂಗ, ಪಂಡಿತ ಪೋಷಣೆ, ರಾಜನಿಗಾಗಿ ಶ್ರೇಯಃಪ್ರಾರ್ಥನೆ ಇತ್ಯಾದಿಗಳ ಮೂಲಕ ಋಣಪರಿಹಾರವನ್ನು ಮಾಡಿಕೊಳ್ಳುತ್ತಿದ್ದರು.

ದೊರೆಗಳ ಸ್ವಭಾವ ಆತ್ಮೀಯವಾಗಿದ್ದುದನ್ನು ಪುಟ್ಟಣ್ಣನವರು ತಿಳಿಸಿದ್ದಾರೆ. ಒಮ್ಮೆ ತ್ರಿಯಂಬಕ ಶಾಸ್ತ್ರಿಗಳು ಈ ಬಾಳಾಚಾರ್ಯರು ಗೂಳಿಯಂತೆ ಮೇಲೆ ಬಿದ್ದು ಮಾತನಾಡುತ್ತಾರೆ ಎಂದಾಗ ದೊರೆಗಳು ಗೂಳೀ ಬಾಳಾಚಾರ್ಯರು ಎಂದು ಹೆಸರಿಟ್ಟ ರಂತೆ. ಅದೇ ರೀತಿ ಜುಲಪಿ ಕೃಷ್ಣಾಚಾರ್ಯರು, ಒಂಟೆ ರಾಮಾಚಾರ್ಯರು, ಪಾಯಸದ ಕೃಷ್ಣ, ಪ್ರೇತ ನರಸಿಂಹಶಾಸ್ತ್ರಿಗಳು, ಹಾಗೂ ಬೇಳೆ ರಾಮರಾಯರು, ಮುಚ್ಚಗಣ್ಣು ಶ್ರೀನಿವಾಸರಾಯರು ಎಂಬುದಾಗಿ ವಿಧವಿಧವಾದ ಅಡ್ಡ ಹೆಸರುಗಳನ್ನು ತಮ್ಮ ಸುತ್ತಲಿನ ಜನಕ್ಕೆ ಇಟ್ಟು ಕುಚೋದ್ಯ ಮಾಡುತ್ತಿದ್ದುದನ್ನು ಉಲ್ಲೇಖಿಸಿ ಜನ ರೊಡನೆ ಅವರು ಬೆರೆಯುತ್ತಿದ್ದುದನ್ನು ಗುರುತಿಸಿದ್ದಾರೆ. ಗುಣವನ್ನು ಕಂಡಾಗ ಗೌರವಿ ಸಿದಂತೆಯೇ, ದೊರೆಗಳು ತಮ್ಮದು ದುಡುಕಿನ ವರ್ತನೆಯಾದಾಗ ತಾವೇ ಅದನ್ನು ಒಪ್ಪಿಕೊಳ್ಳುತ್ತಿದ್ದುದನ್ನು ಪುಟ್ಟಣ್ಣನವರು ಉಲ್ಲೇಖಿಸಿದ್ದಾರೆ. ವಿದ್ವಾಂಸರ ಪಾಂಡಿತ್ಯ ಕ್ಕಿಂತ ಹೆಚ್ಚಾಗಿ ದೊರೆಗಳ ಔದಾರ್ಯ ಅಂಥ ಕಡೆ ಕಾಣುತ್ತದೆ. "ರಾಜಕೀಯವಾಗಿ ಅವ ರಿಗೆ ಯಶಸ್ಸು ದೊರೆಯಲಿಲ್ಲ. ಬಹುಶಃ ಇದನ್ನು ಅವರು ಕಲೋಪಾಸನೆ, ಸಾಹಿತ್ಯಾಭಿ ರುಚಿ ಇವುಗಳಿಂದ ಸರಿದೂಗಿಸಿಕೊಂಡರು. ರಾಜಕೀಯ ಅವನತಿ ಸಾಂಸ್ಕೃತಿಕ ಪುನರು

ತ್ಥಾನವಾಗಿ ಪರಿಣಮಿಸಿತು."[2] ಎಂಬ ಹಾ. ಮಾ.ನಾಯಕರ ಮಾತು ಗಮನಾರ್ಹ ವಾಗಿದೆ.

ಆಸ್ಥಾನಗಳ ವಿವರಗಳ ನಡುವೆ ಮುಮ್ಮಡಿಯವರ ವೈಯಕ್ತಿಕ ಜೀವನವೂ ಕ್ವಚಿತ್ತಾಗಿ ಇಲ್ಲಿ ಇಣಕುತ್ತದೆ. ರಾಜ್ಯ ಇಂಗ್ಲೀಷರ ಕೈಗೆ ಹೋದದಕ್ಕೆ ತಮ್ಮ ಜ್ಯೇಷ್ಠ ಪತ್ನಿಯವರಾದ ಲಕ್ಷ್ಮೀವಿಲಾಸದ ಅಮ್ಮನವರ ಬೆಂಬಲವಿತ್ತೆಂದು ಹೇಳಿದ ಪಿಸುಣರ ಸುಳ್ಳು ಮಾತುಗಳನ್ನು ನಂಬಿದ ಮುಮ್ಮಡಿಯವರು ಆಕೆಯನ್ನು ದೂರಮಾಡಿದರು. ದೊರೆಯ ಬಂಗಾರದಾಕೆಯಲ್ಲಿ ಜನಿಸಿ ಅವರಲ್ಲಿ ಸ್ನೇಹ ಸಲುಗೆಗಳನ್ನು ಪಡೆದಿದ್ದ ರತ್ನಾಜಿ ಚೊಚ್ಚಲ ಬಸುರಿಯಾದಾಗ ಲಕ್ಷ್ಮೀವಿಲಾಸದ ಅಮ್ಮನವರ ಬಳಿಯಿದ್ದ ಬಳೆಗಳನ್ನು ಬಯಸಿ ತಂದೆಯೇ ಕೇಳಿ ಕೊಡಿಸಬೇಕೆಂದು ಹಠಮಾಡುತ್ತಾಳೆ. ಈಕೆಯ ಅಂತಃಕರಣದ ಮಧ್ಯಸ್ಥಿಕೆಯಿಂದ ಗಂಡಹೆಂಡಿರ ನಡುವಿನ ಬಿರುಕು ಮುಚ್ಚುತ್ತದೆ. ಹಲವು ವರ್ಷಗಳ ಅಗಲಿಕೆಯ ಬೆಂಕಿಯಲ್ಲಿ ಬೆಂದು ಪತಿಪತ್ನಿಯರಿಬ್ಬರೂ ಪುಟಕ್ಕಿಟ್ಟ ಚಿನ್ನದಂತಾಗಿದ್ದುದನ್ನು ಪುಟ್ಟಣ್ಣನವರು ಅಂತಃಕರಣದ ಲೇಪಕೊಟ್ಟು ಚಿತ್ರಿಸಿದ್ದಾರೆ[3]. ಕರುಳಿನ ಸೆಳೆತ, ಸಾತ್ತ್ವಿಕ ಸಂತಾಪದ ಮಿಡಿತಗಳಿಂದ ಈ ಭಾಗದ ಬರವಣಿಗೆ ಭಾವದೀಪ್ತವಾಗಿದ್ದು ಇದನ್ನು ಓದಿದಾಗ ಆರ್ದ್ರಹೃದಯರು ಆರ್ದ್ರನೇತ್ರರೂ ಆದರೆ ಅಚ್ಚರಿಯಿಲ್ಲ.

ಈ ಪ್ರಸಂಗದ ಕೊನೆಯ ಭಾಗ ಹೀಗಿದೆ :

"ಆಗ ದೊರೆಯು ಪಟ್ಟಮಹಿಷಿಯಾದ ಹೆಂಡತಿಯನ್ನು ಕುರಿತು–ನಿಮ್ಮ ಮಗಳು ಬಸಿರಾಗಿದಾಳೆ, ಯಜಮಾನರಾದ ದಿವಾನ ಪೂರ್ಣಯ್ಯನವರು ನಿಮಗೆ ಹಸೇಮೇಲೆ ಓದಿಸಿದ್ದ ಕೆತ್ತನೇ ಬಳೆಯನ್ನು ಇಟ್ಟುಕೊಳ್ಳಬೇಕೆಂದು ಬಯಸಿದಾಳೆ; ಅದನ್ನು ಕೊಡಿಸಿ, ಎಂದರು. ಆ ಕೂಡಲೇ ಅಮ್ಮನವರ ಕಣ್ಣಿನಲ್ಲಿ ಪಳಪಳನೆ ನೀರು ಬಂತು. ಹೆಂಡತಿಯ ಸ್ಥಿತಿಯನ್ನು ನೋಡಿ ಅದುವರೆಗೇ ಮನಸ್ಸೆಲ್ಲಾ ಕಲಕಿಹೋಗಿತ್ತು. ಆ ಪಟ್ಟದ ರಾಣಿಯ ಕಣ್ಣಿನಲ್ಲಿ ಕಂಬನಿಗಳು ಬಂದ ಕ್ಷಣದಲ್ಲಿಯೇ ಮೃದು ಹೃದಯರಾದ ದೊರೆಯ ಕಂಣಿನಲ್ಲಿಯೂ ನೀರು ತುಂಬಿತು. ಅಮ್ಮನವರು ಗಂಡನ ಪಾದಕ್ಕೆ ನಮಸ್ಕಾರವನ್ನು ಮಾಡಿ, ಪಾದಗಳೆರಡನ್ನೂ ತೊಳೆದು ತನ್ನ ಸೆರಗಿನಿಂದಲೇ ಒರೆಯಿಸಿ ಕಂಣಿಗೆ ಒತ್ತಿಕೊಂಡು, ಗದ್ಗದ ಸ್ವರದಿಂದ–ಬುದ್ಧಿ, ಇಂದಿಗೆ ನನ್ನ ಪಾಪ ಹರಿಯಿತು, ಈ ಜನ್ಮ ಸಾರ್ಥಕವಾಯಿತು, ಎಂದರು. ದೊರೆಯು ಹಿಂದಿನ ಚರಿತ್ರೆಯನ್ನೂ ಸದ್ಗುಣಶೀಲೆಯಾದ ಹೆಂಡತಿಗೆ ತನ್ನಿಂದ ಉಂಟಾದ ಕಷ್ಟವನ್ನೂ ನೆನೆದು ಪಶ್ಚಾತ್ತಾಪದಿಂದ ಹೆಂಡತಿಯ ಕೈಯನ್ನು ಹಿಡಿದು ಯಾವ ಮಾತನ್ನೂ ಆಡದೆ ಸುಮ್ಮನೆ ಮೌನದಿಂದ ಅರೆಗಳಿಗೆ ಸ್ತಂಭೀಭೂತವಾಗಿ ಕೂತುಕೊಂಡರು. ಹಿಂದಿನ ಜ್ಞಾಪಕ ಬರುತಾ ಬಂತು. ಮೂಗಿನೊಳಗೆ ಸ್ವಲ್ಪ ಚುಳ್ಳೆಂದು ಹಾಗೆ ಆಗಿ ಕಂಣಿನಲ್ಲಿ ನೀರು ಬಂದ ಹಾಗೆ ಆಗುತಾ ಬಂತು. ಅಮ್ಮನವರ ಕಂಣಿನಲ್ಲಿಯೂ ಧಾರೆಯಾಗಿ ನೀರು ಸುರಿದು ಅತಿ ರೋದನದಿಂದುಂಟಾದ ಬಿಕ್ಕಳಿಕೆ ಆಗಾಗ್ಗೆ ಚೆನ್ನಾಗಿ ಎಲ್ಲರಿಗೂ ಕೇಳುತಾ ಬಂತು. ರಾಜಕುವರಿಯು ದೊಡ್ಡ ತಾಯಿಯನ್ನು ಕಂಡ ಒಡನೆಯೇ ನಮಸ್ಕಾರ ಮಾಡಿ ನಿಂತು

ಕೊಂಡಳು. ತಾಯಿತಂದೆಗಳ ಸ್ಥಿತಿಯನ್ನು ಕಂಡು ಈಕೆಯ ಕಂಬನಿಗಳು ಮುತ್ತಿನ ಹಾಗೆ ಎರಡು ಕೆನ್ನೆಯ ಮೇಲೆಯೂ ಹರಿದವು." (ಕು. ರಾ. ಚ. ಪು. 98-99)

ಪುಟ್ಟಣ್ಣನವರು ನಿರೂಪಿಸಿರುವ ಮಿಕ್ಕ ಹಲವು ಪ್ರಸಂಗಗಳಲ್ಲಿ ಮುಮ್ಮಡಿ ಯವರದು ಸಿಂಹಾಸನಾಧೀಶನ ಪಾತ್ರ. ಅಲ್ಲಿ ಅವರು ಆಶ್ರಯದಾತರಾಗಿ ವಿದ್ವತ್ಪಕ್ಷ ಪಾತಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಅವರಿಗೂ ಪ್ರಜೆಗಳಿಗೂ ನಡುವೆ ವಾತ್ಸಲ್ಯದ ಸೇತುವೆ ಇದೆ. ಆದರೆ ಈ ಪ್ರಸಂಗ ಅವರನ್ನು ಇನ್ನೂ ಹತ್ತಿರದಿಂದ ಚಿತ್ರಿಸುತ್ತದೆ. ಇದು ಅವರದೇ ಕಥೆಯಾಗಿದೆ. ಈ ಚಿತ್ರಣದಲ್ಲಿ ಅರಸೊತ್ತಿಗೆಗೆ ಅಂಟಿದ ಹಲವು ಶಾಪಗಳು, ನೋವಿನ ಕರಿನೆರಳುಗಳು–ಇವುಗಳನ್ನು ಪುಟ್ಟಣ್ಣನವರ ಲೇಖನಿ ಗಮನಿಸಿದೆ.

'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ'ಯಲ್ಲಿ ನಿರೂಪಿತವಾಗಿರುವ ಒಂದೆರಡು ಸಂಗತಿಗಳು 'ನೆನಪುಗಳು'[4] ಕೃತಿಯಲ್ಲಿ ಸ್ವಲ್ಪ ಬೇರೆಯಾಗಿ ನಿರೂಪಿತಗೊಂಡಿವೆ. ವ್ಯತ್ಯಾಸಗಳು ಹೀಗಿವೆ :

1. ಒಮ್ಮೆ ಒಬ್ಬ ದೊರೆ ಎಡತೊರೆಗೆ ಬಂದಾಗ ಯಜ್ಞೇಶ್ವರ ಸೋಮಯಾಜಿ ಎಂಬಾತನ ಮನೆಯಲ್ಲಿ ಬಿಡಾರ ಮಾಡಿದ್ದನು. ದೊರೆ ಆತನಿಗೆ ನಿತ್ಯದಾನವನ್ನು ಕೊಡಲು ಹೋದಾಗ ಆತ ತನ್ನ ಎಡಗೈ ನೀಡಿದನು. ದೊರೆಗೆ ಕೋಪ ಬಂತು. ಅದನ್ನು ತಿಳಿದು ಸೋಮಯಾಜಿಯು ತನ್ನ ಬಲಗೈಯಲ್ಲಿ ಯಜ್ಞೇಶ್ವರನಿದ್ದಾನೆಂದೂ ದಾನ ಸ್ವೀಕಾರ ಅದೇ ಕೈಯಿಂದ ಮಾಡಿದರೆ ಅದು ಸುಟ್ಟು ಹೋದೀತೆಂದೂ ಹೇಳಿದನು. ಈಗಲೂ ಯಜ್ಞೇಶ್ವರನಿದ್ದಾನೋ ಎಂಬ ದೊರೆಯ ಪ್ರಶ್ನೆಗೆ ಸೋಮಯಾಜಿಯು ಪರೀಕ್ಷಿಸ ಬೇಕು ಎಂದು ಹೇಳಿ ಬೆರಣಿಯ ಹುಡಿಯನ್ನು ತನ್ನ ಬಲ ಅಂಗೈಗೆ ಉದುರಿಸಿ ಕೊಂಡನು, ಬೆರಣಿಯು ಚೂರು ಸೀದು ಹೊಗೆಯಾಡಿತು. ದೊರೆಗೆ ಬಹು ಅಚ್ಚರಿ ಯಾಯಿತು. ಸಾಷ್ಟಾಂಗ ನಮಸ್ಕಾರ ಮಾಡಿ ಸರ್ವಮಾನ್ಯಗಳನ್ನೂ ಮಾಸಾಶನವನ್ನೂ ಸೋಮಯಾಜಿಗೆ ದಯಪಾಲಿಸಿದನು. (ಕು.ರಾ.ಚ. ಪುಟ 12)

ಮುಮ್ಮಡಿಯವರಿಗೆ ಗ್ರಹಗತಿಗಳು ಕ್ರೂರವಾಗಿದ್ದಾಗ ಸುವರ್ಣಗೋದಾನ ಮಾಡಬೇಕೆಂದು ಗೊತ್ತಾಯಿತು. ದಾನಸ್ವೀಕಾರ ಮಾಡಿ ಪಾಪನಿವೃತ್ತಿ ಮಾಡಿ ಕೊಳ್ಳುವ ಧೈರ್ಯ ಯಾರಿಗೂ ಇರಲಿಲ್ಲ. ಕೊನೆಗೆ ಎಡತೊರೆಯ ಒಬ್ಬ ಸೋಮಯಾ ಜಿಗಳು ಇದಕ್ಕೆ ಶಕ್ತರೆಂದು ಅವರನ್ನು ಕರೆಸಿದರು. ದಾನಸ್ವೀಕಾರ ಹೊತ್ತಿನಲ್ಲಿ ಅವರು ಎಡಗೈ ನೀಡಲು ಪರಿವಾರದವರು ಹಾಹಾಕಾರ ಮಾಡಿದರು. ದೊರೆಗಳಿಗೂ ಕೋಪ ಬಂತು. ಬಲಗೈಯಲ್ಲಿ ದಾನ ಪ್ರತಿಗ್ರಹ ಮಾಡಿದರೆ ಶ್ರೇಯಸ್ಸಲ್ಲ, ಅನ್ಯಥಾ ಭಾವಿಸ ಬಾರದೆಂಬ ಸೋಮಯಾಜಿಗಳ ಮಾತಿಗೆ ಪರಿವಾರದವರು ವ್ಯಂಗ್ಯ ನುಡಿಗಳನ್ನಾಡಿ ದರು. ಸೋಮಯಾಜಿಗಳು ಸೂರ್ಯದೇವನ ಚಿತ್ತ ಎಂದು ಬಲಗೈಯಿಂದ ದಾನ ಸ್ವೀಕಾರ ಮಾಡಿದರು. ಹಾಗೆ ಮಾಡಲು ಬೇಡವೆಂದುದು ಏಕೆ ಎಂಬ ಮುಮ್ಮಡಿಯ ವರ ಕುತೂಹಲದ ಪ್ರಶ್ನೆಗೆ ಸೋಮಯಾಜಿಗಳು ಬೆರಣಿಯ ಚೂರನ್ನು ತರಿಸಿ ಬಲಗೈ ಯಲ್ಲಿ ಉದುರಿಸಿಕೊಂಡಾಗ ಭಗ್ ಎಂದು ಬೆಂಕಿ ಕಾಣಿಸಿಕೊಂಡಿತು. ಸಮೀಪದಲ್ಲಿದ್ದ

ವರು ಅಚ್ಚರಿಗೊಂಡರು. ಜ್ಯೋತಿಷದಲ್ಲಿ ಸ್ವಯಂಪಂಡಿತರಾದ ದೊರೆಗಳ ಮುಖ ಸಪ್ಪಗಾಯಿತು. ಭವಿಷ್ಯ ಕಣ್ಣ ಮುಂದೆ ಹಾದುಹೋಯಿತು. ಮುಂದೆ ರಾಜ್ಯ ಬ್ರಿಟಿಷರ ವಶವಾಯಿತು. (ನೆನಪುಗಳು 79–80)

2. ರಾಮಶಾಸ್ತ್ರಿಗಳು ತಮ್ಮ ಪತ್ನಿ ಗರ್ಭಿಣಿಯಾಗಿದ್ದಾಗ ಮುಂದೆ ಗಂಡು ಮಗು ಜನಿಸುವುದಾಗಿಯೂ ಆ ಮಗು ಬೆಳೆದ ಮೇಲೆ ಪೀಠಾಧಿಪತಿಯಾಗುವನೆಂದೂ ತಮ್ಮ ಶಿಷ್ಯನಿಗೆ ಹೇಳುತ್ತಾರೆ. ಮಗುವಿನ ಜನನವಾದ ಮೇಲೆ ಜಾತಕವನ್ನು ಪರಿಶೀಲಿಸಿದ ಮುಮ್ಮಡಿಯವರು ಕೂಡ ಮಗು ಪೀಠಾಧಿಪತಿಯಾಗಲಿರುವ ಅಂಶವನ್ನು ಗುರುತಿಸಿದ್ದಾಗಿ ಹೇಳಿದೆ. (ಕು.ರಾ.ಚ. ಪು. 113–115)

ಶೃಂಗೇರಿಮಠದ ಶ್ರೀ ನರಸಿಂಹಭಾರತಿಗಳು ಪಶ್ಚಿಮವಾಹಿನಿಗೆ ಬಂದಿದ್ದಾಗ ಮುಮ್ಮಡಿಯವರನ್ನು ಕಂಡು ರಾಮಶಾಸ್ತ್ರಿಗಳ ಮಗ ಶಿವಸ್ವಾಮಿಯನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಕೊಡಿಸಬೇಕೆಂದು ಕೇಳಿಕೊಂಡಾಗ, ದೊರೆಗಳು ಒಪ್ಪಿ, ಒಂದು ದಿನ ವಿದ್ವಜ್ಜನ ಸಭೆಯಲ್ಲಿ ಶಿವಸ್ವಾಮಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಶಿವಸ್ವಾಮಿಯೇ ಮುಂದಿನ ಪೀಠಾಧಿಪತಿ ಎಂದು ಘೋಷಿಸಿ ರಾಮಶಾಸ್ತ್ರಿಗಳ ಅಪ್ಪಣೆಯನ್ನು ಮೊದಲೇ ಪಡೆಯದುದಕ್ಕಾಗಿ ಅವರ ಕ್ಷಮೆ ಕೋರಿದ್ದಾಗಿಯೂ ರಾಮಶಾಸ್ತ್ರಿಗಳು ದೈವಚಿತ್ತ ಎಂದು ಸುಮ್ಮನಾದರೆಂದೂ ತಿಳಿಸಿದೆ. (ನೆನಪುಗಳು, ಪು. 77–78)

ಎಂ. ಎಸ್. ಪುಟ್ಟಣ್ಣನವರು ತಮ್ಮ ಕೃತಿಗಳಲ್ಲಿ ಮೈಸೂರಿನ ರಾಜಾಸ್ಥಾನದ ಚಿತ್ರಣವನ್ನು ಅನನ್ಯ ರೀತಿಯಲ್ಲಿ ನಿರೂಪಿಸುತ್ತಾರೆಂದು ಆಗಲೆ ಹೇಳಿದೆ. ಅವರ ಕಾದಂಬರಿಗಳು ಹಾಗೂ ಈ ಜೀವನಚರಿತ್ರೆಯಲ್ಲಿ ಇದು ಹೆಚ್ಚಿನ ಪ್ರಮಾಣದಲ್ಲಿ ಅನುಭವಕ್ಕೆ ಬರುತ್ತದೆ. ಪುಟ್ಟಣ್ಣನವರು ಅರಮನೆಯ ಸಂಪರ್ಕವನ್ನು ಹೊಂದಿದ್ದವರು. ಅವರ ಹಲವು ಗೆಳೆಯರಿಗೂ ಕೂಡ ಅರಮನೆಯ ಸಂಬಂಧವಿತ್ತು. ಜೊತೆಗೆ ಪುಟ್ಟಣ್ಣನವರಿಗೆ ಮುಮ್ಮಡಿಯವರಲ್ಲಿ ಅಸೀಮವಾದ ಗೌರವಾದರಗಳು ಇದ್ದವು. ಔದಾಸೀನ್ಯ ಯಾಂತ್ರಿಕತೆಗಳಿಂದ ದೂರರಾದ, ದೋಷದೂರರಲ್ಲವಾದರೂ ಗುಣಪಕ್ಷಪಾತಿಯಾದ ಮುಮ್ಮಡಿಯವರನ್ನು ಪುಟ್ಟಣ್ಣನವರು ಮುಕ್ತಮನಸ್ಸಿನಿಂದ ತುಂಬು ಸಂತೋಷದಿಂದ 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' ಯಲ್ಲಿ ಚಿತ್ರಿಸಿದ್ದಾರೆ.

ಕನ್ನಡದಲ್ಲಿ ಜೀವನಚರಿತ್ರೆಗಳು ವಿಪುಲವಾಗಿಲ್ಲದ ಕಾಲದಲ್ಲಿ ಕಾಲಮಾನದಿಂದ ತೀರ ಅರ್ವಾಚೀನರಾದ[5] ಕುಣಿಗಲ ರಾಮಶಾಸ್ತ್ರಿಗಳನ್ನು ಆರಿಸಿಕೊಂಡಿದ್ದು ತಮ್ಮ ಸುತ್ತಮುತ್ತಲಿನ ಸಾಮಗ್ರಿಯನ್ನು ಕಾಪಾಡಿಕೊಳ್ಳಬೇಕು, ಅವಗಣನೆ ಸಲ್ಲದು ಎಂಬ ಪುಟ್ಟಣ್ಣನವರ ಮನೋಭಾವಕ್ಕೆ ಸಾಕ್ಷಿಯಾಗಿದೆ. "ಕನ್ನಡದಲ್ಲಿ ಸ್ಥಳೀಯರೊಬ್ಬರ ಜೀವನವನ್ನು ಕುರಿತು ರಚಿತವಾದ ಚರಿತ್ರೆಗಳಲ್ಲಿ ಇದು ಮೊದಲನೆಯದೆಂದು ಹೇಳಬಹುದು"[6] ಎಂದ ಹಾ. ಮಾ. ನಾಯಕರ ಮಾತನ್ನು ಇಲ್ಲಿ ನೆನೆಯಬೇಕು.

## ಸರ್ ಸಾಲಾರ್‌ಜಂಗನ ಚರಿತ್ರೆ

1829ರಲ್ಲಿ ಜನಿಸಿದ ಸಾಲಾರ್‌ಜಂಗನ ಪೂರ್ಣ ಹೆಸರು ಮೀರ್‌ತುರಾಬ್ ಅಲ್ಲಿ ಖಾನ್ ಸಾಲಾರ್‌ಜಂಗ್ ಸಿರಾಜುದ್ದೌಲ ಮುಖ್ತಿಯಾರುಲ್ ಮುಲ್ಕ್. ಈತನನ್ನು ಬಾಲ್ಯದಲ್ಲಿ ಈತನ ಅಜ್ಜಿ ಸಾಕಿ ಜಹಗೀರಿಗ್ರಾಮದ ಆಡಳಿತವನ್ನೂ ಲೆಕ್ಕಾಚಾರಕ್ರಮ ವನ್ನೂ ತಿಳಿಸಿಕೊಟ್ಟಳು. ಈತನು ಉರ್ದು, ಫಾರ್ಸಿ, ಅರಬ್ಬೀ ಭಾಷೆಗಳನ್ನಲ್ಲದೆ ಸ್ವಲ್ಪಮಟ್ಟಿಗೆ ಇಂಗ್ಲಿಷನ್ನೂ ಕಲಿತಿದ್ದನು. ಒಂದು ಸಣ್ಣ ಕೆಲಸದಲ್ಲಿದ್ದುಕೊಂಡು ವಜೀರನಾಗಿದ್ದ ತನ್ನ ಚಿಕ್ಕಪ್ಪ ಸಿರಾಜುಲ್‌ಮುಲ್ಕ್‌ನಿಗೂ ಆಡಳಿತದಲ್ಲಿ ಹಲವು ಸಲಹೆ ಗಳನ್ನು ಕೊಡುತ್ತಿದ್ದನು. ಆದರೆ ಈ ಚಿಕ್ಕಪ್ಪ ಸಾಲಾರನಂತೆ ಪ್ರಾಮಾಣಿಕನಲ್ಲವಾದ್ದ ರಿಂದ ಇಬ್ಬರಿಗೂ ಸೌಹಾರ್ದ ಬೆಳೆಯಲಿಲ್ಲ. ಈ ವಜೀರನು ಕಾಲವಾದ ನಂತರ ನಿಜಾ ಮನ ಸುತ್ತಲಿದ್ದವರು ಚಿಕ್ಕಪ್ರಾಯದ ಸಾಲಾರನನ್ನು ವಜೀರನನ್ನಾಗಿ ಮಾಡಿದರೆ ಅವನು ತಮ್ಮ ವಶದಲ್ಲಿರುವನೆಂದು ಆಶಿಸಿ ನಿಜಾಮ ನಸೀರುದ್ದೌಲನಿಗೆ ಒತ್ತಾಯ ಮಾಡಿ ಸಾಲಾರನಿಗೆ ವಜೀರ ಪದವಿ ಬರುವಂತೆ ಮಾಡಿದರು. ಆದರೆ ಸಾಲಾರನು ತನ್ನ ರಾಜ್ಯದ ಹಿತವೊಂದನ್ನು ಮಾತ್ರ ಲಕ್ಷಿಸತಕ್ಕವನಾಗಿದ್ದುದರಿಂದ ಬಹುಬೇಗ ಅವನ ಸುತ್ತಲೂ ಹಿತಶತ್ರುಗಳ ಬಲೆ ಬಿಗಿದುಕೊಂಡಿತು. ಅವನ ಮೇಲೆ ಬಂದ, ಆಪಾದನೆ ಗಳಿಗೆ ಲೆಕ್ಕವಿಲ್ಲ. ನಿಜಾಮನನ್ನು ಬ್ರಿಟಿಷರ ಗುಲಾಮಗಿರಿಗೆ ತರುತ್ತಾನೆಂಬ ಅಪವಾದ ಕೂಡ ಹೊರಟಿತ್ತು. ಇವೆಲ್ಲವುಗಳಿಂದ ನಿಜಾಮನ ವೈರ ವಜೀರನ ಮೇಲೆ ಹೆಚ್ಚಾ ಯಿತು. ಈ ನಿಜಾಮ ಸತ್ತು ಈತನ ಮಗ ಅಫಸಲ್ಲುದ್ದೌಲನಿಗೆ ಪಟ್ಟವಾಯಿತು. ಈ ದೊರೆಗೆ ಸಾಲಾರನಲ್ಲಿ ತಂದೆಗಿಂತಲೂ ಹೆಚ್ಚಿನ ಅವಿಶ್ವಾಸವಿತ್ತು. ಹಳೆಯದೇ ಒಳ್ಳೆಯ ದೆಂಬ ಧೋರಣೆಯ ಈತ ಸಾಲಾರನ ಆಧುನಿಕವಾದ ಸುಧಾರಣೆಗಳಿಗೆ ಪ್ರೋತ್ಸಾಹ ಕೊಡಲಿಲ್ಲ. ಅವನಿಗೆ ಬಹಳ ರೀತಿಯ ನಿರ್ಬಂಧಗಳನ್ನು ಮಾಡಿದನು. ಸಾಲಾರನು ಷಿಯಾ ಪಂಗಡದವನು. ನಿಜಾಮನು ಸುನ್ನಿ ಪಂಗಡದವನು. ಈ ವೈರ ಬೇರೆ ಹೊಗೆ ಯಾಡುತ್ತಿತ್ತು. ಈ ಹೊತ್ತಿನಲ್ಲಿ ಸಿಪಾಯಿದಂಗೆ ನಡೆಯಿತು. ಸಾಲಾರನ ಮಂತ್ರಾ ಲೋಚನೆಯಿಂದ ಭಾರತದಲ್ಲಿ ಇಂಗ್ಲಿಷರ ಅಧಿಕಾರ ಉಳಿಯಲು ಸಹಾಯವಾಯಿತು. ಈ ಮಧ್ಯೆ ಸಾಲಾರನ ಕೊಲೆಯ ಯತ್ನ ನಡೆಯಿತು. ಸಾಲಾರನು ಸ್ವಲವೂ ಹೆದರ ಲಿಲ್ಲ. ನಿಜಾಮನಿಗೆ ಈತನಲ್ಲಿ ದ್ವೇಷ ಕಡಿಮೆಯಾಗದಿದ್ದರೂ ಇವನನ್ನು ಪದವಿಯಿಂದ ಇಳಿಸಲು ಮಾತ್ರ ಆಗಲಿಲ್ಲ. ಸಾಲಾರನ ಗುಣವನ್ನು ಅರಿತಿದ್ದ ಆಸ್ಥಾನಿಕರು, ರಾಣಿ ವಾಸದವರು, ಬ್ರಿಟಿಷರು ಎಲ್ಲರೂ ಇವನ ಪಕ್ಷವನ್ನೇ ವಹಿಸಿದ್ದರಿಂದ, ನಿಜಾಮನು ಬಾಗಬೇಕಾಯಿತು. ನಿಜಾಮ ಸತ್ತು ಆತನ ಮಗ ಮಹಬೂಬಲ್ಲಿಗೆ ಪಟ್ಟವಾಯಿತು. ಸಾಲಾರ್‌ಜಂಗ್ ಮತ್ತು ಷಂಷುಲ್ ಉಮರ ಎಂಬಾತ-ಇಬ್ಬರೂ ಕಾರ್ಯನಿರ್ವಾಹಕ ರಾಗಿ ನೇಮಕವಾದರು. ಸಾಲಾರ್‌ಜಂಗನಿಗೆ ರಾಜಪ್ರತಿನಿಧಿ ಪದವಿ ದೊರೆಯಿತು. ಕೆಲವೇ ದಿನಗಳ ನಂತರ ಜಿ.ಸಿ.ಎಸ್.ಐ. ಬಿರುದು ಸಿಕ್ಕಿತು. 1874 ರಲ್ಲಿ ವಿಕ್ಟೋರಿಯಾ ರಾಣಿಯಪುತ್ರ ಎಡ್ವರ್ಡ್ ಪ್ರಿನ್ಸ್ ಆಫ್ ವೇಲ್ಸ್ ಭಾರತಕ್ಕೆ ಬಂದನು. ಆತನ ಆಹ್ವಾನದ

ಮೇರೆಗೆ ಸಾಲಾರನು ಯೂರೋಪಿಗೆ ಹೋಗಿ ಬಂದನು. ರೋಂ, ನೇಪಲ್ಸ್, ಪ್ಯಾರಿಸ್, ಲಂಡನ್ ಮುಂತಾದ ಸ್ಥಳಗಳನ್ನು ನೋಡಿ, ಅನೇಕ ರೀತಿಯ ಬಿರುದು ಮರ್ಯಾದೆಗಳನ್ನು ಹೊಂದಿ ಭಾರತಕ್ಕೆ ಹಿಂದಿರುಗಿ ಬಂದನು.

ಸಾಲಾರನು ಸರಳ ಜೀವಿ, ಬುದ್ಧಿವಂತ, ದೂರದೃಷ್ಟಿಯುಳ್ಳವನು. ಎಂತಹ ಪದವಿ, ಐಶ್ವರ್ಯಗಳಿದ್ದರೂ ದುರ್ಜನರಾದವರನ್ನು ದೂರವಿಡುತ್ತಿದ್ದನು. ಯಾವ ಕಾರ್ಯವನ್ನೂ ಯೋಚಿಸಿ ಮಾಡುತ್ತಿದ್ದನು. ವ್ಯವಧಾನವಿಲ್ಲದೆ ತನ್ನ ಕೆಲಸದಲ್ಲಿ ಮಗ್ನನಾಗಿದ್ದ ಈತನ ಮೇಲೆ ಯಾವ ಅಪವಾದವೂ ನಿಲ್ಲಲಿಲ್ಲ. ಸಾಲಾರನು ಕಂದಾಯ ವಸೂಲಿಯ ಕ್ರಮವನ್ನು ಸರಿಪಡಿಸಿ ಸರ್ಕಾರಕ್ಕೆ ಮೋಸವಾಗದಂತೆ, ರೈತನಿಗೆ ಹಿಂಸೆಯಾಗದಂತೆ ಏರ್ಪಡಿಸಿದನು. ಹಲವು ಕಡೆಗಳಲ್ಲಿ ಖಜಾನೆ ಸ್ಥಾಪನೆಯಾಯಿತು, ನ್ಯಾಯಾಸ್ಥಾನ ಪೋಲೀಸ್ ಖಾತೆಗಳು ಪರಿಷ್ಕಾರಗೊಂಡವು. ಹೈದರಾಬಾದಿಗೆ ಈತನ ಕಾಲದಲ್ಲಿಯೇ ರೈಲು ಬಂದಿತು. ವಿದ್ಯಾಭ್ಯಾಸ ವೃದ್ಧಿಗೆ ಬಂತು. ಅನೇಕ ಅಣೆಕಟ್ಟುಗಳೂ ದೊಡ್ಡ ರಸ್ತೆಗಳೂ ತಯಾರಾದುವು. ಲಂಚ ಮೊದಲಾದ ಅಕ್ರಮಗಳು ನಿಂತುಹೋದವು. ಸಾಲಾರಜಂಗನ ನಿಸ್ಪೃಹತೆಗೂ ಔದಾರ್ಯಕ್ಕೂ ಸಾಕ್ಷಿಯಾಗಿ 1883 ರಲ್ಲಿ ಈತ ಕಾಲರಾ ಕಾಹಿಲೆಯಿಂದ ಸಾಯುವಾಗ ಈತನಿಗೆ ಇಪ್ಪತ್ತು ಲಕ್ಷ ರೂಪಾಯಿ ಸಾಲವಿತ್ತು.

ಸಾಲಾರಜಂಗನಿಗೂ ದಿವಾನ್ ರಂಗಾಚಾರ್ಲುವಿಗೂ[1] ಪುಟ್ಟಣ್ಣನವರು ಹೋಲಿಕೆ ವ್ಯತ್ಯಾಸಗಳನ್ನು ತಿಳಿಸುತ್ತಾರೆ. ಇಬ್ಬರಿಗೂ ಲಂಚವೆಂದರೆ ಬದ್ಧದ್ವೇಷ. ಇಬ್ಬರೂ ನಿರಾಡಂಬರರು. ಕಕ್ಷಿಗಾರರಿಗೆ ವಿಶೇಷ ಖರ್ಚಿಲ್ಲದೆ ನ್ಯಾಯ ದೊರೆಯುವಂತೆ ಏರ್ಪಾಡು ಮಾಡಿದ್ದು, ಬ್ರಿಟಿಷ್ ಸರದಾರರಲ್ಲಿ ವಿನಯವಾಗಿದ್ದು ತಮ್ಮ ಹಠ ಸಾಧಿಸುವುದು, ಯಾಜಮಾನ್ಯವನ್ನು ಬಿಟ್ಟುಕೊಡದಿರುವುದು, ಸಾಕ್ಷರತೆಗೆ ಪ್ರೋತ್ಸಾಹ, ದೇಶೀಯರಿಗೆ ಪ್ರೋತ್ಸಾಹ, ಸ್ವಾಮಿಕಾರ್ಯದಲ್ಲಿ ಪ್ರಾಮುಖ್ಯ ಇಬ್ಬರಿಗೂ ಸಮಾನ ಗುಣಗಳಾಗಿದ್ದವು. ಸಾಲಾರಜಂಗನಿಗೆ ಇದ್ದ ರಾಜ್ಯಭಾರದ ಕಷ್ಟ ರಂಗಾಚಾರಿಗೆ ಇರಲಿಲ್ಲ. ಸಾಲಾರಜಂಗನು ರಾಣಿವಾಸದವರಿಗೆ ಸಂಕೋಚವಾಗದಂತೆ ನಡೆದುಕೊಂಡರೆ, ರಂಗಾಚಾರಿಯಿಂದ ಹಲವು ಅಲ್ಪ ದುಃಖಗಳು ರಾಣಿವಾಸದವರಿಗೆ ಉಂಟಾಗುತ್ತಿತ್ತು. ಸಾಲಾರಜಂಗನಿಗೆ ಬಾಲಕನಾದ ನಿಜಾಮನ ದೇಹಸ್ಥಿತಿ ಗಮನಿಸಬೇಕಿತ್ತು. ಈ ಕಷ್ಟ ರಂಗಾಚಾರಿಗೆ ಇರಲಿಲ್ಲ. ರಾಜನ ಸಮೀಪದಲ್ಲಿ ಅಲ್ಪರು ಸೇರದಂತೆ ಮಾಡುವುದು ಸಾಲಾರಜಂಗನಿಗೆ ಸಾಧ್ಯವಾಗಲಿಲ್ಲ. ರಂಗಾಚಾರಿ ಈ ವಿಚಾರದಲ್ಲಿ ಬಹಳ ನಿಷ್ಠುರರಾಗಿದ್ದು ತಮ್ಮ ಕಾರ್ಯಸಾಧನೆ ಮಾಡಿದರು.

ಪುಟ್ಟಣ್ಣನವರ ಇತರ ಜೀವನಚರಿತ್ರೆಗಳಂತೆ ಈ ಕೃತಿಯೂ ಅವರ ವಿಚಾರಗಳ ಅಭಿವ್ಯಕ್ತಿಗೆ ಒಂದು ವೇದಿಕೆಯಾಗಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು.

1. "ಹೀಗೆ ಪರಾರ್ಥವಾಗಿ ಆತ್ಮತ್ಯಾಗ ಮಾಡಿಕೊಳ್ಳತಕ್ಕವರು ಲೋಕದಲ್ಲಿ ಅಪೂರ್ವ. ಪ್ರಪಂಚದಲ್ಲಿ ತಾನು ಹೊರತು ಉಳಿದ ಚರಾಚರವೆಲ್ಲಾ ಪರಕೀಯವೇ. ತಾನು ಎಂಬ ಪದಾರ್ಥ ಮಗನೂ ಅಲ್ಲ ಮೊಮ್ಮಗನೂ ಅಲ್ಲ. ನಮ್ಮ ಮೈ ಗಾಯವಾದರೆ

ಯಾತನೆ ನಮಗಲ್ಲದೆ ಇತರರಿಗಲ್ಲ. ಯಾತನೆಯಲ್ಲಿ ನಾವು ನರಳುವಾಗ ನಮ್ಮ ಶರೀರಕ್ಕೆ ಉಂಟಾಗುವ ಬಾಧೆ ಇತರ ಯಾರ ಶರೀರಕ್ಕೂ ಆಗುವುದಿಲ್ಲ. ಸಂತಾಪ ಅನುತಾಪಗಳನ್ನು ಬಿಟ್ಟು ಮಾತನಾಡುವಲ್ಲಿ ಮಗನನ್ನು ಚುಚ್ಚಿದರೆ ತಂದೆಯ ಮೈಯಲ್ಲಿ ರಕ್ತ ಬರುವುದಿಲ್ಲ. ಇತರರು ಎಷ್ಟೇ ಪ್ರೇಮಾಸ್ಪದರಾಗಿರಲಿ, ತಾನು ಎನ್ನುವುದು ದೊಡ್ಡದು ಎಂದು ಭಾವಿಸುತ್ತಾರೆ. ಇದು ಮನುಷ್ಯ ಸಾಮಾನ್ಯರಲ್ಲಿ ಸಹಜವಾದ ಧರ್ಮವಾಗಿದೆ. ಹೀಗಿದ್ದರೂ ಒಬ್ಬರಿಗೋಸ್ಕರ ಮತ್ತೊಬ್ಬರು ಪ್ರಾಣತ್ಯಾಗ ಮಾಡಿಕೊಳ್ಳುವ ಪದಾರ್ಥ ಪ್ರವರ್ತನೆಯು ಮುಸಲ್ಮಾನರಲ್ಲಿರುವ ಹಾಗೆ ಇತರರಲ್ಲಿಲ್ಲವೆಂದು ಅನುಭವದಿಂದ ಹೇಳಬಹುದಾಗಿದೆ." (ಸ. ಜಂ. ಚ. ಪು. 16–17)

2. "ಕಿವಿ ಹಿತ್ತಾಳೆಯಾದರೆ ಮೈಯೆಲ್ಲಾ ಚಿನ್ನವಾದರೂ ಉಪಯೋಗವಿಲ್ಲ. ಹೇಳಿದವರ ನಾಲಿಗೆಯನ್ನು ಸೀಳಬೇಕು ಎಂದರೆ ಕೇಳಿದವರ ಕಿವಿಯನ್ನು ಮೊದಲು ಕುಯ್ಯಬೇಕು ಎಂಬ ನಾಣ್ಣುಡಿ ಕೇವಲವಾಗಿ ಅನುಭವದ ಸಾರವೆನ್ನಬೇಕು. ಕೇಳತಕ್ಕವರು ಇದ್ದಷ್ಟೂ ಹೇಳತಕ್ಕವರು ಹೆಚ್ಚುವರು." (ಸ. ಜಂ. ಚ. ಪು. 46–47)

ದೇಶದ ಆಡಳಿತವನ್ನು ವಿಚಕ್ಷಣತೆಯಿಂದ ನಡೆಸುವವರಲ್ಲಿ ಪುಟ್ಟಣ್ಣನವರಿಗೆ ಇದ್ದ ಗೌರವ ಈ ಕೃತಿಯಲ್ಲಿ ಸ್ಫುಟಗೋಚರವಾಗಿದೆ. ನಿಸ್ಪೃಹರಾದ ಅಧಿಕಾರಿಗಳಲ್ಲಿ ಅವರಿಗೆ ಗೌರವ, ಕೃತಜ್ಞತೆಗಳು ಉಕ್ಕಿ ಹರಿಯುತ್ತಿದ್ದವು. "His ramarkable talent for state craft and true political insight, which eminently deserved the high esteem with which he was regarded by a number of British statesmen, are of no mean order." (ಸ.ಜಂ.ಚ. preface p. i) ಎಂಬ ಅವರದೇ ಮಾತು ಗಮನಾರ್ಹವಾದುದು.

### ಮಹಮೂದ್ ಗವಾನನ ಚರಿತ್ರೆ

ಮಹಮೂದನು 1408ರಲ್ಲಿ ಗೀಲಾನ್ ದೇಶದ ಗವಾನ್ ಎಂಬ ಗ್ರಾಮದಲ್ಲಿ ಹುಟ್ಟಿದನು. ತಂದೆಯ ಹೆಸರು ಖಾಜಾಮೊಹಮ್ಮದ್. ಗವಾನನು ಯುದ್ಧಪ್ರಮೇಯ ಹಾಗೂ ರಾಜಕೀಯ ವ್ಯಾಪಾರಗಳಲ್ಲಿ ಪರಿಶ್ರಮವುಳ್ಳವನಾಗಿದ್ದನು. ಗೀಲಾನ್ ದೇಶದ ಮಂತ್ರಿಯಾಗಿದ್ದ ತನ್ನ ಚಿಕ್ಕಪ್ಪ ಖಾಜಾ ಷಂಷುದಿನನಿಗೆ ಮಹಮೂದ್ ಗವಾನನು ರಾಜ್ಯಭಾರ ವಿಚಾರದಲ್ಲಿ ಬಹಳ ಸಹಾಯಮಾಡಿದಾಗ ಅಲ್ಲಿನ ದೊರೆ ಗವಾನನ ಬುದ್ಧಿವಂತಿಕೆಗೆ ಮೆಚ್ಚದೆ, ದ್ವೇಷ ಸಾಧಿಸುವುದನ್ನು ಕಂಡು ಗವಾನನು ದೇಶತ್ಯಾಗ ಮಾಡಿ ಮಕ್ಕಾಪಟ್ಟಣಕ್ಕೆ ಹೋದನು. ದೇಶಾಟನ, ಗ್ರಂಥವ್ಯಾಸಂಗ ಹಾಗೂ ವ್ಯಾಪಾರಗಳಲ್ಲಿ ತೊಡಗಿದ್ದು 1455ರಲ್ಲಿ ಹಿಂದುಸ್ಥಾನದ ಖಾಬೋಳ್ ರೇವುಪಟ್ಟಣಕ್ಕೆ ಬಂದು ಅಲ್ಲಿಂದ ಬಹಮನಿ ದೊರೆಗಳ ರಾಜಧಾನಿಯಾದ ಬೀದರಿಗೆ ಬಂದನು. ಅಲ್ಲಿ ಅಲ್ಲಾವುದೀನನು ಸುಲ್ತಾನನಾಗಿದ್ದನು. ಗವಾನನ ಪಾಂಡಿತ್ಯ, ರಾಜಕೀಯ ಚಾತುರ್ಯಗಳಿಗೆ ರಾಜಾಸ್ಥಾನದಲ್ಲಿ ಬೆಲೆ ಸಿಕ್ಕಿತು. ಅಲ್ಲಾವುದೀನನ ಮಗ ಹುಮಾಯೂನನು ಪಟ್ಟಕ್ಕೆ ಬಂದ

ಮೇಲೆ ಅವನ ಕ್ರೌರ್ಯಕ್ಕೆ ಹೇಸಿ ಗವಾನನು ರಾಜೀನಾಮೆ ಕೊಡುವುದರಲ್ಲಿ ದೊರೆ ಸತ್ತು ಎಂಟುವರ್ಷದ ಅವನ ಮಗ ದೊರೆಯಾದನು. ಗವಾನನ ವಿಚಕ್ಷಣೆಯಿಂದ ರಾಜ್ಯವೆಲ್ಲ ಒಂದು ಕಟ್ಟುಪಾಡಿಗೆ ಬಂತು. ಈ ನಿಜಾಮನೂ ಸತ್ತು ಅವನ ಒಂಬತ್ತು ವರುಷದ ತಮ್ಮನಿಗೆ ಪಟ್ಟವಾಯಿತು. ಗವಾನನು ದೊರೆಯ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡಿ ಅವನನ್ನು ಪಂಡಿತನನ್ನಾಗಿಸಿದನು.

ಆಸ್ಥಾನದಲ್ಲಿ ದಖನಿ ಮುಸಲ್ಮಾನರಿಗೂ ವಿದೇಶೀ ಮುಸಲ್ಮಾನರಿಗೂ ಸದಾ ಒಳಜಗಳಗಳಿರುತ್ತಿದ್ದವು. ಗವಾನನ ಪ್ರಾಬಲ್ಯ ಹೆಚ್ಚಾದಂತೆ ಇಬ್ಬರೂ ಇವನನ್ನು ದ್ವೇಷಿಸುತ್ತಿದ್ದರು. ಗವಾನನ ಬಿಗಿಯಾದ ಅಪ್ಪಣೆಗಳಿಂದ ಸೇನೆಯವರಿಗೂ ಇವನನ್ನು ಕಂಡರಾಗುತ್ತಿರಲಿಲ್ಲ. ಆಡಳಿತದಲ್ಲಿ ಅನುಕೂಲತೆಗಾಗಿ ಗವಾನನು ರಾಜ್ಯವನ್ನು ಮೊದಲಿನಂತೆ ನಾಲ್ಕು ಭಾಗಗಳಾಗಿಡದೆ ಎಂಟುಭಾಗಗಳಾಗಿಸಿದ್ದರಿಂದ ನಿಜಾಮ ಷಹ ಎಂಬ ಅಧಿಕಾರಿಗೆ ಸೇರಿದ್ದ ರಾಜ್ಯವಿಸ್ತಾರ ಕಡಮೆಯಾಯಿತು. ಇದರಿಂದ ಆತನ ಮನಸ್ಸು ವೈರಕಲುಷಿತವಾಯಿತು.ಆತನೂ ಪಿತೂರಿಯಲ್ಲಿ ಸೇರಿಕೊಂಡನು. ಗವಾನನ ಶತ್ರುಗಳು, ಆತನು ಓಢ್ರ ದೇಶದ ದೊರೆಗೆ ರಾಜ್ಯಲಾಭಕ್ಕಾಗಿ ಕಾಗದ ಬರೆದಂತೆ ಒಂದು ಪತ್ರಸೃಷ್ಟಿ ಮಾಡಿ ಗವಾನನ ಭೃತ್ಯನ ನಂಬಿಕೆ ಸಂಪಾದಿಸಿ ಮೊಹರುಮಾಡಿಸಿ ಅದು ಗವಾನನ ಬಳಿ ಸಿಕ್ಕಿತೆಂದು ಹೇಳಿದರು. ಅವಿವೇಕಿಯಾದ ದೊರೆಯು ಗವಾನನನ್ನು ಕರೆಸಿದನು. ಗವಾನನು ಆಸ್ಥಾನದಲ್ಲಿ ದೊರೆ ತೋರಿಸಿದ ಕಾಗದದ ಮೊಹರು ಮಾತ್ರ ತನ್ನದೆಂದನು. ದೊರೆ ನಂಬದೆ ಅವನ ಪ್ರಾಣವನ್ನು ಆಗಲೇ ತೆಗೆಯಲು ಆಜ್ಞೆಮಾಡಿದನು. ಗವಾನನಿಗೆ ಆಗ 78 ವರ್ಷ. ಬಹಮನಿ ರಾಜ್ಯವು ಇನ್ನು ಏಳುವರುಷಗಳಿಗೆ ಹಾಳಾಗುವುದು ನಿಶ್ಚಯವೆಂದು ಗವಾನನು ಹೇಳಿದನು. ಅವನನ್ನು ಆಗಲೇ ವಧಿಸಲಾಯಿತು. ಗವಾನನ ಕೊಲೆಯಾದ ಮೇಲೆ ಅವನಿಗೂ ಮೋಸದ ಪತ್ರಕ್ಕೂ ಯಾವ ಸಂಬಂಧವೂ ಇಲ್ಲವೆಂಬುದು ಬೆಳಕಿಗೆ ಬಂತು. ಆತನ ಬಳಿ ಹೆಚ್ಚು ಹಣವೂ ಇರಲಿಲ್ಲವೆಂಬುದೂ ತಿಳಿಯಿತು. ದೊರೆ ಬಹುವಾಗಿ ಸಂಕಟ ಪಟ್ಟನು. ಗವಾನನ ಮಾತಿನಂತೆ ಏಳುವರುಷಗಳಲ್ಲಿ ಬಹಮನಿರಾಜ್ಯ ಹಾಳಾಯಿತು.

ಗವಾನನು ರಾಜಕಾರಣ, ವ್ಯಾಪಾರಗಳಲ್ಲಿ ಮಗ್ನವಾದಂತೆ ಕಂಡರೂ ಅವನ ಮನಸ್ಸು ಅದರಲ್ಲಿ ಪ್ರವೃತ್ತವಾಗಿರದೆ ಕರ್ತವ್ಯಪ್ರಜ್ಞೆಯಿಂದ ಮಾತ್ರ ಅವನು ಆಯಾ ಕಾರ್ಯದ ನಿರ್ವಹಣೆಯಲ್ಲಿ ನಿರತನಾಗಿದ್ದನು. ಅವನದು ಪಾರಲೌಕಿಕ ವಿಚಾರಗಳಲ್ಲಿ ಮಾತ್ರ ಆಸಕ್ತಿ. ಪಂಡಿತರು, ಜ್ಞಾನಿಗಳು, ನಂಟರುಗಳಿಗೆ, ತನ್ನ ವ್ಯಾಪಾರದಿಂದ ಬಂದ ಲಾಭವನ್ನು ಹಂಚುತ್ತಿದ್ದನು. ದೊರೆಯ ಸಂಬಳವನ್ನೆಲ್ಲಾ ಪಂಡಿತರಿಗೆ, ಬಡವರಿಗೆ ವಿನಿಯೋಗಿಸಿದನು. ಸ್ವಂತಬಂಡವಾಳದಿಂದ ಮಾಡಿದ ವ್ಯಾಪಾರದಿಂದ ಸಾಧಾರಣ ಜೀವನವನ್ನು ನಡೆಸಿದನು. ಒಮ್ಮೆ ತನ್ನ ಆಸ್ತಿಯನ್ನೆಲ್ಲಾ ದೊರೆಗೆ ಒಪ್ಪಿಸಿ ಇದೆಲ್ಲ ಆತನದೇ ಎಂದಾಗ ದೊರೆ ಬಹಳವಾಗಿ ಮೆಚ್ಚಿ ಪುನಃ ಅವನಿಗೇ ಕೊಟ್ಟನು. ಹಲವು ದೊರೆಗಳು ಈತನನ್ನು ತಮ್ಮ ಮಂತ್ರಿಯಾಗಿಸಿಕೊಳ್ಳಲು ಯತ್ನಿಸಿದರು. ಗವಾನನ ನಿಷ್ಠೆಯಿಂದ

ಅದು ಕೈಗೂಡಲಿಲ್ಲ. ಗವಾನನ ಮೂವರು ಗಂಡುಮಕ್ಕಳೂ ಒಳ್ಳೆಯ ಉದ್ಯೋಗದಲ್ಲಿ ನೆಲೆಯಾಗಿದ್ದರು. ಗವಾನನು ಖಗೋಳಶಾಸ್ತ್ರ, ವೈದ್ಯಶಾಸ್ತ್ರ, ಗಣಿತಶಾಸ್ತ್ರಗಳಲ್ಲಿ ಪರಿಣಿತನಾಗಿದ್ದನಲ್ಲದೆ, ಕಾವ್ಯ ಗದ್ಯಗ್ರಂಥಗಳನ್ನು ಲಕ್ಷಣಗ್ರಂಥಗಳನ್ನೂ ಪಾರ್ಸಿ ಹಾಗೂ ಅರಬ್ಬೀ ಭಾಷೆಗಳಲ್ಲಿ ಬರೆದನು. ಬೀದರಿನಲ್ಲಿ ಬಹುದೊಡ್ಡ ಪಾಠಶಾಲೆಯನ್ನು ಕಟ್ಟಿಸಿದನು. ತನ್ನ ಕಡೆ ಇದ್ದ ಸೇನಾಪತಿಗಳ ಸಹಾಯದಿಂದ ರಾಜನನ್ನು ಅಡಗಿಸುವುದು ಗವಾನನಿಗೆ ಅತಿಸುಲಭವಾಗಿದ್ದರೂ ಧರ್ಮಕ್ಕೆ ಕಟ್ಟುಬಿದ್ದು ಗವಾನನು ಜೀವಕ್ಕೇ ಎರವಾದನು. "ಲೋಕಲಕ್ಷ್ಯವಿಲ್ಲದೆ ಧರ್ಮಾಧರ್ಮ ವಿವೇಚನೆ ಇಲ್ಲದೆ ಅಹಂಕಾರದಿಂದ ಮೆರೆಯುವ ಅರಸರಿಗೆ ಉಪಕಾರ ಮಾಡುತೇನೆಂದು ಹೋದ ಮಂತ್ರಿಗಳ ಪಾಡೆಲ್ಲಾ ಇಷ್ಟೇ ಸರಿ." (ಮ. ಗ. ಚ. ಪು. 58) ಎಂದು ಪುಟ್ಟಣ್ಣನವರು ಉದ್ಗರಿಸಿದ್ದಾರೆ.

'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' ಯಲ್ಲಿರುವಷ್ಟಲ್ಲವಾದರೂ ಇಲ್ಲೂ ಕೂಡ ಆಸ್ಥಾನದ ಕೆಲವು ವಿವರಗಳು ಕಾಣುತ್ತವೆ. ಬಹಮನಿ ನವಾಬರ ದರಬಾರಿನ ಶ್ರೀಮಂತಿಕೆ, ಅಲ್ಲಿನ ಅಧಿಕಾರಿಗಳು, ಬಿರುದುಗಳು, ಉಡುಪುಗಳು, ಇತ್ಯಾದಿಗಳನ್ನು ಪುಟ್ಟಣ್ಣನವನು ತಿಳಿಸಿದ್ದಾರೆ. ದರಬಾರಿನ ಒಳ ಜಗಳಗಳು, ನಿಸ್ಪೃಹರಿಗೆ ಆಗುತ್ತಿದ್ದ ಚಿತ್ರಹಿಂಸೆ, ಇವುಗಳ ಚಿತ್ರಣವಿದೆ. ಅಧಿಕಾರ ಹೂವಿನ ಹಾಸಿಗೆಯಲ್ಲ ಎಂಬ ಅರಿವಿದ್ದ ಗವಾನ, ಹಿತ್ತಾಳೆ ಕಿವಿಯ ದೊರೆ, ಹೊಟ್ಟೆಕಿಚ್ಚಿನ ಅವತಾರಗಳಾದ ಸಭಾಸದರು— ಮುಂತಾದವರ ಚಿತ್ರಣ ರಾಜಾಸ್ಥಾನದ ಸಾಮಾನ್ಯವಿಚಾರವಾಗಿದ್ದುದನ್ನು ಗುರುತಿಸಿದ್ದಾರೆ.

ಹಿಂದಿನ ಕೃತಿಗಳಂತೆ 'ಮಹಮೂದ್ ಗವಾನನ ಚರಿತ್ರೆ' ಯಲ್ಲಿ ಕೂಡ ಕಠಿಣ ನಿಯಮಗಳಿಗೆ ಒಗ್ಗಿದ ಪುಟ್ಟಣ್ಣನವರ ಮನಸ್ಸು ಹಲವು ಚರ್ಚೆಗಳಲ್ಲಿ ತೊಡಗುವುದನ್ನು ಕಾಣಬಹುದು.

"ಈ ಲೋಕ ವ್ಯವಹಾರದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡು ಇರತಕ್ಕ ಜನರ ನಡತೆಗೆ ನೀತಿ ಎಂಬ ಕಟ್ಟು ಉಂಟು.ಇಂಥಾ ನೀತಿಗೆ ಸರ್ವರ ಸೌಖ್ಯವೇ ಮೂಲಾಧಾರ. ಇದು ಸ್ವಸೌಖ್ಯವೆಂತಲೂ ಪರಸೌಖ್ಯವೆಂತಲೂ ಎರಡು ಭಾಗವಾಗಿದೆ. ಆತ್ಮೀಯವಾದ ಸೌಖ್ಯವು ತಕ್ಕ ಮಟ್ಟಿಗೆ ಇರಲೇಬೇಕು. ಮನುಷ್ಯನೇ ಮೊದಲಾದ ಸಮಸ್ತ ಪ್ರಾಣಿಗಳಲ್ಲಿಯೂ ಈ ಗುಣ ಇದ್ದೇ ಇರುವುದು. ಅದು ಇಲ್ಲದಿದ್ದರೆ ಪ್ರಾಣಿವರ್ಗವೇ ಮೂಲೋತ್ಪಾಟನವಾಗುವುದು. ಈ ಗುಣವು ಸಸ್ಯವರ್ಗದಲ್ಲಿಯೂ ಉಂಟು. ಆದರೆ ಪ್ರಾಣಿಗಳಲ್ಲೆಲ್ಲಾ ಶ್ರೇಷ್ಠವಾದ ಮನುಷ್ಯನಲ್ಲಿ ಈ ಗುಣಕ್ಕೆ ಮಿತಿಯುಂಟು. ಈ ಮಿತಿಯೇ ನೀತಿಯ ಸಾರ." (ಮ. ಗ. ಚ. ಉಪೋದ್ಘಾತ, ಪು. viii)

"ರಾಜಾರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ" ಎಂಬುವ ವಾಕ್ಯದಲ್ಲಿ ಪ್ರಜೆಗಳು ಮಾಡಿದ ಪಾಪ ದೊರೆಗೂ, ದೊರೆಮಾಡಿದಪಾಪ ಮಂತ್ರಿಗೂ, ಬರುವುದೆಂದು ವ್ಯಕ್ತವಾಗುವುದು. ಅರಸು ದುಷ್ಟರನ್ನು ನಿಗ್ರಹ ಮಾಡದಿದ್ದರೂ, ಶಿಷ್ಟರನ್ನು ಪರಿಪಾಲನೆ ಮಾಡದಿದ್ದರೆ ಅವನಿಗೆ ಆ ಸಂಬಂಧದ ದೋಷ ಪ್ರಾಪ್ತವಾಗುವುದು;

ದೊರೆಗೆ ಧರ್ಮಾಧರ್ಮಗಳನ್ನು ತಿಳಿಸತಕ್ಕ ಕೆಲಸ ರಾಜಗುರುವಾದ ಪುರೋಹಿತನ ದಾಗಿರುತ್ತೆ. ಅಂತರಾತ್ಮನೋಪಾದಿಯಲ್ಲಿದ್ದುಕೊಂಡು ಪ್ರಭುವಿಗೆ ವಿವೇಕವನ್ನು ಹೇಳ ತಕ್ಕವನಾದ್ದರಿಂದ ಆ ಪುರೋಹಿತನ ಸ್ಥಾನಕ್ಕೆ ಮಂತ್ರಿ ಎಂದೇ ತಿಳಿದುಕೊಳ್ಳಬೇಕು. ಆದ್ದರಿಂದ ರಾಜ ಕೊಡುವ ಜೀವಿಕವನ್ನು ಉಪಯೋಗಿಸಿಕೊಂಡ ಮೇಲೆ ಆ ಸಂಬಂಧದ ದೋಷವೆಲ್ಲಾ ಮಂತ್ರಿಗೆ ಬಂದಂತಾಗುವುದು. ಈ ಕಾರಣದಿಂದ ರಾಜ ಕೊಡುವ ಜೀವಿಕವನ್ನು ಉಪಯೋಗಿಸದೆ ಇದ್ದರೆ ರಾಜನ ಪಾಪವು ಕೂಡಿದ ಮಟ್ಟಿಗೆ ತನಗೆ ಪ್ರಾಪ್ತವಾಗಲಾರದೆಂದು ಎಣಿಸಿ ವಿರಾಗಿಯಾಗಿ ಬಾಳುವ ಮಂತ್ರಿಯೇ ಮಹಾತ್ಮ ನೆನಿಸುವನು.” (ಮ. ಗ. ಚ. ಪು. 41)

ಪುಟ್ಟಣ್ಣನವರು ಧರ್ಮ ಹಾಗೂ ಸರಕಾರಗಳ ಮಹತ್ವವನ್ನು ಬಲ್ಲವರಾಗಿದ್ದರು. ಆದ್ದರಿಂದಲೇ ಕಾಂಪೂಷ, ಕುಣಿಗಲ ರಾಮಶಾಸ್ತ್ರಿಗಳನ್ನು ಮುಂತಾದವರನ್ನು ಕುರಿತು ಮಾತ್ರವಲ್ಲದೆ, ಸಾಲಾರ್‌ಜಂಗ್ ಮತ್ತು ಮಹಮೂದ್ ಗವಾನನಂಥವರನ್ನು ಕುರಿತೂ ಬರೆದರು. ರೆವಿನ್ಯೂ ಖಾತೆಯ ಅಧಿಕಾರ ಸ್ಥಾನದಲ್ಲಿ ಕಾರ್ಯನಿರ್ವಹಣೆ ಮಾಡಿದ್ದ ರಿಂದ ಅವರಿಗೆ ಆಡಳಿತ ವಿಚಾರದ ಆಯಕಟ್ಟಿನ ವಿಚಾರಗಳು ಚೆನ್ನಾಗಿ ತಿಳಿದಿದ್ದವು. ಆಡಳಿತದಲ್ಲಿ ಅತ್ಯುನ್ನತವಾದ ದಿವಾನಗಿರಿಯಿಂದ ಸಾಧಿಸಬಹುದಾದ ಕಾರ್ಯಬಾಹುಲ್ಯ ಅವರಿಗೆ ಸ್ಪಷ್ಟವಾಗಿ ತಿಳಿದಿತ್ತು. ಸ್ವತಃ ಅವರಿಗೇ ದಿವಾನರಾಗುವ ಅರ್ಹತೆ ಸಾಧ್ಯತೆಗಳೆರಡೂ ಇದ್ದುದಾಗಿಯೂ ಪ್ರಾಮಾಣಿಕರೂ ಖಂಡಿತವಾದಿಗಳೂ ಆಗಿದ್ದು ಮೇಲಧಿಕಾರಿಗಳ ದ್ವೇಷವನ್ನು ಸಂಪಾದಿಸಿದ್ದರಿಂದ ದಿವಾನಪದವಿ ಪುಟ್ಟಣ್ಣನವರಿಗೆ ದಕ್ಕಲಿಲ್ಲವೆಂದೂ ಹೇಳಲಾಗಿದೆ.[8] ಪುಟ್ಟಣ್ಣನವರಿಗೆ ದಿವಾನರ ಹುದ್ದೆ ಸಿಕ್ಕಿದ್ದರೆ ಅವರು ಪ್ರಮಾಣಿಕರಾದ ದಿವಾನರಾಗಿ ಅಪಾರವಾದ ದುಡಿಮೆಯನ್ನು ಮಾಡುತ್ತಿದ್ದರು. ಹಾಗಾಗಲಿಲ್ಲವೆಂದು ಅವರಿಗೆ ಆ ಪದವಿ ಹುಳಿದ್ರಾಕ್ಷಿಯಾಗಲಿಲ್ಲ, ಅದನ್ನು ತುಚ್ಛೀ ಕರಿಸಲಿಲ್ಲ, ಆ ಅಧಿಕಾರಸ್ಥಾನದಲ್ಲಿ ನಂಬಿಕೆ ತಪ್ಪಲಿಲ್ಲ, ಪ್ರಾಮಾಣಿಕರಾದ ದಿವಾನರ ಬಗೆಗೆ ಅವರ ಗೌರವ ಕಡಿಮೆಯಾಗಲಿಲ್ಲ. ಇಂಥ ಸಮದೃಷ್ಟಿಯುಳ್ಳ ಮನಸ್ಸಿನ ಫಲವಾಗಿ ಸಾಲಾರ್‌ಜಂಗ್ ಮತ್ತು ಮಹಮೂದ್ ಗವಾನರನ್ನು ಕುರಿತ ಜೀವನಚರಿತ್ರೆ ಗಳು ಲಭ್ಯವಾದುವು.

**ಛತ್ರಪತಿ ಶಿವಾಜಿ ಮಹಾರಾಜ**

ಶಿವಾಜಿಯು ಸ್ವರಾಜ್ಯಸ್ಥಾಪನೆ ಹಾಗೂ ಆರ್ಯಧರ್ಮ ರಕ್ಷಣೆ ಈ ಗುಣಗಳಿಂದ ಭಾರತ ಚರಿತ್ರೆಯಲ್ಲಿ ಒಂದು ಧೀರೋದಾತ್ತ ಪಾತ್ರವನ್ನು ನಿರ್ವಹಿಸಿದ ಶೂರನಾಗಿ ಕಾಣುತ್ತಾನೆ. ಈ ಗುಣಗಳು ಪುಟ್ಟಣ್ಣನವರನ್ನು ಸೂಜಿಗಲ್ಲಿನಂತೆ ಆಕರ್ಷಿಸಿದ್ದರೆ ಅಚ್ಚರಿಯಿಲ್ಲ. ಸನಾತನ ಧರ್ಮದಲ್ಲಿ ಶ್ರದ್ಧೆ, ನಾಡುನುಡಿಗಳ ಅಭಿಮಾನ ಪುಟ್ಟಣ್ಣ ನವರ ಜೀವನ ಬರಹಗಳಲ್ಲಿ ಹಾಸು ಹೊಕ್ಕಾದದ್ದು. ಈ ಜೀವನ ಸಿದ್ಧಾಂತಗಳು ಶಿವಾಜಿಯಲ್ಲಿ ಕಾಣಿಸಿಕೊಂಡದ್ದು ಪುಟ್ಟಣ್ಣನವರಿಗೆ ತಮ್ಮ ಆಸಕ್ತಿಯನ್ನು ಅತ್ತ ಹರಿ

ಬಿಡಲು ಒಂದು ಕಾರಣ. ಜೊತೆಗೆ ಪುಟ್ಟಣ್ಣನವರ ಬಾಲ್ಯದಲ್ಲಿ ಕನ್ನಡ ಪ್ರದೇಶಗಳಲ್ಲಿ ಮರಾಠಿಯ ಪ್ರಾಬಲ್ಯವಿತ್ತು. "ಈಗ ಇಂಗ್ಲಿಷ್ ಭಾಷೆ ಹೇಗೋ, ಆಗ ಮಹಾರಾಷ್ಟ್ರ ಅಥವಾ ಹಿಂದವಿಯು ಹಾಗೆ, ರಾಜಭಾಷೆ ಎನ್ನಿಸಿಕೊಂಡಿತ್ತು. ರಾಜ್ಯಭಾರದಲ್ಲಿ ನಡೆಯುತ್ತಿದ್ದ ಕಾಗದ ಪತ್ರಗಳೆಲ್ಲಾ ಹಿಂದವಿಯಲ್ಲಿಯೇ ನಡೆಯುತ್ತಿತ್ತು. ಸರ್ಕಾರದ ಉದ್ಯೋಗಗಳು ಹಿಂದವಿ ಬಲ್ಲವರಿಗೇ ಹೆಚ್ಚಾಗಿ ದೊರೆಯುತಿದ್ದವು."(ಮಾ. ಮ. ಪು. 39-40) ಎಂದು ಪುಟ್ಟಣ್ಣನವರೇ ಹೇಳಿದ್ದಾರೆ. ಪುಟ್ಟಣ್ಣನವರಿಗೆ ಮರಾಠಿ ಚೆನ್ನಾಗಿ ಬರುತ್ತಿತ್ತು. ಮನಸ್ಸಿನಲ್ಲಿ ಮಾಡುವ ಲೆಕ್ಕಾಚಾರವನ್ನು ಅವರು ಮರಾಠಿಯಲ್ಲೇ ಮಾಡುತ್ತಿದ್ದರು. ಮರಾಠಿ ಬಲ್ಲವರೊಡನೆ ಮರಾಠಿಯಲ್ಲಿಯೇ ಸಂಭಾಷಿಸುತ್ತಿದ್ದರು. ಮರಾಠಿಯಲ್ಲಿನ ಗ್ರಂಥಗಳನ್ನು ಬಖೈರುಗಳನ್ನು ಓದುವ ಅವಕಾಶಗಳು ಅವರಿಗೆ ಹೇರಳವಾಗಿದ್ದುವು. ಮರಾಠಿವೀರರ ಬಗೆಗೆ ತಿಳಿಯುವ ಅವಕಾಶ ಲಭಿಸಿತು. ಪುಟ್ಟಣ್ಣನವರಿಗೆ ಭಾಷಾಂಧತೆಯಾಗಲೀ ಬೇರೆ ಅಡ್ಡಿಗಳಾಗಲೀ ಇರಲಿಲ್ಲ. ಇಂಥ ಪರಿಣತ ಮನಸ್ಸಿನ ಒಂದು ಬರಹ 'ಛತ್ರಪತಿ ಶಿವಾಜಿ ಮಹಾರಾಜ.'

ಈ ಅಪ್ರಕಟಿತ [9] ಜೀವನಚರಿತ್ರೆ ಪುಟ್ಟಣ್ಣನವರ ಹಸ್ತಾಕ್ಷರದಲ್ಲಿ ಫುಲ್‌ಸ್ಕೇಪ್ ಕಾಗದದಲ್ಲಿ 95 ಪುಟಗಳಿವೆ. ಕಥಾನಾಯಕನಾದ ಶಿವಾಜಿಗೆ ಸಂಬಂಧಿಸಿದಂತೆ ಬಹಳ ಸಾಮಗ್ರಿಯೇನೂ ಇಲ್ಲ. ಶಿವಾಜಿಯ ಹೋರಾಟದ ಜೀವನದ ಪ್ರಮುಖ ಘಟನೆಗಳು, ಹಿನ್ನೆಲೆಯಲ್ಲಿ ದೇಶದ ಪರಿಸ್ಥಿತಿಯ ಒಂದು ಮಸುಕು ಚಿತ್ರಣ ಮಾತ್ರ ಕಾಣುತ್ತದೆ. ಪ್ರಾರಂಭದಲ್ಲಿ ಶಿವಾಜಿ ಹುಟ್ಟುವ ಮುಂಚೆ ದೇಶದಲ್ಲಿದ್ದ ಪರಿಸ್ಥಿತಿಯನ್ನು ಕುರಿತು ಕೆಲವು ಮಾತುಗಳನ್ನು ಹೇಳಿದ್ದಾರೆ.

ಶಿವಾಜಿಯು 1627 ರಲ್ಲಿ ಶಿವನೇರ್ ಎಂಬ ಸ್ಥಳದಲ್ಲಿ ಜನಿಸಿದನು. ತಂದೆ ಷಹಜಿ, ತಾಯಿ ಜೈಜಾಬಾಯಿ. ಶಿವಾಜಿಯ ತಂದೆ ಹಾಗೂ ಜೈಜಾಬಾಯಿಯ ತಂದೆ ಈ ಇಬ್ಬರ ನಡುವಿನ ವಿರಸ ಶಿವಾಜಿಯ ತಾಯಿತಂದೆಗಳ ನಡುವೆ ಬಿರುಕಿಗೆ ಕಾರಣವಾಗಿ ಷಹಜಿಯು ತುಕಾಬಾಯಿ ಮೋಹಿತೆ ಎಂಬುವವಳನ್ನು ಮದುವೆಯಾಗಿ ಬೇರೆ ವಾಸಿಸಲು ಹೋದಾಗ, ಜೈಜಾಬಾಯಿ ಹಾಗೂ ಶಿವಾಜಿ ಇಬ್ಬರನ್ನೂ ದಾದಾಜಿ ಕೊಂಡದೇವನ ಪೋಷಣೆಯಲ್ಲಿಡಲಾಯಿತು. ವಿಫಲದಾಂಪತ್ಯದಿಂದ ಕದಡಿದ ತಾಯಿ ಜೈಜಾಬಾಯಿಯ ಮನಸ್ಸು ಹೇಗೆ ವೈರಾಗ್ಯಪರವಾಯಿತು, ಇದರಿಂದ ಮಗ ಶಿವಾಜಿಯ ಜೀವನದಲ್ಲಿ ಧರ್ಮ, ಶಿಸ್ತುಗಳಿಗೆ ಹೇಗೆ ಒತ್ತು ದೊರಕಿತು ಎನ್ನುವುದನ್ನು ಪುಟ್ಟಣ್ಣನವರು ಹೇಳಿದ್ದಾರೆ. ಶಿವಾಜಿಯ ವ್ಯಕ್ತಿತ್ವವನ್ನು ರೂಪಿಸಿದ್ದು ಈ ಧೀರ ಮಹಿಳೆಯೇ. ದಾದಾಜಿ ಕೊಂಡದೇವನ ಶಿಸ್ತಿನ ಪರಿಸರ ಶಿವಾಜಿಯ ಬಾಲ್ಯದಲ್ಲಿ ಬಹು ಪ್ರಭಾವ ಬೀರಿದ ಇನ್ನೊಂದು ಸಂಗತಿಯಾಗಿದೆ.

ಶಿವಾಜಿ ಬೆಳೆದಂತೆ ಸುತ್ತಣ ಪರಿಸ್ಥಿತಿಯ ಅರಿವಾಗತೊಡಗಿತು. ಅವನಲ್ಲಿದ್ದ ಅದಮ್ಯ ಸಾಹಸ, ಉತ್ಸಾಹಗಳನ್ನು ಕಟ್ಟಿನಲ್ಲಿಡಲು ದಾದಾಜಿಗೂ ಸಾಧ್ಯವಾಗಲಿಲ್ಲ. ಕಾಲುಬಲದ ಸೇನೆಯನ್ನು ಕಟ್ಟಿ ತಾರಣಕೋಟೆಯನ್ನು ಕೊಳ್ಳೆ ಹೊಡೆದು ರಾಜಘಡ

ವನ್ನು ನಿರ್ಮಾಣ ಮಾಡಿದನು. ಒಂದು ಕಡೆ ಬೀಜಾಪುರದವರ ಕಾಟ. ಇನ್ನೊಂದೆಡೆ ದೆಹಲಿಯವರ ಕಾಟ. ಇವುಗಳ ಒತ್ತಡದಲ್ಲಿ ನೊಂದಿದ್ದ ಜನರು ಸಹಜವಾಗಿ ದೇಶೀಯ ಸಂಸ್ಥಾನದ ಏಳಿಗೆಗೆ ಎಲ್ಲ ಪ್ರೋತ್ಸಾಹವನ್ನೂ ಕೊಟ್ಟರು. ಮುಂದಿನದೆಲ್ಲ ಶಿವಾಜಿಯ ಸಾಹಸಮಾಲೆಯ ದಾಖಲೆ.

ದೆಹಲಿಯಲ್ಲಿ ಔರಂಗಸೇಬನು ಪಟ್ಟಕ್ಕೆ ಬಂದ ಮೇಲೆ ಶಿವಾಜಿಗೂ ಮೊಗಲರಿಗೂ ಪರಸ್ಪರ ಯುದ್ಧ, ಒಪ್ಪಂದ ಹಾಗೂ ಅವುಗಳನ್ನು ಮುರಿಯುವುದು ಸಾಮಾನ್ಯವಾಯಿತು. ಈ ಮಧ್ಯೆ ಬೀಜಾಪುರದವರ ದ್ರೋಹ ಅಫಸಲ್‌ಖಾನನ ರೂಪದಲ್ಲಿ ಮೂರ್ತಗೊಂಡು ವಿಪತ್ತು ಘೋರವಾಗಿ ಎದುರಾದರೂ ಶಿವಾಜಿಯ ಚಾತುರ್ಯದಿಂದ ಮಂಜಿನಂತೆ ಕರಗಿತು. ಅನಂತರ ಶಿವಾಜಿ ಔರಂಗಸೇಬನ ಬಂಧು ಷಯಿಸ್ತಾಖಾನನನ್ನು ಸೋಲಿಸಿದನು. ಈ ಎರಡು ವೃತ್ತಾಂತಗಳೂ ಪುಟ್ಟಣ್ಣನವರಲ್ಲಿ ರೋಚಕವಾಗಿ ಬಂದಿವೆ. ಮುಂದೆ ಶಿವಾಜಿ ದೆಹಲಿಗೆ ಹೋಗಿ ಅಲ್ಲಿ ಮಗನೊಡನೆ ಸೆರೆಸಿಕ್ಕಿ ಅನಂತರ ಶಾಖದಾನ ಮಾಡುವ ನೆಪದಲ್ಲಿ ಹಣ್ಣಿನ ಬುಟ್ಟಿಗಳಲ್ಲಿ ಕೂತು ಹೊರಬಂದನು. ಅವನ ಹೋರಾಟದ ಕಥೆ ಮುಂದುವರಿಯುತ್ತದೆ. ಮುಂದೆ ಅವನ ಪಟ್ಟಾಭಿಷೇಕದ ವೃತ್ತಾಂತವಿದೆ. ಅನಂತರ ಒಳಜಗಳಗಳಿಂದ ರಾಜ್ಯ ವಿಚ್ಛಿದ್ರವಾಗುವ ಪರಿಸ್ಥಿತಿ ತಿಳಿಸಿ ಶಿವಾಜಿಯು 1680ರಲ್ಲಿ ಮರಣ ಹೊಂದಿದ್ದನ್ನು ನಿರೂಪಿಸಲಾಗಿದೆ.

ಶಿವಾಜಿಯದು ಭವ್ಯವಾದ ವ್ಯಕ್ತಿತ್ವ. ಚಿಕ್ಕಂದಿನಿಂದ ಧಾರ್ಮಿಕ ಪ್ರಭಾವದ ಗಾಢತೆಯನ್ನು ಅನುಭವಿಸಿದವನು. ವಿನಾಕಾರಣ ಕಷ್ಟಗಳಲ್ಲಿ ನೊಂದ ತಾಯ ಪ್ರಭಾವ ಶಿವಾಜಿಯ ಮೇಲೆ ಗಾಢವಾಗಿತ್ತು. ಇಡೀ ಬಾಲ್ಯದಲ್ಲಿ ಅವನ ಒಡನಾಡಿ ತಾಯಿ ಮಾತ್ರ. ಚಿಕ್ಕಂದಿನಿಂದಲೂ ಹೊರಜಗತ್ತಿನ ಅನುಭವಗಳಿಗೆ ಒಡ್ಡಿಕೊಂಡವನಾದ್ದರಿಂದ ಒಳ್ಳೆಯ ಲೋಕಾನುಭವವಿತ್ತು. ಯಾರ ಮಾತೂ ಇವನನ್ನು ಹೆದರಿಸುತ್ತಿರಲಿಲ್ಲ. ಏನೇ ಬರಲಿ, ತಾನೇ ಆಲೋಚಿಸುವ ಮತ್ತು ಎದುರಿಸುವ ಆತ್ಮಾವಲಂಬನೆ ದಿನೇ ದಿನೇ ಇವನಲ್ಲಿ ಹೆಚ್ಚುತ್ತಾ ಬಂತು. ದಾದಾಜಿ ಕೊಂಡದೇವನ ಅತಿಕಠಿಣವಾದ ಶಿಸ್ತು ಇದಕ್ಕೆ ಪೂರಕವಾಗಿ ಒದಗಿತು. ಈ ಗುರುವಿನ ಕೈ ಕೆಳಗೆ ದೇಹದಾರ್ಢ್ಯ, ಪರಾಕ್ರಮ, ಸಂಯಮ ಇವುಗಳು ಸ್ಫುಟಗೋಚರವಾಗುವಂತೆ ಶಿವಾಜಿಯು ಬೆಳೆದನು. ಇದರ ಮೇಲೆ ಗಟ್ಟ ಬೆಟ್ಟಗಳಲ್ಲಿ ಕಾಡುಮೇಡುಗಳಲ್ಲಿ ತಿರುಗಿ ಓಡಿಯಾಡಿದ್ದರಿಂದ ಶ್ರಮದಲ್ಲಿ ಸಹನೆ ಇತ್ತು. ಸುಖ ಜೀವನವನ್ನು ನಡೆಸದುದರಿಂದ ಲೋಲುಪತೆಯ ಶಾಪಗಳಿಗೆ ದೂರವಾಗಿ ಬೆಳೆದನು. ಖಿಲವಾಗುತ್ತಿದ್ದ ಆರ್ಯಧರ್ಮ, ಜನರಿಗೆ ಒದಗುತ್ತಿದ್ದ ವಿದೇಶೀಯರ ಉಪಟಳ, ಇವುಗಳಿಂದ ಮನಸ್ಸು ರೋಸಿ ಹೋರಾಟಕ್ಕೆ ಸಿದ್ಧನಾದನು. ಅವನು ಕಟ್ಟಿದ ಪಡೆಯೂ ಅವನಂತೆಯೇ ಚುರುಕು, ಚತುರ, ನಂಬಿದವರಿಗೆ ಪ್ರಾಣ ಕೊಡುವವರು. ಸ್ವಾಮಿಭಕ್ತಿ ಬಹಳ ಪ್ರಮುಖ, ಹಠವಾದಿಗಳು. ಸಮಯ ಬಂದರೆ ಎಂತಹ ಕ್ರೌರ್ಯಕ್ಕೂ ಹಿಂಜರಿಯು

ವವರಲ್ಲ. ಇದರ ಜೊತೆಗೆ ಶಿವಾಜಿಯ ಸಂಘಟನಾಶಕ್ತಿ ಅಪ್ರತಿಮವಾದುದು. "ಆ ಮಹಾಕಾರ್ಯವನ್ನು ಮಾಡಲು ಮೊದಲು ತೋರಿದ ಯೋಚನೆ ಯಂತ್ರವಾಗಿ ಅದನ್ನು ನಿರ್ವಹಿಸಿದ ಸಾಹಸವೂ ಪೂರ್ತಿಯಾಗಿ ಅದು ಕೈಗೂಡಿದ ಫಲವೂ ಇದೆಲ್ಲಾ ಶಿವಾಜಿಯ ಸಾಮರ್ಥ್ಯದಿಂದ ಲಭಿಸಿತೇ ಹೊರತು ಬೇರೆಯಲ್ಲ. ಈ ಮಹಾಕಾರ್ಯ ನಿರ್ವಾಹಕ್ಕೆ ಎಷ್ಟು ವಂಚನೆ ಬೇಕೋ ಅಷ್ಟು ಚಟುವಟಿಕೆಯೂ ಬೇಕು, ಎಷ್ಟು ಚಟುವಟಿಕೆ ಬೇಕೋ ಅಷ್ಟು ಪರಾಕ್ರಮವೂ ಬೇಕು, ಎಷ್ಟು ಪರಾಕ್ರಮ ಬೇಕೋ ಅಷ್ಟು ತಂತ್ರವೂ ಚಮತ್ಕಾರವೂ ಬೇಕು." (ಛ. ಶಿ. ಮ. ಪು. 42–43) ಎಂದು ಷಯಿಸ್ತಾಖಾನನನ್ನು ಸೋಲಿಸಲು ಶಿವಾಜಿ ಮಾಡಿದ ತಂತ್ರವನ್ನು ಕುರಿತು ಪುಟ್ಟಣ್ಣನವರು ಹೇಳುವ ಮಾತು ಶಿವಾಜಿಯ ಇಡೀ ಕಾರ್ಯಕ್ಕೆ ಅನ್ವಯಿಸುವಂಥದು.

ಯಾವುದೇ ವಿಷಯದ ಒಂದು ಮಗ್ಗುಲನ್ನು ತೋರಿಸುವುದು ಪುಟ್ಟಣ್ಣನವರ ಜಾಯಮಾನವಲ್ಲ. ಜಾವಳಿ ಸಂಸ್ಥಾನದ ಚಂದ್ರರಾಯನನ್ನು ನಿರ್ಮೂಲ ಮಾಡದೆ ಶಿವಾಜಿಯ ರಾಜ್ಯವಿಸ್ತರಣೆ ಈಡೇರದ ಮಾತಾಗಿತ್ತು. ಕಪಟದಿಂದ ಚಂದ್ರರಾಯನನ್ನು ಕೊಂದದ್ದು ಶಿವಾಜಿಯ ತಲೆಯ ಮೇಲೆ ಬಂದು ಕೂತ ಒಂದು ಬಲವಾದ ಆರೋಪ. "ತನ್ನ ಉಛ್ರೇಯಕ್ಕಾಗಿಯೂ ಸ್ವರಾಜ್ಯಸ್ಥಾಪನೆಗಾಗಿಯೂ ಹೀಗೆ ಮಾಡಲೇಬೇಕಾಯಿತೆಂದು ಶಿವಾಜಿಯು ನಿಷ್ಕಪಟವಾಗಿ ಒಪ್ಪಿಕೊಂಡಿರುವುದೊಂದೇ ಸ್ವಲ್ಪ ಸುಮುಖವಾದ ಭಾಗವಾಗಿದೆ." (ಛ. ಶಿ. ಮ. ಪು. 23) ಎಂದು ಪುಟ್ಟಣ್ಣನವರು ತಿಳಿಸುತ್ತಾರೆ. ಪುಟ್ಟಣ್ಣನವರ ನಿರೂಪಣೆಗಳಿಗೆ ಬೆಲೆ ಬರುವುದು ಇಂಥ ಧಾಟಿಯಿಂದ.

ಯಾವುದಕ್ಕೂ ಹೆದರದ ಇಂಥ ಶಿವಾಜಿಗೆ ಪಟ್ಟಾಭಿಷೇಕದ ಅನಿವಾರ್ಯತೆಯ ವೈಚಿತ್ರ್ಯ ಬಂದು ಒದಗಿತು. ಸ್ವಸಾಮರ್ಥ್ಯದಿಂದ ರಾಜ್ಯಕಟ್ಟಿ ಆಳಿ, ಧರ್ಮರಕ್ಷಣೆಗಾಗಿ ಹೋರಾಡಿದರೂ ಶಿವಾಜಿಗೆ ಪ್ರಭುತ್ವ ಯಾರು ಕೊಟ್ಟದ್ದು ? ಇವನು ಯಾವ ದೇಶದ ಪ್ರಭು ಎಂದು ಇವನೊಡನೆ ಮಿಕ್ಕ ರಾಜರು ಒಪ್ಪಂದ ಮಾಡಿಕೊಳ್ಳಬೇಕು ? ಎಂಬ ವಾದವೆದ್ದಿತು. ಪಟ್ಟಾಭಿಷೇಕವಾದ ಮೇಲೆ ಈ ಸೊಲ್ಲು ತಾನಾಗಿ ಅಡಗಿತು.

ಯಾವ ದೌರ್ಬಲ್ಯಕ್ಕೂ, ಚಾಪಲ್ಯಕ್ಕೂ ಬಲಿಬೀಳದ ಧೀರ ವ್ಯಕ್ತಿತ್ವ ಇವನದಾದರೂ ರಾಜ್ಯದಲ್ಲಾಗಲೀ ತನ್ನ ಕುಟುಂಬದಲ್ಲಾಗಲೀ ಒಳಜಗಳಗಳನ್ನು ತಡೆಯಲಾಗಲಿಲ್ಲ. ತಾನು ಕಟ್ಟಿದ ರಾಜ್ಯಕ್ಕೆ ಸುಭದ್ರತೆ ಕಡಿಮೆಯಾಗುವುದನ್ನು ತಪ್ಪಿಸಲಾಗಲಿಲ್ಲ. ಇಷ್ಟಾದರೂ ಇವನ ಚೇತನ ಸೋಲಲಿಲ್ಲ. ಇದನ್ನು ಪುಟ್ಟಣ್ಣನವರು ಹೀಗೆ ವರ್ಣಿಸುತ್ತಾರೆ. "ನಾಲ್ಕು ದಿಕ್ಕುಗಳಲ್ಲಿಯೂ ಬಲವತ್ತರವಾದ ಶತ್ರುಗಳು ಮುಸುಗಿಕೊಂಡಿದ್ದಾಗ್ಯೂ ಸ್ವಸಾಮರ್ಥ್ಯದಿಂದಲೇ ಎಲ್ಲರನ್ನೂ ಒಕ್ಕಲಿಕ್ಕಿ ಉರಿಯೊಳಗೆ ಸೊಸಿ ನಿಂತ ಹಾಗೆ ನಿಂತದ್ದೂ ಅಲ್ಲದೆ ತನ್ನ ಹೆಸರ ಹೇಳಿದ ಕಡೆ ಜನರೆಲ್ಲಾ ಕಂಪಿಸಿ ರಾಜಾಧಿರಾಜರು ಇವನ ಮೈತ್ರಿಯನ್ನು ಬಯಸುವ ಹಾಗೆ ಮಾಡಿಕೊಂಡ

ಈ ಪುಣ್ಯಾತ್ಮನು ಆದ್ಯಂತ ಶೂರನೆಂಬ ಬಿರುದಿಗೆ ಅರ್ಹನಾಗಿದಾನೆ." (ಛ. ಶಿ. ಮ. ಪು. 94–95)

ಪುಟ್ಟಣ್ಣನವರ ನಿರೂಪಣೆಯನ್ನು ಇನ್ನೂ ಒಂದು ಉದಾಹರಣೆಯ ಮೂಲಕ ನೋಡಬಹುದು. "ದಂಡೋಪಾಯದ ಯೋಚನೆ ಇಷ್ಟರವುಟ್ಟಿಗೆ ಒಂದು ಕಡೆ ನಡೆಯುತಿದ್ದರೂ ಉಭಯ ಕಕ್ಷಿಯವರೂ ಭೇದೋಪಾಯವನ್ನು ಒಳೊಳಗೇ ನಡಿಸು ತಿದ್ದರು. ಕದನಕ್ಕೆ ಮೊದಲಾಗಲಿಲ್ಲ. ಆಗ ಶಿವಾಜಿಯು ತನ್ನ ಭೇಟಿಗೆ ಬಂದು ಮಾತ ನಾಡಿಕೊಂಡು ಹೋಗಬೇಕೆಂದು ಅಫಸಲನು ವಕೀಲರ ಮುಖಾಂತರ ಹೇಳಿಕಳುಹಿಸಿ ದನು. ಶಿವನು ಪ್ರತಿಯಾಗಿ ತನ್ನ ಕಡೇ ವಕೀಲರನ್ನು ಕಳುಹಿಸಿದನು. ಈ ಇಬ್ಬರು ವಕೀಲರ ಓಡಿಯಾಟದಲ್ಲಿ ಒಂದು ಗುಟ್ಟಿನ ನೆರಳು ಈಚೆಗೆ ಕಾಣಿಸಿತು. ಅವರಿಬ್ಬರೂ ಪರಸ್ಪರ ಸಂಧಿಸುವ ಕಾಲದಲ್ಲಿ ನಡೆಯುವ ಹಾಗೆ ತುರುಕರು ದ್ರೋಹ ಚಿಂತನೆಯನ್ನು ಮಾಡಿದಾರೆನ್ನುವ ಮಟ್ಟಿಗೆ ಸುಳು ಗೊತ್ತಾಯಿತು. ಶಿವನು ಭಯಪಟ್ಟವನಂತೆ ನಟಿ ಸುತಾ,– ತಾನು ದೂರವಾಗಿ ಬರಲಾರೆ ತನ್ನ ಪೂರಾದ ಪ್ರತಾಪ ಘಡದ ಬಳಿ ಇರುವ ಒಂದು ಗುಡ್ಡದ ಕುಂಭಿಯ ಮೇಲೆ ಉಭಯರೂ ಪರಸ್ಪರ ಭೇಟಿ ಮಾಡಿಕೊಳ್ಳಬೇಕು ಎಂದು ಗೊತ್ತಾಯಿತು. ಆ ಗುಡ್ಡದ ಸುತ್ತಲೂ ಒತ್ತಾಗಿ ಕಾಡು ಬೆಳೆದಿತ್ತು. ಆ ಅಡವಿಯಲ್ಲಿ ತನ್ನ ಕಡೆ ದಂಡಿನವರು ಅವಿತುಕೊಂಡಿದ್ದು ಮುಂದಿನಕ್ರಮ ನಡೆಸ ಬೇಕೆಂದು ಮೊದಲೇ ಶಿವನು ಅಪ್ಪಣೆ ಮಾಡಿದ್ದನು. ಈ ಉಭಯ ಸರದಾರರೂ ತಂತಮ್ಮ ಅಂಗರಕ್ಷಣೆಗೆ ಇಬ್ಬರಿಗಿಂತಲೂ ಹೆಚ್ಚಾಗಿ ಜನರನ್ನು ಕರೆದು ತರಕೂಡದೆಂದು ಗೊತ್ತಾಯಿತು." (ಛ. ಶಿ. ಮ. ಪು. 32–33)

ಕೃತಿಯ ಒಟ್ಟು ಚಿತ್ರಣದಲ್ಲಿ ಪುಟ್ಟಣ್ಣನವರು ಆತ್ಮೀಯತೆಯ ಒಪ್ಪವನ್ನು ಕೊಡುತ್ತಾರೆ. ಅವರ ಮಿಕ್ಕ ಕೃತಿಗಳಂತೆ ಇಲ್ಲೂ ಅವರ ಸಂಸ್ಕೃತಿಪರವಾವ ಹಾಗೂ ದೇಶಾಭಿಮಾನದ ಆಶಯಗಳು ಕಾಣುತ್ತವೆ. ಕೃತಿಪ್ರಾರಂಭದಲ್ಲಿ ಕಾಣುವ ಆರ್ಯಾ ವರ್ತ, ಪುಣ್ಯಭೂಮಿ, ವೀರಭೂಮಿ ಎಂಬ ಮಾತುಗಳು, ರಾಮಾಯಣ ಮಹಾ ಭಾರತದ ಉಲ್ಲೇಖಗಳು, ಇತಿಹಾಸದ ವೀರರ ನೆನೆಯುವಿಕೆ ಇವೆಲ್ಲವೂ ಇದಕ್ಕೆ ಸಾಕ್ಷಿ. ಹೆಚ್ಚು ವಿವರಗಳನ್ನು ಕೊಡುವುದಕ್ಕಿಂತ ದೊರಕಿದ ವಿವರಗಳನ್ನು ಸಂಬಂಧಿಸಿದ ಕಾಲದ ಪರಿಸರದ ಚೌಕಟ್ಟಿನೊಳಗೆ ಅಡಗಿಸುವ ಪುಟ್ಟಣ್ಣನವರ ಪ್ರವೃತ್ತಿ ಇಲ್ಲೂ ಸುಸ್ಪಷ್ಟ ವಾಗಿದೆ.

**ಐದೂ ಕೃತಿಗಳಲ್ಲಿನ ಹೋಲಿಕೆ, ಸಮಾರೋಪ**

ಪುಟ್ಟಣ್ಣನವರ ಈ ಐದು ಜೀವನಚರಿತ್ರೆಗಳನ್ನು ಪರಸ್ಪರ ಹೋಲಿಸಿದಾಗ ಹಲವು ಸ್ವಾರಸ್ಯಕರ ಅಂಶಗಳು ಕಾಣುತ್ತವೆ. ಈ ಐದು ಜೀವನಚರಿತ್ರೆಗಳ ನಾಯಕರ ಕಾರ್ಯಕ್ಷೇತ್ರಗಳು, ವ್ಯಕ್ತಿತ್ವ ಆದರ್ಶಗಳು ಇವುಗಳನ್ನು ಗಮನಿಸಿದರೆ ಹಾಗೂ ಕೃತಿಯ

ನಡುನಡುವೆ ತಲೆದೋರುವ ಚಿಂತನೆಯ ಭಾಗಗಳಲ್ಲಿ ವ್ಯಕ್ತವಾಗುವ ಪುಟ್ಟಣ್ಣನವರ ಮನೋಧರ್ಮವನ್ನು ಗಮನಿಸಿದರೆ ಕೆಲವು ಹೋಲಿಕೆಗಳು ಕಾಣುತ್ತವೆ.

1. ಪುಟ್ಟಣ್ಣನವರ ಆಸಕ್ತಿ ಮುಖ್ಯವಾಗಿ ಎರಡು ವಲಯಗಳಲ್ಲಿ ದುಡಿದವರಿಗೆ ಮಾತ್ರ ಮೀಸಲು. ಮೊದಲನೆಯ ಗುಂಪು ಪಾರಮಾರ್ಥಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರು. ಇಂಥವರು ಪುಟ್ಟಣ್ಣನವರ ಅಸೀಮಗೌರವ ಹಾಗೂ ವಿಶೇಷ ಕೃತಜ್ಞತೆಗಳಿಗೆ ಪಾತ್ರರಾದವರು. ಆಸ್ಥಾನ ಅಥವಾ ಸರಕಾರ ಅಥವಾ ಅಧಿಕಾರಸ್ಥಾನವನ್ನು ಪ್ರತಿನಿಧಿಸುವವರು ಎರಡನೆಯ ಗುಂಪು. ಈ ಎರಡು ಗುಂಪಿನವರೂ ಜನಾಂಗಕ್ಕೆ ಶುಭವಾಗಲೆಂಬ ಒಂದು ಆಕಾಂಕ್ಷೆಯನ್ನು ಹೊಂದಿರುವವರು. ಆದರೆ ಫಲದಲ್ಲಾಗಲೀ ಯಾವುವೇ ವೈಯಕ್ತಿಕ ಲಾಭದಲ್ಲಾಗಲೀ ದೃಷ್ಟಿಯನ್ನಿಟ್ಟವರಲ್ಲ. ಪುಟ್ಟಣ್ಣನವರ ಅಭಿಪ್ರಾಯದಲ್ಲಿ ವೈಯಕ್ತಿಕ ಲಾಭದ ಮೇಲೆ ಕಣ್ಣಿಡದವರಿಂದ ಮಾತ್ರ ಲೋಕೋಪಕಾರ ಸಾಧ್ಯವಾಗಬಲ್ಲುದು. ಸರ್ವಸಮರ್ಪಣ ಭಾವದಿಂದ ನಿಷ್ಕಾಮ ಕರ್ಮ ಮಾಡುವ ಜನರಿಂದ ಮಾತ್ರ ಇಂಥದನ್ನು ನೀರಿಕ್ಷಿಸಬಹುದು.

ಪುಟ್ಟಣ್ಣನವರ ಕಾದಂಬರಿಗಳಲ್ಲೂ ಇದೇ ಆಶಯಕ್ಕೆ ಹಲವು ಸಾಕ್ಷ್ಯಗಳಿವೆ. 'ಮಾಡಿದ್ದುಣ್ಣೋ ಮಹಾರಾಯ'ದ ಭಟಜಿ, ಸದಾಶಿವ ದೀಕ್ಷಿತನ ಅಥವಾ ಆಸ್ಥಾನದ ಪ್ರತಿಫಲಕ್ಕೆ ಕಾಯುವುದಿಲ್ಲ, ಅದನ್ನು ಒಲ್ಲದವನು. 'ಮುಸುಗ ತೆಗೆಯೇ ಮಾಯಾಂಗನೆ' ಯ ಆತ್ಮಾರಾಂ ಭಾವಾಜಿ ಹಾಗೂ 'ಅವರಿಲ್ಲದೂಟ' ದ ಫಕೀರ—ಈ ಇಬ್ಬರೂ ಕೂಡ ಅಷ್ಟೆ. ಮಾನವಪ್ರಯತ್ನಕ್ಕೆ ಮೀರಿದ ಪ್ರಸಂಗಗಳಲ್ಲಿ ಇಂಥ ವ್ಯಕ್ತಿಗಳ ನೆರವು ಸುಗುಣಿಗಳಿಗೆ ಲಭ್ಯವಾಗುತ್ತದೆ.

ಧರ್ಮ ಮತ್ತು ಸರಕಾರ ಈ ಎರಡು ವಲಯಗಳಲ್ಲೂ ಸಾವಯುವ ಸಂಬಂಧವನ್ನು ಪುಟ್ಟಣ್ಣನವರು ಗುರುತಿಸಿದ್ದಾರೆ. ಇವೆರಡೂ ಸಾಪೇಕ್ಷವಾದವು. ಈ ಎರಡು ವಲಯಗಳಲ್ಲಿ ಯಾವೊಂದರ ನಿಪುಣನಾದರೂ ಇನ್ನೊಂದು ವಲಯದ ಸಹಾಯವನ್ನು ನಿರಾಕರಿಸುವುದಿಲ್ಲವಷ್ಟೇ ಅಲ್ಲ, ಅದನ್ನು ಸ್ವಾಗತಿಸುತ್ತಾರೆ, ತಮಗಾಗಿ ಅಲ್ಲ ಜನಾಂಗದ ಶುಭಕ್ಕಾಗಿ. ರಾಜಾಸ್ಥಾನದ ಅಂದರೆ ಅಧಿಕಾರಸ್ಥಾನದ ಅನಿವಾರ್ಯತೆಯನ್ನು ಪುಟ್ಟಣ್ಣನವರು ಗುರುತಿಸುತ್ತಾರೆ. ಸರ್ಕಾರದ ಕೆಲಸ ಪುಟ್ಟಣ್ಣನವರಿಗೆ ದೇವರ ಕೆಲಸವೇ ಆಗಿತ್ತು. ಕಾಂಪೂಷನಂಥ ತತ್ತ್ವಜ್ಞಾನಿ ಕೂಡ ಸ್ವಲ್ಪ ಕಾಲ ಕೋಶಾಧಿಕಾರಿಯಾಗಿ, ದಂಡನಾಧಿಕಾರಿಯಾಗಿ ಇದ್ದವನು. ಒಂದು ವರ್ಷದ ಮಟ್ಟಿಗೆ ಯಾರಾದರೂ ತನ್ನ ಮಾತು ಕೇಳುವಂಥ ರಾಜಸಿಕ್ಕಿದರೆ ಅನೇಕ ಮಹಾಕಾರ್ಯಗಳನ್ನು ಮಾಡಬಹುದು ಎಂದು ಹಂಬಲಿಸಿದವನು.ರಾಜ್ಯಭಾರದ ಕಾಟ ಲೋಕಬಾಧಕವೂ ಆಗಬಹುದೆಂದು ತಿಳಿದಿದ್ದವನು ಕುಣಿಗಲ ರಾಮಶಾಸ್ತ್ರಿಗಳು ಅಧಿಕಾರಸ್ಥಾನದ ಕೃಪೆಯಲ್ಲಿದ್ದೂ ತಮ್ಮ ಧಾರ್ಮಿಕ ಕರ್ತವ್ಯವನ್ನು ಮುಂದುವರೆಸಿದರು. ರಾಜರ ಮನಸ್ಸು ತಮ್ಮೆಡೆಗೆ ವಿಮುಖವಾದಾಗ ದೂರ ಹೋದರೂ ಪುನಃ ರಾಜರೇ ಬಂದು ಕೇಳಿಕೊಂಡಾಗ ಅವರು ರಾಜರನ್ನು ಮನ್ನಿಸಿ ಹಿಂತಿರುಗಿ ಬಂದರು. ಅಧಿಕಾರ ಧರ್ಮಕ್ಕೆ ಬಾಗುವುದು ಪುಟ್ಟಣ್ಣನವರಿಗೆ ಬಹು ಪ್ರಿಯ

ವಾದ ಸಂಗತಿ. ಸಾಲಾರಜಂಗ್, ಮಹಮೂದ್ ಗವಾನನಂಥವರು ಕೂಡ ಅಧಿಕಾರದ ಅತ್ಯುನ್ನತ ಪದವಿಯಲ್ಲಿದ್ದಾಗಲೂ ಧರ್ಮದ ಹಿರಿಮೆಯನ್ನು ಒಪ್ಪಿ ನಡೆದವರು. ಶಿವಾಜಿ ಸ್ವತಃ ರಾಜ್ಯಕಟ್ಟಿ ಆಳಿದವನು. ಬಾಲ್ಯದಿಂದಲೂ ಗಾಢವಾದ ಧಾರ್ಮಿಕ ಪರಿಸರದ ಪ್ರಭಾವಕ್ಕೆ ಒಳಗಾದವನು. ಈ ಸಂಗತಿಗಳೆಲ್ಲ ಧರ್ಮ ಅಧಿಕಾರಿಗಳ ಸಂಬಂಧವನ್ನು ಸೂಚಿಸುವುದರ ಜೊತೆಗೆ ಒಂದೇ ಆಶಯವನ್ನು ಎತ್ತಿ ಹಿಡಿಯುತ್ತವೆ. ಪುಟ್ಟಣ್ಣನವರ ದೃಷ್ಟಿಯಲ್ಲಿ ಅಧಿಕಾರಸ್ಥಾನದ ಶರೀರದಲ್ಲಿ ಧರ್ಮದ ಚೈತನ್ಯ ಅತ್ಯಂತ ಸುಸಂಬದ್ಧವಾದುದು. ಅರಾಜಕತೆಯ ಕೆಡಕುಗಳನ್ನು, ರಾಜಕೀಯ ವ್ಯವಸ್ಥೆ ಸರಿಯಿಲ್ಲದಿದ್ದರೆ ಆಗುವ ಅನರ್ಥಗಳನ್ನು ತಿಳಿದಿದ್ದುದರಿಂದ ಅಧಿಕಾರಸ್ಥಾನದ ಮಹತ್ತ್ವವನ್ನೂ, ನೀತಿಪರವಾದ ಬಾಳು ಮಾತ್ರ ಗೌರವಾರ್ಹ ಎಂಬ ನಂಬಿಕೆಯಿದ್ದುದರಿಂವ ಧರ್ಮವನ್ನೂ ಪುಟ್ಟಣ್ಣನವರು ಅತ್ಯಂತ ಮಹತ್ತ್ವದ ಸ್ಥಾನಗಳಲ್ಲಿಟ್ಟು ಗೌರವಿಸಿದರು.

ಕಾಂಪೂಷನು ಧಾರ್ಮಿಕ ಕ್ಷೇತ್ರದಲ್ಲಿ ಗಣನೆಯಾಗತಕ್ಕವನು. ಕುಣಿಗಲ ರಾಮಶಾಸ್ತ್ರಿಗಳು ಆಸ್ಥಾನದ ಪಂಡಿತರು. ಸಾಲಾರ್‌ಜಂಗ್ ಮತ್ತು ಮಹಮೂದ್ ಗವಾನರು ಮಂತ್ರಿಗಳು. ಶಿವಾಜಿ ರಾಜ್ಯಕಟ್ಟಿ ಆಳಿದವನು. ಮೊದಲನೆಯವರಿಗಿಂತ ಎರಡನೆಯವರು, ಎರಡನೆಯವರಿಗಿಂತ ಮೂರು, ನಾಲ್ಕನೆಯವರು ರಾಜಾಸ್ಥಾನದ ಸಂಬಂಧವನ್ನು ಹೆಚ್ಚಾಗಿ ಪಡೆದಿದ್ದರೆ ಐದನೆಯ ವ್ಯಕ್ತಿ ಸ್ವತಃ ರಾಜನೇ ಆಗಿದ್ದಾನೆ. ಪುಟ್ಟಣ್ಣನವರ ಜೀವನಚರಿತ್ರೆಗಳಲ್ಲಿ ಕಾಲಾನುಕ್ರಮವಾಗಿ ವಿವೇಚಿಸಿದಾಗ ಕಾಣುವ ಈ ಅಂಶ ವಿಶೇಷವಾದುದು.

2. ಪುಟ್ಟಣ್ಣನವರ ಜೀವನಚರಿತ್ರೆಗಳ ಎಲ್ಲ ನಾಯಕರಲ್ಲೂ ಬೇರೆಲ್ಲ ಒಳ್ಳೆಯ ಗುಣಗಳಿಗಿಂತ ಪ್ರಾಮಾಣಿಕತೆಯೇ ಬಹು ಮುಖ್ಯವಾದ ಗುಣ. ಈ ಗುಣದ ಪಾಲನೆಯಲ್ಲಿ ಇವರು ಪರಮನಿಷ್ಠುರರು. ಕಾಂಪೂಷನು ತನ್ನ ಆಚರಣೆಯಲ್ಲಿನ ಬಿಗಿಯನ್ನು ಸ್ವಲ್ಪ ಕಡಿಮೆ ಮಾಡಿದರೆ ಎಷ್ಟೋ ಒಳ್ಳೆಯದಾದೀತು ಎಂಬ ದೃಷ್ಟಿಯುಳ್ಳ ಶಿಷ್ಯರಿಗೆ ತನ್ನ ಧರ್ಮವನ್ನು ತಾನು ಪಾಲಿಸುವುದಾಗಿಯೂ ಇತರರ ಆಚರಣೆಯಲ್ಲಿ ತನ್ನ ಹೊಣೆ ಇಲ್ಲವೆಂತಲೂ ಹೇಳಿದನು. ಕುಣಿಗಲ ರಾಮಶಾಸ್ತ್ರಿಗಳು ರಾಜಸ್ವತ್ತು ಪಾಪ ಎಂದು ತಿಳಿದು ಅದನ್ನು ಆದಷ್ಟುಮಟ್ಟಿಗೆ ತಮ್ಮ ಸೇವೆಯ ಮೂಲಕ ಹಿಂದಿರುಗಿಸಿ ಕೆರೆಯ ನೀರನು ಕೆರೆಗೆ ಚೆಲ್ಲಿದವರು, ಅಪರಿಗ್ರಹಣದಲ್ಲಿ ನಿಷ್ಠೆಯುಳ್ಳವರು. ಸಾಲಾರಜಂಗನು ಎಂಥ ಕಷ್ಟದಲ್ಲೂ ಜಗ್ಗಲಿಲ್ಲ, ಯಾವ ಲಾಭಕ್ಕೂ ಬಲಿಬೀಳಲಿಲ್ಲ, ಕರ್ತವ್ಯ ವಿಮುಖನಾಗಲಿಲ್ಲ. ಮಹಮೂದ್ ಗವಾನನು ದೊರೆಯ ಹೆಸರಿನಲ್ಲಿ ತನ್ನ ಸಂಬಳದ ಹಣವನ್ನು ದಾನಮಾಡುತ್ತಿದ್ದ ನಿರ್ಲಿಪ್ತ. ತತ್ತ್ವಕ್ಕಾಗಿ ತನ್ನ ಜೀವವನ್ನೇ ಕೊಟ್ಟವನು. ಶಿವಾಜಿ ತನ್ನ ಪ್ರಾಣವನ್ನೇ ಒತ್ತೆ ಇಟ್ಟು ಆರ್ಯಧರ್ಮವನ್ನು ಕಾಪಾಡಿದನು. ರಾಜಕೀಯ ಚದುರಂಗದಾಟದ ಅನಿವಾರ್ಯತೆಯಿಂದ ಯುದ್ಧ, ತಂತ್ರಗಳು ಇವನಲ್ಲಿದ್ದರೂ ಗುರಿಯಲ್ಲಿ ಮೊದಲಿನ ನಾಲ್ವರಿಗಿಂತ ಶಿವಾಜಿ ಭಿನ್ನನಲ್ಲ.

3. ಪುಟ್ಟಣ್ಣನವರ ಜೀವನಚರಿತ್ರೆಯ ಈ ನಾಯಕರೆಲ್ಲರೂ ಪಾಂಡಿತ್ಯಕ್ಕೆ



ಎಂ. ಎಸ್. ಪುಟ್ಟಣ್ಣನವರ ಪತ್ನಿ ಗೌರಮ್ಮ

# University of Madras

FACULTY OF ARTS

We the Chancellor, Vice Chancellor and Fellows of the University of Madras do hereby make known that *M. S. Puttanna* has been by us admitted to the Degree of Bachelor of Arts he having been first certified by duly appointed Examiners to be qualified to receive the same; and having been by them placed in the Class at the Examination held in the month of 18




Given under the seal of the University.

*10th March 1885.*

Registrar

Chancellor

ಎಂ. ಎಸ್. ಪುಟ್ಟಣ್ಣನವರಿಗೆ ಮದರಾಸ್ ವಿಶ್ವವಿದ್ಯಾನಿಲಯ ನೀಡಿದ ಬಿ. ಎ. ಪದವಿಪತ್ರ



# ಮಾಡಿದ್ದುಣ್ಣೋ

# ಮಹಾರಾಯ

ಗ್ರಂಥಕರ್ತೃ

ಎಂ. ಎಸ್. ಪುಟ್ಟಣ್ಣ.

ಬೆಂಗಳೂರು ಬುಕ್‌ಡಿಪೋ ಪವರ್ ಪ್ರೆಸ್.

ಬೆಂಗಳೂರು

೧೯೧೫.



'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಮೊದಲ ಮುದ್ರಣ (1915)ದ ಮುಖಪುಟ

ಶ್ರೀಲಕ್ಷ್ಮೀನರಸಿಂಹಾಯನಮಃ

ಮ|| ರಾ|| ........................................................ ಸ|| ಕ್ಕೆ

ಬೆಂಗಳೂರು ಬಸವನಗುಡಿಯಲ್ಲಿರುವ ರಿಟೈರ್ಡ್ ಅಮಲ್‌ದಾರ್

ಎಂ. ಎಸ್. ಪುಟ್ಟಣ್ಣನವರು ಮಾಡುವ ವಿಜ್ಞಾಪನೆ.

ರೌದ್ರಿ ಸಂವತ್ಸರದ ಫಾಲ್ಗುಣ ಬಹುಳ ೫ ಬುಧವಾರ (೧೭-೩-'೨೧)

ವರೆಗೆ ಉಭಯಕುಶಲೋಪರಿ ಸಾಂಪ್ರತ||

ನನ್ನ ಜ್ಯೇಷ್ಠ ಪುತ್ರ ಚಿ|| ರಾ|| ಅಡ್ವೊಕೇಟ್

ಎಂ. ಪಿ. ಸೋಮಶೇಖರರಾವ್

ಬಿ.ಎ., ಎಲ್‌ಎಲ್. ಬಿ.

ಈತನಿಗೆ

ಮೈಸೂರು ಚಾಮರಾಜೇಂದ್ರ ಅಗ್ರಹಾರದಲ್ಲಿರುವ ಅರಮನೇ ವಿದ್ವಾನ್

ವೇ|| ಮುತ್ತೂರ್ ರಾಮಸ್ವಾಮಿ ಶಾಸ್ತ್ರಿಗಳ ಮಗಳು

ಚಿ|| ಸೌ|| ಕು|| ಕಂ|| ಕೋ||

ಪಾರ್ವತಮ್ಮನನ್ನು

ಇದೇ ಮೈಸೂರು ಚಾಮರಾಜೇಂದ್ರ ಅಗ್ರಹಾರದಲ್ಲಿ ದುರ್ಮತಿ ಸಂ|| ಜ್ಯೇಷ್ಠ ಬ|| ೧೦ ಸೋಮವಾರ (೧೯೨೧ ನೇ ಇಸವಿ ಮೇ ತಾ|| ೨) ಹಗಲು ೧೨ ಗಂಟೆ ೩೮ ನಿಮಿಷಕ್ಕೆ ಸಲ್ಲುವ ಮಿಥುನ ಲಗ್ನದಲ್ಲಿ ವಿವಾಹ ಪ್ರಸ್ತುತವನ್ನು ಬೆಳೆಯಿಸಬೇಕೆಂದು ನಿಶ್ಚೈಸಿರುವ ಕಾರಣ, ತಾವು ಆ ಮುಹೂರ್ತಕ್ಕೆ ಸಕುಟುಂಬರಾಗಿ ದಯಮಾಡಿಸಿ ಮಂಟಪಶೋಭಾಯಮಾನವಾಗುವಂತೆ ಮಾಡಿ ನನಗೆ ತಮ್ಮ ಸಾಮೀಪ್ಯದ ಆನಂದವನ್ನುಂಟುಮಾಡಬೇಕೆಂದು ಪ್ರಾರ್ಥಿಸುತ್ತೇನೆ.

ಇಂತೀ

ಬಸವನಗುಡಿ, ಎಂ. ಎಸ್. ಪುಟ್ಟಣ್ಣ

ಬೆಂಗಳೂರು ಸಿಟಿ. ನ ವಿಜ್ಞಾಪನೆ.

ಬಿ. ಎಚ್. ಪ್ರೆಸ್.

ಎಂ. ಎಸ್. ಪುಟ್ಟಣ್ಣನವರ ಹಿರಿಯಮಗ ಎಂ. ಪಿ. ಸೋಮಶೇಖರ ರಾಯರ ಮದುವೆಯ ಆಹ್ವಾನ ಪತ್ರಿಕೆ, ಪುಟ್ಟಣ್ಣನವರ ರಚನೆ

OFFICE OF
THE INSPECTOR GENERAL OF EDUCATION
IN MYSORE.

Bangalore, 4 May 1909.

Dear Mr Puttanna,

I send two volumes viz. Stories from Shakespeare and Uncle Tom's Cabin for children. You will see how simple in language & thought they are. If we can approach this simplicity we shall indeed be doing a service to little children.

Yours truly

H J Bhabha

ಎಚ್. ಜೆ. ಭಾಭಾ ಅವರು ಎಂ. ಎಸ್. ಪುಟ್ಟಣ್ಣನವರಿಗೆ ಬರೆದ ಪತ್ರ

## The Great Athlete of Srirangapattana

When Tippu Sultan was the reigning sovereign at Srirangapattana some man lodged a complaint ~~before the Nawab~~ accusing the ~~well~~ Chief athlete of ~~the Royal~~ a gymnasium of some serious offence. The prosecution was launched out at a very unfortunate hour for the accused; Tippu on hearing the complaint, was enraged beyond measure and ~~c~~ carelessly and without any inquiry ordered that the accused should be tied loosely to the leg of an elephant and paraded through all the streets of the Capital. This was in those days one of the usual modes in which the ~~sentence~~ principle of "eye for eye, ~~tooth~~ for tooth, and life for life was religiously observed. ~~Executed~~. ~~So~~ No sooner the order was pronounced than the elephant was ready one end of a halter was tied loosely

ಎಂ. ಎಸ್. ಪುಟ್ಟಣ್ಣನವರ ಇಂಗ್ಲಿಷ್ ಕೈ ಬರೆಹ



ಎಂ. ವೆಂಕಟಕೃಷ್ಣಯ್ಯನವರ ಸನ್ಮಾನ ಸಮಾರಂಭ. ಕುರ್ಚಿಯಲ್ಲಿ ಕುಳಿತಿರುವವರಲ್ಲಿ
ಎಡದಿಂದ ಬಲಕ್ಕೆ ಮೊದಲನೆಯವರು ಎಂ. ಎಸ್. ಪುಟ್ಟಣ್ಣ,
ಎರಡನೆಯವರು ಎಂ. ವೆಂಕಟಕೃಷ್ಣಯ್ಯ

ಗೌರವ ಸಲ್ಲಿಸಿದರು. ಮೊದಲ ನಾಲ್ವರು ವಿದ್ವಾಂಸರೂ ಆಗಿದ್ದರು. ಕಾಂಪೂಷನು ಶಾಸ್ತ್ರವಿದ, ವ್ಯಾಸಂಗದಲ್ಲಿ ಮನಸ್ಸಿಟ್ಟವನು. ಕುಣಿಗಲ ರಾಮಶಾಸ್ತ್ರಿಗಳು ಅವರ ಸಮಕಾಲೀನರಲ್ಲಿ ಅತ್ಯಂತ ಮೇಧಾವಿಯೆಂದೂ ಹೆಸರು ಪಡೆದವರು. ಸಾಲಾರ್‌ಜಂಗನು ಉರ್ದು, ಫಾರ್ಸಿ, ಅರಬ್ಬಿ ಭಾಷೆಗಳಲ್ಲಿ ಪರಿಶ್ರಮ ಪಡೆದಿದ್ದವನು. ಮಹಮೂದ್ ಗವಾನನು ಪಾರ್ಸಿ, ಅರಬ್ಬೀ ಭಾಷೆಗಳಲ್ಲಿ ಪರಿಣತಿಯನ್ನೂ ಖಗೋಳಶಾಸ್ತ್ರ, ವೈದ್ಯಶಾಸ್ತ್ರ ಮೊದಲಾದುವುಗಳಲ್ಲಿ ತಿಳುವಳಿಕೆಯನ್ನೂ ಹೊಂದಿದ್ದವನು. ತನ್ನ ಈ ಕೊರತೆಯನ್ನು ಶಿವಾಜಿ ಪಂಡಿತಪೋಷಣೆಯಿಂದ ತುಂಬಿಕೊಂಡವನು.

ಈ ಹೋಲಿಕೆಗಳು ಪುಟ್ಟಣ್ಣನವರ ಜೀವನಚರಿತ್ರೆಗಳಿಗೆ ಒಂದು ಅಗತ್ಯವಾದ ಚೌಕಟ್ಟನ್ನು ಕೊಟ್ಟಿವೆ.

ಪುಟ್ಟಣ್ಣನವರು ಒಳ್ಳೆಯ ಉಪಾಧ್ಯಾಯರು. ಪ್ರಪ್ರಥಮವಾಗಿ ಪುಟ್ಟಣ್ಣನವರಿಗೆ ಬೇಕಾದುದು ಸಮಾಜಶಿಕ್ಷಣ, ಕಿರಿಯ ಪೀಳಿಗೆಗೆ ಶುದ್ಧಚಾರಿತ್ರ್ಯದ ಬಗೆಗೆ ಒಲವುಂಟುಮಾಡುವ ಶಿಕ್ಷಣ. ಶುದ್ಧ ಚಾರಿತ್ರ್ಯವುಳ್ಳ ವ್ಯಕ್ತಿಗಳ ಜೀವನಚರಿತ್ರೆಗಳು ಇದಕ್ಕೆ ಸಹಾಯಕ ಆಗಬಹುದೆಂಬುದು ಈ ಕೃತಿಗಳ ರಚನೆಗೆ ಒಂದು ಮುಖ್ಯಕಾರಣವಾಗಿದೆ. ಕನ್ನಡದಲ್ಲಿ ಜೀವನಚರಿತ್ರೆಗಳಿಗೆ ಹೆಚ್ಚು ಪ್ರೋತ್ಸಾಹ ದಕ್ಕದಿದ್ದ ಕಾಲದಲ್ಲಿ ರಚಿತವಾದ ಪುಟ್ಟಣ್ಣನವರ ಜೀವನಚರಿತ್ರೆಗಳು ಈ ಅಂತಃಸತ್ತ್ವದಿಂದಲೇ ಈಗಲೂ ಉಳಿದಿವೆ.

## ಟಿಪ್ಪಣಿಗಳು

1. ಹೊಸಗನ್ನಡದ ಅರುಣೋದಯ; ಶ್ರೀನಿವಾಸ ಹಾವನೂರ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1974 ; ಪು. 460.
2. ಸಂಗ್ರಹ; ಹಾ. ಮಾ. ನಾಯಕ; ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು 570009; 1976 ; 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ': ಒಂದು ಪರಿಚಯ, ಪು. 117.
3. 'ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ'ಯ ಈ ಪ್ರಸಂಗವನ್ನು ಆಧರಿಸಿ ಎರಡು ಕೃತಿಗಳು,—ಕ್ರಮವಾಗಿ ಒಂದು ಕಥೆ ಹಾಗೂ ಒಂದು ರಂಗನಾಟಕಗಳು—ರಚಿತವಾಗಿವೆ. ಅವುಗಳ ವಿವರಗಳು ಹೀಗಿವೆ :
   1. ಸೀಮಂತದ ಉಡುಗೊರೆ; ಬಿ. ಶ್ರೀ. ಪಾಂಡುರಂಗರಾವ್; ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು; 1938; ಪು. 22.
   2. ಅಮೃತವರ್ಷ; ಎಚ್. ಕೆ. ರಂಗನಾಥ್; ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು 570009; 1973 ; ಪು. 73.
4. ನೆನಪುಗಳು; ಕೆ. ವಾಸುದೇವಾಚಾರ್ಯ; ಕಾವ್ಯಾಲಯ, ಮೈಸೂರು 570004; 1962; ಪು, 110.

5. ಕುಣಿಗಲ ರಾಮಶಾಸ್ತ್ರಿಗಳ ಕಾಲಮಾನ 1807–1860. ಎಂ. ಎಸ್. ಪುಟ್ಟಣ್ಣನವರ ಜನನ 1854 ರಲ್ಲಿ. ರಾಮಶಾಸ್ತ್ರಿಗಳು ದಿವಂಗತರಾದಾಗ ಪುಟ್ಟಣ್ಣನವರು ಆರು ವರ್ಷಗಳ ಹುಡುಗ.
6. ಸಂಗ್ರಹ; ಪೂರ್ವೋಕ್ತ, ಪು. 119.
7. ದಿವಾನ್ ರಂಗಾಚಾರ್ಲು ಅವರನ್ನು ಕುರಿತ ಪುಟ್ಟಣ್ಣನವರ ಒಂದು ಅಪೂರ್ಣ ಜೀವನಚರಿತ್ರೆ ದೊರಕಿದೆ. ವಿವರಗಳಿಗೆ ನೋಡಿ :

   ದಿವಾನ್ ರಂಗಾಚಾರ್ಲು ; ಎಂ. ಎಸ್. ಪುಟ್ಟಣ್ಣ, (ಸಂಗ್ರಹ) ಎಚ್. ಎಸ್. ಸುಜಾತಾ; ಪ್ರಬುದ್ಧ ಕರ್ಣಾಟಕ 60–2; 1978; ಪು. 17-29.
8. ಶ್ರೀಕಂಠತೀರ್ಥ ; (ಸಂ.) ಎಂ. ಚಿದಾನಂದ ಮೂರ್ತಿ, ತೀ. ಶ್ರೀ. ನಾಗಭೂಷಣ, ತೀ. ನಂ. ಶಂಕರನಾರಾಯಣ; ತೀ. ನಂ. ಶ್ರೀ. ಸಂಸಾರವರ್ಗ, ಜಯನಗರ, ಬೆಂಗಳೂರು 560011; 1976 ; ಎಂ. ಎಸ್. ಪುಟ್ಟಣ್ಣನವರು (ಎಂ. ವೆಂಕಟಕೃಷ್ಣಯ್ಯ), ಪು. 868.
9. ಸಂಶೋಧನೆಯ ಕಾರ್ಯಕ್ಕೆಂದು ಕರ್ನಾಟಕದ ಪ್ರಮುಖ ಗ್ರಂಥಾಲಯಗಳಲ್ಲೂ ಹಲವು ವೈಯಕ್ತಿಕ ಸಂಗ್ರಹಗಳಲ್ಲೂ ಅನೇಕ ಗ್ರಂಥಗಳನ್ನೂ ನಿಯತಕಾಲಿಕೆಗಳನ್ನೂ ನೋಡಿದ್ದೇನೆ. ಈ ಜೀವನಚರಿತ್ರೆ ಪ್ರಕಟವಾಗಿರುವುದು ನನ್ನ ಗಮನಕ್ಕೆ ಬಂದಿಲ್ಲ.

## 3. ರೂಪಾಂತರ ಭಾಷಾಂತರಗಳು

ಕನ್ನಡದ ಮೊದಲ ಉಪಲಬ್ಧ ನಾಟಕ 'ಮಿತ್ರವಿಂದಾ ಗೋವಿಂದ' ಸಂಸ್ಕೃತದ 'ರತ್ನಾವಳಿ' ನಾಟಕದ ಭಾಷಾಂತರ. ಕನ್ನಡದ ಮೊದಲ ನಾಟಕವೇ ಭಾಷಾಂತರ ಎಂಬುದು ಗಮನಾರ್ಹವಾದ ಅಂಶವಾಗಿದೆ. ಸಂಸ್ಕೃತದ ಪ್ರಭಾವವನ್ನು ಹಲವು ರೀತಿಗಳಲ್ಲಿ ಮೈಗೂಡಿಸಿಕೊಂಡ ನಮ್ಮ ಕವಿಗಳು ಸಂಸ್ಕೃತದ ಮುಖ್ಯ ಸಾಹಿತ್ಯ ಪ್ರಕಾರವಾದ ನಾಟಕವನ್ನು ಮನ್ನಿಸಲಿಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕೀಯತೆ ಗಣನೀಯ ಪ್ರಮಾಣದಲ್ಲಿ ಕಂಡುಬರುವುದಾದರೂ ನಾಟಕಗಳ ರಚನೆ ಕಾಣುವುದಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸದ ಪ್ರಭಾವದಿಂದ ಸಾಹಿತ್ಯಕ್ಷೇತ್ರದಲ್ಲಿ ಹಲವು ಹೊಸತನಗಳು ಕಾಣಿಸಿಕೊಂಡವು. ಹತ್ತೊಂಬತ್ತನೆಯ ಶತಮಾನದಲ್ಲಿ ಹಲವು ಇಂಗ್ಲಿಷ್ ನಾಟಕಗಳು ಭಾಷಾಂತರ ರೂಪಾಂತರಗಳ ಮೂಲಕ ಕನ್ನಡಕ್ಕೆ ಬಂದವು. ಈ ನಾಟಕಗಳ ಮುಖ್ಯ ಉದ್ದೇಶ ರಂಗಭೂಮಿಯ ಉಪಯೋಗಕ್ಕಾಗಿ. "The earliest translations (they were really a cross between translation and adaptation) of Shakespeare came from theatre lovers rather than academic men."[1] ಎಂಬ ಮಾತನ್ನು ಇಲ್ಲಿ ನೆನೆಯಬಹುದು.

ಸಂಸ್ಕೃತದಿಂದ ಕಾಳಿದಾಸ, ಭಾಸ, ಭವಭೂತಿ ಮುಂತಾದವರ ನಾಟಕಗಳು ಕನ್ನಡಕ್ಕೆ ಬಂದಂತೆ ಇಂಗ್ಲಿಷಿನಿಂದ ಷೇಕ್ಸ್‌ಪಿಯರನ ನಾಟಕಗಳು ಕನ್ನಡಕ್ಕೆ ಬಂದವು. ಗ್ರೀಸಿನ ಕೊಡುಗೆಯಾದ ರುದ್ರನಾಟಕಗಳನ್ನು ಅವುಗಳ ಪರಿಣಾಮಕ್ಕೆ ಮೆಚ್ಚಿ ತನ್ನ ಇಷ್ಟಕ್ಕೆ ಅನುಸಾರವಾಗಿ ಅಳವಡಿಸಿಕೊಳ್ಳುವ ಜಾಣ್ಮೆಯನ್ನು ಷೇಕ್ಸ್‌ಪಿಯರನಲ್ಲಿ ಕಾಣ

ಬಹುದು. ಬದುಕಿನ ಸಂಕೀರ್ಣತೆ, ಜಟಿಲತೆಗಳನ್ನು ಅದರ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ಕಂಡು ತನ್ನ ನಾಟಕಗಳಲ್ಲಿ ಚಿತ್ರಿಸಿದ್ದು ಷೇಕ್ಸ್‌ಪಿಯರನ ಸಾಧನೆ. ರುದ್ರನಾಟಕಗಳು ಭಾಷಾಂತರಗೊಂಡು ಬಂದಾಗ ಭಾರತೀಯರಲ್ಲಿ ಜನಪ್ರಿಯವಾಗಲು ಕಾರಣ ದೈವಕ್ಕೆ ಶರಣಾಗುವ, ನೋವನ್ನು ಒಪ್ಪಿಕೊಳ್ಳುವ ಇಲ್ಲಿಯ ಸಂಸ್ಕೃತಿಯ ಬಲ, 'ಮರಣವೆಂದರೆ ಮಹಾನವಮಿ' ಎಂಬ ಕಲ್ಪನೆ. ನಮ್ಮ ಜೈನಕವಿಗಳು ಪ್ರತಿನಾಯಕರಲ್ಲಿ ಈ ರೌದ್ರವನ್ನು ಪರಿಭಾವಿಸಿದ್ದರು ಎಂಬುದನ್ನು ಮರೆಯಲಾಗದು.

ಮೈಸೂರಿನಲ್ಲಿ ಹಲವು ನಾಟಕ ಕಂಪೆನಿಗಳು ತಲೆಯೆತ್ತುತ್ತಿದ್ದ ಕಾಲ. ಹೊರಗಿನಿಂದ ಮೈಸೂರಿಗೆ ಬಂದ ಬಾಲಿವಾಲಾ ಮತ್ತು ಸಾಂಗ್ಲಿ ಕಂಪೆನಿಗಳು ತಮ್ಮ ನಾಟಕಗಳ ಭಾಷೆ ಇಲ್ಲಿನ ಜನಕ್ಕೆ ಅರ್ಥವಾಗದಿದ್ದರೂ, ಆಕರ್ಷಕವಾದ ರಂಗಸಜ್ಜಿಕೆ ಸಂಗೀತ ನರ್ತನಗಳಿಂದ ಹಲವು ಪ್ರದರ್ಶನಗಳನ್ನು ಯಶಸ್ವಿಯಾಗಿ ನಡೆಸಿದವು. ಇವುಗಳನ್ನು ಮಹಾರಾಜರು ನೋಡಿ ಮೆಚ್ಚಿದ ಫಲವಾಗಿ 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ' ಸ್ಥಾಪನೆಯಾಯಿತು. ರಾಜಾಶ್ರಯ ದೊರೆತ ಮೇಲೆ ನಾಟಕಗಳ ಪ್ರಗತಿ ವೃದ್ಧಿಮುಖವಾದದ್ದು ಸಹಜವಾದ ಮಾತು. ಹುಟ್ಟಿದಂದಿನಿಂದ ಪ್ರೋತ್ಸಾಹವಿಲ್ಲದೆ ಕುಟುಕುಜೀವ ಇಟ್ಟುಕೊಂಡಿದ್ದ ನಾಟಕ ಸಂಘಗಳಿಗೆ ಚೈತನ್ಯ ಕೂಡಿಕೊಂಡಿತು. ಇತರ ಹಲವು ಸಂಘಗಳು ತಲೆಯೆತ್ತಿದವು. ಷೇಕ್ಸ್‌ಪಿಯರನ ನಾಟಕಗಳನ್ನು ಕನ್ನಡಕ್ಕೆ ತರುವ ಉದ್ಯಮದಲ್ಲಿ ಎಂ. ಎಸ್. ಪುಟ್ಟಣ್ಣನವರಲ್ಲದೆ ಎಂ. ಎಲ್. ಶ್ರೀಕಂಠೇಶಗೌಡರು, ಸಿ. ಸುಬ್ಬರಾವ್, ಬಸವಪ್ಪ ಶಾಸ್ತ್ರಿ, ಜಯರಾಯಚಾರ್ಯ ಮೊದಲಾದವರು ಶ್ರಮಿಸಿದರು.

ಕನ್ನಡವಲ್ಲದೆ ಬೇರೆ ಭಾಷೆಯ ಗಂಧವಿಲ್ಲದ ಪ್ರೇಕ್ಷಕರಿಗೆ ಷೇಕ್ಸ್‌ಪಿಯರನ ನಾಟಕಗಳ ಪರಿಸರ ರಸಾನುಭವಕ್ಕೆ ಅಡ್ಡಿಯಾಗಿತ್ತು. ಆದ್ದರಿಂದ ಮೂಲದ ಕಥೆಯನ್ನು ಇಲ್ಲಿಗೆ ಹೊಂದಿಸಿಕೊಂಡು ಬರೆಯುವುದು, ಅಂದರೆ—ನಾಟಕದಲ್ಲಿ ಪ್ರತಿಪಾದಿತವಾದ, ದೇಶಭಾಷೆಗಳನ್ನು ಮೀರಿದ ಚಿರಕಾಲಿಕ ಸತ್ಯವನ್ನು ಉಳಿಸಿಕೊಂಡು ಇಲ್ಲಿನ ಸಮಾಜಕ್ಕೆ ಆಭಾಸವೆನಿಸುವ ನಡವಳಿಕೆಗಳನ್ನು ತೆಗೆದುಹಾಕಿ ಸಹಜವೆನ್ನಿಸುವ ಸಂಗತಿಗಳನ್ನು ಸೇರಿಸುವುದು—ರೂಢಿಯಾಯಿತು. ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯವಿದ್ದವರಲ್ಲಿ ಹಲವರು ಭಾಷಾಂತರಗಳಿಗಿಂತ ಸ್ವಂತರಚನೆಯಲ್ಲಿ ಮನಸ್ಸು ನೆಟ್ಟರು. ಆದರೂ ಆರಂಭದ ದುಡಿಮೆಗಾರರ ಈ ವಲಯದ ಕೆಲಸ ಆಶಾದಾಯಕವಾಗಿಯೇ ಇತ್ತು. ಮೂಲನಾಟಕದ ಗದ್ಯಕ್ಕೆ ಗದ್ಯ, ಪದ್ಯಕ್ಕೆ ಪದ್ಯ ಬಳಸುವುದು ಪರಿಪಾಠವಾದಂತೆ ಪದ್ಯಗಳು ರಂಗಭೂಮಿಯಲ್ಲಿ ಹಾಡಾಗಿ ಪರಿವರ್ತನೆಗೊಳ್ಳುವುದೂ ಸಹಜವಾದ ಮಾತಾಯಿತು. ಮುಖ್ಯವಾಗಿ ಮೂಲದ ಸತ್ತ್ವವನ್ನು ಉಳಿಸಿಕೊಂಡು ಇಲ್ಲಿನ ರಂಗಭೂಮಿಯಲ್ಲಿ ಜಯಭೇರಿ ಪಡೆಯುವಂತೆ ಮಾಡುವುದು ಈ ನಾಟಕಗಳ ಉದ್ದೇಶವಾಯಿತು. ಕೇವಲ ಆಧಾರಿತ ಮಾತ್ರ ಎನ್ನುವಷ್ಟು ಹಲವು ನಾಟಕಗಳು ತಮ್ಮದೇ

ಜಾಡನ್ನು ಹೊಂದಿಸಿಕೊಂಡವು. ಹಲವರು ಆಗ ಜನಪ್ರಿಯವಾಗಿದ್ದ ಸಾಂಪ್ರದಾಯಿಕ ಶೈಲಿಯನ್ನು ಬಳಸಿದರು. ಅಲ್ಲಿನ ಗದ್ಯ ಕೂಡ ಸಲೀಸು ನಡೆಯಿಲ್ಲದೆ ವಿಚಿತ್ರವಾಗಿತ್ತು.

ಎಂ. ಎಸ್. ಪುಟ್ಟಣ್ಣನವರು ಷೇಕ್ಸ್‌ಪಿಯರನ ಮೂರು ನಾಟಕ[2] ಗಳನ್ನು ಕನ್ನಡಕ್ಕೆ ತಂದಿದ್ದಾರೆ. ಮೊದಲನೆಯದು 'ಸಿಂಬಲೈನ್' ನಾಟಕದ ರೂಪಾಂತರ 'ಜಯಸಿಂಹರಾಜ ಚರಿತ್ರೆ' (1881). ಇದು ಕಥನರೂಪದಲ್ಲಿದೆ. ಎರಡನೆಯದು 'ಕಿಂಗ್‌ಲಿಯರ್' ನಾಟಕದ ರೂಪಾಂತರ 'ಹೇಮಚಂದ್ರರಾಜ ವಿಲಾಸ'(1899). ಇದು ಗದ್ಯ ಪದ್ಯ ಮಿಶ್ರ ನಾಟಕ. ಮೂರನೆಯದು 'ಹ್ಯಾಮ್ಲೆಟ್' ನಾಟಕದ ರೂಪಾಂತರ 'ಹೇಮಲತ' (ರಚನೆ 1920, ಅಪ್ರಕಟಿತ). ಇದು ಕೂಡ ಗದ್ಯಪದ್ಯ ಮಿಶ್ರ ನಾಟಕ. ಮೂರು ಕೃತಿಗಳೂ ರೂಪಾಂತರಗಳೇ ಎಂಬುದು ಗಮನಾರ್ಹವಾದ ಅಂಶ. ಮೊದಲು ಬರೆದ 'ಜಯಸಿಂಹರಾಜ ಚರಿತ್ರೆ' ಕಥನರೂಪವನ್ನು ಅನಂತರ ನಾಟಕ ರೂಪ ವಾಗಿಯೂ ಬರೆದ ಸೂಚನೆಯಿದ್ದರೂ ಹಾಗೆ ಮಾಡಿದ್ದು ದೃಢಪಟ್ಟಿಲ್ಲ.

## ಜಯಸಿಂಹರಾಜ ಚರಿತ್ರೆ

ಉಪಲಬ್ಧ ವಿವರಗಳ ಪ್ರಕಾರ 'ಜಯಸಿಂಹರಾಜ ಚರಿತ್ರೆ' ಪುಟ್ಟಣ್ಣನವರ ಮೊತ್ತಮೊದಲ ಕೃತಿ. ಈ ಕೃತಿಯ ರಚನೆಯಲ್ಲಿ ಪುಟ್ಟಣ್ಣನವರು ತಮ್ಮ ಆಪ್ತ ಸ್ನೇಹಿತರಾದ ಶ್ರೀ ಎಂ. ಬಿ. ಶ್ರೀನಿವಾಸಯ್ಯಂಗಾರರ ಸಹಕಾರವನ್ನು ಪಡೆದಿದ್ದರು. ಈ ಕೃತಿ 'ಸಿಂಬಲೈನ್' ನಾಟಕದ ಸಂಕ್ಷಿಪ್ತ ಕಥನ.

ಮೂಲದ ಸನ್ನಿವೇಶಗಳನ್ನು ಇಲ್ಲಿನ ಪರಿಸರಕ್ಕೆ ಹೊಂದಿಸಿಕೊಳ್ಳುವುದರಲ್ಲಿ ಪುಟ್ಟಣ್ಣನವರು ಬಹಳ ಮಟ್ಟಿಗೆ ಜಯಶಾಲಿಗಳಾಗಿದ್ದಾರೆ. ಕೆಲವು ಉದಾಹರಣೆಗಳನ್ನು ನೋಡಬಹುದು.

1. ಇಮೊಜೆನ್ ಮೂಲದಲ್ಲಿ ಟೆರಿಯಸ್ ಮತ್ತು ಫಿಲೋಮೆಲ್ ಇವರ ಕಥೆಯನ್ನು ಓದಿದ್ದನ್ನು ಇಯಾಕಿಮೋ ಗುರುತಿಸುತ್ತಾನೆ. (ಪು. 1207) ಅನುವಾದದಲ್ಲಿ ಚಿತ್ರಲೇಖೆ ನಳ ದಮಯಂತೀ ಉಪಾಖ್ಯಾನವನ್ನು ಓದಿದ್ದನ್ನು ದೋಷದರ್ಶಿ ಗುರುತಿಸುತ್ತಾನೆ. (ಪು. 25)

2. ತನ್ನ ಪತಿಯನ್ನು ಕ್ಲಾಟೆನ್ ನಿಂದಿಸಿದಾಗ ಇಮೊಜೆನ್ ಕೋಪದಿಂದ ನೀನು ಜ್ಯೂಪಿಟರನ ಮಗನೇ ಆಗಿದ್ದರೂ, ಇಂಥ ಗುಣಗಳಿದ್ದಲ್ಲಿ ನನ್ನ ಪತಿಯ ಅಶ್ವರಕ್ಷಕನಾಗಿರಲೂ ಅಯೋಗ್ಯ ಎಂದು ಬೈಯುತ್ತಾಳೆ. (ಪು. 1209) ಕುಶೀಲನಿಂದ ತನ್ನ ಪತಿಯ ನಿಂದನೆ ಕೇಳಿದಾಗ ಚಿತ್ರಲೇಖೆ, ನೀನು ಬ್ರಹ್ಮನ ಮಗನೇ ಆಗಿದ್ದರೂ, ಇಂಥ ಗುಣಗಳುಳ್ಳವನಾಗಿರುವಾಗ ನನ್ನ ಪತಿಯ ಅಶ್ವರಕ್ಷಕನಾಗಿರಲೂ ತಕ್ಕವನಲ್ಲ ಎನ್ನುತ್ತಾಳೆ. (ಪು. 30)

3. ಪ್ರಮದೆ ಕ್ಲಿಯೋಪಾತ್ರ ತನ್ನ ರೋಮನ್ ಪ್ರಿಯಕರನೊಡನೆ ಸಿಡ್ನಸ್ ನದಿಯ ಬಳಿ ಸಂಧಿಸಿದಾಗ, ಸಿಡ್ನಸ್ ಮೇರೆ ಮೀರಿ ಹರಿದ ದೃಶ್ಯದ ಚಿತ್ರಪಠ ಮೂಲದಲ್ಲಿ ಪ್ರಸ್ತಾಪಿತ. (ಪು. 1210) ಅನುವಾದದಲ್ಲಿ ಶ್ರೀಕೃಷ್ಣ ಗೋಪಸ್ತ್ರೀಯರ ಜಲಕ್ರೀಡೆಯ ದೃಶ್ಯವೂ ಯಮುನಾ ನದಿ ಮೇರೆ ಮೀರಿ ಹರಿದದ್ದೂ ಪ್ರಸ್ತಾಪಿತ. (ಪು. 33) ಪತಿವ್ರತೆಯಾದ ಡಯಾನಾ ಸ್ನಾನ ಮಾಡುವ ದೃಶ್ಯದ ಚಿತ್ರಪಠ (ಪು. 1210) ಅನುವಾದದಲ್ಲಿ ಸೀತೆಯ ಸ್ನಾನ ಸನ್ನಿವೇಶದ ಚಿತ್ರವಾಗಿದೆ. (ಪು. 33)

4. ಕುಶಲವಾದ್ಯದ ಗಂಭೀರ ಸಂಗೀತ ಎಂದು ಮಾತ್ರ ಮೂಲದಲ್ಲಿದ್ದರೆ (ಪು. 1224) ಅನುವಾದದಲ್ಲಿ ರುದ್ರವೀಣೆಯಲ್ಲಿ ಮುಖಾರಿ ರಾಗ ಎಂದಿದೆ. (ಪು. 64)

5. ಮೂಲದಲ್ಲಿ ಕಾಲಜ್ಞಾನಿಯೊಬ್ಬನು ತಾನು ಉಪವಾಸ ಮಾಡಿ ಮಲಗಿದಾಗ ಜೋವನ ಹದ್ದು ಹಾರಿ ಬಂದದ್ದನ್ನು ಕಂಡೆ ಎಂದು ಹೇಳಿದರೆ (ಪು. 1226) ಅನುವಾದದಲ್ಲಿ ಜ್ಯೋತಿಷಿಯು ಏಕಾದಶಿಯಾದ್ದರಿಂದ, ಹರಿಕಥಾಶ್ರವಣದ ನಂತರ ನಿರಾಹಾರಿಯಾಗಿ ಮಲಗಿದಾಗ ಬ್ರಹ್ಮನ ರಾಜಹಂಸ ಹಾರಿಬಂದದ್ದನ್ನು ಕಂಡೆ ಎನ್ನುತ್ತಾನೆ. (ಪು. 67)

6. ಪಾಸ್ತು್ಯಮಸನ ಮೃತನಾಗಿದ್ದ ತಂದೆ ತನ್ನ ಹೆಂಡತಿ ಇಬ್ಬರು ಪುತ್ರರ ಜೊತೆ ಬಂದು ಜ್ಯೂಪಿಟರನನ್ನು ಧ್ಯಾನಿಸಿದಾಗ ಗೃಧ್ರದ ಮೇಲೆ ಕುಳಿತ ಜ್ಯೂಪಿಟರ್ ಅವನಿಗೆ ಅಭಯವಿತ್ತಂತೆ ಪಾಸ್ತು್ಯಮಸ್ ಕನಸು ಕಾಣುತ್ತಾನೆ. (ಪು. 1231–32) ಸಿಂಹಶಾಬನ ಕನಸಿನಲ್ಲಿ ಆತನ ಅಳಿದ ತಂದೆತಾಯಿ, ಇಬ್ಬರು ಸೋದರರು ಗರುಡ ವಾಹನ ಶ್ರೀಹರಿಯನ್ನು ಧ್ಯಾನಿಸಿದಾಗ, ಶ್ರೀಹರಿ ಪಿತೃದೇವತೆಗಳಿಗೆ ಅಭಯವನ್ನು ಕೊಡುತ್ತಾನೆ. (ಪು. 80)

ಮೂಲ ನಾಟಕ ಹಾಗೂ ರೂಪಾಂತರಗಳಲ್ಲಿ ಕೆಲವು ವ್ಯತ್ಯಾಸಗಳನ್ನೂ ಪುಟ್ಟಣ್ಣನವರು ಮಾಡಿಕೊಂಡಿದ್ದಾರೆ. ಅವುಗಳು ಇಂತಿವೆ.

1. ಮೂಲದಲ್ಲಿ ಸಿಂಬೆಲೈನ್ ಅವನ ರಾಣಿಯ ಎರಡನೆಯ ಗಂಡ. ಮೊದಲ ಗಂಡನಿಂದ ರಾಣಿಗೆ ಕ್ಲಾಟೆನ್ ಎಂಬ ಮಗನಿದ್ದಾನೆ. ರೂಪಾಂತರದಲ್ಲಿ ಪರಿಸರಕ್ಕೆ ಅನುಗುಣವಾಗಿ ರಾಣಿಗೆ ಎರಡು ಬಾರಿ ಮದುವೆಯಾದ ಪ್ರಸ್ತಾಪವಿಲ್ಲ. ಕುಶೀಲನನ್ನು ಅಕ್ಕನ ಮಗ ಎಂಬಂತೆ ಹೇಳಿದೆ.

2. ಮೂಲದ ಆನುಪೂರ್ವಿಯನ್ನು ರೂಪಾಂತರದಲ್ಲಿ ಅನುಸರಿಸಿಲ್ಲ. ಮೂಲದಲ್ಲಿ ಇಮೊಜೆನ್‌ಳನ್ನು ಪಿಸಾನಿಯೋ ಅರಮನೆಯಿಂದ ದೂರ ಬಿಟ್ಟುಬರುವುದು, ಲೂಸಿಯಸ್‌ನ ಬೀಳ್ಕೊಡುಗೆ, ಸಿಂಬಲೈನ್ ಇಮೊಜೆನ್‌ಳಿಗೆ ಹೇಳಿಕಳಿಸಿದಾಗ ಅವಳು ಅರಮನೆಯಲ್ಲಿ ಇಲ್ಲ ಎಂದು ತಿಳಿಯುವುದು, ಕ್ಲಾಟೆನ್‌ನ ಕೈಯಲ್ಲಿ ಪಿಸಾನಿಯೋ ಸಿಕ್ಕಿಹಾಕಿಕೊಳ್ಳುವುದು, ಇಮೊಜೆನ್ ಕಾಡಿನಲ್ಲಿ ಪುರುಷವೇಷದಲ್ಲಿ ಅಲೆಯುವುದು—ಈ ಅನುಕ್ರಮಣಿಕೆ ಇದೆ. ಅನುವಾದದಲ್ಲಿ ಚಿತ್ರಲೇಖೆಯನ್ನು ಪುಷ್ಕಳ ಬಿಟ್ಟು ಬಂದ

ನಂತರ ಗಂಡುವೇಷದ ಚಿತ್ರಲೇಖೆ ಅಲೆದು ಆಯಾಸಪಡುತ್ತಾಳೆ. ಮಧ್ಯದ ದೃಶ್ಯಗಳು ಅನಂತರ ಬರುತ್ತವೆ. ಲೂಸಿಯಸ್‌ನ ಬೀಳ್ಕೊಡುಗೆಯ ಸಂವಾದಿಯಾದ ದೃಶ್ಯ ಇಲ್ಲ.

ಮೂಲದಲ್ಲಿ ಇವೊಜೆನ್, ಬೆಲೇರಿಯಸ್, ಗೈಡೇರಸ್, ಅರ್ವಿರೇಗಸ್ ಇವರೊಡನೆ ರಾತ್ರಿ ತಂಗಿದ ದೃಶ್ಯವಾದ ಮೇಲೆ ಇಬ್ಬರು ರೋಮನ್ ಸೆನೇಟರುಗಳು ತಮ್ಮ ಅಧಿಕಾರವರ್ಗದವರೊಡನೆ ಸಾರ್ವಜನಿಕ ಸ್ಥಳದಲ್ಲಿ ಕಾಣಿಸಿಕೊಳ್ಳುತ್ತಾರೆ, ಅನಂತರ ಕ್ಲಾಟೆನ್ ಒಬ್ಬನೇ ಬರುತ್ತಾನೆ, ಬೆಲೇರಿಯಸ್ ಮತ್ತು ಇತರರು ಇವೊಜೆನ್ ಒಬ್ಬಳನ್ನೇ ಬಿಟ್ಟು ಬೇಟೆಗೆ ಹೋಗುತ್ತಾರೆ. ಇವೊಜೆನ್ ಪಿಸಾನಿಯೋ ಕೊಟ್ಟ ಔಷಧವನ್ನು ಸೇವಿಸುತ್ತಾಳೆ—ಈ ಅನುಕ್ರಮಣಿಕೆ ಇದೆ. ಅನುವಾದದಲ್ಲಿ ಚಿತ್ರಲೇಖೆ ಆರ್ಯಮಿತ್ರ, ಜಯಧ್ವಜ ಮತ್ತು ಶಾಂತಿಪ್ರಿಯರೊಡನೆ ತಂಗಿದ ಮೇಲೆ ಮರುದಿನ ಅವಳು ಒಬ್ಬಳೇ ಉಳಿದು ಮಿಕ್ಕವರು ಬೇಟೆಗೆ ಹೊರಡುತ್ತಾರೆ. ಚಿತ್ರಲೇಖೆ ಆಗ ಪುಷ್ಕಳ ಕೊಟ್ಟ ಮದ್ದನ್ನು ಸೇವಿಸುತ್ತಾಳೆ. ಮಧ್ಯೆ ಬಿಟ್ಟು ಹೋದ ದೃಶ್ಯ ಅನಂತರ ಬರುತ್ತದೆ. ರೋಮನ್ ಸೆನೇಟರುಗಳ ದೃಶ್ಯಕ್ಕೆ ಸಂವಾದಿ ದೃಶ್ಯ ಇಲ್ಲ.

3. ಮೂಲದಲ್ಲಿ ಬೆಲೇರಿಯಸ್‌ಗೆ ಮಾರ್ಗನ್, ಗೆಡೇರಿಯಸ್‌ಗೆ ಪಾಲಿಡೋರ್, ಅರ್ವಿರೀಗಸ್‌ಗೆ ಕ್ಯಾಡವಲ್ ಎಂಬ ಅಜ್ಞಾತನಾಮಗಳಿವೆ. ಅನುವಾದದಲ್ಲಿ ಈ ಅಜ್ಞಾತನಾಮಗಳ ಪ್ರಸಕ್ತಿಯಿಲ್ಲ.

4. ಮೂಲದಲ್ಲಿ ಅರ್ವಿರೀಗಸ್ ತನ್ನ ಹದಿನಾರು ವರ್ಷದ ಪ್ರಾಯದ ಬದಲು ಅರವತ್ತು ವರ್ಷದ ಮುದಿತನವನ್ನಾದರೂ ಸಹಿಸಿಯೇನು ಎನ್ನುತ್ತಾನೆ. (ಪು. 1224) ಅನುವಾದದಲ್ಲಿ ಹದಿನಾರು ವರ್ಷದ ಯೌವನದ ಬದಲು ಎಂಬತ್ತು ವರ್ಷದ ವಾರ್ಧಕ್ಯವನ್ನು ಸಹಿಸಿಯೇನು ಎಂದು ಶಾಂತಿಪ್ರಿಯನು ಹೇಳುತ್ತಾನೆ. (ಪು. 64)

ಪುಟ್ಟಣ್ಣನವರು ಮೂಲನಾಟಕವನ್ನು ಸಂಕ್ಷಿಪ್ತ ಕಥನವಾಗಿ ರೂಪಾಂತರಿಸಿರುವುದರಿಂದ 'ಜಯಸಿಂಹರಾಜ ಚರಿತ್ರೆ'ಯಲ್ಲಿ ಒಟ್ಟು ಭಾವ ಪ್ರತಿಫಲಿಸಿದೆ. ಸಂಸ್ಕೃತ ಪದಗಳ ಪ್ರಾಬಲ್ಯವಿದ್ದರೂ ಸಂವಹನಕ್ಕೆ ಕೊರತೆಯಿಲ್ಲ, ಕೆಲವು ಉದಾಹರಣೆಗಳನ್ನು ನೋಡಬಹುದು.

1. Belarius—How hard it is to hide the sparks of nature! (p. 1215)

ಆರ್ಯಮಿತ್ರ—ಆಹಾ ! ಸ್ವಭಾವಸಿದ್ಧವಾದ ಶಕ್ತಿಯ ತೇಜಸ್ಸಂ ಆಚ್ಛಾದಿಸುವುದು ಎಷ್ಟು ಕಷ್ಟ ! (ಪು. 44)

2. Belarius—...............weariness
Can snore upon the flint, when resty sloth
Finds the down pillow hard (p. 1220)

ಆರ್ಯಮಿತ್ರ—ಶ್ರಮಪಟ್ಟವನು ಮುರುಡುಕಲ್ಲಿನ ಮೇಲಾದರೂ ಮಲಗಿ ಸುಖ ನಿದ್ರೆಗೆಯ್ಯುವನು. ನಿರುದ್ಯೋಗಿಯು ಹಂಸತೂಲಿಕಾತಲ್ಪವನ್ನಾ

ದರೂ ಅಲೆಗಳೆದು ಕಣ್ಣುಮುಚ್ಚದೆ ಕುಳಿತಿರುವನೆಂಬುದು ಲೋಕ ಪ್ರಸಿದ್ಧವು. (ಪು. 51)

3. Lucius—Some falls are means the happier to arise (p. 1227)

ಕಲ್ಯಾಣಸುಂದರ–ಕೆಲವು ವೇಳೆಯಲ್ಲಿ ತಮ್ಮ ಆಪತ್ತುಗಳೇ ನಮ್ಮುಚ್ಛ್ರಾಯಕ್ಕೆ ಕಾರಣ. (ಪು. 69)

4. Gaoler—......he that sleeps feels not the toothache (p. 1232)

ಕಾವಲಿನವನು–ನಿದ್ರೆ ಮಾಡುವವನಿಗೆ ದಂತಯಾತನೆ ಇಲ್ಲ. (ಪುಟ. 82)

ಹಲವು ಬಾರಿ ಸೂಕ್ಷ್ಮ ವಿಚಾರಗಳಿಗೆ ಪುಟ್ಟಣ್ಣನವರು ಗಮನ ಕೊಡುವುದಿಲ್ಲ. ಒಂದು ಉದಾಹರಣೆಯನ್ನು ನೋಡಬಹುದು.

Iachimo—The roof o' th' chamber
With golden cherubins is fretted; her andirons-
I had forgot them-were two winking cupids
Of silver, each on one foot standing, nicely
Depending on their brands. (p. 1210)

ದೋಷದರ್ಶಿ–ಇದಲ್ಲದೆ ಮೇಲುಭಾಗದಲ್ಲಿ ದಂಡವನ್ನೂರಿಕೊಂಡು, ಕಣ್ಣಂ ಮುಚ್ಚಿಕೊಂಡು ಒಂಟಿಕಾಲಿನಲ್ಲಿ ನಿಂತಿರುವ ಅತಿ ಸುಂದರವಾದ ಎರಡು ಗಂಧರ್ವ ಪ್ರತಿಮೆಗಳು ಕೆತ್ತಲ್ಪಟ್ಟಿವೆ;... (ಪು. 33)

ಮೂಲದ 'winking' ಅನುವಾದದಲ್ಲಿ 'ಕಣ್ಣು ಮಿಟುಕಿಸುವ' ಎಂದಾಗ ಬೇಕಿತ್ತು. ಪುಟ್ಟಣ್ಣನವರು ಅದನ್ನು 'ಕಣ್ಣಂ ಮುಚ್ಚಿಕೊಂಡು' ಎಂದು ಅನುವಾದಿಸಿದ್ದಾರೆ.

'ಜಯಸಿಂಹರಾಜ ಚರಿತ್ರೆ' ಯಲ್ಲಿ ಕಾಣುವುದು ಹಳೆಯ ಪೌರಾಣಿಕ ಶೈಲಿ, ಕೃತ್ರಿಮವಾದ ಕೋಮಲವಾದ ಭಾಷೆ. ಆಡುಮಾತಿನ ಸಹಜ ಸೌಂದರ್ಯವನ್ನು ಇಲ್ಲಿನ ಬರವಣಿಗೆ ಒಳಗೊಂಡಿಲ್ಲ. ಎರಡು ಉದಾಹರಣೆಗಳನ್ನು ನೋಡಬಹುದು.

"ಆ ಕಾಲದಲ್ಲಿ ಚಿತ್ರಲೇಖೆಯು ದುಃಖಿತಳಾಗಿ ತಂದೆಯಂ ಕುರಿತು—ಅಪ್ಪಾಜೀ, ಈ ನಿಮ್ಮ ಕ್ರೌರ್ಯಕ್ಕೂ ನನ್ನ ಮರಣಕ್ಕೂ ಲೇಶ ಮಾತ್ರವೂ ವ್ಯತ್ಯಾಸವಿಲ್ಲ; ಇವೆರಡೂ ಒಂದೇ ವಿಧವಾದ ವ್ಯಸನವನ್ನು ಉಂಟುಮಾಡುತ್ತಲಿವೆ—ಎಂದು ಹೇಳಲು; ಜಯಸಿಂಹನು—ಅವಿಧೇಯಳೇ, ನಿನ್ನ ಸಂತೋಷ ಕಾರ್ಯಗಳಿಂದ ನನಗೆ ಯೌವನ ಬರುವ ಹಾಗೆ ಮಾಡುವುದಂ ಬಿಟ್ಟು, ಚಿಂತೆಯನ್ನುಂಟುಮಾಡಿ ಮುಪ್ಪಂ ಹೆಚ್ಚಿಸುತ್ತೀಯೇ; ಎನಲಾಗಿ ಚಿತ್ರಲೇಖೆಯು—ಅಪ್ಪಾಜೀ, ಈ ನಿಮ್ಮ ಕೋಪದಿಂದ ಯಾಕೆ ಹಿಂಸೆಯನ್ನು ಉಂಟು ಮಾಡಿಕೊಳ್ಳುವಿರಿ? ಅದು ನನ್ನನ್ನು ಏನೂ ಮಾಡಲಾರದು; ಶೋಕವು ನನ್ನ ಹೃದಯಂ ನಿಬಿಡವಾಗಿ ಆಕ್ರಮಿಸಿರುವ ಕಾರಣ ಯಾವ ಯಾತನೆಯೂ ಯಾವ ಭಯವೂ

ನನಗಿಲ್ಲವೆನಲು: ಜಯಸಿಂಹನು—ಇದು ವಿಧೇಯತೆಯೋ, ಇನ್ನು ಮೇಲೆ ನಿನ್ನ ಒಳ್ಳೇ ನಡತೆಯಿಂದ ನನ್ನ ಕೃಪೆಗೆ ನೀನು ಪಾತ್ರಳಾಗುವುದು ಅಸಾಧ್ಯವೇ? ಎನಲು; ಚಿತ್ರ ಲೇಖೆಯು—ತಮ್ಮಿಂದ ನನಗೆ ಕೈಗೂಡುವ ಕೋರಿಕೆ ಯಾವುದೂ ಇಲ್ಲವಾಗಿ ನಿಮ್ಮ ಕೃಪೆಗೆ ನಾನು ಪಾತ್ರಳಾಗುವುದು ಅಸಾಧ್ಯವೇ ಸರಿ, ಎಂದ ಮಾತಿಗೆ ರಾಜನು—ನೀನು ಕುಶೀಲನಂ ಅಂಗೀಕರಿಸಬಹುದಾಗಿತ್ತು ಎಂದನು. ಇದಂ ಕೇಳಿ ರಾಜಕುಮಾರಿಯು- ಪರಮೇಶ್ವರಾ! ಹಾಗೆ ಮಾಡದಂತೆ ಬುದ್ಧಿಯಂ ಕೊಡುವನಾಗು; ನಾನು ಗರುಡನಂ ವರಿಸಿ ಕಾಗೆಯಂ ತ್ಯಜಿಸಿದೆನು; ಎಂದ ಮಾತಿಗೆ ರಾಜನು ಮುನಿದು—ನೀನು ಗೋಪಾ ಳದವನಂ ವರಿಸಿ ನನ್ನ ಸಿಂಹಾಸನಮಂ ಆ ನೀಚನಿಗೆ ಸ್ಥಾನವಾಗಿ ಮಾಡಿದೆ ಎಂದನು." (ಪು. 6–7)

2. "ತರುವಾಯ ಪ್ರಾತಃಕಾಲ ರಾಜಕುಮಾರಿಯು ಭಗವನ್ನಾಮ ಸಂಕೀರ್ತನ ಪುರಸ್ಸರವಾಗಿಯೇ ಹಾಸುಗೆಯಿಂದೆದ್ದು, ಮುಖಪ್ರಕ್ಷಾಳನಾದಿಗಳಂ ತೀರಿಸಿಕೊಂಡು, ಉದ್ಯಾನವನದಲ್ಲಿ ಗಿಡಗಳಿಗೆ ನೀರಂ ಹಾಕಿಸುತ್ತಾ, ಇವಳ ದರ್ಶನ ಮಾತ್ರದಿಂದಲೇ ಉಬ್ಬಿ ಬರುವ ಸಂತೋಷವಂ ತಮ್ಮ ವಿಕಸನದಿಂದ ತೋರಿಸುತ್ತವೆಯೋ ಎಂಬಂತೆ ಅರಳಿರುವ ಹೂವುಗಳಂ ಕುಯ್ಯುತ್ತಾ, ಕ್ಷಣೇ ಕ್ಷಣೇ ಅವುಗಳ ವಾಸನೆಯಂ ನೋಡುತ್ತಾ, ಶುಕಪಿಕಶಾರಿಕಾದಿ ಪಕ್ಷಿಗಳ ಇಂಚರವಂ ಅಲ್ಲಲ್ಲಿ ನಿಂತು ಆಲಿಸುತ್ತಾ, ಈ ಲತಾಂಗಿಯ ಕರತಲವಂ ನೋಡಿ, ಲಜ್ಜೆಯಿಂ ಬೆಮರಿ ಕೆಂಪಡರ್ದುದೋ ಎಂಬಂತೆ ಹಿಮಬಿಂದುಯುಕ್ತವಾದ ಚಂದಳಿರ್ಗಳಂ ಸ್ಪರ್ಶಿಸುತ್ತಾ; ಅದೇ ಮಾರ್ಗದಲ್ಲಿಯೇ ದೃಷ್ಟಿಗೆ ಬಿದ್ದ ಒಂದೆರಡು ಅಂಜೂರದ ಫಲಗಳಂ ರುಚಿ ನೋಡದೆ ಕಯ್ಯಲ್ಲಿ ಪಿಡಿದು ಪತಿಯಂ ನೆನೆದು—ಹಾ! ನನ್ನ ಪ್ರಿಯನೇ! ಇಂಥಾ ವಿಹಾರ ಸೌಖ್ಯವಂ ನಾವಿಬ್ಬರೂ ಸೇರಿ ಯಾವಾಗ ಅನುಭವಿಸುವೆವೋ? ಈ ಅಮೃತವೆಲ್ಲಾ ಈಗ ವಿಷವಾಯಿತು; ಎಂದು ಹಂಬಲಿಸುತ್ತಾ ಚೆಂಬಿಸಿಲೊಳೆ ಶತಪಥಂಗೈಯುತ್ತಿದ್ದಳು." (ಪು. 25–26)

ದೊಡ್ಡ ದೊಡ್ಡ ವಾಕ್ಯಗಳು, ಪುರಾಣ ಹರಿಕಥೆಗಳ ಧಾಟಿ, ಬಿಗಿಯಾದ ವ್ಯಾಕರಣ ಇಲ್ಲಿ ಕಂಡುಬರುವ ಗುಣಗಳು. ಇಂಥ ಬರವಣಿಗೆಯ ವೈಫಲ್ಯವನ್ನು ಕಂಡು ಕೊಂಡ ಮೇಲೆ ಪುಟ್ಟಣ್ಣನವರು ಜಿಗುಟು ಕಾಗುಣಿತವಿಲ್ಲದ ಆಡುನುಡಿಯ ಮೊರೆ ಹೋದರು. ಪೆಡಸು ಜಿಗುಟುಗಳಿಂದ ಕೂಡಿದ ಬಿಗಿಯಾದ ನಡೆಯ ಇಲ್ಲಿನ ಭಾಷೆ ಮೆಚ್ಚುಗೆಯನ್ನು ಗಳಿಸುವುದಿಲ್ಲ. ಇದು ಆಗಿನ ಗ್ರಾಂಥಿಕ ಗದ್ಯಕ್ಕೆ ಕನ್ನಡಿಯನ್ನು ಹಿಡಿಯುವಂಥದು.

'ಜಯಸಿಂಹರಾಜ ಚರಿತ್ರೆ' ಗೆ ದೊರಕಿದ ಪ್ರೋತ್ಸಾಹದಿಂದ ಪುಟ್ಟಣ್ಣನವರು ತಮ್ಮ ಮುಂದಿನ ಷೇಕ್ಸ್‌ಪಿಯರನ ನಾಟಕಗಳ ರೂಪಾಂತರಗಳಿಗೆ ಕೈಯಿಟ್ಟರು. ರಮ್ಯವೂ ಕುತೂಹಲಕರವೂ ಆದ ಘಟನೆಗಳ 'ಜಯಸಿಂಹರಾಜ ಚರಿತ್ರೆ' ಯಂಥ ಸುಖಾಂತ ನಾಟಕಗಳಿಗಿಂತ, ಜೀವನದ ಗಂಭೀರವಾದ ಪಕ್ಕವನ್ನು ಪ್ರತಿಸೃಷ್ಟಿಸುವ, ಘನವಾದ, ವಿಷಾದದಿಂದ ಕೂಡಿದ ದುರಂತ ನಾಟಕಗಳು ಅವರನ್ನು ಹೆಚ್ಚು

ಆಕರ್ಷಿಸಿದವು. ಭಾಷಾಂತರಗಳಿಗಿಂತ ರೂಪಾಂತರಗಳನ್ನು ರಚಿಸುವ ಆಲೋಚನೆಯೂ ಬಹುಶಃ ಈ ಕೃತಿಯಿಂದಲೇ ಗಟ್ಟಿಯಾಯಿತು. ತಮ್ಮ ಮುಂದಿನ ರೂಪಾಂತರಗಳಲ್ಲಿ ಗದ್ಯವೊಂದನ್ನೇ ನೆಮ್ಮಬಹುದಾದ ನಂಬಿಕೆಯೂ ಪುಟ್ಟಣ್ಣನವರಿಗೆ ಈ ಕೃತಿಯಿಂದಲೇ ಸಿಕ್ಕಿತು. ಈ ಎಲ್ಲ ಅಂಶಗಳು 'ಜಯಸಿಂಹರಾಜ ಚರಿತ್ರೆ' ಯ ಐತಿಹಾಸಿಕ ಮಹತ್ತ್ವಕ್ಕೆ ಇತರ ಮಹತ್ತ್ವಗಳನ್ನು ಸೇರಿಸಿವೆ.

## ಹೇಮಚಂದ್ರರಾಜ ವಿಲಾಸ

ಎಂ. ಎಸ್. ಪುಟ್ಟಣ್ಣನವರ ಷೇಕ್ಸ್‌ಪಿಯರ್ ನಾಟಕಗಳ ರೂಪಾಂತರಗಳಲ್ಲಿ 'ಹೇಮಚಂದ್ರರಾಜ ವಿಲಾಸ' ಮೊದಲ ಗದ್ಯಪದ್ಯಮಿಶ್ರ ನಾಟಕ. ಇದು ಪೂರ್ಣ ಪ್ರಮಾಣದ ಕೃತಿಯೂ ಹೌದು. ಪುಟ್ಟಣ್ಣನವರ ಮೊದಲ ರೂಪಾಂತರ 'ಜಯ ಸಿಂಹರಾಜ ಚರಿತ್ರೆ' ಸಂಕ್ಷಿಪ್ತ ಕಥನ ಎಂಬುದನ್ನು ಇಲ್ಲಿ ನೆನೆಯಬಹುದು.

ರೂಪಾಂತರಗಳಲ್ಲಿ ಅವಶ್ಯವಾದ ಮಾರ್ಪಾಡುಗಳನ್ನು ಪುಟ್ಟಣ್ಣನವರು ಇಲ್ಲಿಯೂ ಮಾಡಿಕೊಂಡಿದ್ದಾರೆ. ಕೆಲವು ಉದಾಹರಣೆಗಳನ್ನು ನೋಡಬಹುದು.

1. ಮೂಲದ ಡ್ರೇಗನ್ ಮತ್ತು ಅದರ ಕ್ರೋಧದ ನಡುವೆ ಬರಬೇಡ (ಪು. 30) ಎಂಬುದು ರೂಪಾಂತರದಲ್ಲಿ ಮಹಾಸಿಂಹನಿಗೂ ಆನೆಗೂ ಮಧ್ಯ ಬರಬೇಡ (ಪು. 5) ಎಂದಾಗಿದೆ. ಡ್ರೇಗನ್ ಎಂಬ ಊಹಾತ್ಮಕ ಸರ್ಪ ಅಥವಾ ಮೊಸಳೆಯಾಕಾರದ ಭೂತ ಹಾಗೂ ಅದರ ಕೋಪ ಎಂಬಲ್ಲಿ ಕಾಣುವ ಗಾಢವಾದ ಅರ್ಥ ರೂಪಾಂತರದಲ್ಲಿ ಇಳಿದಿಲ್ಲ. ಒಂದು ಸಂಸ್ಕೃತಿಯ ಪದಸಮುಚ್ಚಯಕ್ಕೆ ಇನ್ನೊಂದು ಸಂಸ್ಕೃತಿಯಲ್ಲಿ ಸಮಾನವಾಗಬಹುದಾದ ಪದಸಮುಚ್ಚಯ ದೊರಕದಿದ್ದಾಗ ಇಂಥ ಮಿತಿ ಅನಿವಾರ್ಯ ವಾಗುತ್ತದೆ.

2. ಮೊಟ್ಟೆಯನ್ನು ಮಧ್ಯಕ್ಕೆ ಕುಯಿದು ಒಳಗಿನ ಸಾರವನ್ನು ತಿಂದ ಮೇಲೆ ಉಳಿಯುವ ಮೊಟ್ಟೆಯ ಖಾಲಿ ಚಿಪ್ಪಿನ ಬಗೆಗೆ (ಪು. 52) ಬರುವ ಪ್ರಸ್ತಾಪ ಅನು ವಾದದಲ್ಲಿ ಮೊಟ್ಟೆಯನ್ನು ಮಧ್ಯದಲ್ಲಿ ಕುಯಿದು ಒಳಗಿನ ಲೋಳಿಯನ್ನು ಚೆಲ್ಲಿದ ಮೇಲಿನ ಖಾಲಿಚಿಪ್ಪು (ಪು. 25) ಎಂದಾಗಿದೆ. ಮುಂದೆ ರಕ್ತ ಸುರಿಯುವ ಗಾಯದ ಭಾಗಗಳಿಗೆ ಲೇಪಿಸಲು ಮೊಟ್ಟೆಯ ಬಿಳಿಭಾಗವನ್ನು ಉಪಯೋಗಿಸುವ ಪ್ರಸ್ತಾಪ ಮೂಲದಲ್ಲಿದೆ (ಪು. 115). ರೂಪಾಂತರದಲ್ಲಿ ಗಾಯಕ್ಕೆ ಲೇಪಿಸಲು ಗಾಯದೆಣ್ಣೆ ಯನ್ನು ತರುವ ಪ್ರಸ್ತಾಪವಿದೆ. (ಪು. 77)

3. ಮೂಲದ ಕಾಳಿಲ್ಲದ ಬಟಾಣಿಸಿಪ್ಪೆ (ಪು. 54) ಎಂಬುದು ಅನುವಾದದಲ್ಲಿ ಅವರೇಕಾಯಿಸಿಪ್ಪೆ (ಪು. 26) ಯಾಗಿದೆ.

4. ಮೂಲದ ಜ್ಯೂಪಿಟರ್ ಮತ್ತು ಜ್ಯುನೋ (ಪು. 77) ಅನುವಾದದಲ್ಲಿ ಶಿವಭವಾನಿಯರಾಗಿದ್ದಾರೆ. (ಪು. 46)

5. ಮೂಲದ ಫ್ಲೆಗೆಟೋ, ನೀರೋ ಮತ್ತು ಅಂಧಕಾರದ ಸರೋವರ (ಪು. 106) ಅನುವಾದದಲ್ಲಿ ಕ್ರಮವಾಗಿ ಮೋಹಿನಿ, ರಾವಣ ಮತ್ತು ವೈತರಣೀ ನದಿಗಳಾಗಿವೆ. (ಪು. 69)

ಮೇಲಿನ ಎಲ್ಲ ಉದ್ದೇಶಗಳಲ್ಲೂ ಯಾವುದೇ ಸಂಗತಿಯನ್ನು ತಮ್ಮ ಸುತ್ತಲಿನ ಸಮಾಜಕ್ಕೆ ಹೊಂದಿಸಿಕೊಳ್ಳುವ ಪ್ರಯತ್ನ ಕಾಣುತ್ತದೆ. ಶಿವ, ಭವಾನಿಯರ ಪ್ರಸ್ತಾಪ, ಮೋಹಿನಿ, ರಾವಣ, ವೈತರಣೀ ನದಿಗಳ ಪ್ರಸ್ತಾಪಗಳು ಸಂವಹನಕ್ಕೆ ಅನುಕೂಲ ವಾಗುವಂತೆಯೇ ಉಪಯೋಗಿಸಲ್ಪಟ್ಟಿವೆ.

## ಭಾಷೆ

ಪುಟ್ಟಣ್ಣನವರ ರೂಪಾಂತರದ ಸಿದ್ಧಿಗೆ ಅವರು ಪದ್ಯವನ್ನು ಕೈಬಿಟ್ಟು ಗದ್ಯವನ್ನೇ ಆಶ್ರಯಿಸಿರುವುದು ಒಂದು ಕಾರಣ. ಪದ್ಯದ ಬಿಕ್ಕಟ್ಟುಗಳು ಬಹುಮಟ್ಟಿಗೆ ತೊಂದರೆ ಕೊಡುವ ಸಂಭವಗಳೇ ಆಗುತ್ತಿದ್ದವು. ಅಲ್ಲದೆ ಪುಟ್ಟಣ್ಣನವರ ಮಾಧ್ಯಮ ಗದ್ಯ. ಇಲ್ಲಿಯ ಗದ್ಯ—ಅದು ರಚಿತವಾದ ಕಾಲವನ್ನು ನೆನೆದರೆ—ಮೆಚ್ಚುಗೆಗೆ ಪಾತ್ರ ವಾಗುತ್ತದೆ. ಕೆಲವು ಉದಾಹರಣೆಗಳನ್ನು ನೋಡಬಹುದು.

"ಧೊರೆ—ಅಯ್ಯೋ ಪ್ರಕೃತಾಪ್ರಕೃತಗಳ ಮಾತನ್ನಾಡಬೇಡ. ಗೋಪಾಳದವ ರಾದರೂ ಸರಿಯೆ, ಕೆಲಸಕ್ಕೆ ಬಾರದ ಒಂದು ಪದಾರ್ಥವನ್ನು ತಮಗೆ ಪ್ರಕೃತ ವಿಲ್ಲದಿದ್ದಾಗ್ಯೂ ಹೆಚ್ಚಾಗಿ ಇಟ್ಟುಕೊಂಡಿರುವರು, ಪ್ರಕೃತಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರವೇ ವದಗಿಸಿ ನೋಡು, ಮನುಷ್ಯನ ಬಾಳೂ ತಿರ್ಯಕ್ ಜಂತುಗಳ ಬಾಳೂ ಎರಡೂ ಒಂದೇಯಾಗಿರುವುದು. ಬೆಚ್ಚಗೆ ಉಡುಪನ್ನು ಹಾಕಿಕೊಳ್ಳುವುದೇ ಡಂಭವಾಗಿ ತೋರಿದ ಪಕ್ಷಕ್ಕೆ, ಮೈಗೆ ಬೆಚ್ಚಗಿಲ್ಲದೆ ಡಂಭವಾಗಿ ಹಾಕಿಕೊಂಡಿರುವ ಉಡಪು ಅಪ್ರಕೃತವಾದ್ದು. ನಿಜವಾಗಿಯೂ ಬೇಕಾದ್ದೇನೆಂದರೆ—ದೇವರೇ, ಸಹನವನ್ನು ನೀಡು, ಸಹನವೇ ನನಗೆ ಬೇಕಾದ್ದು, ದೇವರೇ, ಭಾಗ್ಯಹೀನನಾಗಿರುವ ಮುದಕನಾದ ನಾನು ವ್ಯಸನದಿಂದಲೂ ವಾರ್ಧಿಕ್ಯದಿಂದಲೂ ಪೀಡಿತನಾಗಿದ್ದೇನೆ. ಇವೆರಡರ ಬಾಧೆ ಯಿಂದಲೂ ಮಗ್ನನಾಗಿರುವಂತೆ ಮಾಡಿದೀರಿ. ಹೀಗೆ ತಂದೆಗೆ ವಿರೋಧವಾದ ಹೃದಯವನ್ನೂ ಈ ಹೆಮ್ಮಕ್ಕಳಿಗೆ ಕೊಟ್ಟವರು ನೀವೇ ಆದರೆ, ಅದನ್ನು ಸಾತ್ವಿಕನಾಗಿ ಸಹಿಸಿಕೊಂಡಿರುವಂಥಾ ಅವಿವೇಕವನ್ನು ಮಾತ್ರ ನನಗೆ ಕೊಡಬೇಡಿ. ಗಂಭೀರವಾದ ಆಗ್ರಹ ನನ್ನನ್ನು ಸೋಕಲಿ. ಹೆಂಗಸಿನ ಆಯುಧವಾದ ಕಂಬನಿಗಳ ಕರೆ ಗಂಡಸಾದ ನನ್ನ ಕೆನ್ನೆಯ ಮೇಲೆ ಹರಿದು ಕೆಡಿಸದಿರಲಿ. ಎಲೆ ದಯಾರಹಿತರಾದ ಚಂಡಾಲ ಸ್ತ್ರೀಕರಾಳಿಗಳಿರಾ; ಲೋಕವೆಲ್ಲಾ ಕಂಪಿಸುವಂತೆ ನಿಮ್ಮಿಬ್ಬರ ಮೇಲೆಯೂ ನನ್ನ ದುಃಖವನ್ನು ತೀರಿಸಿಕೊಳ್ಳುತೇನೆ. ಎಂಥಾ ಕೆಲಸಕೊಡುತೇನೆಂದರೆ—ಇಂಥಾದ್ದೇ ಎಂದು ಈಗ ನಾನರಿಯೆ. ಆದರೆ ಅದರಿಂದ ಭೂಮಿಯೆಲ್ಲಾ ಭಯದಿಂದ ಗಡಗಡನೆ

ನಡಗಿ ಹೋದೀತು. ನಾನು ಅಳುತೇನೆಂದು ತಿಳಿದಿದ್ದೀರೊ? ಇಲ್ಲ ನಾನು ಅಳುವುದಿಲ್ಲ. ಈ ಹೃದಯವು ಒಂದು ಲಕ್ಷ ಚೂರಾಗಿ ಒಡೆದು ಹೋಗುವ ತನಕಲೂ ನಾನು ಅಳುವುದಿಲ್ಲ. ಎಲಾ ವಿದೂಷಕ, ನನಗೆ ಹುಚ್ಚು ಹಿಡಿಯುವುದಲ್ಲೊ!" (ಪು. 55)

ಹೇಮಚಂದ್ರ ಮುಖ್ಯವಾಗಿ ಒಬ್ಬ ದೊರೆ. ಹುಚ್ಚಿನಲ್ಲೂ ಈ ಅಂಶ ಅವನ ಮನಸ್ಸಿನಿಂದ ಮರೆಯಾಗಿಲ್ಲ. 'ಹೆಜ್ಜೆ ಹೆಜ್ಜೆಗೂ ಧೊರೆ' ಎನ್ನುತ್ತಾನೆ. ತನ್ನನ್ನು ಎಲ್ಲರೂ ಓಲೈಸಬೇಕೆನ್ನುವುದು ಇವನ ಆಸೆ. ತಾವಾಗಿಯೇ ತಿಳಿದುಕೊಂಡು ಹಾಗೆ ಮಾಡಲೆಂಬುದು ಇನ್ನೂ ಗೂಢವಾದ ಆಸೆ. ಹೊಗಳಿಕೆಗೆ ಮರುಳಾಗುವ ಬಾಲಸಹಜ ಬುದ್ಧಿಯ ಒಂದೆಳೆ ಇವನ ಮುಪ್ಪಿನಲ್ಲಿಯೂ ಉಳಿದಿದೆ. ತನ್ನ ಎಣಿಕೆಯಂತೆ ಕಿರಿಯ ಕುಮಾರಿ ಹೊಗಳಲಿಲ್ಲ ಎಂದು ಅವಳನ್ನು ತಿರಸ್ಕರಿಸಿದ. ಮಿಕ್ಕ ಇಬ್ಬರು ಹೆಣ್ಣು ಮಕ್ಕಳಿಗೇ ಎಲ್ಲವನ್ನೂ ಕೊಟ್ಟ, ರಾಜ್ಯವನ್ನು ಹಂಚಿದ. ತನ್ನ ಮೂರ್ಖತನದ ಅರಿವಾದ ಮೇಲೆ ಅವರನ್ನೂ ಶಪಿಸಿದ. ಅವರುಗಳ ದುಷ್ಟತನಕ್ಕಿಂತಲೂ ತನ್ನನ್ನು ಸರಿಯಾಗಿ ನಡೆಸಿಕೊಳ್ಳಲಿಲ್ಲವೆಂಬುದೇ ಇವನ ದೂರು. ಇದೇ ಇವನ ವ್ಯಕ್ತಿತ್ವದ ದುರಂತ. ಅಧಿಕಾರ ತನ್ನ ಕೈಯಲ್ಲಿದ್ದಾಗ ಸರಿಯಾಗಿ ಲೋಕವನ್ನು ತಿಳಿಯಲಿಲ್ಲ. ಲೋಕ ತಿಳಿಯುವ ಹೊತ್ತಿನಲ್ಲಿ ಅಧಿಕಾರ ಕೈಯಲ್ಲಿಲ್ಲ. ಸತ್ಯವನ್ನು ನಿರ್ಲಕ್ಷಿಸಿ ತನ್ನದೇ ಭ್ರಾಂತಿಯಲ್ಲಿ ವಿಹರಿಸಿದ ದೊರೆಗೆ ಕಡೆಗೂ ಸತ್ಯವನ್ನು ಗಣಿಸಲೇಬೇಕಾದ ಸ್ಥಿತಿ ಬರುತ್ತದೆ. ಪುಟ್ಟಣ್ಣನವರ ರೂಪಾಂತರದಲ್ಲಿ ಈ ಸಂವಹನಕ್ಕೆ ಕೊರೆ ಬಂದಿಲ್ಲ.

ನಿಷ್ಕಂಟಕ ಹೇಳುವ "ಇವ ಅಷ್ಟೊಂದು ಕೋಡಂಗಿ ಅಲ್ಲ ಪ್ರಭುವೆ" (ಪು. 24) ಎಂಬ ಮಾತಿಗೆ ವಿದೂಷಕ ಹೀಗೆ ಉತ್ತರಿಸುತ್ತಾನೆ:

"ವಿದೂಷಕ—ಖಂಡಿತವಾಗಿಯೂ ಅಲ್ಲ; ಮಂತ್ರಿಗಳೂ ಪ್ರಧಾನಿಗಳೂ ನನಗೆ ಅದನ್ನು ಬಿಡರು. ನನ್ನ ಹೆಸರಿನ ಮೇಲೆ ಅದನ್ನು ನಾನು ಒಟ್ಟು ಗುತ್ತಿಗೆಗಾಗಿ ಪಡೆದು ಕೊಂಡರೆ, ಅದರಲ್ಲಿ ತಮ್ಮದೂ ಒಂದು ಪಾಲೆಂದು ಬರುವರು. ರಾಜಸ್ತ್ರೀಯರೂ ಕೂಡ ಕೋಡಂಗಿತನದ ಅವಿವೇಕವನ್ನು ನನಗೆ ಕೊಡರು; ನನ್ನ ಕೈಯಿಂದ ಕಿತ್ತು ಕೊಳ್ಳುತ್ತಾರೆ." (ಪು. 24)

ಇಲ್ಲಿ ವಿದೂಷಕನ ಪಾತ್ರ ಪ್ರಗಲ್ಭವಾದದ್ದು. ತನ್ನನ್ನು ಕಂಡರೆ ದೊರೆಗೆ ಮೆಚ್ಚುಗೆ ಎಂಬುದನ್ನರಿತ ವಿದೂಷಕ ಯಾವುದೇ ವಿಚಾರವನ್ನು ಯಾರೂ ಹೇಳದ ರೀತಿಯಲ್ಲಿ ದೊರೆಗೆ ಹೇಳುತ್ತಲೇ ಬಂದನು. ದೊರೆ ದೇಶ ಹಂಚಿದ ಸಂಗತಿ, ಹಂಚಿದ ರೀತಿಗಳು ಸರಿಯಲ್ಲ ಎಂಬುದನ್ನು ತಿಳಿಸುತ್ತಲೇ ಇದ್ದನು. ದುಃಖದ ಸನ್ನಿವೇಶಗಳ ನಡುವೆ ಒಂದು ನಗೆಯ ಸಮಾಧಾನವೂ ಇವನಿಂದ ದೊರಕುವುದರ ಜೊತೆಗೇ ಭಾವೋ ದ್ವೇಗದ ಒಂದು ನಿಲುಗಡೆಯೂ ದೊರಕಿತು. ಅಳುವನ್ನೇ ಮೂಲವಾಗುಳ್ಳ ನಗೆ ಇವನದಾದ್ದರಿಂದ ಕಥೆಯ ದುರಂತವಸ್ತುವಿಗೆ ಇವನ ನಗು ಹೊರೆಯಾಗಲಿಲ್ಲ. ದೊರೆ ಮೆಚ್ಚಿದ್ದ, ನೆಚ್ಚಿದ್ದ, ಬಹುಶಃ ಗರ್ವಿಸಿದ್ದ ರಾಜ ಪ್ರತಿಷ್ಠೆಯ ಸಂಕೇತವಾಗಿ ದೊರೆಗೆ ಉಳಿದಿರುವುದು ಈ ವಿದೂಷಕನೊಬ್ಬನೇ. ವಾಸ್ತವತೆಯ ಪ್ರತಿನಿಧಿಯಾಗಿ

ನಿಂತು ದೊರೆಯ ಭ್ರಾಂತಿಮೂಲವಾದ ಹೆಮ್ಮೆಯನ್ನು ಚುಚ್ಚಿ ಅದರ ಟೊಳ್ಳನ್ನು ಅವನಿಗೆ ಅರಿವಾಗುವಂತೆ ಸಹಕರಿಸಿದನು. ಪುಟ್ಟಣ್ಣನವರ ಸರಳ ಶೈಲಿ ಈ ವ್ಯಂಗ್ಯವನ್ನು ತಕ್ಕಮಟ್ಟಿಗೆ ಸೆರೆಹಿಡಿದಿದೆ.

ಭಾಷೆಯ ಲವಲವಿಕೆಯನ್ನು ಕನ್ನಡದ ಪರಿಸರವನ್ನು ಕೃತಿ ಎಷ್ಟರ ಮಟ್ಟಿಗೆ ಹೊಂದಿದೆ ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ನೋಡಬಹುದು.

Regan—For his perticular, I'll receive him gladly.
But not one follower. (p. 88)

ವಿಷಜೆ—ಅವನು ತನ್ನ ಮಟ್ಟಿಗೆ ಸಂತೋಷವಾಗಿ ನನ್ನ ಮನೆಯಲ್ಲಿ ಬಂದಿರಲಿ;
ಇನ್ನೊಂದು ಹುಳು ಕೂಡದು. (ಪು. 56)

Gloucester— .........but I shall see
The winged vengeance overtake such children.
(p.113)

ದುಃಖಸಾರ–ಇಂಥಾ ಹಾಳಮಕ್ಕಳಿಗೆ ತಕ್ಕ ಪ್ರಾಯಶ್ಚಿತ್ತವು ಜಾಗ್ರತೆಯಲ್ಲಿ
ಆಗುವುದನ್ನು ನಾನು ನೋಡಿಯೇನು. (ಪು. 76)

Gloucester—Is that the naked fellow ? (p. 118)

ದುಃಖಸಾರ—ಯಾರು, ಆ ಬೆತ್ತಲಬುರುಕನೇಯೋ (ಪು. 79)

Goneril—I have been worth the whistle. (p. 121)

ನಾಗವೇಣಿ—ಏನು, ನಾನು ಒಂದು ಕಾಸಿಗೂ ಬೇಡದವಳಾದೆ. (ಪು. 82)

Gloucester—What ! with the case of eyes ? (p. 136)

ದುಃಖಸಾರ—ಏನು, ಲೊಟ್ಟೆಬಿದ್ದು ಹೋಗಿರುವ ಕಂಣಿನಿಂದ ಓದಲೇ ?
(ಪು. 95)

Edgar— .........o our lives' sweetness,
That we the pain of death would hourly die
Rather than die at once ! (p. 159)

ಶುಕ್ಲಚಂದ್ರ—ಅಯ್ಯೊ, ಈ ನಮ್ಮ ಜನ್ಮದಲ್ಲಿ ಏನು ರುಚಿ ಇದೆ !
ಒಂದು ಸಾರಿ ತಟ್ಟನೆ ಸಾಯುವುದಕ್ಕೆ ಬದಲಾಗಿ ಕ್ಷಣೇ ಕ್ಷಣೇ
ಮರಣಭಯವನ್ನು ಅನುಭವಿಸುತ್ತೇವೆ,... (ಪು. 115)

ರೂಪಾಂತರದಲ್ಲಿ ಕಾಣುವ 'ತನ್ನಮಟ್ಟಿಗೆ', 'ಇನ್ನೊಂದು ಹುಳು', 'ಹಾಳ ಮಕ್ಕಳು', 'ಬೆತ್ತಲಬುರುಕ', 'ಕಾಸಿಗೂ ಬೇಡದ', 'ಲೊಟ್ಟೆ ಬಿದ್ದುಹೋದ', 'ಏನು ರುಚಿ ಇದೆ' ಮುಂತಾದ ಉದ್ಗಾರಗಳು ಮೂಲದ ಭಾವನೆಗಳನ್ನು ಸಮರ್ಥ ವಾಗಿ ಪಡಿಮೂಡಿಸುತ್ತವೆ.

'ಜಯಸಿಂಹರಾಜ ಚರಿತ್ರೆ'ಯ ಪೌರಾಣಿಕ ನಾಟಕಗಳ ಶೈಲಿ ಇಲ್ಲಿಲ್ಲ ಎಂಬು ದನ್ನೂ ಸಾಕಷ್ಟು ಆಡುನುಡಿಯ ಬನಿಯನ್ನೂ ಮೇಲಿನ ಉದಾಹರಣೆಗಳಿಂದ

ತಿಳಿಯಬಹುದು. ಆದರೂ ಅಲ್ಲಲ್ಲಿ ಕಾಣುವ, ನಾಟಕಕ್ಕೆ ಒಗ್ಗದ ಬಿಗಿ, ಕ್ಲಿಷ್ಟ ಓಟಗಳು ಗದ್ಯವನ್ನು ಗ್ರಾಂಥಿಕವನ್ನಾಗಿರಿಸಿವೆ. ಕೆಲವು ಉದಾಹರಣೆಗಳನ್ನು ನೋಡ ಬಹುದು.

"ಪದವಿ ಮೃಷಾಸ್ತುತಿಗೆ ವಿಹ್ವಲವಾದರೆ, ನನ್ನ ಸ್ವಾಮಿಭಕ್ತಿಯು ನಿಷ್ಕಳಂಕ ವಾಗಿ ಮಾತನಾಡುವುದಕ್ಕೆ ಹೆದರೀತೆಂದು ತಿಳಿದಿದ್ದೀಯೊ ? ಅಧಿಕಾರ ಅವಿವೇಕಕ್ಕೆ ಬಿದ್ದರೆ, ಪ್ರಾಮಾಣಿಕತೆ ನಿಷ್ಕಾಪಟ್ಯವನ್ನೇ ವಹಿಸಬೇಕು." (ಪು. 6)

"ನಿಬಿಡವಾಗಿ ನೀಡಿರುವ ತಳತಂತ್ರದಿಂದ ಆಚ್ಛಾದಿಸಲ್ಪಟ್ಟಿರುವ ದೋಷವನ್ನು ಕಾಲಗತಿಯು ವ್ಯಕ್ತಪಡಿಸುವುದು." (ಪು. 11)

"ದರಿದ್ರಾವಸ್ಥೆಯು ಮನುಷ್ಯಜನ್ಮವನ್ನೂ ತಿರಸ್ಕರಿಸಿ, ತಿರ್ಯಗ್ಜಂತುಗಳ ಸ್ಥಿತಿಗೆ ತರುವಂಥಾ ಅತಿಹೇಯವಾದ, ನೀಚ ವೇಷವನ್ನು ಹಾಕಿಕೊಳ್ಳುವುದಕ್ಕೆ ನಿಶ್ಚಯ ಮಾಡಿಕೊಂಡಿದೇನೆ." (ಪು. 45)

ಗದ್ಯದಲ್ಲಿನ ಬಿಕ್ಕಟ್ಟುಗಳ ನಡುವೆ ಹಲವು ಬಾರಿ ವಿಷಮತೆ ಕಾಣಿಸಿಕೊಳ್ಳುತ್ತದೆ. "When Puttanna was writing on his own he was master of a superb Kannada style, racy and totally free from the taint of the 'literary'. Such style can not ofcourse be expected here-the English sentences keep ringing in his ears, and besides, the theme forbids (except in a few scenes) the style in which he excelled."[3] ಎಂಬ ಎ. ಎನ್. ಮೂರ್ತಿರಾಯರ ಮಾತನ್ನು ಇಲ್ಲಿ ನೆನೆಯಬಹುದು.

ಗದ್ಯದ ಸಾಧನೆಯ ಬಗೆಗೆ ಒಟ್ಟು ದೃಷ್ಟಿಯಿಂದ ಹೇಳುವುದಾದರೆ ಅನುವಾದ ಕ್ಕಾಗಿ ಗದ್ಯವನ್ನು ಆಯ್ದುಕೊಂಡದ್ದೇ ಪುಟ್ಟಣ್ಣನವರ ಔಚಿತ್ಯಪ್ರಜ್ಞೆಯ ಕುರುಹು, ಆ ಕಾಲಕ್ಕೆ ಒಂದು ಸಾಧನೆ. ರಂಗದ ಉಪಯೋಗಕ್ಕಾಗಿ ಎಂದೋ, ಗದ್ಯ ತಮ್ಮ ಕೈಗೂಡಿದ ಮಾಧ್ಯಮ ಎಂದೋ ಅವರು ಪದ್ಯದ ಗೊಡವೆಗೆ–ಕೆಲವು ಅಪವಾದ ಗಳನ್ನು ಬಿಟ್ಟರೆ–ಹೋಗಲಿಲ್ಲ. ತಮ್ಮ ಮಿತಿಯನ್ನರಿತುಕೊಂಡದ್ದೇ ಅವರ ಮೊದಲ ಸಾಧನೆ. "ಆ ಮುಂದಿನ ಇಂಗ್ಲಿಷ್ ನಾಟಕಗಳ ಅನುವಾದಕರು ಸಂಸ್ಕೃತ ಕೃತಿಗಳ ರೀತಿಯಲ್ಲಿ ಗದ್ಯಪದ್ಯಮಿಶ್ರಿತವಾಗಿ ಕನ್ನಡದಲ್ಲಿ ಬರೆಯುತ್ತಿದ್ದರು. ಆದರೆ 'ಕಿಂಗ್ ಲಿಯರ್'ದ ರೂಪಾಂತರವಾದ ಈ ನಾಟಕವನ್ನು ಪುಟ್ಟಣ್ಣ ಪೂರ್ಣ ಗದ್ಯದಲ್ಲಿಯೇ ರಚಿಸಿದುದು ಹೊಸ ಹೆಜ್ಜೆಯಾಗಿದೆ."[4] ಎಂಬ ಶ್ರೀನಿವಾಸ ಹಾವನೂರರ ಮಾತು ಗಮನಾರ್ಹವಾಗಿದೆ.

**ಮಿತಿಗಳು**

ಯಾವುದೇ ಅನುವಾದದಲ್ಲಿ ಮಿತಿಗಳೇ ಇಲ್ಲ ಎನ್ನುವುದು ಬಹುಶಃ ದಾರ್ಷ್ಟ್ಯದ ಮಾತು. ಒಂದು ಭಾಷೆಗೆ ಮಾತ್ರ ಸಹಜವಾದ ಪದದ ಧ್ವನಿಶಕ್ತಿ ಇನ್ನೊಂದು ಭಾಷೆಯಲ್ಲಿ ಕಾಣದೆ ಹೋಗುವುದು ಇದಕ್ಕೆ ಒಂದು ಮುಖ್ಯ ಕಾರಣ. ಒಂದೆರಡು ಉದಾಹರಣೆಗಳನ್ನು ನೋಡಬಹುದು.

"Not all the dukes of waterish Burgandy
Shall buy this unpriz'd precious maid of me." (p. 36)

ಎಂಬ ಮೂಲದ ಭಾಗ ಅನುವಾದದಲ್ಲಿ "ನಿಸ್ಸಾರವಾದ ಮದ್ರದೇಶದ ಅರಸರು ಎಷ್ಟು ಜನವಾದರೂ, ಅಮೂಲ್ಯವಾದ ಈ ರಮಣೀಮಣಿಯ ಬೆಲೆಗೆ ಸಮ ಬರಲಾರರು" (ಪು. 10) ಎಂದಾಗಿದೆ. ಇಲ್ಲಿ ಸಂವಹನದ ಕೊರತೆ ಇಲ್ಲ. ಆದರೆ ಒಂದು ದೇಶಕ್ಕೆ ವಿಶಿಷ್ಟವಾದ ಅಂಶಗಳನ್ನು ಪಡೆದಿರುವಲ್ಲಿ ಮೂಲದಲ್ಲಿ ಕಾಣುವ ಚಾತುರ್ಯ, ಪದಗಳಲ್ಲಿನ ಶ್ಲೇಷೆ ಅನುವಾದದಲ್ಲಿ ಕಾಣುವುದಿಲ್ಲ. 'waterish' ಎಂಬುದು ನೀರಿನ ವಸತಿ ಚೆನ್ನಾದ ಅಥವಾ ನಿಸ್ಸಾರವಾದ ಎಂದು ಸಾಮಾನ್ಯವಾಗಿ ಅರ್ಥೈಸಬಹುದಾದ್ದು. ಇಲ್ಲಿ ದೇಶವೈಶಿಷ್ಟ್ಯದಿಂದ ಅದಕ್ಕೆ ಲಗತ್ತಾಗಿರುವ ಅರ್ಥವೆಂದರೆ ಫ್ರಾನ್ಸ್ ದೇಶದ ಮದ್ಯಕ್ಕಿಂತ ಬರ್ಗಂಡಿಯದು ಕೀಳು ಎಂಬುದು. ಇಂಥವು ಯಾವುದೇ ಅನುವಾದಗಳಲ್ಲಿ ಒಂದು ಮಿತಿಗೆ ಉದಾಹರಣೆಯಾಗುವುದೇ ಸಾಮಾನ್ಯ.

"Fathers that wear rags
Do make their children blind,
But fathers that bear bags
Shall see their children kind.
Fortune, that arrant whore,
Ne'er turns the key to the poor·
But for all this thou shalt have as many dolours for thy daughters as thou canst tell in a year." (P. 78)

"ಚಿಂದಿಯ ಹೊದಿಯುವ ತಂದೆಯು ।
ಕಂದನ ಕಡುಮೂರ್ಖನಾಗಿ ನಿಚ್ಚಂ ಮಾಳ್ಪಂ ॥
ಎಂದುಂ ಜಾಳಿಗೆಯುಳ್ಳವ ।
ಚಂದದಿಯಣುಗರ ಮುದ್ದಿಸಿ ಪೊರೆವಂ ದಯದಿಂ ॥

ಒಂದು ವರುಷವೆಲ್ಲಾ ನೀನು ಕೂತು ಒಂದು, ಎರಡು, ಮೂರು, ಎಂದು ಎಷ್ಟು ಎಣಿಸೀಯ್ಯೋ ಅಷ್ಟು ಶೋಕವನ್ನು ಇದಕ್ಕೆಲ್ಲಾ ನಿನ್ನ ಹೆಮ್ಮಕ್ಕಳಿಂದನುಭವಿಸೀಯೆ, ಅಯ್ಯೋ ! ಶೋಕವೆಂದೆನೊ ? ಅಲ್ಲ ಶುಲ್ಕ, ಮಾವ." (ಪು. 47)

ಇಲ್ಲಿ ಮೂಲದ ಎಲ್ಲ ಅರ್ಥವೂ ಅನುವಾದದಲ್ಲಿ ಕಾಣುವುದಿಲ್ಲ. ಪದ್ಯದ ಕಡೆಯ ಎರಡು ಸಾಲುಗಳು ಪೂರ್ಣವಾಗಿಯೂ ಇಲ್ಲ. ಅಲ್ಲದೆ ಮೂಲದ 'dolour' ಪದದಲ್ಲಿ 'dollar' ಪದದ ಶ್ಲೇಷೆಯೂ ಸುಳಿಯುವುದು ಅನುವಾದದಲ್ಲಿ ತರಲಾಗಿಲ್ಲ. 'ಶೋಕ', 'ಶುಲ್ಕ' ಪದಗಳು ಶ್ಲೇಷಾರ್ಥವನ್ನು ಮಿಂಚಿಸುವುದಿಲ್ಲ.

"......served the lust of my mistress's heart, and did the act of darkness with her........... keep thy foot out of brothels, thy hand out of plackets, thy pen from lender's books, and defy the foul fiend." (pp. 100–101)

ಈ ಭಾಗದ ಮೊದಲ ಭಾಗ ಅನುವಾದದಲ್ಲಿ "ಸ್ತ್ರೀ ವಿಷಯದಲ್ಲಿ ಮಿತಿಮೀರಿದ ಆಸಕ್ತಿ;" (ಪು. 65) ಎಂದಾಗಿದೆ. ಎರಡನೆಯ ಭಾಗ ಇಲ್ಲವೇ ಇಲ್ಲ. ಲೈಂಗಿಕ ವಿಚಾರಗಳ ಬಗ್ಗೆ ಪುಟ್ಟಣ್ಣನವರಿಗೆ ಇದ್ದ ಸಂಕೋಚ ಪ್ರವೃತ್ತಿ ಅವರ ಹಲವು ಕೃತಿಗಳಲ್ಲಿ ವ್ಯಕ್ತವಾಗಿದೆ.[5] ಜೊತೆಗೆ ಅಂದಿನ ರಂಗಭೂಮಿಯ ನಿಷೇಧವೂ ಇದ್ದಿರಬಹುದು.

## 'ಹೇಮಚಂದ್ರರಾಜ ವಿಲಾಸ' ಮತ್ತು 'ಲಿಯರ್ ಮಹಾರಾಜ'[6] ಕೃತಿಗಳ ಹೋಲಿಕೆ

ಪುಟ್ಟಣ್ಣನವರ 'ಹೇಮಚಂದ್ರರಾಜ ವಿಲಾಸ' (1899) ಪ್ರಕಟವಾದ ಅರವತ್ತು ವರ್ಷಗಳ ಅನಂತರ, ಮಾಸ್ತಿಯವರ 'ಲಿಯರ್ ಮಹಾರಾಜ' (1959) ಪ್ರಕಟವಾಗಿದೆ. ಪುಟ್ಟಣ್ಣನವರದು ಇಲ್ಲಿನ ಸಮಾಜಕ್ಕೆ ಒಗ್ಗಿಸಿಕೊಂಡದ್ದು, ರೂಪಾಂತರ. ಮಾಸ್ತಿಯವರದು ಅಂಥ ಏನೂ ಬದಲಾವಣೆ ಇಲ್ಲದ್ದು, ಭಾಷಾಂತರ. ಎರಡು ಕೃತಿಗಳ ಆಶಯಗಳೂ ಬೇರೆ ಬೇರೆ. ಅದೇ ರೀತಿ ಎರಡೂ ಕೃತಿಗಳಿಗೆ ಬೇರೆ ಬೇರೆ ರೀತಿಯ ಪರಿಮಿತಿಗಳೂ ಇವೆ. ಪುಟ್ಟಣ್ಣನವರಲ್ಲಿ ಮೂಲದ ಕಾವ್ಯಗುಣ ನಷ್ಟವಾಗಿರುವುದು ಸ್ಪಷ್ಟವಾಗಿದೆ. ಕೃತಿ ಕಾವ್ಯರೂಪದಲ್ಲಿ ಇಲ್ಲವೆಂದಲ್ಲ, ಪದ್ಯಗಂಧಿ ಲಯವೂ ಇಲ್ಲ ಎಂಬುದರಿಂದ, ಮೂಲದ ಖಚಿತ ವಿವರಗಳು ಹಲವು ಬಾರಿ ಮಂಕಾಗುತ್ತವೆ, ದೀರ್ಘ ವಿವರಗಳು ಸಂಕ್ಷಿಪ್ತವಾಗುತ್ತವೆ. ಮಾಸ್ತಿಯವರಲ್ಲಿ ಮೂಲಕ್ಕೆ ನಿಷ್ಠವಾದ ಪರಿಸರದ ನಡುವೆ ಇದ್ದಕ್ಕಿದ್ದಂತೆ ಇಲ್ಲಿನ ಸಮಾಜದ ಉಲ್ಲೇಖಗಳು ನುಸುಳಿ ತಬ್ಬಿಬ್ಬು ಮಾಡುತ್ತವೆ.

ಒಂದು ಉದಾಹರಣೆಯನ್ನು ನೋಡಬಹುದು.

ಮೂಲದ learned theban, Good Athenian, child Rowland (pp. 103-104)—ಇವುಗಳಿಗೆ ಪುಟ್ಟಣ್ಣನವರಲ್ಲಿ ಸಂವಾದಿಯಾಗಿ ಮಹಾಪಂಡಿತ, ನವದ್ವೀಪದ ಪೂಜ್ಯ, ಹಾಗೂ ಸೋಮೇಶ್ವರ ಶತಕದ ಕೆಲವು ಸಾಲುಗಳು ಕಾಣುತ್ತವೆ. (ಪು. 67-68). ರೂಪಾಂತರ ನಿಯಮಗಳಿಗೆ ಇಲ್ಲಿ ವಿರೋಧ ಬಂದಿಲ್ಲ. ಮಾಸ್ತಿಯವರಲ್ಲಿ ಕ್ರಮವಾಗಿ ಕಂಚಿಪಂಡಿತ, ಕಾಶ್ಮೀರಪಂಡಿತ, ಬಾಲ ಅಭಿಮನ್ಯು ಚಕ್ರವ್ಯೂಹ ಸಾರಿದ ಸಂಗತಿಗಳು ಕಾಣಿಸಿಕೊಂಡಿವೆ. (ಪು. 90-92). ಇಲ್ಲಿ ಭಾಷಾಂತರದ ನಿಯಮಗಳಿಗೆ ಖಂಡಿತವಾಗಿಯೂ ಭಂಗ ಬಂದಿತು. "There are also unfortunate references to Indian names, festivals, etc. in an atmosphere otherwise Foreign."[7]
ಎಂಬ ಎ. ಎನ್. ಮೂರ್ತಿರಾಯರ ಮಾತನ್ನು ಇಲ್ಲಿ ನೆನೆಯಬಹುದು.[8]

ಹಲವು ಕಡೆಗಳಲ್ಲಿ ಇಬ್ಬರಲ್ಲೂ ಒಂದೇ ಬಗೆಯ ಔಚಿತ್ಯಪ್ರಜ್ಞೆ ಕಂಡುಬರುತ್ತದೆ. ಉದಾಹರಣೆಗೆ, ಮೂಲದಲ್ಲಿ ಲಿಯರ್ ಹೇಳುವ "Fourscore and upward, not an hour more or less : (p. 145) ಎಂಬ ಮಾತು ಪುಟ್ಟಣ್ಣನವರಲ್ಲಿ "ತೊಂಭತ್ತರ ಮೇಲಾಯಿತು. ಒಂದು ದಿವಸವಾದರೂ ಕಡಿಮೆ ಇಲ್ಲ." (ಪು. 102)

ಎಂದೂ ಮಾಸ್ತಿಯವರಲ್ಲಿ "ಎಂಬತ್ತು ವರ್ಷಕೂ ಮಿಗಿಲವನು; ಅದಕೆ ಒಂದು ತಾಸು ಕೊರೆಯಿಲ್ಲ." (ಪು. 138) ಎಂದೂ ಆಗಿದೆ. ಮೂಲದ "Not an hour more or less" ಎಂಬ ಭಾಗದಲ್ಲಿ ಇಬ್ಬರೂ "not an hour less" ಎಂಬುದನ್ನು ಮಾತ್ರ ಸ್ವೀಕರಿಸಿದ್ದಾರೆ.[9]

ತಮ್ಮ ಕೃತಿಗಳ ಆಶಯವನ್ನು ಇಬ್ಬರೂ ಸರಿಯಾಗಿ ಗ್ರಹಿಸಿದ್ದಾರೆ. ಉದಾಹರಣೆಗೆ ಮೂಲದಲ್ಲಿ ಲಿಯರ್ ಹೇಳುವ "Ay, every inch a king" (p. 134) ಎಂಬ ಮಾತು ಪುಟ್ಟಣ್ಣನವರಲ್ಲಿ "ಅಹಾ ! ಹವುದೈ, ಹೆಜ್ಜೆ ಹೆಜ್ಜೆಗೂ ಧೊರೆಯೇ" (ಪು. 94) ಎಂದೂ, ಮಾಸ್ತಿಯವರಲ್ಲಿ "ಹೌದು. ಅಂಗುಲ ಅಂಗುಲವು ದೊರೆ." (ಪು. 127) ಎಂದೂ ಕಾಣಿಸಿಕೊಂಡಿದೆ. ಪುಟ್ಟಣ್ಣನವರದು ರೂಪಾಂತರ, ಮಾಸ್ತಿಯವರದು ಭಾಷಾಂತರ.

ಪುಟ್ಟಣ್ಣನವರ ರೂಪಾಂತರದಲ್ಲಿ ಹಲವು ವಿವರಗಳು ಬಿಟ್ಟುಹೋಗುವುದನ್ನು ಈ ಮೊದಲೇ ಪ್ರಸ್ತಾಪಿಸಿದೆ. ಮಾಸ್ತಿಯವರಲ್ಲಿ ಯಾವ ಒಂದು ವಿವರವೂ ಜಾರಿ ಹೋಗುವುದಿಲ್ಲ. ಮೂಲಕ್ಕೆ ಬಹುವಾದ ನಿಷ್ಠೆ ಕಾಣುತ್ತದೆ. ಒಂದು ಉದಾಹರಣೆಯನ್ನು ಗಮನಿಸಬಹುದು.

"Lear- Ha ! Goneril, with a white beard ! They flatter'd me like a dog, and told me I had white hairs in my beard ere the black ones were there. To say 'ay' and 'no' to every thing I said ! 'Ay' and 'no' too was no good divinity. When the rain came to wet me once and the wind to make me chatter, when the thunder would not peace at my bidding, there I found' em, there I smelt 'em out. Go to, they are not men o' their words: they told me I was every thing; 'tis a lie, I am not agueproof." (p. 134)

ಪುಟ್ಟಣ್ಣನವರ ರೂಪಾಂತರ :

"ಧೊರೆ—ಹೊ ! ನಾಗವೇಣಿಗೆ ಬಿಳೀಗಡ್ಡ ! ನನ್ನನ್ನು ಬೇಕಾದ ಹಾಗೆ ಕೊಂಡಾಡಿದರು. ನನ್ನ ಗಡ್ಡದಲ್ಲಿ ಕರೀಕೂದಲು ಹುಟ್ಟುವುದಕ್ಕೆ ಮುಂಚೆ ಬಿಳೀಕೂದಲು ಹುಟ್ಟಿತ್ತೆಂದು ಹೇಳಿದರು. ನಾನು ಹವುದೆಂದರೆ ಹವುದೆಂದರು, ಅಲ್ಲವೆಂದರೆ ಅಲ್ಲವೆಂದರು. ಹೀಗೆ ಹವುದು ಅಲ್ಲವೆನ್ನತಕ್ಕವರೇನೂ ಸೌಮ್ಯ ದೇವರುಗಳಲ್ಲ. ಮಳೆ ಬಂದು ತೊಪ್ಪನೆ ತೊಳೆಯಿತು, ಗಾಳಿ ಬಂದು ಹಲ್ಲ ಹರೀ ಹುಯ್ಯುವ ಹಾಗೆ ಮಾಡಿತು, ಗುಡುಗು ಶಬ್ದಮಾಡುತ್ತಿರುವುದನ್ನು ನನ್ನ ಮಾತಿನ ಪ್ರಕಾರ ನಿಲ್ಲಿಸಲಿಲ್ಲ; ನಿಲ್ಲಿಸಲಿಲ್ಲ. ಆಗ ಇವರ ಯೋಗ್ಯತೆಯೆಲ್ಲಾ ತಿಳಿಯಿತು. ಬಿಡು, ಅವರು ಸರಿಯಾದ ಮಾತಿನವರಲ್ಲ. ನನ್ನನ್ನು ಮೀರಿಸಿದ್ದು ಮತ್ತೆ ಯಾವುದೂ ಇಲ್ಲವೆಂದು ಹೇಳಿದರು. ಇದು ಸುಳ್ಳು, ಚಳಿಗೆ ನಾನು ಎದುರಲ್ಲ; ಅದು ನನ್ನನ್ನು ಮೀರಿಸಿದ್ದು." (ಪು. 94)

**ಮಾಸ್ತಿಯವರ ಭಾಷಾಂತರ**

"ಲಿಯರ್;–ಹಾ, ಗಾನೆರಿಲ್‌ಗೆ ಒಂದು ನರೆತ ದಾಡಿ. ಅವರು ನನ್ನನ್ನು ಒಂದು ನಾಯಿ ಅನ್ನುವಂತೆ ಸುಳ್ಳೆ ಹೊಗಳಿ, ಕರೀಕೂದಲು ಬರುವುದಕ್ಕೂ ಮುನ್ನ ನನ್ನ ದಾಡೀಲಿ ಬಿಳಿಕೂದಲು ಬಂದಿದೆ ಎಂದರು. ನಾನೆಂದ ಎಲ್ಲಾ ಮಾತಿಗೂ ಹೌದು ಅಲ್ಲ ಎನ್ನುವುದೇ ? ಹೌದು ಅಲ್ಲ ಕೂಡ ಒಳ್ಳೆ ದೈವ ಆಗಲಿಲ್ಲ. ಒಮ್ಮೆ ಮಳೆ ಬಂದು ನನ್ನ ನೆನೆಸಿ ಗಾಳಿ ನಡುಗಿಸಿದಾಗ, ಗುಡುಗು ನಾನು ನಿಲ್ಲು ಎಂದರೆ ಸುಮ್ಮನಾಗದಿದ್ದಾಗ, ಆಗ ಇವರ ಯೋಗ್ಯತೆ ತಿಳಿದೆ, ಇವರ ಲಕ್ಷಣದ ಕಂಪು ಹಿಡಿದೆ. ಬಿಡು, ಅವರು ಮಾತಿನಲ್ಲಿ ಸತ್ಯ ಹಿಡಿದವರಲ್ಲ. ನನಗೆ ಹೇಳಿದರು ಅವರು, ನನಗೆ ಎದುರು ಇಲ್ಲ ಎಂತ. ಅದು ಸುಳ್ಳು. ನನಗೆ ಚಳಿ ಮುಟ್ಟದ ದೊಡ್ಡತನ ಇಲ್ಲ." (ಪು. 126–127)

ತಮ್ಮ ಸುತ್ತಲಿನ ಸಮಾಜಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವುದರ ಜೊತೆಗೆ ಕೆಲವು ಒರಟು ಎಂಬಂತೆ ಕಾಣುವ ವಿಚಾರಗಳನ್ನು ನಯಮಾಡುವ ಒಂದು ಹವಣು ಪುಟ್ಟಣ್ಣ ನವರಲ್ಲಿ ಕಾಣುತ್ತದೆ. ಮೂಲದ 'They flattered me like a dog' ಎಂಬುದು ಅವರಲ್ಲಿ 'ನನ್ನನ್ನು ಬೇಕಾದ ಹಾಗೆ ಕೊಂಡಾಡಿದರು' ಎಂದಾಗಿದೆ. ಮಾಸ್ತಿಯವರು ಏನನ್ನೂ ನಯಮಾಡಲು ಹೋಗದೆ ಮೂಲಕ್ಕೆ ಪ್ರಜ್ಞಾಪೂರ್ವಕವಾದ ನಿಷ್ಠೆಯನ್ನು ತೋರಿದ್ದಾರೆ. ಮೇಲಿನ ಭಾಗ ಅವರಲ್ಲಿ 'ಅವರು ನನ್ನನ್ನು ಒಂದು ನಾಯಿ ಅನ್ನು ವಂತೆ ಸುಳ್ಳೆ ಹೊಗಳಿ...' ಎಂದಾಗಿದೆ.

ಪುಟ್ಟಣ್ಣನವರದು ಪ್ರಾರಂಭದ ಕೃತಿಗಳಲ್ಲಿ ಕಾಣುವ ಕಟ್ಟುನಿಟ್ಟಿನ ಭಾಷಾಂತರ. ಮೂಲದ ಸತ್ತ್ವವನ್ನು ಕನ್ನಡಕ್ಕೆ ತರುವ ಧ್ಯೇಯವಿದೆ, ಆದರೆ ಸಿದ್ಧಿ ಒಂದು ಮಿತಿ ಯಲ್ಲಿ ಮಾತ್ರ ದೊರಕಿದೆ. ಇಲ್ಲದ್ದನ್ನು ಸೇರಿಸುವುದು, ಇರುವುದನ್ನು ಬದಲಾಯಿಸು ವುದು ಈ ಮೊದಲಾದ ವಿಲಕ್ಷಣತೆಗಳಿಲ್ಲ, ನಾಟಕವನ್ನು ಸುಖಾಂತಗೊಳಿಸುವ ಹಟವಿಲ್ಲ, ಬಲವಂತವಾಗಿ ಕಾವ್ಯರೂಪದಲ್ಲಿ ಬರೆಯುವ ರೇಜಿಗೆಯಿಲ್ಲ, ವಿರೋಧಾಭಾಸಗಳಿಲ್ಲ. ಈ ಗುಣಗಳೆಲ್ಲ ಎಲ್ಲ ಕಾಲಕ್ಕೂ ನಿಲ್ಲುವಂಥವೇ. ಜೊತೆಗೆ ಇಡೀ ಕೃತಿಯನ್ನು ಗದ್ಯದಲ್ಲಿ ಬರೆದದ್ದು–ಹಿಂದೆ ಹೇಳಿದಂತೆ–ಸಾಧನೆಯೇ ಹೌದು. ಈ ಎಲ್ಲ ಅಂಶಗಳಿಂದ ಪುಟ್ಟಣ್ಣ ನವರ 'ಹೇಮಚಂದ್ರರಾಜ ವಿಲಾಸ' ಒಂದು ಗಮನಾರ್ಹ ಪ್ರಯತ್ನ. ಪುಟ್ಟಣ್ಣನವರ ನಂತರ ಈ ಕೃತಿಯ ಭಾಷಾಂತರಕ್ಕೆ ಪುನಃ ಕೈ ಹಾಕಿದ್ದು ಬಹುಶಃ ಮಾಸ್ತಿಯವ ರೊಬ್ಬರೇ. ಇದು ಮೂಲ ನಾಟಕದ ಪ್ರಗಲ್ಭವಾದ ರಚನೆಗೆ, ಭಾಷಾಂತರ ರೂಪಾಂತರಗಳಿಗೆ ಸುಲಭವಾಗಿ ನಿಲುಕದ ಸತ್ತ್ವಕ್ಕೆ ಸಾಕ್ಷಿಯಾಗಿದೆ.

## ಹೇಮಲತ

ಎಂ. ಎಸ್. ಪುಟ್ಟಣ್ಣನವರ ಷೇಕ್ಸ್‌ಪಿಯರ್ ನಾಟಕಗಳ ರೂಪಾಂತರಗಳಲ್ಲಿ ಉಪಲಬ್ಧ ವಿವರಗಳ ಪ್ರಕಾರ 'ಹೇಮಲತ' ಕಡೆಯದು. ಹಸ್ತಪ್ರತಿಯಲ್ಲಿರುವ ಈ ಗದ್ಯಪದ್ಯ ಮಿಶ್ರನಾಟಕ 1920ರಲ್ಲಿ ರಚಿತವಾಗಿದ್ದು ಇನ್ನೂ ಪ್ರಕಟಗೊಂಡಿಲ್ಲ ವೆಂಬ ವಿಚಾರವನ್ನು ಈ ಹಿಂದೆಯೇ ಹೇಳಿದೆ. 1920ರ ಅನಂತರ ಪ್ರಕಟವಾದ ನಾಲ್ಕು 'ಹ್ಯಾಮ್ಲೆಟ್' ಭಾಷಾಂತರಗಳ[10] ಸ್ಥೂಲ ವಿವೇಚನೆಯನ್ನು ಈ ವಿಮರ್ಶೆ ಯಲ್ಲಿ ಸೇರಿಸಿದೆ.

ಮೂಲನಾಟಕದ ಸನ್ನಿವೇಶಗಳನ್ನು ರೂಪಾಂತರಕ್ಕೆ ಒಗ್ಗುವಂತೆ ಪರಿವರ್ತಿಸಿ ಕೊಳ್ಳುವ ಪುಟ್ಟಣ್ಣನವರ ರೂಢಿ ಇಲ್ಲಿಯೂ ವ್ಯಕ್ತವಾಗಿದೆ. ಕೆಲವು ಉದಾಹರಣೆ ಗಳನ್ನು ನೋಡಬಹುದು.

1. ಮೂಲದ ಕ್ರೈಸ್ತರ ಉಪವಾಸವ್ರತದ ಪ್ರಸ್ತಾಪ (ಪು. 99) ರೂಪಾಂ ತರದಲ್ಲಿ ಏಕಾದಶೀ ಔತಣವಾಗಿದೆ. (ಪು. 109)

2. ಮೂಲದ ಪ್ರಣಯ ಎಂಬ ರೂಢವಾದ ಮಾತು (ಪು. 116) ರೂಪಾಂ ತರದಲ್ಲಿ ಮನ್ಮಥಬಾಧೆಯಾಗಿದೆ. (ಪು. 145)

3. ಮೂಲದ ಟೆರ್ಮ್ಯಗ್ಯಾಂಟ್ ಮತ್ತು ಹೆರೋದರು (ಪು. 117) ರೂಪಾಂತರದಲ್ಲಿ ಚಂಡಿ ಮತ್ತು ರಾವಣರಾಗಿದ್ದಾರೆ. (ಪು. 149)

4. ಮೂಲದ ಹರ್ಕ್ಯುಲೀಸ್ (179–180) ಇಲ್ಲಿ ಭೀಮನಾಗಿದ್ದಾನೆ. (ಪು. 300)

ಹಲವು ಬಾರಿ ಮೂಲದ ಗಾಢತೆ ರೂಪಾಂತರದಲ್ಲಿ ಅನುಭವಕ್ಕೆ ಬರುವುದಿಲ್ಲ. ಆದರೆ ಪುಟ್ಟಣ್ಣನವರ ಪ್ರಾಮಾಣಿಕತೆಯಿಂದ ಒಂದು ಮಿತಿಯಲ್ಲಿನ ಯಶಸ್ಸು ದೊರಕಿದೆ.

### ಭಾಷೆ

ತಮ್ಮ ಹಿಂದಿನ ನಾಟಕದಂತೆಯೇ ಇಲ್ಲಿಯೂ ಪುಟ್ಟಣ್ಣನವರು ಪದ್ಯವನ್ನು ಕೈಬಿಟ್ಟು ಗದ್ಯವನ್ನು ಆಶ್ರಯಿಸಿದ್ದಾರೆ. ಇದು ಅವರ ಜಾಣ್ಮೆಗೆ ಸಾಕ್ಷಿಯಾಗಿದೆ. ಕೆಲವು ಗದ್ಯಭಾಗಗಳ ಉದಾಹರಣೆಗಳನ್ನು ನೋಡಬಹುದು.

ಹೇಮಲತ–ಆಹಾ ! ಸಮುಸ್ತವಾದಂಥಾ ಸಂದರ್ಭಗಳೂ ಹೇಗೆ ನನ್ನ ಅಪರಾಧ ವನ್ನು ತೋರಿಸಿ, ಮತ್ಸರವನ್ನು ತೀರಿಸಿಕೊಳ್ಳಲು ತಾಮಸವಾಗಿರುವ ನನ್ನ ಮನಸ್ಸನ್ನು ಹೇಗೆ ತೀವ್ರ ಪಡಿಸುತಿದೆ ? ಮನುಷ್ಯನ ಕರ್ತವ್ಯದ ಬೆಲೆಯೆಲ್ಲಾ ಆಹಾರ ನಿದ್ರೆಯೇ ಆಗಿದ್ದಲ್ಲಿ, ಮನುಷ್ಯ ಎನ್ನುವ ಪದಾರ್ಥ ಏನಾಯಿತು ? ಒಂದು ಮೃಗ, ಮತ್ತೇನೂ ಅಲ್ಲ. ಪೂರ್ವಾಪರವನ್ನು ವಿಚಾರಮಾಡಿ ಬುದ್ಧಿ ಎಂಬ ವಿಶೇಷವಾದ ಇಂದ್ರಿಯ

ವನ್ನಿತ್ತು ನಮ್ಮನ್ನು ನಿರ್ಮಾಣ ಮಾಡಿದ ಪರಮಪುರುಷನೂ ದೇವಾಂಶ ಸಂಭೂತ ವಾದ ಮತಿಯನ್ನು ನಮಗೆ ಕೊಟ್ಟಿರುವುದು ಬೂಸ್ಟು ಕಟ್ಟಿ ಅದು ನಾತ ಹಿಡಿದು ಕೆಟ್ಟು ಹೋಗಲೆಂದಲ್ಲ. ಪಶುತುಲ್ಯವಾದ ವಿಸ್ಮೃತಿಯೋ, ಒಂದು ವಿಷಯವನ್ನು ಕುರಿತು ಯೋಚಿಸುವುದರಲ್ಲಿ ಮನಸ್ಸಿಗೆ ಹತ್ತಿಸಿಕೊಂಡಿರುವ ನಚ್ಚೋ, ಎಂತಾದರೂ ಆಗಲಿ; ಒಂದು ಯೋಚನೆಯನ್ನು ನಾಲ್ಕು ಪಾಲು ಮಾಡಿದರೆ, ಮಾಡಿದರೆ, ಅವರಲ್ಲಿ ಒಂಮ ಪಾಲು ವಿವೇಕವಾಗಿಯೂ ಇನ್ನು ಮೂರು ಪಾಲು ಹೇಡಿತನವಾಗಿಯೂ ಇದೆ. ಕಾರ್ಯನಿರ್ವಾಹವನ್ನು ಮಾಡುವುದಕ್ಕೆ ನನಗೆ ಕಾರಣವೂ, ಮನಸ್ಸೂ, ಶಕ್ತಿಯೂ, ತಕ್ಕ ಸಾಧನೆಯೂ ಇರುವುದರಿಂದ, ಇನ್ನೂ ಈ ಕಾರ್ಯನಿರ್ವಾಹಕವಾಗ ತಕ್ಕದ್ದು ಉಳಿದಿದೆಯಲ್ಲಾ ಎಂದು ಹಲುಬಲು ನಾನು ಇನ್ನೂ ಬದುಕಿದೇನೆ. ಮಂಣಿ ನಂಥಾ ಅಲ್ಪ ಪದಾರ್ಥವೂ ನನಗೆ ಉತ್ತೇಜನವನ್ನು ಕೊಟ್ಟಿಡುತಿದೆ." (ಪು. 233–235)

ಕಥೆ ನಡೆಯುವುದು ಹೇಮಲತನ ಸುತ್ತ. ಇವನೊಬ್ಬನೇ ಪ್ರಧಾನ ಪಾತ್ರ. ಜೀವಾಳವಿಲ್ಲದ ಪಾತ್ರವನ್ನು ಡೆನ್ಮಾರ್ಕ್ ರಾಜಪುತ್ರ ಇಲ್ಲದ ಹ್ಯಾಮ್ಲೆಟ್ ಎಂದು ಹೇಳುವುದು ಇಂಗ್ಲಿಷಿನಲ್ಲಿ ರೂಢಿ — ದೇವರಿಲ್ಲದ ಗುಡಿ ಎಂಬಂತೆ—ಎನ್ನುವುದನ್ನು ಇಲ್ಲಿ ನೆನೆಯಬಹುದು. ಹೇಮಲತ ವಿಲಕ್ಷಣ ಗುಣಗಳ ಪರಮಾವಧಿ ಮೊತ್ತವಾಗಿ ಕಾಣಿಸಿಕೊಳ್ಳುತ್ತಾನೆ. ಆತ ಧರ್ಮಪರ, ಪಾಪಭೀರು, ಬುದ್ಧಿವಂತ. ಆದರೆ ಅವನ ಮನಸ್ಸು, ಹೃದಯಗಳಿಗೆ ಮೀರಿದ ಒಂದು ದುರ್ಭರ ಹೊಡೆತ ಅವನ ವ್ಯಕ್ತಿತ್ವವನ್ನೇ ನಾಶಮಾಡಿತು. ಇದರ ಮೇಲೆ ಅವನು ಸೂಕ್ಷ್ಮ ಮನಸ್ಸುಳ್ಳವ, ಆದರ್ಶವಾದಿ. ಎಲ್ಲಕ್ಕೂ ಹೆಚ್ಚಾಗಿ, ಎಲ್ಲದರಲ್ಲೂ ತಾತ್ತ್ವಿಕ ನಿಲುವನ್ನು ಆರಸುವವನು. ಅವನ ವ್ಯವಹಾರಜ್ಞಾನ, ಕಾರ್ಯಕ್ಷಮತೆಗಳು ಅವನ ವಿಷಣ್ಣವಾದ ಮನಸ್ಥಿತಿಯ ವೇಗದಲ್ಲಿ ಕೊಚ್ಚಿ ಹೋಗುತ್ತವೆ.

ಷೇಕ್ಸ್‌ಪಿಯರನಲ್ಲಿ ಹುಚ್ಚು ಒಂದು ತಂತ್ರವಾಗಿ ಹಲವು ಬಾರಿ ಉಪಯೋಗಿ ಸಲ್ಪಡುತ್ತದೆ. 'ಕಿಂಗ್ ಲಿಯರ್' ನಾಟಕದಲ್ಲಿ ರಾಜನದು ನಿಜವಾದ ಹುಚ್ಚು. ವಿದೂಷಕನದು ಹುಚ್ಚಿನ ನಟನೆ. ಎಡ್ಗರನದು ತೋರಿಕೆಯ ಹುಚ್ಚು, ಪ್ರಾಣರಕ್ಷಣೆಯ ಉದ್ದೇಶದಿಂದ ಕೂಡಿದ್ದು. ಹ್ಯಾಮ್ಲೆಟ್‌ನ ಹುಚ್ಚು ದ್ವಂದ್ವಕ್ಕೆ ಸಿಲುಕಿದ ಒಂದು ಮನಸ್ಸು ಒಂದು ತಂತ್ರವೆಂಬಂತೆ ಬಳಸಿದ, ಆದರೆ ತನಗೇ ಅರಿಯದೆ ಈ ಹುಚ್ಚಿನ ಉದ್ಗಾರಗಳ ಮೂಲಕ ಒಳಮನಸ್ಸಿನಲ್ಲಿ ಕುದಿಯುತ್ತಿರುವ ಒತ್ತಡವನ್ನು ಹರಿಬಿಡುವ ಒಂದು ಕಾಲುವೆ. ಈ ತಂತ್ರವಲ್ಲದೆ ಅತಿಮಾನುಷತೆಯ ತಂತ್ರವನ್ನೂ ಇಲ್ಲಿ ಬಳಸಲಾಗಿದೆ, ರಮ್ಯ ಉದ್ದೇಶಕ್ಕಲ್ಲ ರುದ್ರಪರಿಣಾಮಕ್ಕಾಗಿ. ತಂದೆಯ ಸಾವು, ತಾಯಿ ಚಿಕ್ಕಪ್ಪನ ಮದುವೆ, ರಾಜ್ಯ ಕೈ ತಪ್ಪಿದ್ದು ಈ ಎಲ್ಲ ಒಳಗುದಿಯೂ ತಂದೆಯ ಪ್ರೇತ ಕಾಣಿಸಿ ಗುಟ್ಟು ಬಯಲಾದಾಗ ಹೊಸ ಮೊನಚನ್ನು ಪಡೆಯುತ್ತದೆ. ಈ ಎಲ್ಲ ನಿಗೂಢತೆಯನ್ನು ಪುಟ್ಟಣ್ಣನವರ ಗದ್ಯ ಸೆರೆಹಿಡಿಯದಿದ್ದರೂ ಆ ದಿಕ್ಕಿನಲ್ಲಿ ನಡೆದಿರುವುದು ಸ್ಪಷ್ಟ.

ಪುಟ್ಟಣ್ಣನವರ ಗದ್ಯಶೈಲಿಗೆ ಇನ್ನೊಂದು ಉದಾಹರಣೆಯನ್ನು ನೋಡಬಹುದು. "ದೊರೆ—ಎಲೈ ಲಯಕರ್ತನೆ, ನೀನು ಪ್ರತಿಭಟಿಸುವ ಈ ರಾಕ್ಷಸಕೃತ್ಯಕ್ಕೆ ಕಾರಣವೇನು? ಪ್ರಿಯಳೆ, ಅವನು ಹೋಗಲಿ; ನಮಗೆ ಏನೋ ಅಪಾಯ ಸಂಭವಿಸುವುದೆಂದು ಭಯಪಡಬೇಡ. ಪರಮೇಶ್ವರನ ಶಕ್ತಿಯು ರಾಜಪದವಿಯನ್ನು ಕಾಪಾಡುವುದು; ಇದರಿಂದ ದ್ರೋಹವು ಮೇಲು ಮೇಲೆ ಇಣಿಕಿ ನೋಡುವುದೇ ಹೊರತು, ತನ್ನ ಶಕ್ತಿಯನ್ನೇನೂ ತೋರಿಸಲಾರದು. ಅಯ್ಯಾ ಲಯಕರ್ತನೆ, ಯಾಕೆ ನಿನಗೆ ಆಗ್ರಹ ಉದ್ರೇಕವಾಗಿದೆ. ಪ್ರಿಯಳೆ, ಅವ ಹೋಗಲಿ. ಉತ್ತರ ಹೇಳೈ. (ಪು. 244—245)

ಕೊಲೆಪಾತಕಿಯಾದ ನೀಚ ದೊರೆ ಕ್ಲಾಡರಾಜ ಭಂಡತನದ ಮೂರ್ತಿಮಂತ ಸ್ವರೂಪನಾಗಿದ್ದಾನೆ. ನಂಬಿದ ಅಣ್ಣನನ್ನು ಕೊಲೆಮಾಡಿ, (ಅದಕ್ಕೂ ಮೊದಲೆ ಕಳ್ಳ ದಾರಿಯಲ್ಲಿ ಅತ್ತಿಗೆಯನ್ನು ಭೋಗಿಸಿ,) ಅನಂತರ ಆಕೆಯನ್ನು ಮದುವೆಯಾದವನು. ಇವನ ಕೃತ್ಯಗಳಿಂದಲ್ಲದೆ ಮಾತಿನಿಂದ ದ್ರೋಹ ಹೊರಬೀಳದು. ತನ್ನ ಸಹಾಯಕ್ಕೆ ದೇವರಿದ್ದಾನೆ ಎಂಬ ಮಾತನ್ನು ಮೆರೆಸುತ್ತಾ, ಅನ್ಯಾಯಮಾಡಿದವನು ನ್ಯಾಯಪರವಾದ ಭಾಷಣವನ್ನು ಮಾಡಿ ಜನರನ್ನು ಮೋಸಗೊಳಿಸುವಂತೆ ಹೂಟ ಹೂಡುತ್ತಾನೆ. ಲಯಕರ್ತ ತನ್ನ ಕೋಪವನ್ನು ಹರಿಬಿಡಲು ಬಂದಾಗ ಅಸಾಧಾರಣ ಚಿತ್ತಸ್ಥೈರ್ಯದಿಂದ ಆ ಕೋಪವನ್ನು ಹೇಮಲತನ ಮೇಲೆ ತಿರುಗಿಸುತ್ತಾನೆ. ಮೇಲಿನ ಉದ್ಧೃತಭಾಗ ಆ ಹೊತ್ತಿನದು. ರಾಜನ ಹೊಣೆ ದೈವದ್ದು ಎಂದು ಇವನು ಅಣ್ಣನನ್ನು ಕೊಂದ ಮೇಲೆಯೂ ನುಡಿಯುವುದು ಇವನ ಕೇಡಿಗತನದ ಪರಮಾವಧಿ. ನ್ಯಾಯಪರನಲ್ಲದವನು ಆಡಂಬರದ ಮಾತುಗಳನ್ನು ಆಡುವುದು ಸಹಜವಾಗಿಯೇ ಇದೆ. ಇಂಥ ಕಡೆಗಳಲ್ಲಿ ಪುಟ್ಟಣ್ಣನವರಲ್ಲಿ ಸಂವಹನಕ್ಕೆ ಕೊರೆ ಬಂದಿಲ್ಲ.

ಕನ್ನಡದ ದೇಸಿಯನ್ನು ಹಲವು ಕಡೆ ಸಮರ್ಥವಾಗಿ ಸೆರೆಹಿಡಿದಿರುವುದನ್ನು ಕಾಣಬಹುದು. ಕೆಲವು ಉದಾಹರಣೆಗಳನ್ನು ನೋಡಬಹುದು.

Polonius—Affection! pooh! you speak like a green girl,
Unsifted in such perilous circumstance. (p. 71)

ಪೌಲೋಮ—ಪ್ರೇಮವೇ! ಛೆ! ನೀನು ಅನುಭವರಹಿತಳಾದ ಹಸೀಹುಡುಗಿಯಾಗಿ
ಅಪಾಯಕರವಾದ ಇಂಥಾ ಸಂದರ್ಭಗಳಲ್ಲಿ ಶೋಧನೆ ಇಲ್ಲದವಳಾಗಿ ಮಾತನಾಡುತೀಯೆ. (ಪು. 40–41)

Hamlet—These tedious old fools! (p. 96)

ಹೇಮಲತ—ಬೇಜಾರು ಮಾಡತಕ್ಕ ಮುದಿಗೂಬೆಗಳು! (ಪು. 100)

Hamlet—...That great baby you see there is not yet out of his
swaddling clouts. (p. 102)

ಹೇಮಲತ—ಅಗೋ ಅಲ್ಲಿರುವ ದೊಡ್ಡದಾದ ಮಗುವಿಗೆ ಇನ್ನೂ ಎಣ್ಣೆಬಟ್ಟೆ ತಪ್ಪಿಲ್ಲ.
(ಪು. 115)

Hamlet—(Aside) Wormwood, Wormwood (p. 123)

ಹೇಮಲತ—(ಅಂತರಂಗವಾಗಿ) ಅವನಿಗೆ ಇದು ಬೇವಿನಕಾಯಿ, ಬೇವಿನಕಾಯಿ (ಪು. 165)

'ಹಸೀಹುಡಗಿ', 'ಮುದಿಗೂಬೆ', 'ಎಣ್ಣೆಬಟ್ಟೆ', 'ಬೇವಿನಕಾಯಿ' ಮುಂತಾದವು ಮೂಲದ ಭಾವನೆಗಳನ್ನು ಪಡಿಮೂಡಿಸುತ್ತವೆ, ಜೊತೆಗೇ ಅವು ಇಲ್ಲಿನ ಸಮಾಜದಲ್ಲಿ ಚಿರಪರಿಚಿತವಾದವುಗಳು.

**ಮಿತಿಗಳು**

ಅನುವಾದ ಕಾರ್ಯದಲ್ಲಿನ ಸವಾಲುಗಳನ್ನು ಎಷ್ಟರಮಟ್ಟಿಗೆ ಅಸಂಬದ್ಧತೆಯಿಂದ ಹೊರತಾಗಿ ಮಾಡಿದ್ದಾರೆ ಎಂಬುದು ಕೃತಿಯ ಸೋಲುಗೆಲುವುಗಳನ್ನು ನಿರ್ಣಯಿಸುವ ಅಂಶವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ 1899ರಲ್ಲಿ ಹೊರಬಂದ 'ಹೇಮಚಂದ್ರರಾಜ ವಿಲಾಸ'ದ ಅನಂತರ 1920ರಲ್ಲಿ ರಚಿತವಾದ 'ಹೇಮಲತ' ಕೃತಿಯನ್ನು ಓದಿದರೆ ಹಲವು ಅಚ್ಚರಿಗಳು ನಮ್ಮನ್ನು ಸ್ವಾಗತಿಸುತ್ತವೆ. 'ಹೇಮ ಚಂದ್ರರಾಜ ವಿಲಾಸ'ದಲ್ಲಿ ಕಾಣುವ ನಿರಾಯಾಸತೆ 'ಹೇಮಲತ'ದಲ್ಲಿ ಇಲ್ಲ.

1. ಭಾರತೀಯವಾದ ಹೆಸರುಗಳನ್ನಿಡಹೊರಟಾಗ ಮೂಲದ ಹೆಸರುಗಳನ್ನು ಅಲ್ಪಸ್ವಲ್ಪ ತಿರುಚಿ ಮಾಡಿರುವ ಮಾರ್ಪಾಡುಗಳು ಕೃತಿಯ ಅಸಂಬದ್ಧ ಅಂಶಗಳಲ್ಲಿ ಒಂದು. ಅವು ಹೀಗಿವೆ:

| | |
|---|---|
| ಹೇಮಲತ | (Hamlet) |
| ಕ್ಲಾಡರಾಜ | (Claudius) |
| ಪುಲೋಮ | (Polonius) |
| ಹರ್ಷ | (Horatio) |
| ಲಯಕರ್ತ | (Leartes) |
| ವಾಲಖಿಲ | (Voltimond) |
| ಕರ್ಣಜ | (Cornilius) |
| ರೋಮಜ | (Rosencrantz) |
| ಭೈರವ | (Guildenstern) |
| ಕಾಲಭೈರವ | (Osric) |
| ಮೃಗಜ | (Marcellus) |
| ಭರಣ | (Bernardo) |
| ರೇನಾಳ | (Renaldo) |
| ಗರ್ಟಿ | (Gertrude) |
| ಓಪರತ್ನ | (ophelia) |
| ಪಾರ್ತ | (Fortinbras) |

'ಜಯಸಿಂಹರಾಜ ಚರಿತ್ರೆ', 'ಹೇಮಚಂದ್ರರಾಜ ವಿಲಾಸ' ಮತ್ತು 'ಸುಮತಿ ಮದನಕುಮಾರ ಚರಿತ್ರೆ' ಮೊದಲಾದ ರೂಪಾಂತರಗಳಲ್ಲಿ ಬಳಸಿರುವ ಭಾರತೀಯವಾದ ಅಂಕಿತನಾಮಗಳು ಸುಶ್ರಾವ್ಯವಾಗಿವೆ. 'ಹೇಮಲತ' ಕೃತಿಯಲ್ಲಿ ಮೂಲದ ಹೆಸರುಗಳನ್ನು ಹಿಗ್ಗಾಮುಗ್ಗಾ ತಿರುಚಿ ಭಾರತೀಯವಾದ ಹೆಸರುಗಳನ್ನು ಸಾಧಿಸಿರುವುದರಿಂದ ಯಾವ ರಸಾನುಭವವೂ ಉಂಟಾಗದೆ ಕರ್ಕಶತೆ ಮಾತ್ರ ಸಿದ್ಧಿಸಿದೆ. ಕಥಾನಾಯಕನ 'ಹೇಮಲತ' ಎಂಬ ಹೆಸರು ಹೆಣ್ಣಿನ ಹೆಸರಿನಂತಿದ್ದು ಮುಜುಗರವನ್ನು ಮಾತ್ರ ಉಂಟುಮಾಡುತ್ತದೆ. ಕ್ಲಾಡ, ಗರ್ಟಿ ಎಂಬ ರಾಜ, ರಾಣಿಯರ ಹೆಸರು ವಿಚಿತ್ರವಾಗಿವೆ. ಮೃಗಜ, ರೋಮಜ, ರೇನಾಳ, ವಾಲಖಿಲ ಎಂಬ ಹೆಸರುಗಳು ಅಪರಿಚಿತವಾಗಿವೆ.

2. ಯಾವುದೇ ರೂಪಾಂತರದಲ್ಲಿ ಕಥೆಯ ಘಟನೆಗಳು ವಿಷಮತೆಯನ್ನು ಸೂಸಬಾರದು. ಕಡೆಯ ಪಕ್ಷದಲ್ಲಿ ವಿರೋಧವಾದರೂ ಇರಬಾರದು. 'ಹೇಮಲತ' ಈ ಎರಡು ವಿಷಯಗಳಲ್ಲೂ ಸೋಲುತ್ತದೆ.

ನಾಟಕದ ಪ್ರಾರಂಭದಲ್ಲೇ ಆಭಾಸವಿದೆ. ಕ್ಲಾಡರಾಜ ತನ್ನ ಅಣ್ಣನ ನಿಧನದ ನಂತರ ಅತ್ತಿಗೆಯನ್ನು ವರಿಸಿದ್ದಾನೆ. ಭಾರತೀಯ ಪರಿಸರದಲ್ಲಿ ಇದು ಎಷ್ಟರ ಮಟ್ಟಿಗೆ ಸಹಜ ಎಂಬ ಪ್ರಶ್ನೆಯೇಳುತ್ತದೆ. ಜೊತೆಗೆ ಡೆನ್ ಜನರು (ಪು. 244), ರೋಂ ದೇಶ (ಪು. 7) ಎಂಬಂತೆ ಪಟ್ಟಣ, ಜನಾಂಗಗಳ ಹೆಸರನ್ನು ಉಳಿಸಿಕೊಂಡಿರುವುದೂ ವಿಲಕ್ಷಣವಾಗಿದೆ. ಹೇಮಲತ ಹೇಳುವ ಹೆಕ್ಯುಬಳ ಸಂಗತಿಯೂ ಅಂಥದ್ದೇ. (ಪು. 123) ಇಂಥ ಕಡೆಗಳಲ್ಲಿ ಏಕರೂಪತೆಯೂ ಇಲ್ಲದಿರುವುದು—ಉದಾ.—ರೋಂ ದೇಶದ ಹೆಸರನ್ನು ಉಳಿಸಿಕೊಂಡು ಅಲ್ಲಿನ ರಾಜ ಜ್ಯೂಲಿಯಸ್ ಸೀಸರನನ್ನು ಕೇಶವನನ್ನಾಗಿಸಿರುವುದು (ಪು. 7)—ಸೋಲಿಗೆ ಇನ್ನೊಂದು ಕಾರಣವಾಗಿದೆ.

ಮೂಲದ ಇಬ್ಬರು ಗಮಾರರು ಇಲ್ಲಿ 'ಸ್ಮಶಾನರುದ್ರ'ರಾಗಿದ್ದಾರೆ. ಓಪರತ್ನಳ ಶವವನ್ನು ಮಣ್ಣು ಮಾಡುವುದು ಕಿರಸ್ತಾನರ ಹಾಗೆ ಆಗಬೇಕೆ ಎಂಬ ಪ್ರಶ್ನೆ ಬೇರೆ ಅವರಲ್ಲಿ ಹುಟ್ಟುತ್ತದೆ. (ಪು. 279) ಇದೊಂದು ಆಭಾಸದ ಗೊಂಚಲು. ಭಾಗಶಃ ಮಾಡಿಕೊಂಡಿರುವ ಬದಲಾವಣೆ ಇದಕ್ಕೆ ಕಾರಣ.

3. ಪುಟ್ಟಣ್ಣನವರ ಮಿತಿಗೆ ಸಂಕೋಚಪ್ರವೃತ್ತಿ ಇನ್ನೊಂದು ಕಾರಣವಾಗುತ್ತದೆ. ಒಂದು ಉದಾಹರಣೆಯನ್ನು ನೋಡಬಹುದು ;

Ophelia—Indeed, la without an oath, I'll
make an end on 't :
By Gis and by Saint Charity,
Alack, and fie for shame !
Young men will do 't, if they come to 't,
By cock they are to blame.
Quoth she, before you tumbled me,
You promis'd me to wed :

(He answers)
So would I ha'done, by yonder sun,
An thou hadst not come to my bed." (p. 154)

ಮೂಲದಲ್ಲಿ ಈ ಹಾಡು ಒಂದು ಮುಖ್ಯ ಪರಿಣಾಮವನ್ನು ಸಾಧಿಸಿದೆ. ಇದನ್ನು ಹಾಡುವ ಒಫೀಲಿಯಾ ಸುಂದರಿ ,ಕನ್ಯೆ, ಹ್ಯಾಮ್ಲೆಟ್‌ನಲ್ಲಿ ಪ್ರೀತಿಯುಳ್ಳ, ಹ್ಯಾಮ್ಲೆಟ್ ಪ್ರೀತಿಸುತ್ತಿರುವ ಮಂತ್ರಿಪುತ್ರಿ. ತಂದೆ ಹಾಗೂ ಅಣ್ಣಂದಿರ ಗಂಭೀರ ಎಚ್ಚರಿಕೆಗಳಿಂದ ಈ ವಿಧೇಯ ಹುಡುಗಿ ತನ್ನ ಎಚ್ಚರದಲ್ಲಿ ತಾನಿದ್ದಾಳೆ. ಆದರೆ ಪ್ರಣಯಭಂಗ ಹಾಗೂ ಪ್ರಿಯತಮನಿಂದಲೆ, ಆದ ತಂದೆಯ ಕೊಲೆ ಇವುಗಳಿಂದ ಈ ಸುಕುಮಾರಿಯ ಬುದ್ಧಿ ಭ್ರಮಣೆಯಾಗಿ ಹೂಗಳನ್ನು ಮಾಲೆ ಪೋಣಿಸುತ್ತಾ, ಹಾಡು ಹೇಳುತ್ತಾ ಅಲೆಯುತ್ತಾಳೆ. ಮೇಲಿನ ಹಾಡನ್ನು ಹಾಡುವುದು ಕ್ಲಾಡಿಯಸ್ ಹಾಗೂ ಗಟ್ರೂಡರ ಸಮ್ಮುಖದಲ್ಲಿ. ಒಫೀಲಿಯಾಳ ಹುಚ್ಚಿನ ಪ್ರದರ್ಶನಕ್ಕಿಂತ ಹೆಚ್ಚಿನದನ್ನು ಈ ಹಾಡಿನ ಮೂಲಕ ಷೇಕ್ಸ್‌ಪಿಯರ್ ಸಾಧಿಸಿದ್ದಾನೆ.

ಹಾಡಿನಲ್ಲಿ ಒಫೀಲಿಯಾಳ ಅಂತರಂಗವೇದನೆಯೆಲ್ಲ ಪಡಿಮೂಡಿದೆ. ತಂದೆ, ಅಣ್ಣ ಹೇಳಿದ ಅನರ್ಘ್ಯ ನಿಧಿಯನ್ನು ಅವಳು ಸೂರೆಗೊಟ್ಟಳೇನೋ ಎಂಬಂತೆಯೇ ಭ್ರಮಿಸಿಹಾಡುತ್ತಾಳೆ. ಮನಸ್ಸನ್ನು ಕೊಟ್ಟು ಕಳೆದುಕೊಂಡ ಅವಳು ದೇಹವನ್ನೂ ನೀಡಿ ಕಳೆದುಕೊಂಡಂತೆಯೇ ಭಾವಿಸಿದ್ದಾಳೆ. ಆದರೆ ನಿಜವಾಗಿ ಹಾಗೆ ಆಗಿರುವುದು ರಾಜರಾಣಿಯರ ಮಧ್ಯೆ. ಮೊದಲ ಪತಿಯಿದ್ದಾಗಲೇ ಜಾರಿಣಿಯಾಗಿದ್ದ ರಾಣಿ, ಕೊಲೆ ಪಾತಕನೂ ಅಗಮ್ಯಗಾಮಿಯೂ ಆದ ರಾಜ ಇವರಿಬ್ಬರ ಮುಖಕ್ಕೆ ತಿಳಿಯದ ಹುಡುಗಿಯ ಈ ಹಾಡು ಎತ್ತಿ ರಾಚಿದಂತಿದೆ. ಹಳೆಯದೆಲ್ಲ ಮಗುಚಿದಂತಿದೆ.

ಪ್ರೇಮದ ಬಗ್ಗೆ ಬರೆಯಲು ಸಂಕೋಚವೋ, ಎಗ್ಗು ಬಿಟ್ಟು ಹೇಳುವ ಈ ಪ್ರಣಯಭಂಗದ ವಸ್ತು ರಂಗಸ್ಥಳದ ಮೇಲೆ ಶೋಭಿಸದೆಂಬ ವಿಚಾರವೋ ಪುಟ್ಟಣ್ಣನವರು ಈ ಹಾಡನ್ನು ಕೈ ಬಿಡಲು ಕಾರಣವಾಗಿದೆ. ವ್ಯಂಗ್ಯದಿಂದ ಸಾಧಿತವಾದ ಈ ಪರಿಣಾಮವನ್ನು ಕಳೆದುಕೊಂಡಿರುವುದು ದೊಡ್ಡ ಕೊರತೆ. ಭಾಷಾಂತರ ನಷ್ಟಕ್ಕೊಂದು ಉದಾಹರಣೆ.

ಹ್ಯಾಮ್ಲೆಟ್ ಮತ್ತು ಹೊರೇಷಿಯೋ ಶ್ಮಶಾನಕ್ಕೆ ಬಂದಾಗ ಗೋರಿ ತೋಡುತ್ತಿದ್ದ ಗಮಾರರು ಹಾಡುವ ಮೊದಲ ಪದ್ಯ (ಪು. 172) ಪ್ರೇಮವನ್ನು ಕುರಿತಿದ್ದರಿಂದಲೋ ಏನೋ ಮಾಯವಾಗಿದೆ. ಪ್ರೇಮದ ಪ್ರಸಕ್ತಿಯೇ ಇಲ್ಲದ ಮಿಕ್ಕ ಪದ್ಯಗಳು ಪೂರ್ಣವಾಗಿಯೋ ಭಾಗವಾಗಿಯೋ ಕಾಣಿಸಿಕೊಂಡಿವೆ.

4. ಮೂಲದ ಪದಚಮತ್ಕಾರ ಹಲವು ಬಾರಿ ಪುಟ್ಟಣ್ಣನವರಿಗೆ ಎಟುಕದ ಹಣ್ಣು. ಕೆಲವು ಉದಾಹರಣೆಗಳನ್ನು ನೋಡಬಹುದು.

Hamlet—(Aside) A little more than kin, and less than kind. (p. 60)

ಹೇಮಲತ—(ಆತ್ಮಗತ) ನಮ್ಮ ತಾಯಿಯನ್ನು ಮದುವೆಯಾಗಿ, ಬಂಧುವಿಗಿಂತ ಹೆಚ್ಚಾದೆ. ಆದರೆ ಕೃತ್ಯದಲ್ಲಿ ಮನುಷ್ಯಜಾತಿಗಿಂತ ಕಮ್ಮಿಯಾದೆ.
(ಪು. 16)

ಮೂಲದ 'kin' 'kind' ಗಳ ಚಮತ್ಕಾರ ರೂಪಾಂತರದಲ್ಲಿ ಕೈಗೂಡಿಲ್ಲ.[11]

Marcellus—some thing is rotten in the state of Denmark (p. 76)
ಮೃಗಜ—ಡೆನ್‌ಮಾರ್ಕ್ ರಾಜ್ಯದಲ್ಲಿ ಏನೋ ಕೆಟ್ಟಿದೆ (ಪು. 52)

ಮೂಲದ 'State' ಪದದ ಅರ್ಥವ್ಯಾಪ್ತಿ ರೂಪಾಂತರದಲ್ಲಿ ಸಾಧಿತವಾಗಿಲ್ಲ. ರಾಜ್ಯ, ಸಂಸ್ಥಾನ ಎಂಬ ಸಾಮಾನ್ಯ ಅರ್ಥ ಸಾಧಿತವಾಗಿದ್ದರೂ ಸ್ಥಿತಿ ಎಂಬ ಮುಖ್ಯ ಅರ್ಥ—ಬಹುಶಃ ಮೊದಲನೆಯದನ್ನೂ ಒಳಗೊಳ್ಳುವಂಥದು—ದೂರವೇ ಉಳಿದಿದೆ. ಈ ಎರಡು ಸಂಗತಿಗಳನ್ನೂ ಸೇರಿಸಿ ರೂಪಾಂತರಿಸುವುದು ಪುಟ್ಟಣ್ಣನವರಿಗೆ ಸಾಧ್ಯವಾಗಿಲ್ಲ. 'ರಾಜ್ಯ' ಎಂಬ ಪದವನ್ನು ಕೈಬಿಡುವುದರ ಮೂಲಕ ಮೂಲದ ಅರ್ಥವನ್ನು ಸೆರೆಹಿಡಿಯುವ ಒಂದು ಸಂಭವ ಮಾತ್ರ ಇತ್ತು.[12]

5. ಹಲವು ಕಡೆ ಪುಟ್ಟಣ್ಣನವರು ತೀರಾ ವಾಚ್ಯವಾಗಿಸುವುದರ ಮೂಲಕ ಮೂಲದ ಬಿಗಿಯನ್ನು ಕಳೆದುಕೊಳ್ಳುತ್ತಾರೆ. ಒಂದು ಉದಾಹರಣೆಯನ್ನು ನೋಡಬಹುದು.

"Hamlet—...........
This was your husband; look you now, what follows.
Here is your husband; like a mildew'd ear,
Blasting his wholesome brother. Have you eyes?"
(p. 137)

"ಹೇಮಲತ—...........ಇಂಥಾ ಪುರುಷ ನಿಮ್ಮ ಪತಿಯಾಗಿದ್ದರು. ಈಗ ನೋಡಿ ಏನಾಗಿದೆ : ರೋಗ ಹತ್ತಿದ ತೆನೆಯು ತನ್ನ ಪಕ್ಕದ ಜೊತೇ ತೆನೆಯನ್ನು ಕೆಡಿಸುವ ಹಾಗೆ, ಇಗೋ ಇಲ್ಲಿ ನಿಮ್ಮ ಈ ಪತಿ ಇದಾನೆ. ನಿಮಗೆ ಕಂಣಿದೆಯೆ ?" (ಪು. 202)

ಮೂಲದಲ್ಲಿ This was your husband, here is your husband ಎಂದು ಮೊದಲ ಮತ್ತು ಈಗಿನ ಗಂಡಂದಿರನ್ನು ನಿರ್ದೇಶಿಸಿದೆ. ಒಬ್ಬನೇ ವ್ಯಕ್ತಿಯಲ್ಲ ಎಂದು ತಟ್ಟನೆ ಹೊಳೆಯದು. ಈ ವಿಚಾರ ಅರ್ಥಕ್ಲಿಷ್ಟತೆಯಲ್ಲ. ನಿಗೂಢ ವ್ಯಂಗ್ಯ. ಪುಟ್ಟಣ್ಣನವರಲ್ಲಿ "ಇಂಥಾ ಪುರುಷ ನಿಮ್ಮ ಪತಿಯಾಗಿದ್ದರು. ಇಗೋ ಇಲ್ಲಿ ನಿಮ್ಮ ಈ ಪತಿ ಇದಾನೆ" ಎಂಬಲ್ಲಿ ತೀರಾ ವಾಚ್ಯವಾಗಿ ವ್ಯಂಗ್ಯ ಜಾರಿ ಹೋಗಿದೆ.[13]

ಮೂಲದ ಕೆಲವು ಭಾಗಗಳು ರೂಪಾಂತರದಲ್ಲಿ ಬಿಟ್ಟುಹೋಗಿವೆ. ಅವುಗಳಲ್ಲಿ ಎರಡು ಕಣ್ಣುಪ್ಪಿನ ಉದಾಹರಣೆಗಳು : ಮೂಲದಲ್ಲಿ ಒಂದೆಡೆ

'First player–Ay my lord' ಎಂಬ ಭಾಗ ಎರಡು ಬಾರಿ ಇದೆ. ನಡುವೆ ಹ್ಯಾಮ್ಲೆಟ್‌ನ ಮಾತಿದೆ. (p. 107) ಅನುವಾದ ಕಾರ್ಯದಲ್ಲಿ ಮೊದಲಭಾಗ ಆದ ಮೇಲೆ, ಎರಡನೆಯ ಭಾಗ ಆಗಿರಬಹುದೆಂಬ ತಿಳುವಳಿಕೆಯ ಮೇಲೆ, ಮುಂದು ವರಿದಾಗ ಮಧ್ಯದ ಭಾಗ ಬಿಟ್ಟು ಹೋಗಿದೆ. (ಪು. 122) ಇದೇ ರೀತಿಯಲ್ಲಿ ರಾಣಿ ಹ್ಯಾಮ್ಲೆಟ್‌ನಿಗೆ ಹೇಳುವ 'O Hamlet! speak no more;' ಎಂಬ ವಾಕ್ಯವಿರುವ ಭಾಗಕ್ಕೂ 'O! speak to me no more;' (p. 138-139) ಎಂಬ ಭಾಗಕ್ಕೂ ಅರ್ಥದಲ್ಲಿ ಹೆಚ್ಚು ವ್ಯತ್ಯಾಸವಿಲ್ಲದಿರುವುದರಿಂದ ಮೊದಲ ಭಾಗದ ಅನುವಾದವಾದ ಮೇಲೆ ಎರಡನೆಯದರ ಅನುವಾದ ಮುಗಿದಿದೆಯೆಂಬ ಅನಿಸಿಕೆಯಿಂದ ಮಧ್ಯದ ಭಾಗ (ಪು. 205) ಬಿಟ್ಟುಹೋಯಿತು.

ಕೆಲವು ಕಡೆ ಬಿಟ್ಟು ಹೋದ ಭಾಗಗಳಿಗೆ ಪುಟ್ಟಣ್ಣನವರೇ ಹೊಣೆಯಾಗಿದ್ದಾರೆ.

Rosencrantz-Ay, that they do my lord;
Hercules, and his load too. (p. 101)

ರೋಮಜ–ಹವುದು ಬುದ್ಧಿ. (ಪು. 113)
ಇಲ್ಲಿ ಎರಡನೆಯ ಭಾಗ ಬಿಟ್ಟುಹೊಗಿದೆ.

Hamlet-It was a brute part of him to kill so capital a calf there. Be the players ready? (p. 120)

ಹೇಮಲತ–ಆಟಗಾರರು ಸಿದ್ಧವಾಗಲಿ. (ಪು. 158)
ಇಲ್ಲಿ ಮೊದಲ ಭಾಗ ಬಿಟ್ಟುಹೋಗಿದೆ.

Laertes- .........
Now pile your dust upon the Quick and dead,
Till of this flat a mountain you have made,
To o'ertop old pelion or the skyish head
Of blue olympus. (p. 178)

ಲಯಕರ್ತ– .........
ಈ ಪರ್ವತದಷ್ಟು ಎತ್ತರವಾಗುವವರೆಗೂ ಶವದ ಮೇಲೆ ಮಂಣನ್ನು ಸುರಿಯಿರಿ. (ಪು. 296)

ಇಂಥ ಕಡೆಗಳಲ್ಲಿ ಬಿಟ್ಟುಹೋದ ಭಾಗಗಳಿಗೆ ಕಾರಣ ಕಾಣುವುದಿಲ್ಲ.

6. ಪುಟ್ಟಣ್ಣನವರ ಇನ್ನೊಂದು ಮಿತಿ ಪ್ರಕಟವಾಗಿರುವುದು ಅವರ ಪದ್ಯ ಗಳಲ್ಲಿ. ಪದ್ಯರಚನೆ ಪುಟ್ಟಣ್ಣನವರಿಗೆ ಒಲಿದ ವಿಚಾರ ಎಲ್ಲೂ ಅನುಭವಕ್ಕೆ ಬರುವು ದಿಲ್ಲ. ರಂಗಭೂಮಿಯ ಆವಶ್ಯಕತೆಯೊಂದೇ ಪದ್ಯಗಳ ಸೇರ್ಪಡೆಗೆ ಕಾರಣವಾಗಿರ ಬಹುದು. 'ಹೇಮಚಂದ್ರರಾಜ ವಿಲಾಸ'ದಲ್ಲಿ ಇಷ್ಟೊಂದು ಪದ್ಯಗಳನ್ನು ಎಲ್ಲಿ ಕಲಿತೆ ಎಂದು ಲಿಯರ್ ಕೇಳುವುದರಿಂದ ಪದ್ಯಗಳ ರಚನೆ ಅನಿವಾರ್ಯವಾದಂತೆ (ಹೇ. ವಿ. ಪು. 25) ಇಲ್ಲಿ ಯಾವ ಆಂತರಿಕ ಕಾರಣಗಳೂ ಇಲ್ಲ. ಪುಟ್ಟಣ್ಣನವರ ಪದ್ಯದ ಬಳಕೆಗೆ ಒಂದು ಉದಾಹರಣೆಯನ್ನು ಗಮನಿಸಬಹುದು.

"Hamlet-For thou dost know, o Demon dear,
This realm dismantled was
Of Jove himself, and now reigns here
A very very pajock." (p. 127)

ಹೇಮಲತ–ಅತ್ತು ಫಲವೇನಿನ್ನು ಮಿತ್ರನೇ ।
ಕತ್ತಲೆಯು ಕವಿದಂತೆಯಾಯಿತು ।
ಸತ್ತರಾಜನ ಕೊಂದ ನೀಚನು ಅರಸು ತಾನಾದ ॥
ಒತ್ತಿ ಪೇಳಲು ಶಕ್ತಿ ಸಾಲದು ।
ಮತ್ತು ದೈವವು ಮುನಿದು ಹರಹರ ।
ಕಾಗೆಗಿತ್ತನು ಸಕಲ ವೈಭವವ ॥ (ಪು. 175)

ಪುಟ್ಟಣ್ಣನವರ ರೂಪಾಂತರದಲ್ಲಿ ಒಟ್ಟು ಭಾವ ಪ್ರತಿಫಲಿಸಿದೆ. ಮೊದಲಿನ ದೇವರಂಥ ದೊರೆ ಹೋಗಿ ಅವರ ಸ್ಥಳದಲ್ಲಿ ಈಗ ಒಂದು ನವಿಲು ಕೂತಿದೆ ಎಂಬ ಭಾವ ಮೂಲದಲ್ಲಿದೆ. ನವಿಲು ಕಾಮುಕ ಹಕ್ಕಿ ಎಂಬ ಭಾವನೆ ಅಲ್ಲಿ ಪ್ರಚಲಿತವಿದೆಯಾದ್ದರಿಂದ ವ್ಯಂಗ್ಯ ಸ್ಪಷ್ಟವಾಗಿದೆ. ಪುಟ್ಟಣ್ಣನವರು ಈ ಸಾಧ್ಯತೆಯನ್ನು ಗಮನಿಸಿಲ್ಲ. ಆದರೆ ಮುಂದೆ ಹೊರೇಷಿಯೋ ಹೇಳುವ "You might have rhymed" ಎಂಬ ಮಾತನ್ನು ಗಮನಿಸಿದ್ದಾರೆ. ಅಂದರೆ was ಗೆ ಪ್ರಾಸ ass ಎಂದಿರಬೇಕಿತ್ತು ಎಂದು ಅಲ್ಲಿನ ಅಭಿಪ್ರಾಯ. ಇಲ್ಲಿ ದ್ವಿತೀಯ ಪ್ರಾಸ 'ಕತ್ತೆ'ಗೆ ಸರಿಹೊಂದುತ್ತದೆಯಾದ್ದರಿಂದ ಅದೇ ವ್ಯಂಗ್ಯ ಇಲ್ಲಿಯೂ ಸೂಚಿತವಾಗಿದೆ.

ಪದ್ಯಗಳ ರಚನೆಯನ್ನು ಹಲವು ಬಾರಿ ಕೈ ಬಿಡುವುದನ್ನು ಹಿಂದೆಯೇ ಪ್ರಸ್ತಾಪಿಸಿದೆ. ಮೂಲದಲ್ಲಿ ಹ್ಯಾಮ್ಲೆಟ್ ಹಾಗೂ ನಟರು ಹೇಳುವ ಅನೇಕ ಪದ್ಯಗಳು (pp. 104-106) ರೂಪಾಂತರದಲ್ಲಿ (ಪು. 119) ಇಲ್ಲ. ತನಗೆ ಸಾಧಿಸದ ಸಂಗತಿಯನ್ನು ಬಿಡುವ ಔಚಿತ್ಯವನ್ನು ಪುಟ್ಟಣ್ಣನವರು ಇಲ್ಲಿ ತೋರಿದ್ದಾರೆ. ಒಮ್ಮೊಮ್ಮೆ ಯಾವುದೋ ಬಳಕೆಯಲ್ಲಿದ್ದ ಹಾಡನ್ನು ಸೂಚಿಸುತ್ತಾರೆ. 'ನಾಳೆ ಬರ್ಪುದು ರತಿಯ ವಸಗೆಯು' ಎಂಬ ಹಾಡು (ಪು. 240) ಇಂಥ ಒಂದು ಉದಾಹರಣೆ. ಇದು ಆಗ ಪ್ರಚಾರದಲ್ಲಿದ್ದ ಹಾಡು ಎಂದು ಊಹಿಸಬಹುದು.

ಒಟ್ಟಿನಲ್ಲಿ ಪದ್ಯರಚನೆ ಪುಟ್ಟಣ್ಣನವರ ಬಟ್ಟಲಿನ ಚಹವಲ್ಲ ಎಂಬ ತೀರ್ಮಾನಕ್ಕೆ ಬರಬಹುದು.

### ಹ್ಯಾಮ್ಲೆಟ್ ಭಾಷಾಂತರಗಳು

ಎಂ. ಎಸ್. ಪುಟ್ಟಣ್ಣನವರ 'ಹೇಮಲತ' ರೂಪಾಂತರದೊಡನೆ ಬೇರೆ ನಾಲ್ಕು 'ಹ್ಯಾಮ್ಲೆಟ್' ಭಾಷಾಂತರಗಳನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸಿದೆ. ಪುಟ್ಟಣ್ಣನವರ ಅಪ್ರಕಟಿತ ಕೃತಿ 'ಹೇಮಲತ' (ರಚನೆ : 1920) ಮೊದಲ ಗದ್ಯಾನುವಾದ. ವೈ. ಎಂ. ಷಣ್ಮುಖಯ್ಯನವರ 'ಹ್ಯಾಮ್ಲೆಟ್' (1954) ಕೂಡ ಗದ್ಯಾನುವಾದವೇ.

ಶ್ರೀನಿವಾಸರ 'ಹ್ಯಾಮ್ಲೆಟ್' (1958) ಪದ್ಯಕ್ಕೆ ಪದ್ಯ ಗದ್ಯಕ್ಕೆ ಗದ್ಯವಾಗಿ ಪದಶಃ ಭಾಷಾಂತರವಾಗಿ ರಚಿತವಾಗಿರುವ ನಾಟಕಗಳಲ್ಲಿ ಮೊದಲನೆಯದು. ಎಂ. ಆನಂದ ರಾಯರ ಗದ್ಯಾನುವಾದ 'ಹ್ಯಾಮ್ಲೆಟ್' (1970) ಪ್ರಕಟವಾದ ಅನಂತರ ರಾಮ ಚಂದ್ರದೇವರ 'ಹ್ಯಾಮ್ಲೆಟ್' (1978) ಸದ್ಯಕ್ಕೆ ಕಟ್ಟಕಡೆಯ ಹ್ಯಾಮ್ಲೆಟ್ ಅನುವಾದ ವಾಗಿ ಪ್ರಕಟವಾಗಿದೆ. ಮೂಲದ ಒಂದು ನಾಟಕ ಅನುವಾದಕರ ವೈಯಕ್ತಿಕವಾದ ಸಾಧನೆ ಮತ್ತು ಮಿತಿಗಳ ಮೂಲಕ ಭಾಷಾಂತರ ರೂಪಾಂತರಗಳಲ್ಲಿ ಯಾವ ರೂಪ ತಾಳುತ್ತದೆ ಎಂಬುದು ಕುತೂಹಲಕರವಾದ ವಿಚಾರವಾಗಿದೆ.

ಹ್ಯಾಮ್ಲೆಟನ ಮುಖ್ಯ ಸ್ವಗತಗಳಲ್ಲಿ ಒಂದಾದ 'To be or not to be', ಎಂಬುದು ಷೇಕ್ಸ್‌ಪಿಯರನ ಓದುಗರಿಗೆ ಚಿರಪರಿಚಿತ ಭಾಗ. ಕಥಾನಾಯಕನ ವ್ಯಕ್ತಿ ತ್ವದ ಕೇಂದ್ರ ಬಿಂದುವಾದ ದ್ವಂದ್ವದ ಸೂಚಿ ಇದು. ಕಾರ್ಯಶೀಲತೆ ವಿಮುಖತೆಗಳ ದ್ವಂದ್ವ ಮುಂದಿನ ದುರಂತದ ಬೀಜರೂಪವಾಗಿ ಇಲ್ಲಿ ಪ್ರಕಟವಾಗಿದೆ. ಪುಟ್ಟಣ್ಣ, ಷಣ್ಮುಖಯ್ಯ, ಶ್ರೀನಿವಾಸ, ಆನಂದರಾವ್ ಮತ್ತು ರಾಮಚಂದ್ರ ದೇವ ಅವರುಗಳ ರೂಪಾಂತರ ಭಾಷಾಂತರಗಳಲ್ಲಿ ಈ ಭಾಗವನ್ನು ನೋಡಬಹುದು.

Hamlet : To be, or not to be, that is the question.
Whether 'tis nobler in the mind to suffer
The slings and arrows of outrageous fortune,
Or to take arms against a sea of troubles,
And by opposing end them? To die : to sleep,
No more ; and, by a sleep to say we end
The heart-ache and the thousand natural shocks
That flesh is heir to, 'tis a consummation
Devoutly to be wish'd. To die, to sleep;
To sleep ; perchance to dream : ay, thore's the rub,
For in that sleep of death what dreams may come
When we have shuffled off this mortal coil,
Must give us pause. There's the respect
That makes calamity of so long life ;
For who would bear the whips and scorms of time,
The oppressor's wrong, the proud man's contumely,
The pangs of dispriz'd love, the law's delay,
The insolence of office, and the spurns
That patient merit of the unworthy takes,
When he himself might his quietus make
With a bare bodkin? who would fardels bear,

To grunt and sweat under a weary life,
But that the dread of something after death,
The undiscover'd country from whose bourn
No traveller returns, puzzles the will,
And makes us rather bear those ills we have
Than fly to others that we know not of?
Thus conscience does make cowards of us all ;
And thus the native hue of resolution
Is sicklied o'er with the pale cast of thoughts,
And enterprises of great pitch and moment
With this regard their currents turn awry,
And lose the name of action. Soft you now !
The fair Ophelia ! Nymph, in thy orisons
Be all my sins remember'd. (pp. 112–113)

**ಎಂ. ಎಸ್. ಪುಟ್ಟಣ್ಣನವರ ರೂಪಾಂತರ**

"ಹೇಮಲತ—ಇರಬೇಕೆ, ಹೋಗಬೇಕೆ : ಅದೇ ಮುಖ್ಯವಾದ ವಿಷಯ. ವಿಪರೀತವಾಗಿ ಮುನಿದಿರುವ ಅದೃಷ್ಟವು ಕೊಡತಕ್ಕ ಕವಣೇ ಏಟನ್ನೂ ಬಾಣ ಪ್ರಯೋಗವನ್ನೂ ಮನಸ್ಸಿನಲ್ಲಿಯೇ ಸಹಿಸಿಕೊಂಡಿರುವುದೇ, ಅಥವಾ ಸಮುದ್ರದೋಪಾದಿಯಲ್ಲಿ ಬರುವ (ಬಾಧೆ) ವಿಪತ್ತುಗಳ ಮೇಲೆ ಆಯುಧಪಾಣಿಯಾಗಿ ನಿಂತು ಅವನ್ನು ಪ್ರತಿಭಟಿಸಿ ನಾಶ ಮಾಡುವುದೇ, ಇದರಲ್ಲಿ ಯಾವುದು ಗಂಭೀರವಾದ ಕಾರ್ಯ? ಮರಣ, ಸುಷುಪ್ತಿ, ಹೆಚ್ಚಾಗಿಯೇನೂ ಇಲ್ಲ. ನಮ್ಮ ಹೃದಯದ ಶೂಲವನ್ನೂ ನಮ್ಮ ಶರೀರದ ಮಾಂಸವು ಪಕ್ಕಾಗಿರುವ ಸಾವಿರಾರು ಬಾಧೆಯನ್ನು ಸುಷುಪ್ತಿಯಲ್ಲಿ ನಾವು ನಿರ್ಮೂಲ ಮಾಡುತೇವೆ ಎಂದರೆ, ಇದು ಎಲ್ಲರೂ ಭಕ್ತಿಯಿಂದ ಆಶೆಪಡಬೇಕಾದಂಥಾ ಪುರುಷಾರ್ಥವೇ ಆಗಿದೆ. ಸಾವು, ನಿದ್ರೆ : ನಿದ್ರೆ ಮಾಡುವುದು; (ಹೇಗೆಂದರೆ) ಒಂದು ವೇಳೆ ಸ್ವಪ್ನ ಕಾಣುವುದು. ಹವುದು, ಅಲ್ಲಿಯೇ ಕಷ್ಟ. ಯಾಕೆಂದರೆ ನಶ್ವರವಾಗಿರುವ ಈ ನಮ್ಮ ಶರೀರವನ್ನು ನಾವು ವದರಿಬಿಟ್ಟ ಮೇಲೆ ಮರಣವೆಂಬ ಆ ನಿದ್ರಾ ಕಾಲದಲ್ಲಿ ಯಾವ ಸ್ವಪ್ನ ಬರುವುದೋ ! ಆ ಯೋಚನೆಯಿಂದ ನಾವು ನಿಧಾನಿಸಬೇಕು. ಈ ಯೋಚನೆಯಿಂದಲೇ ನಮಗೆ ಸಂಭವಿಸುವ ವಿಪತ್ತಿಗೆ ದೀರ್ಘವಾಗಿ ಅದು ಬಾಧಿಸುತಿರುವಂತೆ ಅದಕ್ಕೆ ಆಯುಸ್ಸು ಹೆಚ್ಚುವುದು. ಯಾಕೆಂದೊಡೆ ಮನುಷ್ಯನು ಬರೀ ಒಂದು ಕೈ ಬಾಕಿನಿಂದ ತನ್ನ ಜನ್ಮ ಸಮಾಪ್ತಿ ಮಾಡಿಕೊಳ್ಳುವ ಹಾಗಿದ್ದರೆ, ಯಾರು ತಾನೆ ಆಯಾಕಾಲದಲ್ಲಿ ಸಂಭವಿಸುವ ಮಟಗುಗಳನ್ನೂ (ಕಶಾಪ್ರಹಾರಗಳನ್ನೂ) ತಿರಸ್ಕಾರಗಳನ್ನೂ, ಹಿಂಸಕರು ಮಾಡುವ ಕೇಡನ್ನೂ, ಅಹಂಕಾರಿಗಳ ಅಲಕ್ಷ್ಯವನ್ನೂ, ಮನದಿನಿಯಳು ಅಸಹ್ಯ ಪಡುವುದರಿಂದ ಹುಟ್ಟುವ ಯಾತನೆಯನ್ನೂ, ನ್ಯಾಯಾಸ್ಥಾನಗಳಲ್ಲಿ

ನಡೆಯುವ ಕಾಲಯಾಪನವನ್ನೂ, ಅಧಿಕಾರಿಗಳ ದುರಹಂಕಾರವನ್ನೂ, ಸಹನ ಉಳ್ಳ ಯೋಗ್ಯರು ಅಯೋಗ್ಯರಿಂದ ಹೊಂದುವ ಅಲಕ್ಷ್ಯ ಭಾವವನ್ನೂ, ಇವೆಲ್ಲವನ್ನೂ ಯಾರು ತಾನೆ ಸಹಿಸಿಕೊಂಡಿರುತಾರೆ ? ಮರಣಾನಂತರ ಉಂಟಾಗುವ ಯಾವುದೋ ಒಂದು ಭೀತಿ, ಯಾರೂ ಕಾಣದ ಆ ಪ್ರಾಂತದಿಂದ ಯಾವ ಪ್ರಯಾಣಿಕನೂ ಹಿಂದಿರುಗಿ ಬಂದಿಲ್ಲವೋ ಅಂಥಾ ಭೀತಿ ನಮ್ಮ ಮನಸ್ಸಿಗೆ ಗಲಭೆಯನ್ನುಂಟುಮಾಡಿ, ನಾವು ಕಾಣದ್ದನ್ನೂ ಹೊಂದಲು ಹಾರುವುದಕ್ಕಿಂತಲೂ, ಇರುವ ಕಷ್ಟವನ್ನೇ ಅನುಭವಿಸಿಕೊಂಡಿರುವ ಹಾಗೆ ನಮ್ಮನ್ನು ಬಲವಂತ ಮಾಡದಿದ್ದರೆ, ಆಯಾಸಪಟ್ಟುಕೊಂಡಿರುವ ಈ ಬಾಳಿನಲ್ಲಿ ನರಳಿ ಬೆವತು ಭಾರವನ್ನು ಹೊತ್ತು ಸಹಿಸಿಕೊಂಡು ಯಾರು ತಾನೆ ಇರುತ್ತಿದ್ದರು? ಹೀಗೆ ನಮ್ಮ ಮನಸ್ಸೇ ನಮ್ಮನ್ನು ಹೇಡಿಯಾಗಿ ಮಾಡುವುದು. ಈ ಪ್ರಕಾರ ಸಹಜವಾದ ನಮ್ಮ ಮನೋನಿಶ್ಚಯಕ್ಕೆ ಆಲೋಚನೆ ಎಂಬ ಬಿಳಿಛಾಯೆ ಒಂದು ರೋಗ ಕಾಣಿಸುವುದು; ಮಹಾಕಾರ್ಯನಿರ್ವಾಹಕ್ಕಾಗಿ ಮಾಡಬೇಕಾದ ಸಾಹಸಗಳು ಇಂಥಾ ಸಂದರ್ಭದಲ್ಲಿ ತಾವು ಹೋಗುತಾ ಇರುವ ಹೊಳೆಯದಾ ಜಾಡನ್ನು ಬಿಟ್ಟು ಕಾರ್ಯವೆಂಬ ಹೆಸರನ್ನೇ ನಿರ್ಮೂಲ ಮಾಡುವುದು. ಓ, ಈಗ ತಾಮಸವಿರಲಿ. ಸೌಂದರ್ಯವತಿಯಾದ ಓಫಿ, ದೇವಕನ್ನಿಕೆ, ನೀನು ದೇವರನ್ನು ಸ್ತುತಿಗೆಯ್ಯುವಾಗ ನಾನು ಮಾಡಿದ ಅಪರಾಧವನ್ನೆಲ್ಲಾ ಕ್ಷಮಿಸಬೇಕೆಂದು ಹರಸಿಕೊಳ್ಳುವಳಾಗು," (ಪು. 134–137)

ಹೇಮುಲತ ಆದರ್ಶವಾದಿ, ಸೂಕ್ಷ್ಮ ಮನಸ್ಸಿನ ಭಾವುಕ. ಎಲ್ಲ ವಿಚಾರಗಳನ್ನೂ ತಾತ್ತ್ವಿಕ ನೆಲೆಗಟ್ಟಿನಲ್ಲಿ ಯೋಚಿಸಿ ಹಣ್ಣಾಗುತ್ತಾನೆ. ಅವನ ಕ್ಷುಭಿತ ಮನಸ್ಸಿನ ಒಂದು ಇಣಿಕುನೋಟ ಇಲ್ಲಿದೆ. ಪುಟ್ಟಣ್ಣನವರ ಭಾಷಾಂತರದಲ್ಲಿ ಈ ಸಂವಹನಕ್ಕೆ ಕೊರೆ ಕಾಣದು. ಸಾಮಾನ್ಯವಾಗಿ ರೂಪಾಂತರಗಳಲ್ಲಿ ಕಾಣುವ ವಿಪರೀತ ಸ್ವಾತಂತ್ರ್ಯವನ್ನು ಪುಟ್ಟಣ್ಣನವರು ತೋರಿಸಲು ಹೋಗುವುದಿಲ್ಲ. ಮೂಲಕ್ಕೆ ನಿಷ್ಠೆಯಿಂದಿರುವುದು ರೂಪಾಂತರಗಳಲ್ಲೂ ಆವಶ್ಯಕವೇ ಎಂಬುದನ್ನು ಅವರು ಅರಿತಿದ್ದುದಕ್ಕೆ ಮೇಲಿನ ಭಾಗ ಸಾಕ್ಷಿ.

### ಷಣ್ಮುಖಯ್ಯನವರ 'ಹ್ಯಾಮ್ಲೆಟ್' ಭಾಷಾಂತರ

ಹ್ಯಾಮ್ಲೆಟ್ : ಇರುವುದೆ, ಇಲ್ಲವೆ ಅಳಿಯುವುದೆ; ಅದೇ ಈಗಿನ ಸಮಸ್ಯೆ: ನಿರ್ಘೃಣ ದೈವದ ಹೊಡೆತ ಇರಿತಗಳನ್ನು ಮನದಲ್ಲಿ ಮೌನವಾಗಿ ಅನುಭವಿಸುವುದು ಘನವಾದುದೆ, ಇಲ್ಲವೆ ವಿಪತ್ಪರಂಪರೆಗಳ ಸಾಗರದ ವಿರುದ್ಧವಾಗಿಯೆ ಆಯುಧ ಧರಿಸಿ ಅವುಗಳನ್ನು ನಿರ್ಮೂಲ ಮಾಡುವುದೆ? ಸಾವನ್ನು ಸೇರಬೇಕು: ಅನಂತವಾದ ನಿದ್ರೆಯಲ್ಲಿ ಲೀನವಾಗಬೇಕು: ಅಷ್ಟು ಸಾಕು; ಯಾವ ಈ ಮಾಂಸಮಯ ದೇಹ ಹೃದಯವೇದನೆಗೆ, ಸಹಸ್ರರೀತಿಯ, ಅಘಾತಗಳಿಗೆ ಮುಗನಾಗಿದೆಯೊ ಅಂಥ ಈ ದೇಹಕ್ಕೆ ಈ ನಿದ್ರೆಯೆಂಬುದು ಪರಮ ಭಕ್ತಿಯಿಂದ ಆಶಿಸುವ ಅಂತ್ಯವೇ ಆಗಿದೆ. ಸಾಯುವುದು, ನಿದ್ರೆಯಲ್ಲಿ

ಬೆರೆಯುವುದು ! ನಿದ್ರೆಯಲ್ಲಿ ಬೆರೆಯುವುದು ! ಮತ್ತು ಕನಸೊಂದ ಕಾಣುವುದು: ಓ ಅಲ್ಲಿದೆ ಹೋರಾಟ; ಆ ಮರಣದ ನಿದ್ರೆಯಲ್ಲಿ, ಜೀವನದ ಹೋರಾಟದಲ್ಲಿ ಸೋತು ಹೋದ ಈ ಅನಿತ್ಯ ದೇಹವನ್ನು ಕಳಚಿ ತಳ್ಳಿರುವಾಗ, ಎಂಥ ಕನಸುಗಳು ಬರಬಹುದೆಂಬುದು ನಮಗೆ ಯೋಚಿಸತಕ್ಕ ವಿಷಯವಾಗಿದೆ; ಜೀವನದ ದೀರ್ಘ ಕಾಲವಷ್ಟೂ ಒಂದು ಘೋರ ಸಂಭವವಾಗಿರುವ ವಿಷಯವನ್ನು ನಾವು ಚಿಂತಿಸಬೇಕಾಗಿದೆ; ಕಾಲವು ಹೊಡೆಯುವ ಕಶಾಪ್ರಹಾರಗಳನ್ನು ಮತ್ತು ತಿರಸ್ಕಾರದ ಘಾಯಗಳನ್ನು, ಹಿಂಸೆಗಾರನ ಅನ್ಯಾಯಗಳನ್ನು, ದುರಹಂಕಾರಿಯ ಸೊಕ್ಕಿನ ನುಡಿಗಳನ್ನು, ತಿರಸ್ಕೃತ ಪ್ರೇಮದ ಯಾತನೆಗಳನ್ನು, ನ್ಯಾಯದ ನಿಧಾನವನ್ನು, ಅಧಿಕಾರದ ದುರ್ಮದವನ್ನು ಮತ್ತು ಹೀನಗುಣದವನಿಂದ ಸಹನೆಯ ಯೋಗ್ಯತಾವಂತನು ಪಡೆಯುವ ನಿರಾಕರಣೆಯನ್ನು ಯಾರು ಸಹಿಸಿಯಾರು, ಆ ದೇಹವನ್ನು ಕ್ಷಣಮಾತ್ರದಲ್ಲಿ ಚಿಕ್ಕ ಚೂರಿಯ ಒಂದೇ ಇರಿತದಿಂದ ತಣ್ಣಗೆ ಮಾಡಿಕೊಳ್ಳುವುದು ಸಾಧ್ಯವಾಗುವಾಗ ? ಯಾರು ಈ ಆಯಾಸಗೊಂಡ ಜೀವನದ ಭಾರ ಹೊತ್ತು, ನರಳುತ್ತ ಬೆವರು ಸುರಿಸಿಯಾರು? ಆದರೆ ಮರಣಾನಂತರದ ಏತರದೋ ಭೀತಿಯೂ ಅದರಾಚೆಗಿನ ಯಾರೂ ಕಾಣದ ಆ ದೇಶವೂ ಅದರ ಎಲ್ಲೆಗಳಿಂದ ಯಾವ ಹಾದಿಕಾರನೂ ಮರಳಿ ಬಾರದಿದ್ದುದೂ ಬುದ್ಧಿಗೆ ಮಂಕು ಹಿಡಿಸಿ, ನಾವು ಅರಿಯದವುಗಳಲ್ಲಿಗೆ ಹಾರುವುದಕ್ಕಿಂತ ಇರುವ ಯಾತನೆಗಳನ್ನೆ ಅನುಭವಿಸುವಂತೆ ಮಾಡುತ್ತಿದೆಯಲ್ಲವೆ? ಈ ರೀತಿಯ ಆತ್ಮ ಶೋಧನೆಯಿಂದ ನಾವು ಅಧೀರರಾಗುತ್ತೇವೆ; ನಿರ್ಧಾರದ ಸಹಜ ವರ್ಣಚಿಂತನೆಯು ಬಿಳಿಚಿದ ನೆರಳಿನಿಂದ ರೋಗಿಷ್ಟವಾಗುತ್ತದೆ, ಮತ್ತು ಬಹು ಉನ್ನತವಾದ, ಭವ್ಯ ಅವಕಾಶದ ಪ್ರಯತ್ನಗಳು ಇಂಥ ಸಂದರ್ಭದಲ್ಲಿ ತಮ್ಮ ಪ್ರವಾಹಗಳನ್ನು ವಕ್ರಗತಿಗೆ ಹಾಯಿಸಿ ಸಾಧನೆಯೆಂಬ ಹೆಸರನ್ನೆ ಕಳೆದುಕೊಳ್ಳುತ್ತವೆ. ನೀನೀಗ ಸುಮ್ಮನಾಗು! ಅಲ್ಲಿ ಚೆಲುವೆ ಒಫಿಲಿಯು! ಅಪ್ಸರೆಯೆ, ನಿನ್ನ ಪ್ರಾರ್ಥನೆಗಳಲ್ಲಿ ನನ್ನ ಅಕೃತ್ಯಗಳ ನೆನಪು ಇರಲಿ." (ಪು. 69–70)

ಷಣ್ಮುಖಯ್ಯನವರು ಭಾಷಾಂತರದ ನಿಯಮಗಳಿಗೆ ಬದ್ಧರು. ಮೂಲಕ್ಕೆ ನಿಷ್ಠರು. ಯಾವುದೇ ಬದಲಾವಣೆಯನ್ನೂ ತಂದಿಲ್ಲ. ಭಾಷಾಂತರ ತಕ್ಕಮಟ್ಟಿಗೆ ಇದೆ. ಅರ್ಥಕ್ಲಿಷ್ಟತೆ ಇಲ್ಲ. ಕೆಲವೇ ಪದ್ಯಗಳನ್ನು ಹೊಂದಿರುವ ಈ ಗದ್ಯಾನುವಾದದಲ್ಲಿ ಮೂಲದ ಕಾವ್ಯಗುಣ ಕಾಣುವುದಿಲ್ಲ.

## ಶ್ರೀನಿವಾಸರ 'ಹ್ಯಾಮ್ಲೆಟ್'

ಹ್ಯಾಮ್‌ಲೆಟ್. ಉಳಿದಿಹುದೆ, ಅಳಿಯುವುದೆ: ಇದುವೇ ಸಮಸ್ಯೆ.
ಮನದೊಳಾವುದುದಾತ್ತ ? ದುಸ್ಸಹ್ಯ ದುರ್ದೈವ
ಎಸೆವ ಕಣೆಕವಣೆಗಳ ಸಹಿಸಿಕೋಬುದೆ ? ಇಲ್ಲ,
ಕಷ್ಟಗಳ ಸಾಗರಕೆ ಮಲೆತು, ಆಯುಧ ತೊಟ್ಟು,
ಅವ ವಿರೋಧಿಸಿ ಮುಗಿಸುವುದೆ ? ಸಾಯುವುದು ; ಸತ್ತು

ನಿದ್ರಿಸಿರುವುದು. ಅಷ್ಟೆ. ಇಂತು ನಿದ್ರಿಸಿ ನಾವು,
ಮನುಜ ಜನ್ಮಕೆ, ಮನಃ ಕ್ಲೇಶ, ಸಾವಿರ ಸಹಜ
ಘಾತಗಳು, ಪಿತ್ರಾರ್ಜಿತದ ಆಸ್ತಿಯಂತಿಹವು
ಯಾವವವು, ಅವನೆಲ್ಲ ಕೊನೆಗಾಣಿಸುವೆನೆನಲು,
ಅತ್ಯಂತ ಸ್ಪೃಹಣೀಯ ಸಿದ್ಧಿ ಇದು. ಸಾಯುವುದು :
ನಿದ್ರಿಸಿರುವುದು : ನಿದ್ರಿಸುವುದು : ಸಂಭವ ಅಲ್ಲಿ
ಕನಸಕಾಂಬುದು. ಅಃ, ಇದರ ತೊಡಕಲ್ಲಿಹುದು.
ಏಕೆ ? ಸಾವಿನ ಕಂತೆ ಇದ ಒಗೆದು ನಡೆದಿರಲು,
ಮರಣನಿದ್ರೆಯಲಾವ ಕನಸು ಕಂಡಾವೊ, ಇದು
ನಮ್ಮ ತಡೆಯಲೆಬೇಕು. ಅದರಲಿದೆ ನೋವಿಗೆ
ಇನಿತು ದೀರ್ಘಾಯುಃಷ್ಯ ನೀಡಿರುವ ಯೋಚನೆ.
ನಾಡೆ, ಯಾವವನು ಕಾಲದ ಕಶೆ, ಅವಲೇಪ,
ಪೀಚಕನ ಅನ್ಯಾಯ ; ಗರ್ವಿಯ ತಿರಸ್ಕಾರ,
ಪ್ರೇಮದ ನಿರಾಕರಣೆ ತಹ ಬೇನೆ, ನ್ಯಾಯದ
ಅತಿವಿಲಂಬತೆ, ಪದವಿ ತೋರುವ ಮಹದ್ದರ್ಪ,
ಸಹನಪರ ಅರ್ಹತೆ ಅಯೋಗ್ಯತೆಯ ಕೈಯಿಂದ
ಕೊಳುತಿರುವ ತಾತ್ಸಾರ, ಇವನೊಪ್ಪಿಕೊಂಡಾನು,
ಬರಿದೊಂದು ಸುರಗಿಯಿಂದವನ ಶಾಂತಿಯನವನು
ಸಾಧಿಸಲು ಬಹುದೆನಲು ? ಯಾರು ಹೊರೆಗಳ ಹೊತ್ತು
ಬೇಸರದ ಬಾಳಿನಡಿ ಘುರುಘುರಿಸಿ ಬೆವರುವರು,
ಸಾವಿನಿಂದಾಚೆ ಅದು ಯಾವುದಿದೆ, ಯಾವುದರ
ಗಡಿಯಿಂದ ಯಾವನೆ ಪ್ರವಾಸಿ ಹಿಂದಕೆ ಬಾರ,
ತೆರೆದಿಡದ ಆ ನಾಡ ಕುರಿತ ಭಯ, ಬುದ್ಧಿಯನು
ಮೋಹಕೆಡೆ ಮಾಡಿ, ನಮ್ಮನು, ನಾವು ಕಾಣದಿಹ
ಕೇಡತ್ತ ಹಾಯುವುದಕಿಂತ ಅನುಭವಿಸುತಿಹ
ಕಷ್ಟವನು ಸಹಿಸುವುದು ಒಳಿತೆಂದು ತಿದ್ದದಿರೆ ?
ಇಂತೆಮ್ಮನೆಲ್ಲ ಚಿಂತನ ಹೇಡಿ ಮಾಡಿಹುದು.
ಮತ್ತಿಂತೆ ನಿಶ್ಚಯದ ನಿಜವರ್ಣ, ಯೋಚನೆಯ
ಪಾಂಡುರಚ್ಛವಿಯಿಂದ ರುಗ್ಣಲೇಪನ ಪಡೆದು,
ಬಹು ತಿರುಳು ಹುರುಳ ಉದ್ಯಮಗಳೀ ಚಿಂತೆಯಲಿ,
ಹೊಳೆಯು ಕೊಂಕಿಸಿ ಹರಿದು, ಕ್ರಿಯೆಯೆಂಬ ಹೆಸರನೇ

ಕಳೆದುಕೊಂಬವು. ಮೆಲ್ಲ ! ಸುಂದರಿ ಒಫೀಲಿಯಾ !
ಭದ್ರೆ, ನೀ ಕ್ಷಮೆಯ ಯಾಚಿಸುವ ಪ್ರಾರ್ಥನೆಗಳಲಿ
ಎನ್ನೆಲ್ಲ ಪಾಪಗಳ ನೆನಪಿರಲಿ. (ಪು. 83–84)

ಮೂಲನಾಟಕದಲ್ಲಿ ವ್ಯಕ್ತವಾಗಿರುವ ಆಶಯವನ್ನು ಮಾಸ್ತಿಯವರು ಒಟ್ಟಾಗಿ ಗ್ರಹಿಸುತ್ತಾರೆ. ತಮ್ಮ ಭಾಷಾಂತರದಲ್ಲಿ ಮೂಲಕ್ಕೆ ನಿಷ್ಠವಾಗಿರಲು ಪ್ರಜ್ಞಾಪೂರ್ವಕವಾದ ಪ್ರಯತ್ನ ಮಾಡುತ್ತಾರೆ. ಪದ್ಯಕ್ಕೆ ಪದ್ಯ, ಗದ್ಯಕ್ಕೆ ಗದ್ಯ ಎಂಬ ನಿಯಮವೂ ಅವರಿಗುಂಟು. ಮೂಲದ ಬ್ಲ್ಯಾಂಕ್‌ವರ್ಸಿಗೆ ಸಮೀಪವಾದ ಸರಳ ರಗಳೆ ಮಾಸ್ತಿಯವರಿಗೆ ತಕ್ಕ ಪರಿಕರವಾಗಿ ಒದಗಿದೆ. ಕನ್ನಡದಲ್ಲಿ ಸರಳರಗಳೆಯನ್ನು ಯಶಸ್ವಿಯಾಗಿ ಮೊದಲು ಬಳಸಿದವರು ಮಾಸ್ತಿಯವರೇ ಎಂಬುದನ್ನು ಇಲ್ಲಿ ನೆನೆಯಬಹುದು. ಇಷ್ಟಾದರೂ ಅವರ ಸ್ವತಂತ್ರ ಕೃತಿಗಳಲ್ಲಿ ಕಾಣುವ ಶೈಲಿಯ ಸಲೀಲತೆ ಇಲ್ಲಿ ಕಾಣದು. ಭಾಷೆಯಲ್ಲಿ ವಿಲಕ್ಷಣತೆ ಕಾಣುತ್ತದೆ. ನಡೆ ಎಷ್ಟು ಬಳುಕಿದರೂ ಕೃತಕತೆ ಕಾಣುತ್ತದೆ.

**ಎಂ. ಆನಂದರಾಯರ 'ಹ್ಯಾಮ್ಲೆಟ್'**

ಹ್ಯಾಮ್ಲೆಟ್—ಬದುಕಿರಬೇಕೇ ಇಲ್ಲವೆ ಸಾಯಬೇಕೇ–ಎಂಬುದೇ ಸಮಸ್ಯೆಯಾಗಿದೆ. ಕೋಪೋದ್ರಿಕ್ತ ವಿಧಿಯ ಕವಣೆ ಏಟಿನ ಹಾಗೂ ಬಾಣಗಳ ಪೆಟ್ಟಿನ ಯಾತನೆಯನ್ನು ಮನಸ್ಸಿನಲ್ಲಿಯೇ ಅನುಭವಿಸುವುದು ಉತ್ತಮವೇ ಇಲ್ಲವೆ ಕಷ್ಟಸಾಗರಕ್ಕೆ ವಿರುದ್ಧವಾಗಿ ಕತ್ತಿಕಟ್ಟಿ ಪ್ರತಿಭಟಿಸಿ ಆ ಕಷ್ಟಗಳನ್ನು ಕೊನೆಗಾಣಿಸುವುದು ಉತ್ತಮವೇ ? ಸಾವೆಂದರೆ ನಿದ್ರೆ—ಅಷ್ಟೇ. ಮಾನವನ ಅನುವಂಶಿಕ ಹಕ್ಕಾದ ಹೃದಯ ವೇದನೆ ಹಾಗೂ ಜೀವನದ ನೈಸರ್ಗಿಕವಾದ ಸಹಸ್ರಾಘಾತಗಳನ್ನು ನಿದ್ರೆಯೊಂದರಿಂದ ನಾವು ಕೊನೆಗಾಣಿಸುತ್ತೇವೆಂದರೆ—ಅದು ಮನಸಾ ಇಚ್ಛಿಸಬಹುದಾದ ಅಂತಿಮ ಗುರಿಯಾಗಿದೆ. ಸಾಯುವುದೆಂದರೆ ನಿದ್ರಿಸುವುದು; ನಿದ್ರಿಸುವುದು ! ಬಹುಶಃ ಕನಸು ಕಾಣುವುದು. ನಿಜಕ್ಕೂ ತೊಂದರೆ ಇರುವುದು ಇಲ್ಲಿ. ಏಕೆಂದರೆ ಈ ಜೀವನದ ಕೋಟಲೆಯನ್ನು ತಳ್ಳಿಬಿಟ್ಟ ಮೇಲೆ ಸಾವೆಂಬ ನಿದ್ರೆಯಲ್ಲಿ ಬರಬಹುದಾದಂಥ ಕನಸುಗಳ ಯೋಚನೆ ನಾವು ಮುಂದುವರಿಯದಂತೆ ಮಾಡುತ್ತದೆ. ನಮ್ಮ ವಿಪತ್ತು ಸುದೀರ್ಘಕಾಲ ಬಾಳುವಂತೆ ಮಾಡುವಂಥದು ಈ ಪರ್ಯಾಲೋಚನೆಯೇ. ವ್ಯಕ್ತಿ ಕೇವಲ ತನ್ನ ಕಠಾರಿಯಿಂದ ತನ್ನ ಪ್ರಾಣವಿಮೋಚನೆಯನ್ನು ಹೊಂದಬಹುದಾಗಿದ್ದರೆ ಸಮಕಾಲೀನರ ಚಾವಟಿ ಏಟನ್ನೂ ಅವಹೇಳನವನ್ನೂ ಯಾರು ಸಹಿಸಿಕೊಳ್ಳುತ್ತಿದ್ದರು ? ಹಿಂಸಕನ ಅನ್ಯಾಯಗಳನ್ನು ದುರಹಂಕಾರಿಯ ನಿಂದೆಯನ್ನು, ತಿರಸ್ಕೃತ ಪ್ರೇಮದ ಯಾತನೆಗಳನ್ನು ಯಾರು ಸಹಿಸಿಕೊಳ್ಳುತ್ತಿದ್ದರು ? ನ್ಯಾಯಾಲಯದ ಆಲಸ್ಯವನ್ನು, ಅಧಿಕಾರಿಗಳಿಂದಾಗುವ ಅಪಮಾನಗಳನ್ನು, ಅಯೋಗ್ಯನಿಂದ ಯೋಗ್ಯನ ಸಹನಶಕ್ತಿ ಪಡೆಯುವ ತಿರಸ್ಕಾರಗಳನ್ನು ಯಾರು ಸಹಿಸಿಕೊಳ್ಳುತ್ತಿದ್ದರು ? ಮರಣಾನಂತರ ಲಭಿಸುವ ಅಜ್ಞಾತ ರಾಷ್ಟ್ರದ ಗಡಿಯನ್ನು ದಾಟಿಕೊಂಡು ಯಾವ ಪಯಣಿಗನೂ ಮರಳಿಬಾರನು. ಆ

ಅಜ್ಞಾತ ರಾಷ್ಟ್ರ ನಮ್ಮ ಮನಸ್ಸನ್ನು ತಬ್ಬಿಬ್ಬಾಗಿಸುತ್ತದೆ; ಹಾಗೂ ಅರಿಯದ ಕಷ್ಟಗಳ ಕಡೆ ನಾವು ಓಡಿಹೋಗುವುದಕ್ಕಿಂತ ನಮಗಿರುವ ಕಷ್ಟಗಳನ್ನೇ ಸಹಿಸುವಂತೆ ಮಾಡುತ್ತದೆ; ಈ ರಾಷ್ಟ್ರದ ಭೀತಿಯೊಂದಿಲ್ಲದಿದ್ದರೆ ಶ್ರಮದಾಯಕವಾದ ಈ ಜೀವನದಲ್ಲಿ ಗುರುಗುಟ್ಟಿಕೊಂಡು ಬೆವರಿಳಿಸಲು ಆ ಕಷ್ಟಗಳ ಹೊರೆಯನ್ನು ಯಾರು ಹೊರುತ್ತಿದ್ದರು ? ಈ ರೀತಿಯಲ್ಲಿ ನಮ್ಮ ಆಲೋಚನಾಶಕ್ತಿ ನಮ್ಮೆಲ್ಲರನ್ನೂ ಹೇಡಿಗಳನ್ನಾಗಿ ಮಾಡುತ್ತದೆ. ಹೀಗಾಗಿ ನಮ್ಮ ನಿರ್ಣಯದ ಸಹಜ ವರ್ಣವು ಈ ಆಲೋಚನೆಯ ವಿವರ್ಣಛಾಯೆಯಿಂದ ನಿಸ್ತೇಜಗೊಂಡಿದೆ. ವಿಶೇಷ ಔನ್ನತ್ಯದ ಮಹತ್ತ್ವದ ಸಾಹಸೋದ್ಯಮಗಳ ಪ್ರವಾಹಗಳು ಇದರಿಂದಾಗಿ ವಕ್ರಮಾರ್ಗಕೊಳ್ಳುತ್ತವೆ; ಕಾರ್ಯಗತವಾಗದೆ ಹೋಗುತ್ತವೆ. ಸದ್ದು ! ನೀನೀಗ ಇಲ್ಲಿ ! ಸುಂದರಾಂಗಿ ಒಫೀಲಿಯಾ ! ಅಪ್ಸರೆ, ನೀನು ಮಾಡುವ ದೇವತಾ ಪ್ರಾರ್ಥನೆಯಲ್ಲಿ ನನ್ನ ಸಕಲ ಪಾಪಗಳೂ ಸ್ಮರಿಸಲ್ಪಡಲಿ." (ಪು. 74–75)

ಆನಂದರಾಯರು ಮೂಲಕ್ಕೆ ನಿಷ್ಠೆಯನ್ನು ತೋರಿದ್ದಾರೆ. ಇದೂ ಕೂಡ ಪ್ರಜ್ಞಾಪೂರ್ವಕವಾಗಿ ಮಾಡಿದ ಪ್ರಯತ್ನವೇ. ಗದ್ಯದ ಓಟ ಸಹಜ, ಕಾವ್ಯಗುಣ ನಷ್ಟ ಎಂಬುದು ತಟ್ಟನೆ ಹೊಳೆಯುವ ಅಂಶ. ಮುಖ್ಯವಾಗಿ ಗದ್ಯವನ್ನೇ ನೆಚ್ಚಿದ್ದರೂ ಪದ್ಯಗಳು ಅಲ್ಲೊಂದು ಇಲ್ಲೊಂದು ಕಾಣಿಸಿಕೊಳ್ಳುತ್ತವೆ.

**ರಾಮಚಂದ್ರದೇವ ಅವರ 'ಹ್ಯಾಮ್ಲೆಟ್'**

ಹ್ಯಾಮ್ಲೆಟ್— ಇರಲೆ ಅಥವ ಇಲ್ಲದೆ ಇರಲೆ–ಇದು ಪ್ರಶ್ನೆ :
ಯಾವುದು ಶ್ರೇಷ್ಠ–ನಖಶಿಖಾಂತ ಉರಿದೆದ್ದ
ಅದೃಷ್ಟದ ಬಾಣ ಮೊನೆ ಚುಚ್ಚುಗಳ
ತಾಳುತ್ತ ಬೆಯ್ಯುವುದೆ ; ಅಥವಾ
ಶಸ್ತ್ರವನ್ನೆತ್ತಿ ಕೋಟಲೆಯ ಸಾಗರ ವಿರುದ್ಧ ಬಂಡೆದ್ದು
ಹೋರಾಡಿ ಮುಗಿಯುವುದೆ–ಸಾಯುವುದು, ಮಲಗಿ ನಿದ್ರಿಸುವುದು–
ಬರಿ ಅಷ್ಟೆ–ನಿದ್ರೆಯ ಬಳಿಕ
ಜೀವ ಪಕ್ಕಾದ ಸಾವಿರದೆಂಟು ಆಘಾತಗಳು
ಮುಗಿದಂತೆ ಅನ್ನುತ್ತೇವೆ ! ಮತ್ತೆ ಮತ್ತೆ ಬೇಕೆನ್ನಿಸುವ
ನೆಮ್ಮದಿಯ ಬಯಕೆ, ಸಾಯುವುದು, ಮಲಗಿ ನಿದ್ರಿಸುವುದು,–
ಮಲಗುವುದು–ಕನಸು ಕಾಣುವುದಕ್ಕೆ–ಹ್ಞಾ, ಇದು ತೊಡಕು–
ಈ ಮರ್ತ್ಯದ ಉರುಳ ಕಡಿದೆಸೆದ ಬಳಿಕ
ಮರಣವೆಂಬ ನಿದ್ದೆಯಲ್ಲಿ ಯಾವ ಕನಸಲೆಯುವುದು ?
ಸುದೀರ್ಘ ಹಬ್ಬಿರುವ ಈ ಗೊಂದಲದ ಬದುಕು

ತಲೆ ಕೆಡಿಸುತ್ತದೆ : ಹೋ,
ಯಾರು ಈ ಕಾಲ ಪುರುಷನ ಚಾಟಿ ಏಟುಗಳ, ಹೊಡೆತಗಳ
ಸರ್ವಾಧಿಕಾರಿಯ ತುಳಿತ, ಅಹಂಕಾರಿಯ ಸೊಕ್ಕು,
ಪ್ರೇಮಿಯ ನಿರಾಕರಣೆ, ನ್ಯಾಯದ ವಿಲಂಬ
ಪೆದ್ದ ಅಧಿಕಾರಿ ಯೋಗ್ಯನಿಗೆ ತೋರಿಸುವ ತಿರಸ್ಕಾರ
–ಕಠಾರಿಯಿಂದ ಕೊನೆ ತಂದುಕೊಳ್ಳಬೇಕೆನ್ನಿಸುವ ಪಟ್ಟೆ–ಆದರೂ
ಸಾವಿನಾಚೆಯ ಅನೂಹ್ಯ,
ಹೋದ ಪಯಣಿಗ ಹಿಂದಿರುಗದಂಥ ಆ ಅದೃಶ್ಯ ದೇಶ
ನಮ್ಮನ್ನು ಕಂಗೆಡಿಸಿ, ಗೊತ್ತಿರದ ದೇಶಕ್ಕೆ ನೆಗೆಯುವ ಬದಲು ಇಲ್ಲೇ ಬದುಕಿ
ಈ ಖಾಯಿಲೆಯ ಸಹಿಸುವ ಹಾಗೆ ಮಾಡುತ್ತಿದೆ; ಇಲ್ಲದಿದ್ದರೆ ಯಾರು
ಈ ದೊಡ್ಡ ಹೊರೆ ಹೊತ್ತು
ಬೇಸರದ ಬಾಳನ್ನು ಬೆವರು ಸುರಿಸುತ್ತ, ಗೊಣಗುತ್ತ ತಳ್ಳುತ್ತಾರೆ ?
ಚಿಂತನ, ಮನನ ನಮ್ಮನ್ನೆಲ್ಲ ಹೇಡಿಯಾಗಿಸಿದರೆ ;
ನಿಶ್ಚಯದ ನಿಜಬಣ್ಣ,
ಯೋಚನೆಯಿಂದ ಬಿಳಿಚಿ,
ಯಾವುಯಾವುದೋ ಆಳ ಎತ್ತರದ ಚಿಂತೆಗಳ ಕೊರಕಲಿನಲ್ಲಿ
ಅಂಕುಡೊಂಕಾಗಿ ಹರಿದು
ಕ್ರಿಯೆಯೆಂಬ ಹೆಸರನ್ನೇ ಕಳೆದುಕೊಳ್ಳುತ್ತಿದೆ.
ಸುಮ್ಮನಿರು–ಸುಂದರಿ ಒಫೀಲಿಯಾ !
ದೇವತೆಯೇ, ನಿನ್ನ ಪ್ರಾರ್ಥನೆ ಹೊತ್ತು
ನನ್ನ ಪಾಪಗಳು ನೆನಪಿರಲಿ. (ಪು. 69–70)

ರಾಮಚಂದ್ರದೇವ ಅವರು ತಮ್ಮ 'ಹ್ಯಾಮ್ಲೆಟ್' ಭಾಷಾಂತರದಲ್ಲಿ ಪದ್ಯಕ್ಕೆ ಪದ್ಯ, ಗದ್ಯಕ್ಕೆ ಗದ್ಯ ಎಂಬ ನಿಯಮವನ್ನು ಪಾಲಿಸಿದ್ದರೂ ಇಲ್ಲಿನ ಪದ್ಯಗದ್ಯಗಳಿಗೆ ಬಹಳ ಭೇದವಿಲ್ಲ. ಅರ್ಥರಹಿತ ನಿಯಮಗಳಿಗೆ ಒಳಪಡದೆ ಹಾಗೆಂದು ಸ್ವಚ್ಛಂದತೆಗೆ ಒಲಿಯದೆ ಸೂಕ್ತವಾದ ಒಂದು ಮಧ್ಯಮಾರ್ಗವನ್ನು ಅವಲಂಬಿಸಿದ್ದಾರೆ. ಆದ್ದರಿಂದ ಪದ್ಯಗದ್ಯಗಳ ವ್ಯತ್ಯಾಸ ಗೆರೆ ಕೊರೆದಂತೆ ಇಲ್ಲ. ಹಲವು ಕಡೆ ಪದ್ಯಗಂಧಿ ಲಯ ಕಾಣುತ್ತದೆ.

ಒಂದು ದೃಷ್ಟಿಯಿಂದ ಪುಟ್ಟಣ್ಣನವರ ರೂಪಾಂತರದ ಗದ್ಯ ಹಾಗೂ ರಾಮಚಂದ್ರದೇವ ಅವರ ಭಾಷಾಂತರದ ಗದ್ಯ ಇವೆರಡನ್ನು ಓದಿದರೆ ಈ ಎರಡು ಕೃತಿಗಳ ನಡುವಿನ ಐವತ್ತೆಂಟು ವರ್ಷಗಳ ಗದ್ಯದ ಇತಿಹಾಸದ ಮೊದಲ ಹಾಗೂ ಕಡೆಯ ತುದಿಗಳನ್ನು ಕಂಡ ಅನುಭವವಾಗುತ್ತದೆ. ಪುಟ್ಟಣ್ಣನವರದು ಇಡಿಯಾದ, ಎಲ್ಲ ಅಂಶ

ಗಳನ್ನೂ ಸೇರಿಸಿಕೊಳ್ಳುವ ಹಳೆಯ ಸಾಂಪ್ರದಾಯಿಕ ದೃಷ್ಟಿ. ರಾಮಚಂದ್ರದೇವ ಅವರದು ಈ ಸತ್ತ್ವವನ್ನು ಅರಗಿಸಿಕೊಂಡು ಸತ್ತ್ವಶಾಲಿಯಾಗಿದ್ದು, ಕೆತ್ತಿ ಮೊನಚು ಮಾಡಿರುವ ಗದ್ಯ.

ಮೇಲಿನ ಯಾವುದೊಂದು ರೂಪಾಂತರ ಭಾಷಾಂತರ ಕೃತಿಯಲ್ಲಿಯೂ ಮೂಲದ **'To be or not to be'** ಎಂಬ ಪದಪುಂಜ ಸಮರ್ಥರೀತಿಯಲ್ಲಿ ಕನ್ನಡಕ್ಕೆ ಇಳಿದಿಲ್ಲ ಎಂಬುದನ್ನು ಗಮನಿಸಬಹುದು. ಇಂಗ್ಲಿಷಿನ ಹಾಗೂ ಕನ್ನಡದ ಶಾಬ್ದಿಕ ರಚನೆಗಳು ತೀರ ಬೇರೆಯಾಗಿರುವುದು ಇದಕ್ಕೆ ಒಂದು ಮುಖ್ಯ ಕಾರಣ ಎನ್ನಬಹುದು. ಈ ರೂಪಾಂತರ ಭಾಷಾಂತರಗಳ ಇತಿಮಿತಿಗಳು ಕುತೂಹಲಕಾರಿಯಾಗಿವೆ. ಆದರೆ ಪ್ರತಿಯೊಂದು ಕೃತಿಯಲ್ಲೂ ತಕ್ಕಮಟ್ಟಿನ ಸಾಧನೆ ಇದ್ದು ಅದನ್ನು ಪೂರಾ ತಳ್ಳಿಹಾಕದಂತೆ ಮಾಡಿದೆ.

**ಮುಕ್ತಾಯ**

ಷೇಕ್ಸ್‌ಪಿಯರರ ಕೃತಿಗಳನ್ನು ರೂಪಾಂತರಕ್ಕೆ ಅಳವಡಿಸುವಾಗ ಸಾಂಸ್ಕೃತಿಕ ಭೇದಗಳನ್ನು ಇಲ್ಲಿನ ಪರಿಸರಕ್ಕೆ ತಕ್ಕಂತೆ ಪರಿವರ್ತಿಸಿಕೊಳ್ಳುವುದು, ಸಂವಹನಕ್ಕೆ ತಕ್ಕ ಭಾಷೆಯನ್ನು ಬಳಸುವುದು–ಇವೆರಡೂ ಎಲ್ಲ ಕಾಲಕ್ಕೂ ಎದುರಿಸಬೇಕಾದ ಸವಾಲುಗಳೇ. ಈ ದೃಷ್ಟಿಯಿಂದ ಪುಟ್ಟಣ್ಣನವರ 'ಹೇಮಚಂದ್ರರಾಜ ವಿಲಾಸ' ಮತ್ತು 'ಹೇಮಲತ' ರೂಪಾಂತರಗಳನ್ನು ಗಮನಿಸಿ ಇಷ್ಟು ಹೇಳಬಹುದು : ಇವುಗಳಲ್ಲಿ ಮೂಲದ ಕಾವ್ಯಗುಣವಾಗಲೀ ವೈದುಷ್ಯವಾಗಲೀ ಇಲ್ಲ. ಇಲ್ಲಿ ಬಳಸಿರುವ ವಿವರಣಾತ್ಮಕ ಗದ್ಯದಲ್ಲಿ ಅಚ್ಚುಕಟ್ಟು ಕೂಡ ಕಡಿಮೆ. ಆದರೆ ಸಂವಹನಕ್ಕೆ ಅಡ್ಡಿಯಿಲ್ಲ. ಕಾವ್ಯಕ್ಕೆ ಸಂಬಂಧಿಸಿದಂತೆ ತಮ್ಮ ಮಿತಿಯನ್ನರಿತು ಗದ್ಯದಲ್ಲಿ ಸಾಧನೆಯ ಅವಕಾಶಗಳನ್ನು ತಿಳಿದುಕೊಂಡಿದ್ದು ಪುಟ್ಟಣ್ಣನವರ ಒಂದು ಸಾಧನೆ. ಷೇಕ್ಸ್‌ಪಿಯರರ ನಾಟಕಗಳನ್ನು ಪೂರ್ಣಗದ್ಯದಲ್ಲಿ ಬರೆಯುವುದು ಒಂದು ಸಾಹಿತ್ಯಕ ಧೋರಣೆ ಆಗದಿದ್ದಾಗಲೂ ಹಾಗೆ ಮಾಡಿದ್ದು ಮತ್ತು ಸಾಧ್ಯವಿದ್ದೆಡೆಯಲ್ಲೆಲ್ಲ ಆಡುಮಾತನ್ನು ಬಳಸಿದ್ದು ಇಲ್ಲಿಯ ಹೆಚ್ಚಳ. ಪುಟ್ಟಣ್ಣನವರ ಗಮನಾರ್ಹವಾದ ಗದ್ಯಸಾಧನೆಯಲ್ಲಿ ಇದೊಂದು ಗಣನೀಯವಾದ ಅಂಶವಾಗಿದೆ.

ಇನ್ನೂ ಹೆಚ್ಚು ಚೆನ್ನಾದ ಕೃತಿಗಳು ಬರಲಿರುವುದರ ಸೂಚನೆಯಾಗಿ ಪುಟ್ಟಣ್ಣನವರ ಈ ರೂಪಾಂತರಗಳು ಕಾಣುತ್ತವೆ. ಈ ಸಾಧನೆ ಖಂಡಿತವಾಗಿಯೂ ಕಡಮೆಯದಲ್ಲ.

## ಸುಮತಿ ಮದನಕುಮಾರರ ಚರಿತ್ರೆ

ಷೇಕ್ಸ್‌ಪಿಯರರ ನಾಟಕಗಳ ಮೂರು ರೂಪಾಂತರಗಳಲ್ಲದೆ ಇನ್ನೊಂದು ಕೃತಿಯ ರೂಪಾಂತರವನ್ನು ಪುಟ್ಟಣ್ಣನವರು ಮಾಡಿದ್ದಾರೆ.

ಥಾಮಸ್ ಡೇ ಬರೆದ 'ದಿ ಹಿಸ್ಟರಿ ಆಫ್ ಸ್ಯಾಂಡ್ ಫರ್ಡ್ ಅಂಡ್ ಮರ್ಟ್ನ್'[14] ಎಂಬ ಇಂಗ್ಲಿಷ್ ಕೃತಿಯ ರೂಪಾಂತರವೇ ಎಂ. ಎಸ್. ಪುಟ್ಟಣ್ಣನವರ 'ಸುಮತಿ ಮದನಕುಮಾರರ ಚರಿತ್ರೆ'. ಮಕ್ಕಳಿಗೆ ಕಥೆಗಳ ಮೂಲಕ ಒಳ್ಳೆಯ ನಡತೆಯನ್ನು ಮತ್ತು ವಿದ್ಯಾಭ್ಯಾಸದ ವಿಷಯಗಳನ್ನು ಬೋಧಿಸುವುದೇ ಇಲ್ಲಿಯ ಸ್ವಾರಸ್ಯ. ಇಬ್ಬರು ಮುಗ್ಧ ಬಾಲಕರು ಗುರುಕುಲವಾಸದಲ್ಲಿ ಸ್ವಲ್ಪ ಕಾಲ ಬೆಳೆಯುವ ಚಿತ್ರಣ ಮತ್ತು ಉಪಾಧ್ಯಾಯರು ಕೊಡುವ ಉತ್ತಮ ಶಿಕ್ಷಣ ಕ್ರಮ ಈ ಕೃತಿಯ ವಸ್ತು.

ಪುಟ್ಟಣ್ಣನವರ ಗುರಿ ಮೂಲದ ಭಾಷಾಂತರವಲ್ಲ, ಅಲ್ಲಿನ ಸಾರಸತ್ತ್ವವನ್ನು ಕನ್ನಡಕ್ಕೆ ಭಟ್ಟಿಯಿಳಿಸುವುದು. ಮೂಲದ ಸಹಜ ನಿರೂಪಣೆ, ಸುಲಭ ಶೈಲಿಗಳು ಅನುವಾದದಲ್ಲಿ ಅಚ್ಚರಿಯಾಗುವಷ್ಟು ಚೆಲುವಾಗಿ ಮೂಡಿಬಂದಿದೆ. ಆಡುನುಡಿಯ ಸತ್ತ್ವದಿಂದ ಕೂಡಿದೆ.

ಕಥೆಯ ವಾತಾವರಣವನ್ನು ಪುಟ್ಟಣ್ಣನವರು ತಮ್ಮ ಸುತ್ತಲಿನ ಸಮಾಜಕ್ಕೆ ತಕ್ಕಂತೆ ಒಗ್ಗಿಸಿಕೊಂಡರು. ಕೃತಕತೆ ಎಲ್ಲೂ ಕಾಲಿಡದಂತೆ ಎಚ್ಚರಿಕೆ ವಹಿಸಿದರು. ಮೂಲದ ಸನ್ನಿವೇಶಗಳಿಗೆ ಸಂವಾದಿಯಾದ ಇಲ್ಲಿನ ಸನ್ನಿವೇಶಗಳನ್ನು ಹೊಂದಿಸಿದರು. ಕೆಲವು ಉದಾಹರಣೆಗಳನ್ನು ನೋಡಬಹುದು.

1. ಮೂಲದಲ್ಲಿ ಮತಸಂಸ್ಕಾರಗಳನ್ನು ನಡೆಸಲು ದೀಕ್ಷೆ ಹೊಂದಿರುವ ಪಾದ್ರಿ ಸ್ಯಾಂಡ್‌ಫರ್ಡ್‌ನಿಗೆ ಓದುಬರಹವನ್ನು ಕಲಿಸುವ ಹವ್ಯಾಸವನ್ನಿಟ್ಟುಕೊಂಡಿದ್ದರೆ (ಪು. 4), ಅನುವಾದದಲ್ಲಿ ಸ್ಥಳದ ಜೋಯಿಸ ಸುಮತಿಗೆ ಶ್ಲೋಕಗಳನ್ನು ಹೇಳಿ ಕೊಡುವುದು (ಪು. 7) ಸೂಕ್ತವಾಗಿದೆ.

2 ಮೂಲದಲ್ಲಿ ಸ್ಯಾಂಡ್‌ಫರ್ಡ್‌ಗೆ ದ್ವೀಪದ್ರಾಕ್ಷಿ ಹಣ್ಣಿನ ಕಡುಬು, ಒಣ ಬ್ರೆಡ್ಡಿನ ಚೂರುಗಳಿಂದ ತೃಪ್ತಿಯಾದರೆ (ಪು. 4), ಅನುವಾದದಲ್ಲಿ ಸುಮತಿ ಹಣ್ಣು, ದೋಸೆ ಚೂರುಗಳಿಂದ ಸಂತೃಪ್ತನಾಗುತ್ತಾನೆ (ಪು. 8).

3 ಹಸುವಿನ ಕೊಂಬಿನಿಂದ ತಯಾರಿಸಿದ ವಸ್ತುಗಳಲ್ಲಿ ತಾವು ಪಾನೀಯ ಗಳನ್ನು ಕುಡಿಯುವುದಾಗಿ ಸ್ಯಾಂಡ್‌ಫರ್ಡ್ ಹೇಳಿದರೆ (ಪು. 7), ಬಳಪದ ಕಲ್ಲಿನಲ್ಲಿ ಮಾಡಿದ ಪದಾರ್ಥಗಳನ್ನು ಆ ಕೆಲಸಕ್ಕೆ ಉಪಯೋಗಿಸುವುದಾಗಿ ಸುಮತಿ ಹೇಳು ತ್ತಾನೆ (ಪು. 12).

4 ಟಾಮಿಯ ತಾಯಿ ಸ್ಯಾಂಡ್‌ಫರ್ಡ್‌ನಿಗೆ ಮಧುರವಾದ ದ್ರಾಕ್ಷಾರಸವನ್ನು ಕುಡಿಯಲು ಹೇಳುತ್ತಾಳೆ (ಪು. 7). ಮದನನ ತಾಯಿ ಸುಮತಿಗೆ ಕೊಡೆಯಾಲದ ಕಲ್ಲುಸಕ್ಕರೆ, ಏಲಕ್ಕಿ, ಕೇಸರಿ ಹಾಕಿದ ಹಸುವಿನ ಹಾಲನ್ನು ಕೊಡುತ್ತಾಳೆ (ಪು. 13). ಟಾಮಿಯ ತಾಯಿ ಮಗನಿಗೆ ದ್ರಾಕ್ಷಾರಸವನ್ನು ಕೊಡುವ ಸನ್ನಿವೇಶ (ಪು. 8) ಕೂಡ ಬದಲಾಗಿ ಮದನಕುಮಾರನಿಗೆ ಅವನ ತಾಯಿ ಹಣ್ಣನ್ನೂ ಉಂಗುರವನ್ನೂ ಕೊಡು ತ್ತಾಳೆ (ಪು. 15).

5 ಮೂಲದಲ್ಲಿ ಮರ್ಟನ್ ಮಹಾಶಯ ಪಾದ್ರಿ ಬಾರ್ಲೊವನ್ನು ಸಹಭೋಜ

ನಕ್ಕೆ ಆಹ್ವಾನಿಸುತ್ತಾನೆ. (ಪು. 12) ಅನುವಾದದಲ್ಲಿ ಅನಂಗರಾಜ ವೇದಮೂರ್ತಿ ರಾಮಜೋಯಿಸರನ್ನು ಶಿವಪೂಜೆಯ ವೇಳೆಗೆ ಬರಲು ಆಹ್ವಾನಿಸುತ್ತಾನೆ. (ಪು.21).

6 ಬಾರ್ಲೋ ಮತ್ತು ಸ್ಯಾಂಡ್‌ಫರ್ಡರು ಮಾಗಿದ ಚೆರ್ರಿ ಹಣ್ಣುಗಳನ್ನು ತಿನ್ನುತ್ತಾರೆ. (ಪು. 14). ರಾಮಾಜೋಯಿಸ, ಸುಮತಿಯರು ಕಳಿತ ಬಾಳೆಹಣ್ಣು ಗಳನ್ನು ತಿನ್ನುತ್ತಾರೆ. (ಪು. 24).

7 ಒಣಗಿದ ಬ್ರೆಡ್ಡು, ಅನ್ನ ಕಾಳುಗಳು ಮೂಲದಲ್ಲಿ ಬುಟ್ಟಿ ಹೆಣೆಯುವವನ ಆಹಾರವಾದರೆ (ಪು. 19) ಅನುವಾದದಲ್ಲಿ ಬೆರಕೆ ಸೊಪ್ಪಿನ ಉದಕ, ರಾಗಿಹಿಟ್ಟು ಅವನ ಪಾಲಿಗಿದೆ. (ಪು. 31).

8 ಮೂಲದ ಎರಡು ನಾಯಿಗಳ ಕಥೆಯಲ್ಲಿ, ಅಡಿಗೆಮನೆಯಲ್ಲಿ ಮಾಂಸ ಬೇಯುತ್ತಿರುವಾಗ ತಾನೊಂದೇ ಇದ್ದಾಗ್ಯೂ ಕೀಪರ್ ಎಂಬ ನಾಯಿ ಮಾಂಸ ಮುಟ್ಟುತ್ತಿರಲಿಲ್ಲ (ಪು. 26) ಎಂದೂ, ಅನುವಾದದಲ್ಲಿ ಮಲ್ಲಿಗೆ ಎಂಬ ನಾಯಿ ಹೊಲದಲ್ಲಿನ ಭಾವೀತಡಿಯಲ್ಲಿ ತನ್ನೊಡತಿ ಇರಿಸಿದ್ದ ಹಿಟ್ಟನ್ನು ಮುಟ್ಟದೆ ಕಾಗೆ ಗಳನ್ನು ಓಡಿಸುತ್ತಾ ಕಾಯುತ್ತಿತ್ತು (ಪು. 45) ಎಂದೂ ಇದೆ.

9 ಸ್ಯಾಂಡ್‌ಫರ್ಡ್ ಮತ್ತು ಟಾಮಿ ತೋಟದಲ್ಲಿ ಗೋಧಿ ಬಿತ್ತುತ್ತಾರೆ. (ಪು. 78). ಸುಮತಿ ಮದುನಕುಮಾರರು ಕೊತ್ತಂಬರಿ ಬೀಜವನ್ನು ಹಾಕುತ್ತಾರೆ. (ಪು.99).

10 ಇಬ್ಬರು ಬಾಲಕರೂ ಒಮ್ಮೆ ಬೆಳಗಿನ ಸಂಚಾರ ಮುಗಿಸಿ ಹಿಂದಿರುಗು ವಾಗ ಆಯಾಸದಿಂದ ಮರದಡಿಯಲ್ಲಿ ಕುಳಿತಿದ್ದಾಗ, ಅವರನ್ನು ಭೇಟಿಯಾಗುವ ಒಬ್ಬ ಹೆಂಗಸು ಮನೆಗೆ ಕರೆದುಕೊಂಡು ಹೋಗುತ್ತಾಳೆ. ಮೂಲದಲ್ಲಿ ಆಕೆ ಈ ಮಕ್ಕಳಿಗೆ ಮಣ್ಣಿನ ಗಂಗಾಳದಲ್ಲಿ ಹಾಲನ್ನೂ ಸ್ವಲ್ಪ ಬ್ರೆಡ್ಡನ್ನೂ ಕೊಟ್ಟರೆ (ಪು. 110), ಅನುವಾದದಲ್ಲಿ ಒಂದು ಪಂಚಪಾತ್ರೆಯಲ್ಲಿ ಹಾಲನ್ನೂ ಹಿತ್ತಲಲ್ಲಿ ಬೆಳೆದ ಸೌತೇ ಕಾಯನ್ನೂ ಕೊಡುತ್ತಾಳೆ. (ಪು. 122). ಹುಲ್ಲು, ಕುರುಚಲು ಗಿಡಗಳ ರಾಶಿ ಯನ್ನೂ ಒಣಗಿಸಿ, ಉರಿಮಾಡಿ ಅದರಲ್ಲಿ ಹಂದಿಮಾಂಸ, ಟರ್ನಿಪ್ ಗೆಡ್ಡೆಗಳನ್ನು ಬೇಯಿಸುವುದಾಗಿ ಆಕೆ ಮೂಲದಲ್ಲಿ ಹೇಳುತ್ತಾಳೆ. (ಪು. 109). ಅನುವಾದವಲ್ಲಿ ಮನೆಯ ಮುಂದಿದ್ದ ಸಣ್ಣ ಪುರಲೇ ಕಡ್ಡಿ ಹಾಗೂ ತೆಂಗಿನ ಸೋಗೆಯಿಂದ ತಮ್ಮ ಹಿಟ್ಟು, ಉದಕಗಳನ್ನು ಅಡುವುದಾಗಿ ಹೇಳುತ್ತಾಳೆ. (ಪು. 123).

11 ಬಾರ್ಲೋ ಪಾದ್ರಿ ವರ್ಷಕ್ಕೊಮ್ಮೆ ಊಟ ಹಾಕಿಸುವ ರೂಢಿ (ಪು. 217) ಮೂಲದಲ್ಲಿದ್ದರೆ, ರಾಮಾಜೋಯಿಸ ವರ್ಷಕ್ಕೊಮ್ಮೆ ಧಾತ್ರೀಹವನದ ಸಮಾರಾಧನೆಯನ್ನು ಮಾಡಿಸುತ್ತಿದ್ದುದನ್ನು (ಪು. 202) ಅನುವಾದದಲ್ಲಿ ಹೇಳಿದೆ.

12 ಒಮ್ಮೆ ಟಾಮಿ ಬೆಳಗಿನ ಸಂಚಾರದಲ್ಲಿದ್ದ ತನ್ನ ತಂದೆಯನ್ನೂ ಗುರು ಗಳನ್ನೂ ಭೆಟ್ಟಿಯಾಗುತ್ತಾನೆ. (ಪು. 306). ಸ್ನಾನ ಮಾಡಿಕೊಂಡು ಒದ್ದೇ ಬಟ್ಟೆಯು ಹಿಂಡಿಕೆಯನ್ನೂ, ಹೂವಿನ ಬುಟ್ಟಿಯನ್ನೂ ಪಂಚಪಾತ್ರೆಯನ್ನೂ ತರುತ್ತಿದ್ದ ಗುರು

ಗಳನ್ನೂ ಜೊತೆಯಲ್ಲೇ ಇದ್ದ ತಂದೆಯನ್ನೂ ಮದನಕುಮಾರನು ಭೆಟ್ಟಿಯಾಗುತ್ತಾನೆ (ಪು. 252).

13 ಮೂಲದಲ್ಲಿ ಟಾಮಿಯ ತಂದೆ ಹಲವು ನೂರು ಪೌಂಡುಗಳಷ್ಟು ಮೊತ್ತದ ಬ್ಯಾಂಕ್ ನೋಟುಗಳನ್ನು ಜೋಡಿಸಿದ್ದ ಪುಸ್ತಕವನ್ನು ಬಾರ್ಲೋವಿಗೆ ಕೊಡಲೆಳಸಿದರೆ (ಪು. 383), ಅನುವಾದದಲ್ಲಿ ಬೆಳ್ಳೀತಟ್ಟೆಯ ತುಂಬ ಚಿನ್ನದ ಮೊಹರನ್ನು ಅನಂಗರಾಜ ರಾಮಾಜೋಯಿಸರಿಗೆ ಕೊಡಲೆಳಸುತ್ತಾನೆ. (ಪು. 305).

ಮೂಲದ ಸನ್ನಿವೇಶಗಳನ್ನು ಇಲ್ಲಿನ ಸನ್ನಿವೇಶಗಳನ್ನಾಗಿ ಪರಿವರ್ತಿಸಿಕೊಂಡಿರುವ ಪುಟ್ಟಣ್ಣನವರ ಜಾಣ್ಮೆ ಮೇಲಿನ ಉದಾಹರಣೆಗಳಲ್ಲಿ ಅನುಭವಕ್ಕೆ ಬರುತ್ತದೆ. ಶ್ಲೋಕ ಹೇಳಿಕೊಡುವುದರ ಪ್ರಸ್ತಾಪ, ಶಿವಪೂಜೆಯ ಸಂಗತಿ, ಧಾತ್ರೀಹವನದ ವಿಚಾರ ಮುಂತಾದವುಗಳಿಂದ ತಮ್ಮ ಸುತ್ತಲಿನ ಸಮಾಜದ ಸಾಂಸ್ಕೃತಿಕ ಧೋರಣೆಗಳನ್ನು ಅನುವಾದದಲ್ಲಿ ಬಳಸಿರುವುದು ಪುಟ್ಟಣ್ಣನವರು ಉದ್ದೇಶಿಸಿರುವ ರೂಪಾಂತರದ ಯಶಸ್ಸಿಗೆ ಕಾರಣವಾಗಿದೆ.

ಮೂಲ ಹಾಗೂ ಅನುವಾದಗಳಲ್ಲಿ ಹಲವು ವ್ಯತ್ಯಾಸಗಳಿವೆ. ಕೆಲವು ಉದಾಹರಣೆಗಳನ್ನು ನೋಡಬಹುದು.

1. ಮೇದರವನೊಡನೆ ಜಗಳವಾಡಿದವನು ಮೂಲದಲ್ಲಿ ಒಬ್ಬ ಶ್ರೀಮಂತ. (ಪು. 18), ಅನುವಾದದಲ್ಲಿ ಆತ ದೊರೆಯ ಅಳಿಯ. (ಪು. 31). ಮೂಲದಲ್ಲಿ ಅವನ ಹೆಸರಾಗಲೀ, ಅವನ ಊರಿನ ಹೆಸರಾಗಲೀ ತಿಳಿಯುವುದಿಲ್ಲ. ಅನುವಾದದಲ್ಲಿ ಆತ ಮಧುಪುರಿಯ ಮಧುವರ್ಮ (ಪು. 31). ಮೂಲದಲ್ಲಿ ಶ್ರೀಮಂತ ಮಾಡಿದ ಅನ್ಯಾಯಕ್ಕಾಗಿ ಆತನ ಆಸ್ತಿಯ ಅರ್ಧ ಭಾಗವನ್ನು ಮೇದರವನಿಗೆ ಕೊಡಿಸಬೇಕೆಂದು ನ್ಯಾಯಾಧಿಪತಿ ಅಪ್ಪಣೆ ಮಾಡಿದರೆ (ಪು. 24), ಅನುವಾದದಲ್ಲಿ ಆಸ್ತಿಯ ಕಾಲು ಭಾಗವನ್ನು ಹಾಗೆ ಕೊಡಿಸಬೇಕೆಂದು ಅಪ್ಪಣೆ ಮಾಡುತ್ತಾನೆ. (ಪು. 40).

2. ಮೂಲದಲ್ಲಿ ಹ್ಯಾರಿ ಮನೆಗೆ ಒಂದು ವಾರ ಹೋಗಿಬರುವ ಕಾರಣ ತಿಳಿಸಿಲ್ಲ. (ಪು. 24). ಅನುವಾದದಲ್ಲಿ ಸುಮತಿ ಹದಿನೈದುದಿನಗಳ ಕಾಲ ಅಕ್ಕನ ಮದುವೆಗೆಂದು ಹೋಗಿಬರುತ್ತಾನೆ. (ಪು. 41).

3. ಮೂಲದಲ್ಲಿ ನಾಯಿಯ ಮೇಲೆ ಕೋಪಿಸಿದ ಯಜಮಾನನು ಅದನ್ನು ನೇಣುಹಾಕಲು ಆಜ್ಞೆ ಮಾಡಿದರೆ (ಪು. 28), ಅನುವಾದದಲ್ಲಿ ನಾಯಿಯ ಹೊಟ್ಟೆಗೆ ಹಿಟ್ಟು ಹಾಕಬೇಡ ಎನ್ನುತ್ತಾನೆ (ಪು. 48).

ಮಕ್ಕಳಿಗಾಗಿ ಈ ಕೃತಿಯನ್ನು ಉದ್ದೇಶಿಸಿದುದರಿಂದ, ಸ್ವತಃ ಪ್ರಾಣಿಗಳಲ್ಲಿ ಇದ್ದ ಅನುಕಂಪದ ಭಾವದಿಂದ ಪುಟ್ಟಣ್ಣನವರು ನೇಣು ಹಾಕುವ ಅಂಶವನ್ನು ತೆಗೆದು ಹಾಕಿ ಕ್ರೌರ್ಯವನ್ನು ಕಡಿಮೆ ಮಾಡಿದ್ದಾರೆ.

4. ಮೂಲದಲ್ಲಿ ಬಡಹುಡುಗನ ಒಡಹುಟ್ಟಿದವರು ಏಳು ಜನ (ಪು. 40), ಅನುವಾದದಲ್ಲಿ ಹನ್ನೊಂದು ಜನ. (ಪು. 63)

5. ಮೂಲದ ಇಬ್ಬರು ಹುಡುಗರ ಪ್ರಸ್ತಾಪದಲ್ಲಿ ಒಂದು ದೊಡ್ಡ ಕೋಟು, ಒಂದು ಚಿಕ್ಕ ಕೋಟು ಇದ್ದರೆ (ಪು. 42), ಅನುವಾದದಲ್ಲಿ ಒಂದು ದೊಡ್ಡ ಕುಲ್ಲಾವಿ, ಒಂದು ಚಿಕ್ಕ ಕುಲ್ಲಾವಿ ಇದೆ. (ಪು. 65).

6. ಮೂಲದಲ್ಲಿ ಟಾಮಿಯಿಂದ ಪಡೆದ ಬಟ್ಟೆಗಳನ್ನು ಬಡಹುಡುಗನು ಹಿಂದಿರುಗಿಸುವಾಗ ಅವು ತನ್ನ ದರ್ಜೆಗೆ ಮೀರಿದವುಗಳಾದ್ದರಿಂದ ತನಗೆ ಬೇಕಿಲ್ಲ ಎಂದು ತನ್ನ ಸಂಕಟವನ್ನು ತೋಡಿಕೊಳ್ಳುತ್ತಾನೆ, ಸ್ವಲ್ಪ ಮಟ್ಟಿಗೆ ನಿಂದೆಯೂ ಇದೆ. ತನ್ನನ್ನು ಹೀಯಾಳಿಸಿದ ಹುಡುಗರೊಡನೆ ತಾನು ಜಗಳವಾಡಿದ್ದನ್ನು ಹೇಳುತ್ತಾನೆ, ಆ ಹುಡುಗರ ಹೆಸರನ್ನೂ ಹೇಳುತ್ತಾನೆ, (ಪು. 42–44). ಅನುವಾದದಲ್ಲಿ ಮದನಕುಮಾರನಿಂದ ಪಡೆದ ಬಟ್ಟೆಗಳನ್ನು ತನಗೆ ತೀರಾ ಹೆಚ್ಚು ಎಂದು ಬಡಹುಡುಗ ಹಿಂದಿರುಗಿಸುತ್ತಾನೆ, ತನ್ನ ಸಂತಾಪವನ್ನು ಹೇಳಿಕೊಳ್ಳುತ್ತಾನೆ, ನಿಂದೆ ಇಲ್ಲ. ಹೀಯಾಳಿಸಿದ ಹುಡುಗ ರೊಡನೆ ಜಗಳವಾಡುವುದಿಲ್ಲ, ಆ ಹುಡುಗರ ಹೆಸರುಗಳೂ ಇಲ್ಲ. (ಪು. 67–68).

7. ಮೂಲದಲ್ಲಿ ಬಡಹುಡುಗನ ಮನೆ ಈಗಿರುವಷ್ಟಕ್ಕಿಂತ ಐದರಷ್ಟು ದೂರವಿದ್ದರೂ ಹೋಗಿ ಬರುತ್ತೇನೆಂದು ಹ್ಯಾರಿ ಹೇಳಿದರೆ (ಪು. 44), ಅನುವಾದ ದಲ್ಲಿ ಸುಮತಿ ನಾಲ್ಕರಷ್ಟು ದೂರವಿದ್ದರೂ ಹೋಗಿಬರುವುದಾಗಿ ಹೇಳುತ್ತಾನೆ. (ಪು. 68).

8. ಮೂಲದಲ್ಲಿ ರಷ್ಯನ್ ನಾವಿಕರ ಕಥೆಯ ಪ್ರಾರಂಭದ ಸೂಚನೆ ಮಾತ್ರ ಇದೆ. ಕಥೆ ಮುಂದಿನ ಒಂದು ಘಟ್ಟದಿಂದ ಪ್ರಾರಂಭವಾಗುತ್ತದೆ. ನಾಲ್ವರು ನಾವಿಕರ ಹೆಸರುಗಳೂ ಹೇಳಲ್ಪಟ್ಟಿವೆ, ಅವರು ಹುಡುಕಿಕೊಂಡು ಹೋಗುವುದು ಹಿಂದಿನವರು ಮಾಡಿದ್ದ ಗುಡಿಸಲನ್ನು. (ಪು. 59). ಅನುವಾದದಲ್ಲಿ ಕಥೆಯ ಪ್ರಾರಂಭವೂ ಇದೆ. ನಾವಿಕರ ಹೆಸರು ಹೇಳಿಲ್ಲ. ದೂರದಲ್ಲಿ ಕಾಣುವ ದ್ವೀಪವನ್ನು ಅವರು ಹುಡುಕಿಕೊಂಡು ಹೋಗುತ್ತಾರೆ. (ಪು. 86).

9. ಮೂಲದಲ್ಲಿ ಆನೆ ಮತ್ತು ಚಿಪ್ಪಿಗ ಕಥೆಯ ಸ್ಥಳವನ್ನು ಸೂರತ್ ಎಂದು ನಿರ್ದೇಶಿಸಿದ್ದರೆ (ಪು. 75)ಅನುವಾದದಲ್ಲಿ ಈ ಕಥೆಯ ಸ್ಥಳ ತಿಳಿಯುವುದಿಲ್ಲ (ಪು.97).

10. ಮೂಲದಲ್ಲಿ ಒಳ್ಳೇ ಹುಡುಗನ ಕಥೆಯಲ್ಲಿ ಆ ಹುಡುಗ ಐದು ಮೈಲೀ ದೂರದ ಪಕ್ಕದ ಹಳ್ಳಿಗೆ ಹೋಗುತ್ತಾನೆ ಎಂದಿದೆ. ದಾರಿಯಲ್ಲಿ ಸಿಗುವ ಕುದುರೆ ಓಡಾಡಲಾರದೆ ಮುದಿಯಾಗಿ ಆಹಾರವಿಲ್ಲದೆ ಸೊರಗಿತ್ತೆಂದು ಹೇಳಿದೆ. ಕೆರೆಯೊಳಗೆ ಬಿದ್ದು ಒದ್ದಾಡುತ್ತಿದ್ದ ವ್ಯಕ್ತಿಯ ಜನಾಂಗದ ಸೂಚನೆ ಇಲ್ಲ. ಮುಂದೆ ಕಾಣುವ ಕುಂಟನ, ಹಿಂದಿನ ವೃತ್ತಾಂತ ಇದೆ. (ಪು. 80–82). ಅನುವಾದದಲ್ಲಿ ಈ ಹುಡುಗ ಪಕ್ಕದೂರಿನ ಚಿಕ್ಕಮ್ಮನನ್ನು ನೋಡಲು ಹೋಗುತ್ತಿದ್ದುದಾಗಿ ಹೇಳಿದೆ. ದಾರಿಯಲ್ಲಿ ಸಿಗುವ ಕುದುರೆ ಕಾಲು ಉಳುಕಿದುದರಿಂದ ಓಡಾಡಲಾರದೆ, ಆಹಾರ ಗಳಿಸಲಾರದೆ ಸೊರಗಿತ್ತೆಂದು ಹೇಳಿದೆ. ಕೆರೆಯಲ್ಲಿ ಬಿದ್ದಿದ್ದ ವ್ಯಕ್ತಿಯ ಜನಾಂಗದ ಸೂಚನೆ ಇದೆ. ಮುಂದೆ ಸಿಗುವ ಕುಂಟನ ಹಿಂದಿನ ವೃತ್ತಾಂತ ಇಲ್ಲ. (ಪು. 102–103).

11. ಮೂಲದ ಕೆಟ್ಟ ಹುಡುಗನ ಕಥೆಯಲ್ಲಿ ಕುಂಟನನ್ನು ಬೀಳಿಸಿ ತಾನೇ ಕೊಟ್ಟಿದ್ದ ಹಣವನ್ನು ಮಾತ್ರ ತೆಗೆದುಕೊಂಡು ಆ ಹುಡುಗ ಓಡಿಹೋಗುತ್ತಾನೆ. (ಪು. 89). ಅನುವಾದದಲ್ಲಿ ಕುಂಟನನ್ನು ಬೀಳಿಸಿ, ಅವನ ಹಣವನ್ನೂ ಬಟ್ಟೆಯನ್ನೂ ತೆಗೆದುಕೊಂಡು ಆ ಹುಡುಗ ಓಡಿಹೋಗುತ್ತಾನೆ. (ಪು. 108).

12. ಮೂಲದಲ್ಲಿ ಹ್ಯಾರಿಯ ತಂದೆ ಟಾಮಿಯ ತಂದೆಯೊಡನೆ ಮಾತನಾಡುವಾಗ ವಂಶದ ಶ್ರೇಷ್ಠತೆ ಹಾಗೂ ನಿಸ್ವಾರ್ಥಗಳೊಡನೆ ಅಸತ್ಯ, ಅತಿನಯ ಅವಿವೇಕಗಳ ನಿಂದೆಯೂ ನುಸುಳುತ್ತದೆ. (ಪು. 385–386). ಅನುವಾದದಲ್ಲಿ ಸುಮತಿಯ ತಂದೆ ಮದನಕುಮಾರನ ತಂದೆಯೊಡನೆ ಮಾತನಾಡುವಾಗ ವಂಶಪ್ರಜ್ಞೆ ಹಾಗೂ ನಿಸ್ವಾರ್ಥಗಳು ಮಾತ್ರ ಕಾಣುತ್ತವೆ. ಯಾವುದರ ಬಗೆಗೂ ನಿಂದೆಯಿಲ್ಲ. (ಪು. 306).

13. ಮೂಲದಲ್ಲಿ ಬಹಳ ಒತ್ತಾಯದ ನಂತರ ಹ್ಯಾರಿಯ ತಂದೆ ಟಾಮಿಯ ತಂದೆಯಿಂದ ಒಳ್ಳೆಯ ತಳಿಯ ಕುದುರೆಗಳನ್ನು ಸ್ವೀಕರಿಸುತ್ತಾನೆ (ಪು. 388). ಅನುವಾದದಲ್ಲಿ ಕುದುರೆಗಳ ಪ್ರಸಕ್ತಿಯಿಲ್ಲ. ಸುಮತಿಯ ತಂದೆ ಮದನಕುಮಾರನ ತಂದೆಯಿಂದ ಏನನ್ನೂ ಸ್ವೀಕರಿಸುವುದಿಲ್ಲ.

ಈ ವ್ಯತ್ಯಾಸಗಳೆಲ್ಲವೂ ರೂಪಾಂತರಕ್ಕೆ ಅಗತ್ಯವಾದ ಇಲ್ಲಿನ ವಾತಾವರಣದ ನಿರ್ಮಾಣಕ್ಕೆ ಸಹಾಯ ಮಾಡಿವೆ.

ಮೂಲದಲ್ಲಿಲ್ಲದ, ರೂಪಾಂತರದಲ್ಲಿ ಸೇರಿಸಲಾಗಿರುವ ಕೆಲವು ಸಂಗತಿಗಳನ್ನು ನೋಡಬಹುದು.

1. ಟಾಮಿಗೆ ಬಂದಿದ್ದ ಗಂಡಾಂತರ ತಪ್ಪಿದ್ದಕ್ಕೆ ಎಲ್ಲರೂ ಸಂತೋಷಪಡುತ್ತಾರೆ.( ಪು. 6). ಮದನಕುಮಾರನ ಗಂಡಾಂತರ ತಪ್ಪಿದುದಕ್ಕೆ ಎಲ್ಲರ ಸಂತೋಷವೂ ವ್ಯಕ್ತವಾಗುವುದರ ಜೊತೆಗೆ ಅನುವಾದದಲ್ಲಿ ಮೂಲದಲ್ಲಿ ಇಲ್ಲದ ಹಲವು ಸಂಗತಿಗಳಿವೆ ರಾಜಕುಮಾರ ಅಪಾಯದಿಂದ ಪಾರಾದನೆಂದು ಮೃತ್ಯುಂಜಯ ಜಪ, ಹವನ, ದಾನಧರ್ಮ, ಬ್ರಾಹ್ಮಣ ಸಂತರ್ಪಣೆಗಳು ನಡೆದುವೆಂದೂ, ಆ ಹೊತ್ತಿನಲ್ಲಿ ಮದನಕುಮಾರನಿಗೆ ವಸ್ತ್ರಾಭರಣಗಳಿಂದ ಶೃಂಗಾರ ಮಾಡಿದರೆಂದೂ ಹೇಳಿದೆ. (ಪು. 10).

2. ಟಾಮಿ, ಹ್ಯಾರಿಯರೊಂದಿಗೆ ಬಾರ್ಲೋ ಪಾದ್ರಿ ತೋಟಕ್ಕೆ ಮೊದಲ ದಿನವೇ ಹೋಗುತ್ತಾನೆ. (ಪು. 13) ಮದನ ಸುಮತಿರೊಂದಿಗೆ ರಾಮಾಜೋಯಿಸನು ತೋಟಕ್ಕೆ ಹೋದನೆಂದು ತಿಳಿಸುವಾಗ ಆಹ್ನಿಕ ಮುಂತಾದುವನ್ನು ಮುಗಿಸಿ ಧನುರ್ಮಾಸದಂತೆ ಹೊತ್ತಿಗೆ ಮುಂಚೆ ಊಟ ಮಾಡಿದ ಪ್ರಸ್ತಾಪವಿದೆ. (ಪು. 23).

ಈ ಭಾಗಗಳಿಗೆ ಮೂಲದಲ್ಲಿ ಸಂವಾದಿಭಾಗಗಳಿಲ್ಲ.

3. ಮೂಲದ ಶ್ರೀಮಂತ, ಮೇದರವನ ಕಥೆಯಲ್ಲಿ ತನ್ನ ಅನಗತ್ಯ ಕೋಪವನ್ನು ನಿವಾರಿಸಿಕೊಳ್ಳದ ಶ್ರೀಮಂತ ಮೇದರವನ ಮನೆಗೆ ಸಮೀಪದಲ್ಲಿ ರಾಶಿ ಹಾಕಿದ್ದ ಸೀಬಿನ ಪಿಂಡಿಗಳಿಗೆ ಬೆಂಕಿ ಹಾಕುವಂತೆ ಆಜ್ಞೆಮಾಡಿದನು. ಮೇದವರನ ಮನೆಗೂ

ಆ ಬೆಂಕಿ ಹರಡಿತು. (ಪು.20). ಅನುವಾದದಲ್ಲಿ ಅರಿಷಡ್ವರ್ಗಗಳನ್ನು ನಿಗ್ರಹಿಸಲರಿಯದ ದೊರೆ ಆಳಿಯು ಗುಬ್ಬಿ ಮೇಲೆ ಬ್ರಹ್ಮಾಸ್ತ್ರ ಹಾಕಿದರೆಂಬಂತೆ ಮೇದರವನ ಮನೆಯ ಪಕ್ಕದ ಸೀಬಿನ ಪಿಂಡಿಗೆ ಬೆಂಕಿಹಾಕಿಸಲು ಹೇಳಿದ ಕೂಡಲೇ ಆಳುಗಳು ಹಾಗೆ ಮಾಡಿದರು. ಮೇದರವನ ಹುಲ್ಲುಮನೆಗೂ ಯಜ್ಞೇಶ್ವರ ಚೆನ್ನಾಗಿ ಪ್ರವೇಶಮಾಡಿದನು. ಎಂದಿದೆ. (ಪು. 34–35). 'ಅರಿಷಡ್ವರ್ಗ,' 'ಗುಬ್ಬೀ ಮೇಲೆ ಬ್ರಹ್ಮಾಸ್ತ್ರ', ಯಜ್ಞೇಶ್ವರ ಇವುಗಳು ಅನುವಾದದಲ್ಲಿ ಮಾತ್ರ ಕಾಣುವಂಥವು.

4. ಟಾಮಿಯ ತಂದೆ ದೂರದಲ್ಲಿ ಬರುತ್ತಿರುವುದನ್ನು ಹ್ಯಾರಿಯ ತಂದೆ ಕಂಡು ವಂದಿಸಿ ಕರೆದೊಯ್ಯುತ್ತಾನೆ (ಪು. 383). ಅನಂಗರಾಜನನ್ನು ಸೂರ್ಯಭಟ್ಟನು ಎದುರುಗೊಳ್ಳುತ್ತಾನೆ. ಜೊತೆಗೆ ಫಲ ಮಂತ್ರಾಕ್ಷತೆಯನ್ನು ಕೊಟ್ಟು ಹರಸಿ, ಕುಶಲ ಪ್ರಶ್ನೆಗಳನ್ನು ಕೇಳುತ್ತಾನೆ. ಈ ಭಾಗಗಳು ಪುಟ್ಟಣ್ಣನವರು ಅಳವಡಿಸಿದವು. (ಪು. 304).

## ಗದ್ಯಶೈಲಿ

ಪುಟ್ಟಣ್ಣನವರ 'ಸುಮತಿ ಮದನಕುಮಾರರ ಚರಿತ್ರೆ' ಕನ್ನಡದ ನುಡಿಗಟ್ಟಿನಿಂದ ಶ್ರೀಮಂತವಾದುದು. ಈ ಕೃತಿಯನ್ನು ಓದುವಾಗ ಇದು ಮೂಲ ಬರವಣಿಗೆಯಲ್ಲ ಎಂದು ಎಲ್ಲೂ ನೆನಪಾಗುವುದಿಲ್ಲ. ಮೂಲಭಾಷೆಗೇ ವಿಶಿಷ್ಟವಾದ ಗಾಳಿ ಎಲ್ಲೂ ಸೋಕದಂತೆ ಎಚ್ಚರಿಕೆ ವಹಿಸಿರುವುದು ಸುಸ್ಪಷ್ಟ. ಮೂಲದ ಯಾವ ಅಂಶವನ್ನೂ ಬಿಡದೆ ಕೂಡ ಪದಶಃ ಭಾಷಾಂತರಗಳಿಂದ ಪುಟ್ಟಣ್ಣನವರು ಎಷ್ಟು ದೂರವಿದ್ದರೆಂದು ಎರಡು ಉದಾಹರಣೆಗಳ ಮೂಲಕ ನೋಡಬಹುದು.

1. "He was also so delicately broughtup, that he was perpetually ill; the least wind or rain gave him a cold, and the least sun was sure to throw him into a fever. Instead of playing about, and jumping, and running like other children, he was taught to sit still for fear of spoiling his clothes, and to stay in the house for fear of injuring his complexion. By this kind of education, when Master Merton came over to England, he could neither write nor read, nor cipher; he could use none of his limbs with ease, nor could he bear any degree of fatigue; but he was very proud, fretful and impatient." (pp. 2-3)

"ಇದಲ್ಲದೆ ಅತಿ ಲಾಲನೆಯಿಂದ ಸಾಕಿದ್ದರಾದ ಕಾರಣ, ಆಗಾಗ್ಗೆ ಇವನಿಗೆ ಏನಾದರೂ ಒಂದು ಜಾಡ್ಯ ಬರುತಲೇ ಇತ್ತು. ಸ್ವಲ್ಪ ಗಾಳಿ ಬೀಸಿದರೆ ಆಗಲೇ ನೆಗಡಿಯಾಗುತಿತ್ತು, ಸ್ವಲ್ಪ ಬಿಸಿಲಿಗೆ ಹೋದರೆ ಆಗಲೇ ಜ್ವರ ಬರುತಿತ್ತು; ಹೀಗೆ ತೀರ್ಥ ತೆಗೆದುಕೊಂಡರೆ ಸೀತ, ಮಂಗಳಾರ್ತಿ ತೆಗೆದುಕೊಂಡರೆ ಉಷ್ಣ ಎನ್ನುವ ಮಟ್ಟಿಗೆ ಈ ಹುಡುಗನ ದೇಹಪ್ರಕೃತಿಯು ನಾಜೂಕಾಗಿತ್ತು. ಹೊರಗೆ ಓಡಾಡಿ

ಇತರ ಮಕ್ಕಳ ಹಾಗೆ ಕುಣಿದಾಡಿಕೊಂಡು ಇರುವುದಕ್ಕೆ ಬದಲಾಗಿ, "ಒಂದು ಕಡೆ ಸುಮ್ಮನೆ ಮಕ್ಕಳು ಕೂತಿರಬೇಕು; ಇಲ್ಲದಿದ್ದರೆ ಬಟ್ಟೆಯೆಲ್ಲಾ ಮಾಸಿಹೋಗುವುದು" ಎಂದು ಹೇಳಿಕೊಡುತ್ತಿದ್ದರು. "ಮಕ್ಕಳು ಹೊರಕ್ಕೆ ಹೋಗಬಾರದು, ಮನೆಯಲ್ಲಿಯೇ ಇರಬೇಕು: ಇಲ್ಲದಿದ್ದರೆ ಮುಖವೆಲ್ಲಾ ಕಪ್ಪಾಗುವುದು" ಎಂದು ಹೇಳಿಕೊಡುತಿದ್ದರು. ಈ ಸುಕುಮಾರನು ಬಿದರೆಗೆ ಸೇರುವಾಗ್ಯೆ ಈ ವಿಧವಾದ ವಿದ್ಯಾಭ್ಯಾಸದ ಫಲದಿಂದ ಓದುವುದಕ್ಕೂ ಬರೆಯುವುದನ್ನೂ ಬಾರದೆ, ತನ್ನ ಅವಯವಗಳನ್ನು ಈ ಕಡೆ ಆ ಕಡೆ ಸರಾಗವಾಗಿ ಅಲುಗಿಸಲಾರದೆ, ಸ್ವಲ್ಪ ಆಯಾಸವನ್ನೂ ಸಹಿಸಲಾರದೆ, ಹೀಗೆ ಕೈಲಾಗದ ಮುಕ್ಕನಾಗಿದ್ದನು. ಇವನ ಅಹಂಕಾರಕ್ಕೂ ಕೋಪಕ್ಕೂ, ದುಡುಕಿಗೂ ಒರಟುತನಕ್ಕೂ ಮಿತಿಯೇ ಇರಲಿಲ್ಲ." (ಪು. 4–5).

2. "Keeper, in the mean time, lived at a cottage in the country. He neither fared so well, nor looked so plump, as jowler, nor had learned little tricks to recommend him-self; but, as his master was too poor to maintain anything but what was useful, and was obliged to be continually in the air, in all kinds of weather, labouring hard for a livelihood, keeper grew hardy, active, and diligent; he was also exposed to continual danger from the wolves, from whom while guarding the flocks he had received many a severe bite. By these continual combats he grew so intrepid, that no enemy could make him turn his back. His care and assiduity so well defended the sheep of his master that not one had even been missing since they were placed under his protection." (p. 26)

"ಒಕ್ಕಲಿಗನ ಮನೆಯಲ್ಲಿದ್ದ ಮಲ್ಲಿಗೆಯಾದರೋ, ಅವನ ಗುಡಿಲಿನ ಬಾಗಿಲ ಜಗಲಿಯ ಮೇಲೆಯೇ ಬಿದ್ದಿರುತ್ತಿತ್ತು. ಇದರ ಮೈ ಸ್ವಲ್ಪ ಒಣಗಿಕೊಂಡೇ ಇತ್ತು. ಸಂಪಗೆ ಮಾಡುತ್ತಿದ್ದ ಚೇಷ್ಟೆ ಯಾವುದೂ ಇದರಲ್ಲಿ ಇರಲಿಲ್ಲ. ಇದರ ಒಡೆಯನಾದ ಒಕ್ಕಲಿಗನು ಬಡವನಾದ್ದರಿಂದ ಅದರ ಹೊಟ್ಟೆಗೆ ಎಷ್ಟು ಬೇಕೋ ಅಷ್ಟು ತಿಂಡಿಯನ್ನು ಮಾತ್ರ ಹಾಕುತಿದ್ದನು. ಹೆಚ್ಚಾಗಿ ಹಾಕುತಿರಲಿಲ್ಲ. ಮಲ್ಲಿಗೆಯು ಅದನ್ನು ತಿಂದು ಜೀರ್ಣಿಸಿಕೊಳ್ಳುತಿತ್ತು. ಹೆಚ್ಚು ತಿಂಡಿಯನ್ನು ತಿಂದ ಅಭ್ಯಾಸವೇ ಅದಕ್ಕಿರಲಿಲ್ಲ. ತನ್ನ ಜೊತೇ ನಾಯಿಯ ಹಾಗೆ ಮನೆಯಲ್ಲಿಯೇ ಓಡಿಯಾಡಿಕೊಂಡು ಮಡಕೇ ಹುಲಿಯಾಗಿರದೆ ಯಾವಾಗಲೂ ಒಕ್ಕಲಿಗನ ಸಂಗಡ ಹೊಲದಲ್ಲಿಯೇ ಓಡಿಯಾಡಿಕೊಂಡಿರುತಾ, ಹೊಟ್ಟೆಗೆ ಸಾಲದೆ ಶ್ರಮಪಡುತಾ, ಅಲ್ಲಿ ಬಿದ್ದು ಇಲ್ಲಿ ಬಿದ್ದು ಗಟ್ಟಿರಾಸಾಗಿ, ಬಹಳ ಚಟುವಟಿಕೆಯುಳ್ಳದ್ದಾಗಿತ್ತು. ಒಕ್ಕಲಿಗನ ಕುರೀಮಂದೆಯನ್ನು ಕಾಡಿನಲ್ಲಿ ಕಾದುಕೊಂಡಿರುವಾಗ್ಗೆ ತೋಳಗಳ ಸಂಗಡ ಜಗಳಕ್ಕೆ ಹೋಗಿ ಇದಕ್ಕೆ ಅಲ್ಲಲ್ಲಿ ಗಾಯವೂ ಆಗಿತ್ತು. ಹೀಗೆ ಆಗಾಗ್ಗೆ ಕಾದಿ ಕಾದಿ ಅಭ್ಯಾಸವಾಗಿದ್ದ ಕಾರಣ,

ಮಲ್ಲಿಗೆಗೆ ಧೈರ್ಯ ಹೆಚ್ಚಿ ಇದು ಯಾತಕ್ಕೂ ಹೆದರದೇ ಇರುತಿತ್ತು. ಇದು ಮಂದೆ ಕಾಯುವುದಕ್ಕೆ ಮೊದಲು ಮಾಡಿದ ಕಾಲದಿಂದ ಒಂದು ಕುರಿಯೂ ಹೋಗದೆ ಎಲ್ಲವೂ ಒಕ್ಕಲಿಗನ ಮನೆಗೆ ಕ್ಷೇಮವಾಗಿ ಸಾಯಂಕಾಲಕ್ಕೆ ಬಂದು ಸೇರುತಿದ್ದವು." (ಪು. 44-45)

ಕನ್ನಡಭಾಷೆಯ ನಾಡಿಮಿಡಿತ ಇಲ್ಲಿ ಸ್ಪಷ್ಟವಾಗಿ ಕೇಳಿಬರುತ್ತದೆ. ಪುಟ್ಟಣ್ಣನವರ ಸ್ವತಂತ್ರ ಕೃತಿಗಳಲ್ಲಿರುವ ಕನ್ನಡದ ದೇಸಿಯ ಸೊಗಡು ಬನಿಗಳು ಈ ರೂಪಾಂತರ ಕೃತಿಯಲ್ಲೂ ಇವೆ. ಕೃತಿ ಹೊರಬಂದ ಕಾಲವನ್ನುಗಮನಿಸಿದರೆ ಈ ಅಂಶ ಅಚ್ಚರಿಯನ್ನು ತರುತ್ತದೆ.

**'ಸುಮತಿ ಮದನಕುಮಾರರ ಚರಿತ್ರೆ' ಮತ್ತು 'ಗುಣಸಾಗರ'[15]**
**ಕೃತಿಯ ಹೋಲಿಕೆಗಳು**

ಎಂ. ಎಸ್. ಪುಟ್ಟಣ್ಣನವರ 'ಸುಮತಿ ಮದನಕುಮಾರರ ಚರಿತ್ರೆ' (1897) ಮತ್ತು ಬೆಳ್ಳಾವೆ ವೆಂಕಟನಾರಾಯಣಪ್ಪನವರ 'ಗುಣಸಾಗರ' (1931) ಕೃತಿಗಳಲ್ಲಿ ಹಲವು ಹೋಲಿಕೆಗಳಿವೆ. 'ಸುಮತಿ ಮದನಕುಮಾರರ ಚರಿತ್ರೆ' ಯಲ್ಲಿ ಇಬ್ಬರು ಎಳೆಯರ ಕೆಲವು ದಿನಗಳ ಗುರುಕುಲವಾಸದ ಚಿತ್ರಣವಿದೆ. 'ಗುಣಸಾಗರ'ದಲ್ಲಿ ಹಿತಮತಿ ಸುಖನಂದನರ ಅಂಥದೇ ಚಿತ್ರಣವೂ ಮುಂದೆ ಹಿತಮತಿ ಪಟ್ಟಣಕ್ಕೆ ಬಂದು ಪ್ರಾಮಾಣಿಕತೆ ಬುದ್ಧಿವಂತಿಕೆಗಳಿಂದ ಶ್ರಮಿಸಿ ಅಭಿವೃದ್ಧಿ ಹೊಂದಿ ಬದುಕಿ ಬಾಳಿದ ಚಿತ್ರಣವೂ ಇವೆ. ಹದಿನಾಲ್ಕನೆಯ ಶತಮಾನದಲ್ಲಿ ಇಂಗ್ಲೆಂಡಿನ ಗ್ಲಾಸ್ಟರ್‌ಷೈರಿನಲ್ಲಿ ಜನಿಸಿದ ರಿಚರ್ಡ್ ವಿಟ್ಟಿಂಗ್‌ಟನ್‌ನ ಜೀವನ ವೃತ್ತಾಂತ 'ಗುಣಸಾಗರ' ಕೃತಿಗೆ ಆಧಾರ. ರಿಚರ್ಡ್ ವಿಟ್ಟಿಂಗ್‌ಟನ್‌ನ ವೃತ್ತಾಂತವನ್ನು ಆಧರಿಸಿದ ಹಲವು ಇಂಗ್ಲಿಷ್ ಕೃತಿಗಳು ಇವೆ ಎಂದು ಹೇಳಲಾಗಿದೆ. ಥಾಮಸ್ ಡೇಗೂ ಈ ಕೃತಿ ಸ್ಫೂರ್ತಿಯನ್ನು ಒದಗಿಸಿರಬಹುದು.

'ಸುಮತಿ ಮದನಕುಮಾರರ ಚರಿತ್ರೆ' ಹಾಗೂ 'ಗುಣಸಾಗರ' ಕೃತಿಗಳ ಕೆಲವು ಹೋಲಿಕೆಗಳನ್ನು ನೋಡಬಹುದು.

1. ಸುಮತಿ ಒಬ್ಬ ಹಳ್ಳಿಯ ಹುಡುಗ. ಮದನಕುಮಾರ ಒಬ್ಬ ಪಾಳೆಯಗಾರನ ಮಗ. ಇವರಿಬ್ಬರಿಗೂ ರಾಮಾಜೋಯಿಸ ಮಾರ್ಗದರ್ಶನ ನೀಡುತ್ತಾನೆ. ರಾಮಾಜೋಯಿಸನ ಕೈತೋಟದಲ್ಲಿ ಇವರು ಮೂವರೂ ದುಡಿಯುತ್ತಾರೆ.

ಹಿತಮತಿ ಒಬ್ಬ ಹಳ್ಳಿಯ ಹುಡುಗ. ಸುಖನಂದನ ಒಬ್ಬ ಶ್ರೀಮಂತನ ಮಗ, ವಿಶಾಲಮತಿ ಇಬ್ಬರಿಗೂ ಮಾರ್ಗದರ್ಶನ ನೀಡುತ್ತಾನೆ. ವಿಶಾಲಮತಿಯ ಕೈತೋಟದಲ್ಲಿ ಇವರು ಮೂವರೂ ದುಡಿಯುತ್ತಾರೆ.

2. ಮದನಕುಮಾರ ತನ್ನ ತಾಯಿತಂದೆಗಳಿಗೆ ಒಬ್ಬನೇ ಮಗ. ಅವನಿಗಾಗಿ ಒಂದು ಪಲ್ಲಕ್ಕಿ ಮೀಸಲಾಗಿತ್ತು. ಇಬ್ಬರು ಆಳುಗಳು ಅವನ ಸೇವೆಗೆ ಸದಾ ಸಿದ್ಧರಾಗಿ

ರುತ್ತಿದ್ದರು. ಸ್ವಭಾವತಃ ಒಳ್ಳೆಯವನಾದ ಮದನಕುಮಾರ ಅತಿ ಮುದ್ದಿನಿಂದ ಹಾಳಾದವನು. ತಾಯಿಯ ಓಲೈಸುವಿಕೆ ಬಹಳವಾಗಿದ್ದರೆ ತಂದೆಗೆ ಮಗನ ಮೇಲಿನ ಮೋಹಕ್ಕಿಂತ ಮುಂದಿನ ಶ್ರೇಯಸ್ಸಿನಲ್ಲಿ ಹೆಚ್ಚು ಗಮನ.

ಸುಖನಂದನನೂ ತನ್ನ ತಾಯಿತಂದೆಗಳಿಗೆ ಒಬ್ಬನೇ ಮಗ. ಅವನಿಗಾಗಿ ಒಂದು ಬಂಡಿ, ಇಬ್ಬರು ಆಳುಗಳು ಸದಾ ಸಿದ್ಧ. ಸುಸ್ವಭಾವದ ಸುಖನಂದನ ಅತಿಮುದ್ದಿನಿಂದ ಹಾಳಾದವನು. ತಾಯಿಗೆ ಮಗನಲ್ಲಿ ಬಹಳ ಪ್ರೇಮ, ತಂದೆಗೆ ಮುಂದಿನ ಶ್ರೇಯಸ್ಸಿನಲ್ಲಿ ಆಸಕ್ತಿ.

3. ಮದನಕುಮಾರ ತೋಟದಲ್ಲಿ ತಿರುಗಾಡುವಾಗ ಹಸಿರು ಹಾವೊಂದು ಅವನ ಕಾಲಿಗೆ ಸುತ್ತಿಕೊಳ್ಳುತ್ತದೆ. ಅವನು ಹೆದರಿಕೆಯಿಂದ ಅಳುವ ಶಬ್ದ ಕೇಳಿ ಸುಮತಿ ಓಡಿಬಂದು ಹಾವನ್ನು ಉಪಾಯದಿಂದ ಎಳೆದು ಬಿಸಾಡುತ್ತಾನೆ. ಮುಂದೆ ಸುಮತಿ ಮದನನ ಮನೆಗೆ ಹೋಗುತ್ತಾನೆ. ಅಲ್ಲಿನ ವೈಭವಕ್ಕೆ ಸ್ವಲ್ಪವೂ ಬೆರಗಾಗುವುದಿಲ್ಲ. ಅವನ ಗಾಂಭೀರ್ಯವನ್ನು ಮೆಚ್ಚಿ ಮದನನ ತಂದೆತಾಯ್ಗಳು ತಮ್ಮ ಮಗನೂ ಹಾಗೇ ಆಗಲೆಂದು ಸುಮತಿಯ ಜೊತೆಗೆ ರಾಮಾಜೋಯಿಸನ ಬಳಿ ಬಿಡಲು ಸಂಕಲ್ಪಿಸುತ್ತಾರೆ.

ಸುಖನಂದನ ಹಳ್ಳಿಯ ಹೊರಗಿನ ಮೈದಾನದಲ್ಲಿ ಆಟವಾಡುತ್ತಾ ಪೊದೆಯಲ್ಲಿನ ಹೂವನ್ನು ಕೀಳಲು ಹೋದಾಗ ಅಲ್ಲಿದ್ದ ಹಸಿರು ಹಾವು ಅವನ ಕಾಲಿಗೆ ಸುತ್ತಿಕೊಳ್ಳುತ್ತದೆ. ಹಿತಮತಿ ಹಾವನ್ನು ಎಳೆದು ಬಿಡಿಸುತ್ತಾನೆ. ಹಿತಮತಿ ಸುಖನಂದನನ ಮನೆಗೆ ಹೋದಾಗ ಅಲ್ಲಿನ ಸಂಪತ್ತಿಗೆ ಮಾರುಹೋಗುವುದಿಲ್ಲ. ಅವನ ಗಾಂಭೀರ್ಯದಿಂದ ಸುಖನಂದನನ ತಂದೆತಾಯಿಗಳಿಂದ ಗೌರವವನ್ನು ಗಳಿಸಿಕೊಳ್ಳುತ್ತಾನೆ. ತಮ್ಮ ಮಗನ ವಿದ್ಯಾಭ್ಯಾಸವು ಹಿತಮತಿಯ ಜೊತೆ ವಿಶಾಲಮತಿಯ ಬಳಿ ನಡೆಯಲೆಂದು ಸುಖನಂದನನ ತಾಯಿತಂದೆಗಳು ತೀರ್ಮಾನಿಸುತ್ತಾರೆ.

4. ರಾಮಾಜೋಯಿಸ ಹಲವು ನಿಬಂಧನೆಗಳನ್ನು ಮದನನ ತಾಯಿತಂದೆಗಳಿಗೆ ಹಾಕುವನು. ಮದನನ ತಂದೆ ಕಷ್ಟದಿಂದ ಹೆಂಡತಿಯನ್ನು ಒಪ್ಪಿಸುವನು. ಮದನ ರಾಮಾಜೋಯಿಸನ ಬಳಿ ಬಂದಾಗ, ರಾಮಾಜೋಯಿಸ ಸುಮತಿಯರ ಜೊತೆಗೆ ದುಡಿಯಲು ನಿರಾಕರಿಸುವನು. ಮದನನನ್ನು ಲೆಕ್ಕಿಸದೆ ತಾವಿಬ್ಬರೂ ದುಡಿದು ಅನಂತರ ತನಿ ಹಣ್ಣುಗಳನ್ನು ಹಂಚಿಕೊಳ್ಳುವರು. ತನಗೆ ಹಣ್ಣು ಕೊಡಲಿಲ್ಲವೆಂದು ಅಭಿಮಾನ ಭಂಗದಿಂದ ಮದನ ಅಳುವನು. ಮುಂದೆ ತಾನೂ ದುಡಿಮೆಗೆ ಇಳಿಯುವನು.

ವಿಶಾಲಮತಿಯೂ ಹಲವು ನಿಬಂಧನೆಗಳನ್ನು ಒಡ್ಡುವನು. ಸುಖನಂದನನ ತಂದೆ ಹೆಂಡತಿಯನ್ನು ಒಪ್ಪಿಸಲು ಶ್ರಮಿಸುವನು. ಸುಖನಂದನ ವಿಶಾಲಮತಿಯ ಬಳಿಗೆ ಬರುವನು. ವಿಶಾಲಮತಿ, ಹಿತಮತಿಯರೊಡನೆ ದುಡಿಯಲು ನಿರಾಕರಿಸುವನು. ಅವನನ್ನು ಲೆಕ್ಕಿಸದೆ ವಿಶಾಲಮತಿ ಹಿತಮತಿಯರು ಕೆಲಸಮಾಡಿ ಕಳಿತ ಹಣ್ಣುಗಳನ್ನು ತಿನ್ನುವರು. ಕೋಪ, ವ್ಯಥೆಗಳಿಂದ ಸುಖನಂದನ ಅಳುವನು. ಮುಂದೆ ದುಡಿಮೆಯ ಮಹತ್ತ್ವವನ್ನು ಅರಿಯುವನು.

5. ಸುಮತಿಗೆ ಪ್ರಾಣಿಪಕ್ಷಿಗಳಲ್ಲಿ ಮಮತೆ. ಮದನ ಓದು, ಬರಹ, ಲೆಕ್ಕಗಳನ್ನು ನಿಧಾನವಾಗಿ ಕಲಿಯುವನು, ದಿನೇ ಹಲವು ವಿಷಯಗಳನ್ನು ತಿಳಿಯುವನು. ಸುಮತಿ ಮದನರು ಆಪ್ತ ಸ್ನೇಹಿತರಾಗುವರು. ಮದನನ ತಾಯಿಗೆ ನಿಧಾನವಾಗಿ ರಾಮಾಜೋಯಿಸನ ಯೋಗ್ಯತೆ ಅರಿವಾಗುವುದು.

ಹಿತಮತಿಗೆ ಪ್ರಾಣಿಗಳಲ್ಲಿ ದಯೆ. ಸುಖನಂದನ ವಿದ್ಯೆ ಕಲಿಯುವನು. ಹಲವು ವಿಷಯಗಳನ್ನು ತಿಳಿಯುವನು. ಹಿತಮತಿ ಸುಖನಂದರು ಆಪ್ತಸ್ನೇಹಿತರಾಗುವರು. ಸುಖನಂದನನ ತಾಯಿ ವಿಶಾಲಮತಿಯ ಗುಣವನ್ನು ಕ್ರಮೇಣ ತಿಳಿಯುವಳು.

ಹಿಂದೆ ಹೇಳಿದಂತೆ 'ಸುಮತಿ ಮದನಕುಮಾರರ ಚರಿತ್ರೆ' ಯಲ್ಲಿ ಈ ಇಬ್ಬರು ಎಳೆಯರ ಬಾಲ್ಯದ ಒಂದು ಭಾಗ ಮಾತ್ರ ಚಿತ್ರಿತವಾಗಿದೆ. 'ಗುಣಸಾಗರ'ದಲ್ಲಿ ಹಿತಮತಿಯ ಇಡೀ ಜೀವನ ವೃತ್ತಾಂತವಿದೆ. ಈ ಎರಡು ಕೃತಿಗಳಲ್ಲಿ ಮಿಕ್ಕೆಲ್ಲ ಅಂಶಗಳಲ್ಲೂ ಹೋಲಿಕೆಯಿದೆ.

ರೂಪಾಂತರ ಕೃತಿಗಳು ಹೇಗಿರಬೇಕೆಂಬುದಕ್ಕೆ 'ಸುಮತಿ ಮದನಕುಮಾರರ ಚರಿತ್ರೆ' ಒಂದು ಉತ್ತಮ ಉದಾಹರಣೆಯಾಗಿದೆ. ಇಲ್ಲಿನ ಸಾಮಾಜಿಕ ವಾತಾವರಣಕ್ಕೆ ಹೊಂದದ ಅಂಶಗಳನ್ನು ಕೈಬಿಡುವುದು, ಅಗತ್ಯವಿದ್ದಲ್ಲಿ ಸಂಕ್ಷಿಪ್ತಗೊಳಿಸುವುದು, ಸೂಕ್ತ ಕಂಡ ಅಂಶಗಳ ಸೇರ್ಪಡೆ ಈ ಎಲ್ಲ ಅಂಶಗಳಲ್ಲಿ ಪುಟ್ಟಣ್ಣನವರ ಕೌಶಲ ಪ್ರತಿಬಿಂಬಿತವಾಗಿದೆ. ಕನ್ನಡ ದೇಸಿಯ ಸಮರ್ಥ ಬಳಕೆ ಕೃತಿಯ ಸಿದ್ಧಿಯ ಒಂದು ಕಾರಣವಾಗಿದೆ. ಮಕ್ಕಳಿಗೆಂದು ರಚಿತವಾಗಿದ್ದರೂ ಹಿರಿಯರ ಮನಸ್ಸನ್ನು ಕೂಡ, 'ಸುಮತಿ ಮದನಕುಮಾರರ ಚರಿತ್ರೆ' ಮುದಗೊಳಿಸಬಲ್ಲದು. ಪುಟ್ಟಣ್ಣನವರ ರೂಪಾಂತರಗಳಲ್ಲಿ 'ಸುಮತಿ ಮದನಕುಮಾರರ ಚರಿತ್ರೆ' ಅತ್ಯಂತ ಯಶಸ್ವಿಯಾದ ಕೃತಿಯೆಂಬುದು ನಿಸ್ಸಂದೇಹವಾದ ಮಾತು.

## ಹಾತಿಂ ತಾಯ್

ನಾಲ್ಕು ಇಂಗ್ಲಿಷ್ ಕೃತಿಗಳ ರೂಪಾಂತರಗಳಲ್ಲದೆ ಇನ್ನೊಂದು ಇಂಗ್ಲಿಷೇತರ ಕೃತಿಯ ಭಾಷಾಂತರವನ್ನು ಪುಟ್ಟಣ್ಣನವರು ಮಾಡಿದ್ದಾರೆ. ಪರ್ಶಿಯನ್ ಮೂಲದ 'ಹಾತಿಂ ತಾಯ್' ಕೃತಿಯ ಇಂಗ್ಲಿಷ್ ಭಾಷಾಂತರ[16]ದಿಂದ ಕನ್ನಡದ ತಮ್ಮ ಭಾಷಾಂತರವನ್ನು ಪುಟ್ಟಣ್ಣನವರು ಸಿದ್ಧಪಡಿಸಿದ್ದಾರೆ. ಉಪಲಬ್ಧ ದಾಖಲೆಗಳ ಪ್ರಕಾರ 'ಹಾತಿಂ ತಾಯ್' ಪುಟ್ಟಣ್ಣನವರ ಏಕೈಕ ಭಾಷಾಂತರ ಕೃತಿ. ಈ ಕೃತಿಯಲ್ಲಿ ಯೆಮೆನ್ ದೇಶವನ್ನು ಆಳಿದ ಹಾತೀಮನ ಶೌರ್ಯ ಔದಾರ್ಯಗಳನ್ನು ರೋಮಾಂಚಕವಾಗಿ ವಿವರಿಸಲಾಗಿದೆ. ಹಾತಿಮನ ಕಾಲ ಕ್ರಿ. ಶ. 6ನೆಯ ಶತಮಾನ.

ಈ ಅಪ್ರಕಟಿತ[17] ಭಾಷಾಂತರ ಕೃತಿ ಪುಟ್ಟಣ್ಣನವರ ಹಸ್ತಾಕ್ಷರದಲ್ಲಿ ಫುಲ್

ಸ್ಕೈಪ್ ಕಾಗದದಲ್ಲಿ 831 ಪುಟಗಳಿವೆ. ಇದರ ರಚನೆ 1920 ರಲ್ಲಿ ನಡೆಯಿತೆಂದು ಮುಖಪತ್ರ ಹಾಗೂ ಪೀಠಿಕೆಗಳಿಂದ ತಿಳಿಯುತ್ತದೆ. ಕನ್ನಡ, ಇಂಗ್ಲಿಷ್ ಎರಡು ಭಾಷೆಗಳಲ್ಲೂ ಪೀಠಿಕೆಯನ್ನು ಬರೆದಿದ್ದಾರೆ.

**ಕಥಾವಸ್ತು**

ಮುನೀರಷಹನೆಂಬ ರಾಜಕುಮಾರನು ಉದಾರ ಹೃದಯದ ಚೆಲುವೆ ಹುಸ್ನಬಾನುವನ್ನು ಪ್ರೇಮಿಸಿ ಅವಳನ್ನು ಮದುವೆಯಾಗಲು ಬಯಸಿದಾಗ, ಆಕೆ ಏಳು ಪ್ರಶ್ನೆಗಳನ್ನು ಒಡ್ಡಿ ಅವುಗಳ ಉತ್ತರ ತಂದವನನ್ನು ಮದುವೆಯಾಗುವುದಾಗಿ ಹೇಳುತ್ತಾಳೆ. ಮುನೀರಷಹ ಈ ಪ್ರಶ್ನೆಗಳನ್ನು ಬಿಡಿಸಲಾಗದೆ ವಿರಹವ್ಯಥೆಯಲ್ಲಿ ತೊಳಲಾಡುತ್ತಾನೆ. ಯೆಮೆನ್ ನಗರದ ರಾಜಪುತ್ರ ಹಾತಿಂ ತಾಯ್ ಅವನ ದುಃಖವನ್ನು ತಿಳಿದು ಆ ಏಳು ಪ್ರಶ್ನೆಗಳಿಗೂ ತಾನೇ ಉತ್ತರವನ್ನು ಕಂಡುಹಿಡಿದು ಪಂಥವನ್ನು ಗೆಲ್ಲುವುದಾಗಿ ಮುನೀರಷಹನನ್ನು ಸಮಾಧಾನಪಡಿಸುತ್ತಾನೆ. ಈ ಕಾರ್ಯಕ್ಕೆ ಹುಸ್ನಬಾನುವಿನ ಒಪ್ಪಿಗೆಯನ್ನು ಪಡೆಯುತ್ತಾನೆ. ಅದರಂತೆ ಏಳು ಪ್ರಶ್ನೆಗಳಿಗೂ ಉತ್ತರ ದೊರಕಿಸುತ್ತಾನೆ. ಮುನೀರಷಹ ಮತ್ತು ಹುಸ್ನಬಾನು ಮದುವೆಯಾಗುತ್ತಾರೆ. ಹುಸ್ನಬಾನುವಿನ ಏಳು ಪ್ರಶ್ನೆಗಳಿಗೂ (ಅವುಗಳು "1. ಒಂದು ಸಾರಿ ನಾನು ನೋಡಿದ್ದನ್ನು ಪುನಃ ಅಪೇಕ್ಷಿಸುತೇನೆ ; 2. ಒಳ್ಳೇ ಕೆಲಸವನ್ನು ಮಾಡು, ಅದನ್ನು ನೀರಲ್ಲಿ ಕದರು; 3. ಕೆಟ್ಟದ್ದ ಮಾಡದಿರು, ನೀನು ಕೆಟ್ಟದ್ದ ಮಾಡಿದ್ದೇ ಆದರೆ ಅದೇ ನಿನಗೆ ಸಂಭವಿಸುವುದು; 4. ಸತ್ಯವಾದಿಯು ಯಾವಾಗಲೂ ನಿಧಾನಿಯಾಗಿರುತಾನೆ;—ಈ ಸಂಗತಿಗಳ ವಿವರಣೆ, 5. ನಿಡಪರ್ವತದ ವಿಷಯು; 6. ಒಂದು ಬಾತಿನ ಮೊಟ್ಟೇ ಗಾತ್ರದ ಮುತ್ತನ್ನು ತರುವುದು ಮತ್ತು 7. ಬದಗಾರ್ಡು ಎಂಬ ಸ್ಥಳದ ಸ್ನಾನ ವಿಚಾರ.") ಉತ್ತರವನ್ನು ಕಂಡುಕೊಳ್ಳುವಾಗ ಹಾತಿಮ ಪಡೆಯುವ ರೋಮಾಂಚಕ ಅನುಭವಗಳು ಇಲ್ಲಿ ವರ್ಣಿತವಾಗಿವೆ.

**ಹಾತಿಮನ ಪಾತ್ರ**

ಹಾತಿಮ ಅಪರಿಗ್ರಹಣದ ಸಾಕಾರಮೂರ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಸ್ವಾರ್ಥ ದೂರನಾದ ಇವನ ಹೃದಯ ಇತರರ ಸಂಕಷ್ಟಗಳಿಗೆ ಮರುಗುತ್ತದೆ. ಅವನ ಕಾಲ, ಶಕ್ತಿ ಹಾಗೂ ಸಂಪತ್ತುಗಳು ಇತರರಿಗಾಗಿ ಮೀಸಲಾಗಿವೆ.

ಹಾತಿಮನ ಪರೋಪಕಾರ ಪ್ರವೃತ್ತಿ ಮೂರು ಹಂತಗಳಲ್ಲಿ ವ್ಯಕ್ತವಾಗುತ್ತದೆ. ಮೊದಲನೆಯದಾಗಿ ಈ ಎಲ್ಲ ಪ್ರಯಾಣಗಳ ಫಲ ಅವನಿಗಾಗಿಯಲ್ಲ, ಅವನ ಮಿತ್ರ ಮುನೀರಷಹ ಪಂಥದಲ್ಲಿ ಗೆದ್ದು ಹುಸ್ನಬಾನುವಿನ ಕೈ ಹಿಡಿಯಲೆಂಬ ಉದ್ದೇಶಕ್ಕಾಗಿ ಮೀಸಲಾಗಿದೆ. ಎರಡನೆಯದಾಗಿ ಸಾಹಸದಿಂದ ಕೂಡಿದ ಪ್ರಯಾಣಗಳಲ್ಲಿ ಭೇಟಿಯಾದವರ ಕಷ್ಟಗಳನ್ನೂ ಹಾತಿಮ ಕೊನೆಗಾಣಿಸುತ್ತಾನೆ. ಉದಾಹರಣೆಗೆ ಎರಡನೇ

ಪ್ರಶ್ನೆಗೆ ಉತ್ತರ ಹುಡುಕಿಕೊಂಡು ಹೊರಟಾಗ ಹಾರೀತನ ಮಗಳನ್ನು ಮದುವೆಯಾಗಲು ಹಂಬಲಿಸುತ್ತಿದ್ದ, ಆದರೆ ಅವಳ ಮೂರು ಪ್ರಶ್ನೆಗಳಿಗೆ ಉತ್ತರ ಸಿಗದೆ ಗೋಳಾಡುತ್ತಿದ್ದ ಯುವಕನ ಭೆಟ್ಟಿ ಆಗುತ್ತದೆ. ಈ ಮೂರು ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆಯಲು ಹಾತಿಮ ಇನ್ನೊಂದು ಪುಟ್ಟ ಸಂಚಾರವನ್ನೇ ಮಾಡುತ್ತಾನೆ. ದಾರಿಯಲ್ಲಿ ಒಬ್ಬ ರಾಕ್ಷಸನ ಹಾಗೂ ಆತನ ಪತ್ನಿ ಪುತ್ರಿಯರ ಅನಾರೋಗ್ಯವನ್ನು ವಾಸಿಮಾಡುತ್ತಾನೆ. ಒಂದು ಗ್ರಾಮವನ್ನು ಪೀಡಿಸುತ್ತಿದ್ದ ಇನ್ನೊಬ್ಬ ರಾಕ್ಷಸನನ್ನು ಕೊಲ್ಲುತ್ತಾನೆ. ಹಲವರನ್ನು ಹಿಂಸಿಸುತ್ತಿದ್ದ ಒಂದು ಸರ್ಪವನ್ನು ಕೊಲ್ಲುತ್ತಾನೆ. ಒಬ್ಬಳು ರಾಜಕುಮಾರಿಯ ಮೂರು ಪ್ರಶ್ನೆಗಳನ್ನು ಉತ್ತರಿಸಿ ಅವಳನ್ನು ಹೊಕ್ಕಿದ್ದ ಒಂದು ಪಿಶಾಚಿಯನ್ನು ಓಡಿಸಿ ಅವಳನ್ನು ಕಾಪಾಡುತ್ತಾನೆ. ಲೋಭಕ್ಕೆ ಶಿಕ್ಷೆ ಅನುಭವಿಸುತ್ತಿದ್ದ ಒಬ್ಬನನ್ನು ಕಾಪಾಡಿ ಸದ್ಗತಿಯನ್ನು ದೊರಕಿಸಿಕೊಡುತ್ತಾನೆ. ದಾರಿಗರಿಗೆ ಮೋಸ ಮಾಡುತ್ತಿದ್ದ ಕೆಟ್ಟ ಮುದುಕಿ ಹಾಗೂ ಆಕೆಯ ಏಳು ಮಕ್ಕಳಿಗೆ ಅಪರಿಮಿತ ಐಶ್ವರ್ಯವನ್ನು ಕೊಟ್ಟು ಅವರನ್ನು ಸನ್ಮಾರ್ಗಕ್ಕೆ ತರುತ್ತಾನೆ. ಮಾಟಕ್ಕೆ ಸಿಲುಕಿ ನಾಯಿ ಆಗಿದ್ದ ಯುವಕನ ಮಾಟ ಪರಿಹಾರ ಮಾಡಿ ಅವನ ನಿಜರೂಪ ಬರುವಂತೆ ಮಾಡುತ್ತಾನೆ. ಮಹಾಪರಿಯ ಮಗನ ಕಣ್ಣಿನ ಯಾತನೆಯನ್ನು ಹೋಗಿಸುತ್ತಾನೆ. ಕಡೆಗೆ ಹಾರೀತನ ಮಗಳನ್ನು ಮದುವೆಯಾಗಬೇಕೆಂದಿದ್ದ ಯುವಕನ ಕೋರಿಕೆ ಪೂರೈಸುತ್ತದೆ. ಅನಂತರ ಹಾತಿಮ ತನ್ನ ಉದ್ದೇಶ ಸಾಧನೆ—ಎರಡನೆಯ ಪ್ರಶ್ನೆಗೆ ಉತ್ತರ ಹುಡುಕುವುದು—ಗಾಗಿ ಹೊರಡುತ್ತಾನೆ. ಮೂರನೆಯದಾಗಿ ತನ್ನ ಗುರಿಯನ್ನು ಸೇರಿದಾಗ ಅಲ್ಲಿ ಭೆಟ್ಟಿಯಾದವರ ಹಲವು ಸಂಕಟಗಳನ್ನು ಕೊನೆಗಾಣಿಸುತ್ತಾನೆ. ಉದಾಹರಣೆಗೆ ಮೂರನೇ ಪ್ರಶ್ನೆಗೆ ಉತ್ತರ ಹುಡುಕಿಕೊಂಡು ಹೊರಟಾಗ ಗಮ್ಯಸ್ಥಾನದಲ್ಲಿದ್ದ ವೃದ್ಧನ ಅಂಧತ್ವವನ್ನು ನಿವಾರಿಸಿ ಬಿಡುಗಡೆಯನ್ನು ದೊರಕಿಸುತ್ತಾನೆ. ಹೀಗೆ ಸರಪಳಿಯ ಕೊಂಡಿಗಳಂತೆ ಅವನ ಪರೋಪಕಾರದ ವಿವಿಧ ಪ್ರಸಂಗಗಳು ಹೆಣೆದುಕೊಳ್ಳುತ್ತವೆ. ಅವನ ಸದಾಚಾರದ ಸಸಿ ಕೊನರುತ್ತದೆ, ಕವಲೊಡೆಯುತ್ತದೆ. ಈ ಎಲ್ಲದರ ಫಲ ಮಾತ್ರ ಹಾತಿಮನಿಗೆ ಏನೂ ಸಂಬಂಧವಿರದ ಇನ್ನಾರಿಗೋ ದಕ್ಕುತ್ತದೆ. ಈ ವಿಚಾರವನ್ನು ಕುರಿತು ಹಾತಿಮನಿಗೆ, ಒಬ್ಬ ಮನುಷ್ಯನಿಗೆ ಆನಂದವಾಯಿತಲ್ಲಾ ಎಂಬ ಸಂತೋಷವೇ ಹೊರತು ಆ ಮನುಷ್ಯ ಬೇರೆಯವನು ಎಂಬ ವಿನಾಭಾವವಿಲ್ಲ. ಕೈಗೊಂಡ ಕಾರ್ಯದಲ್ಲಿ ನಿಸ್ವಾರ್ಥ, ಗುರಿಸಾಧನೆಯಲ್ಲಿ ಛಲ ಇವುಗಳಿಂದ, ಈ ಉದಾರಹೃದಯದ ಶೂರ 'ಅರೇಬಿಯನ್ ನೈಟ್ಸ್' ಕಥಾನಾಯಕರಿಗಿಂತ ತೀರ ಬೇರೆಯಾಗಿ ಕಾಣುತ್ತಾನೆ. ಹಾತಿಮನಲ್ಲಿ ಔದಾರ್ಯವೂ ಶೌರ್ಯವೂ ಸಮಸಮವಾಗಿದ್ದವು. "ಮುಸಲ್ಮಾನರಲ್ಲಿ ಹಶೀಮನ ಔದಾರ್ಯವು ಕರ್ಣನ ಔದಾರ್ಯದಂತೆ ಹೆಸರಾದ್ದು" (ಹಾ.ತಾ. ಪೀಠಿಕೆ ಪು. 2–3) ಎಂಬ ಮಾತನ್ನು ಇಲ್ಲಿ ನೆನೆಯಬಹುದು.

ಪುಟ್ಟಣ್ಣನವರ ಬರವಣಿಗೆಯಲ್ಲಿ ಅಪರಿಗ್ರಹಣ ಸ್ಥಿರೀಕರಣವಿಚಾರ ವಿರಬಹುದೆಂದು ಭಾಸವಾದರೆ ಅಚ್ಚರಿಯಿಲ್ಲ. ಅವರ ಕಾದಂಬರಿಗಳಲ್ಲಿ ಹಾಗೂ ಜೀವನಚರಿತ್ರೆ

ಗಳಲ್ಲಿ ಈ ವಿಚಾರವನ್ನು ಗುರುತಿಸಲಾಗಿದೆ. ಅವರ ಇತರ ಬರಹಗಳಲ್ಲೂ ಇದೇ ಆಶಯದ ಸುಳಿವು ಕ್ವಚಿತ್ತಾಗಿಯಾದರೂ ಕಾಣುತ್ತದೆ. 'ಹಾತಿಂತಾಯ್' ಕಥಾನಕದಲ್ಲೂ ಈ ಅಂಶಕ್ಕೆ ಸಾಕ್ಷ್ಯ ದೊರಕುತ್ತದೆ. 'ಮಾಡಿದ್ದುಣ್ಣೋ ಮಹಾರಾಯ' ದ ಭಟಜಿಯಂತೆ, 'ಮುಸುಗ ತೆಗೆಯೇ ಮಾಯಾಂಗನೆ' ಯ ಆತ್ಮಾರಾಂ ಬಾವಾಜಿಯಂತೆ, 'ಅವರಿಲ್ಲದೂಟ' ದ ಫಕೀರನಂತೆ ಹಾತಿಮ ಕಷ್ಟದಲ್ಲಿರುವವರಿಗೆ ನೆರವಾಗುತ್ತಾನೆ. ಅವನ ನಿಷ್ಠೆ ಕೂಡ ತನುಮನಧನಗಳನ್ನು ಮೀಸಲಿಟ್ಟು ದುಡಿಯುತ್ತಿದ್ದ, 'ಮುಸುಗ ತೆಗೆಯೇ ಮಾಯಾಂಗನೆ' ಯ ಅಪ್ರಮೇಯನ ನಿಷ್ಠೆಯಂತೆ. ಸಾರಿನ್‌ಪೋಷಳ ಮೋಹಕ ಸೌಂದರ್ಯಕ್ಕೆ ಆಕರ್ಷಿತನಾದರೂ ತನ್ನ ಕರ್ತವ್ಯ ನಿರ್ವಹಣೆಯನ್ನು ಮೀರಿ ಆ ಪ್ರಭಾವಕ್ಕೆ ಒಳಗಾಗುವುದಿಲ್ಲವೆಂಬುದನ್ನು ಇಲ್ಲಿ ನೆನೆಯಬಹುದು. ಹಾತಿಮನ ಈ ಗುಣಗಳು ಪುಟ್ಟಣ್ಣನವರನ್ನು ಸೂಜಿಗಲ್ಲಿನಂತೆ ಆಕರ್ಷಿಸಿದ್ದರಲ್ಲಿ ಸಂದೇಹವಿಲ್ಲ.

## ಶೈಲಿ

ಎಂ. ಎಸ್. ಪುಟ್ಟಣ್ಣನವರ ತಿಳಿಗನ್ನಡದ ಸರಳ ನಿರೂಪಣೆ ಅವರ ಮಿಕ್ಕ ಕೃತಿಗಳಲ್ಲಿ ಅನುಭವಕ್ಕೆ ಬಂದಂತೆ 'ಹಾತಿಂತಾಯ್' ಕೃತಿಯ ವಿಚಾರದಲ್ಲೂ ಸಾಹಿತ್ಯಕ ಯಶಸ್ಸಿಗೆ ಒಂದು ಮುಖ್ಯ ಕಾರಣವಾಗಿದೆ. ಇದು ಭಾಷಾಂತರ ಎಂಬ ಅರಿವು ಎಲ್ಲೂ ಬಾಧೆ ಕೊಡದಂತೆ ಪುಟ್ಟಣ್ಣನವರ ಬರಹ ಆಕರ್ಷಕವಾಗಿದೆ. ಇಂಗ್ಲಿಷ್ ಮೂಲದ ಎರಡು ಉದಾಹರಣೆಗಳನ್ನೂ ಅವುಗಳ ಕನ್ನಡ ಭಾಷಾಂತರಗಳನ್ನೂ ನೋಡಬಹುದು.

"She was arryed in gold and jewels of the highest price ; and with a veil cast over her countenance, she advanced and stood at the foot of the throne. Hatim was completely bewildered, and felt the strongest inclination to remove the veil from her face ; but then he remembered the advice he had received, and said in his own mind, "It is only by seizing the hand of this damsel that I am to be delivered from this enchantment; however, ere I depart I must see further into the delusions of the place." For three nights and days Hatim remained seated on the throne. The darkness of the night was dispelled by magic lamps which to him were invisible, and his ears were delighted with melodius sounds. Fantastic groups in endless variety danced along the scene, but all along the damsel of surpassing beauty stood by the throne, sweetly smiling in his face. They presented him with food and fruits of every description in costly dishes; but although Hatim ate

most heartily, his hunger was not in the least appeased. Wondering in his mind, he said to himself, "Though I am constantly eating I am never satiated, how is this to be accounted for?" (pp. 31–32)

"ಅವಳು ಅಮೂಲ್ಯವಾದ ಚಿನ್ನದ ಒಡವೆಗಳಿಂದಲೂ ರತ್ನಪಡಿ ಒಡವೆಗಳಿಂದಲೂ ಶೃಂಗರಿಸಿಕೊಂಡಿದ್ದಳು. ಅವಳು ತನ್ನ ಮುಖದ ಮೇಲೆ ತೆರೆಯನ್ನು ಹಾಕಿಕೊಂಡಿದ್ದಳು. ಅವಳು ಬಂದು ಸಿಂಹಾಸನದ ಕೆಳಗೆ ನಿಂತುಕೊಂಡಳು. ಹತೀಮನಿಗೆ ಬಹಳ ಗಾಬರಿಯಾಯಿತು. ಅವಳ ಮುಖದ ತೆರೆಯನ್ನು ತೆಗೆಯೋಣವೆ ಎಂದು ಅವನಿಗೆ ಮನಸ್ಸಾಯಿತು. ಆದರೆ ಪರಪುರುಷನು ಇವನಿಗೆ ಮೊದಲೇ ಹೇಳಿದ್ದ ಬುದ್ಧಿವಾದ ಜ್ಞಾಪಕಕ್ಕೆ ಬಂತು. ಆಗ ಅವನು ಆತ್ಮಗತವಾಗಿ–ಇಲ್ಲಿನ ಮಂತ್ರಶಕ್ತಿಯ ಪ್ರಭಾವವನ್ನು ತಪ್ಪಿಸಿಕೊಳ್ಳಬೇಕಾದರೆ ಈ ಹೆಂಗಸಿನ ಕೈ ಹಿಡಿದುಕೊಂಡೇ ಆಗಬೇಕು, ಹೇಗಾದರೂ ಆಗಲಿ, ನಾನು ಹೊರಟು ಹೋಗುವುದಕ್ಕೆ ಮುಂಚೆ ಇನ್ನೂ ಮುಂದೆ ನಡೆಯುವ ಇಲ್ಲಿನ ಮೋಸಗಳನ್ನೆಲ್ಲಾ ತಿಳಿದುಕೊಳ್ಳಬೇಕು, ಎಂದುಕೊಂಡನು. ಮೂರು ಹಗಲು ಮೂರು ರಾತ್ರೆ ಹತೀಮನು ಆ ಸಿಂಹಾಸನದ ಮೇಲೆ ಕೂತುಕೊಂಡೇ ಇದ್ದನು. ಮಾಯದ ದೀಪಗಳನ್ನು ಹತ್ತಿಸಿದ್ದ ಕಾರಣ ರಾತ್ರೆಯ ಕತ್ತಲೆಯಲ್ಲಾ ಹೋಗಿತ್ತು. ಆ ದೀಪಗಳು ಅವನ ಕಂಣಿಗೆ ಕಾಣಿಸುತಿರಲಿಲ್ಲ. ಇಂಪಾದ ಶಬ್ದವು ಅವನ ಕಿವಿಗೆ ಆನಂದವನ್ನು ಹುಟ್ಟಿಸುತ್ತಿತ್ತು. ವಿಚಿತ್ರವಾದ ಗುಂಪಿನವರು ಮಿತಿ ಇಲ್ಲದ ತರಹವಾಗಿ ಆ ಸ್ಥಳದಲ್ಲಿ ನರ್ತನ ಮಾಡುತ್ತಿದ್ದರು. ಕೊನೆಯಿಂದ ಕೊನೆಗೂ ಸರ್ವರಿಗಿಂತಲೂ ಸುಂದರಿಯಾಗಿದ್ದ ಸ್ತ್ರೀಯು ಹತೀಮನ ಮುಖವನ್ನು ನೋಡಿ ಹುಸಿ ನಗುವನ್ನು ನಗುತಾ ಸಿಂಹಾಸನದ ಬಳಿ ನಿಂತಿದ್ದಳು. ಅವರು ಅಮೂಲ್ಯವಾದ ತಟ್ಟೆಗಳಲ್ಲಿ ಬಗೆಬಗೆಯಾದ ಆಹಾರಗಳನ್ನೂ ಫಲಗಳನ್ನೂ ತಂದು ಒಪ್ಪಿಸಿದರು. ಆದರೆ ಹತೀಮನು ಬಹು ಸಂತೋಷವಾಗಿ ಭೋಜನ ಮಾಡಿದ್ದಾಗ್ಯೂ ಅವನ ಕ್ಷುತ್ತೇನೋ ಲೇಶವೂ ಪರಿಹಾರವಾಗಲಿಲ್ಲ. ಅವನು ತನ್ನ ಮನಸ್ಸಿನಲ್ಲಿ ಆಶ್ಚರ್ಯಪಡುತಾ ಆತ್ಮಗತವಾಗಿ–ನಿರಂತರವಾಗಿಯೂ ನಾನು ತಿಂಡಿಯನ್ನು ತಿನ್ನುತಿದ್ದಾಗ್ಯೂ, ನನಗೆ ತೃಪ್ತಿಯಾಗಲಿಲ್ಲವಲ್ಲಾ ಇದು ಹೇಗೆ ? ಎಂದುಕೊಂಡನು." (ಪು. 118–120)

"When he had penetrated as far as the centre of the Red Desert, the fire-breathing serpents espied him, and began to rear their heads and crests aloft like tall trees. From their nostrils issued streams of flame as it were from a furnace, and with tremendous hissing they assailed him on all sides, intending to scorch him to death, and reduce his bones to ashes; but owing to the charmed muhra of the bear's daughter, the

attack of the snakes fell upon Hatim like a current of cool water. Meanwhile the serpents increased in number, and were about to overpower him with their pestiferous and scorching breath, which continued to pour upon him like streams of lightning. He at last threw upon the ground the magic staff of Mahyur, the king of the genii, and such was its wonderful effect, that when he stood on it no snake could come within reach of him. The serpents overawed, remained at a distance; and notwithstanding their utmost efforts for the whole of that night, they were not able to do him the least harm.'' (pp. 100–101)

ಆ ಕಾಡಿನ ಮಧ್ಯಪ್ರದೇಶಕ್ಕೆ ಇವನು ಹೋದ ಕೂಡಲೆ ಬೆಂಕಿ ಉಸಿರು ಬಿಡತಕ್ಕ ಹಾವುಗಳು ಇವನನ್ನು ಕಂಡು ತಮ್ಮ ತಲೆಯನ್ನೂ ಹೆಡೆಯನ್ನೂ ಉದ್ದವಾದ ಮರದ ಹಾಗೆ ಮೇಲಕ್ಕೆ ಎತ್ತಲು ಆರಂಭಿಸಿದವು. ಕುಲುಮೆಯಿಂದ ಹೊರಡುವ ಹಾಗೆ ಅವುಗಳ ಮೂಗಿನಿಂದ ಉರಿ ಹೊರಡುತಿತ್ತು. ಅವನನ್ನು ಸುಟ್ಟು ಅವನ ಮೂಳೆಗಳನ್ನು ಬೂದಿ ಮಾಡಿಬಿಡಬೇಕೆಂದು, ಅವುಗಳು ಬುಸುಗುಟ್ಟುತಾ ಎಲ್ಲಾ ದಿಕ್ಕಿನಿಂದಲೂ ಅವನನ್ನು ಮುಸುಗಿದವು. ಆದರೆ ಭಲ್ಲೂಕ ಪುತ್ರಿಯ ಯಂತ್ರದ ಮಹತ್ತಿನಿಂದ ಆ ಸರ್ಪಗಳು ಬಂದು ಆವರಿಸಿದ್ದು ತಂಣಗಿರುವ ನೀರಿನ ತೆರೆ ಬಿದ್ದಂತಾಯಿತು. ಈ ಮಧ್ಯೆ ಹಾವುಗಳ ಸಂಖ್ಯೆ ಹೆಚ್ಚುತಾ ಬಂತು. ಅವುಗಳ ಸುಡತಕ್ಕಂಥಾ ಮತ್ತು ಬಾಧೆಕರವಾದಂಥಾ ಉಸಿರನ್ನು ಸಹಿಸುವುದು ಕಷ್ಟವಾಯಿತು. ಅದೆಲ್ಲಾ ಮಿಂಚಿನ ಪ್ರವಾಹದ ಹಾಗೆ ಇವನ ಮೇಲೆ ಬೀಳುತಾ ಬಂತು. ಕೊನೆಗೆ ಹತೀಮನು ಭೂತರಾಜನಾದ ಮಹ್ಯೂರನ ಮಂತ್ರದ ದೊಣ್ಣೆಯನ್ನು ನೆಲದ ಮೇಲೆ ಹಾಕಿದನು. ಅದರ ಮಹತ್ತಿನ ಆಶ್ಚರ್ಯವು ಎಂಥಾದ್ದು ಎಂದರೆ, ಆ ದೊಣ್ಣೆಯ ಮೇಲೆ ಅವನು ನಿಂತಕೂಡಲೆ ಅವನ ಸಮೀಪಕ್ಕೆ ಒಂದು ಹಾವೂ ಬರಲಿಲ್ಲ. ಹಾವುಗಳು ಭಯದಿಂದ ದೂರದಲ್ಲಿ ನಿಂತುಕೊಂಡವು. ಆ ರಾತ್ರಿಯಲ್ಲಾ ಅವು ಯೇನು ಮಡಿದಾಗ್ಯೂ ಅವನಿಗೆ ಸ್ವಲ್ಪವೂ ಬಾಧೆಯಾಗಲಿಲ್ಲ.'' (ಪು. 381—381a)

'ಸುಮತಿ ಮದನಕುಮಾರರ ಚರಿತ್ರೆ' ಯಂತಹ ರೂಪಾಂತರಗಳಲ್ಲಿ ಪುಟ್ಟಣ್ಣನವರು ಸಿದ್ಧಹಸ್ತರೆಂಬುದನ್ನೂ ತಮ್ಮ ಸುತ್ತಲಿನ ಸಮಾಜದ ಸಾಂಸ್ಕೃತಿಕ ಧೋರಣೆಗಳನ್ನು ಈ ಕೃತಿಯಲ್ಲಿ ಸಮರ್ಥವಾಗಿ ಪಡಿಮೂಡಿಸಿರುವುದನ್ನೂ ಈ ಹಿಂದೆ ವಿವೇಚಿಸಿದೆ. ಭಾಷಾಂತರದಲ್ಲಿ ಇಂಥ ಸ್ವಾತಂತ್ರ್ಯವನ್ನು ತೆಗೆದುಕೊಳ್ಳುವ ಹಾಗಿಲ್ಲ. ಮೂಲಕ್ಕೆ ನಿಷ್ಠವಾಗಿರುವುದೇ ಇಲ್ಲಿ ಗಣಿಸಬೇಕಾದ ಮುಖ್ಯ ಅಂಶ. ಪುಟ್ಟಣ್ಣನವರು ಈ ಸಂಗತಿಯನ್ನು ಅರಿಯದವರಲ್ಲ. ಆದರೂ ಹಾತಿಮನ ಸಮಾಜದಲ್ಲಿ ರೂಢಿ

ಯಲ್ಲಿಲ್ಲದ ಸಂಗತಿಗಳು ಅನೇಕ ಕಡೆ ಕಾಣುತ್ತವೆ. ಕೆಲವು ಉದಾಹರಣೆಗಳನ್ನು ನೋಡಬಹುದು.

"Male—The human race are the noblest of God's creatures;..." (p. 23)

"ಗಂಡು—ಈಶ್ವರ ಸ್ರಿಷ್ಟಿಯಲ್ಲಿ ಮನುಷ್ಯ ಜಾತಿಯು ಸರ್ವೋತ್ಕೃಷ್ಟವಾದ್ದು." (ಪು 85)

"Creatures of Almighty, your own lives are dear to you, so ought you to consider the lives of others;..." (p.24)

"ಎಲ ಬ್ರಹ್ಮ ಶೃಷ್ಟಿಯಲ್ಲಿ ಹುಟ್ಟಿದ ಜಂತುಗಳೆ, ನಿಮ್ಮ ಪ್ರಾಣವು ನಿಮಗೆ ಬೇಕಾದ್ದು. ಇತರರ ಪ್ರಾಣವೂ ಹಾಗೆಯೇ ಎಂದು ನೀವು ಯೋಚಿಸಬೇಕು." (ಪು. 90)

..."let me prevail on you to send for my love-sick friend, that he may be blessed even with the sight of your countenance." (p. 109)

"ಮನ್ಮಥಬಾಧೆಯಿಂದ ಸಂಕಟಪಡುತಿರುವ ನನ್ನ ಮಿತ್ರನನ್ನು ಕರೆಯಿಸಬೇಕೆಂದು ನಿನ್ನನ್ನು ನಾನು ಬಲವಂತ ಮಾಡುತೇನೆ. ಆದರಿಂದ ನಿನ್ನ ಮುಖದರ್ಶನವನ್ನಾದರೂ ಮಾಡಿ ಅವನು ಧನ್ಯನಾಗಲಿ." (ಪು. 413)

"This," replied the people, "is the funeral pile of one of our male relations, whose body is now consuming in the sacred flame;..." (p. 150)

ಗುಂಪಿನವರು—"ಇದು ನಮ್ಮ ಸಂಬಂಧಿಯಾದ ಒಬ್ಬ ಗಂಡಸಿನ ಚಿತಿ, ಅವನ ಶರೀರವು ಶುದ್ಧವಾದ ಯಜ್ಞೇಶ್ವರನಲ್ಲಿ ಉರಿದು ಹೋಗುತಾ ಇದೆ." (ಪು. 561)

'ಈಶ್ವರಸ್ರಿಷ್ಟಿ', 'ಬ್ರಹ್ಮಶ್ರುಷ್ಟಿ', 'ಮನ್ಮಥಬಾಧೆ', 'ಯಜ್ಞೇಶ್ವರ'—ಈ ಮುಂತಾದ ಪದಗಳನ್ನು ಇಲ್ಲಿನ ಕಥೆಗಳಲ್ಲಿ ಬಳಸಿರುವುದು ಅಷ್ಟೇನೂ ಸಮರ್ಥನೀಯವಲ್ಲ. ಈ ಕೆಲವು ಸಣ್ಣ ದೋಷಗಳನ್ನು ಬಿಟ್ಟರೆ 'ಹಾತಿಂ ತಾಯ್' ಯದು ಮೂಲಕ್ಕೆ ನಿಷ್ಠವಾದ, ನಿರಾಯಾಸವಾದ, ಆಡುನುಡಿಯ ಮೋಡಿಯನ್ನು ಬೀರುವ ಬರವಣಿಗೆ.

ಪುಟ್ಟಣ್ಣನವರ ರೂಪಾಂತರ ಭಾಷಾಂತರ ಕೃತಿಗಳನ್ನು ಕುರಿತು ಒಂದು ಮಾತು: ಬೇರೆ ಭಾಷೆಗಳಿಂದ ಪುಟ್ಟಣ್ಣನವರು ಉಪಲಬ್ಧ ದಾಖಲೆಗಳ ಪ್ರಕಾರ ಒಟ್ಟು ಐದು ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ, ಇಂಗ್ಲೀಷ್ ಮೂಲದ ನಾಲ್ಕು ಕೃತಿಗಳು ('ಜಯಸಿಂಹರಾಜಚರಿತ್ರೆ', 'ಹೇಮಚಂದ್ರರಾಜ ವಿಲಾಸ', 'ಹೇಮಲತ', ಮತ್ತು 'ಸುಮತಿ ಮದನ ಕುಮಾರರ ಚರಿತ್ರೆ') ರೂಪಾಂತರಗಳಾಗಿಯೂ ಇಂಗ್ಲಿಷೇತರ

ಮೂಲದ (ಇಂಗ್ಲೀಷ್ ಭಾಷಾಂತರದ ಮೂಲಕ ಬಂದ) ಏಕೈಕ ಕೃತಿ ('ಹಾತಿಂತಾಯ್') ಭಾಷಾಂತರವಾಗಿಯೂ ಪುಟ್ಟಣ್ಣನವರಿಂದ ಕನ್ನಡದಲ್ಲಿ ರಚಿತವಾದುವೆಂಬುದನ್ನು ಇಲ್ಲಿ ಗಮನಿಸಬಹುದು.

## ಟಿಪ್ಪಣಿಗಳು

1. Shakespeare in Kannada; A. N. Murthy Rao; Indian Literature; Vol. vii-No 1; 1964 ; p. 63.
2. Complete works; Willaim Shakespeare, (ed.) Peter Alexander; The English Language Book Society and collins, London and Glasgow; 1964; (cymbeline) pp. 1197-1239.
   King Lear; William Shakespeare (ed.) Ralph E. C. Houghton; Oxford, London; 1960; 256
   Hamlet; William Shakespeare, (ed.) George Rylands; Delhi, Oxford University Press; 1977; 256
3. Shakespeare in Kannada ; op. cit. p 65.
4. ಹೊಸಗನ್ನಡದ ಅರುಣೋದಯ; ಶ್ರೀನಿವಾಸ ಹಾವನೂರ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1974; ಪು. 280–281.
5. ಮಾಡಿದ್ದುಣ್ಣೋ ಮಹಾರಾಯ; ಎಂ. ಎಸ್. ಪುಟ್ಟಣ್ಣ; ಕಾವ್ಯಾಲಯ, ಮೈಸೂರು; 1967; ಪು. 32.
6. ಲಿಯರ್ ಮಹಾರಾಜ; (ಅನು.) ಶ್ರೀನಿವಾಸ; ಜೀವನ ಕಾರ್ಯಾಲಯ, ಬೆಂಗಳೂರು; 1959; XLI+ 224+14
7. Shakespeare in Kannada; op. cit. p. 66.
8. ಎ. ಎನ್. ಮೂರ್ತಿರಾವ್ ಅವರ ಈ ವಿಮರ್ಶೆಗೆ "cow ಎನ್ನುವುದಕ್ಕೆ ಹಸು ಹೇಗೆ ಸರಿ ಹಾಗೆ ಹರ್‌ಕ್ಯುಲೀಸ್‌ಗೆ ಭೀಮ, Theban Philosopher ಗೆ ಕಂಚಿ ಪಂಡಿತ ಸರಿಯಾದ ಪದಗಳು. ಒಂದು ಭಾಷೆ ಒಂದು ಅರ್ಥವನ್ನು ತಿಳಿಸುವುದಕ್ಕೆ ತನ್ನ ವಾಡಿಕೆಯ ಪದಗಳನ್ನು ಬಳಸಬೇಕು. ಹಾಗೆ ಬಳಸದೆ ಬೇರೆ ರೀತಿಯಲ್ಲಿ ಕೆಲಸ ಸಾಗಬಹುದು. ಆದರೂ ಹಾಗೆ ಬಳಸಿ ಕೆಲಸವನ್ನು ಸಾಗಿಸುವ ಕ್ರಮ ದುಷ್ಟ ಅಲ್ಲ." ಎಂಬ ತರ್ಕ ದೂರವಾದ ಉತ್ತರವನ್ನು ಮಾಸ್ತಿಯವರು ಕೊಟ್ಟಿದ್ದಾರೆ. ತಮ್ಮ ಕೃತಿಯಲ್ಲಿ ಭಾಷಾಂತರ ರೂಪಾಂತರಗಳ ನಿಯಮಗಳನ್ನು ಕಲಸಿಹಾಕಿದ್ದಾರಲ್ಲದೆ, ಮೇಲಿನ ಉತ್ತರದಲ್ಲಿ ರೂಢನಾಮ, ಅಂಕಿತನಾಮಗಳ ವ್ಯತ್ಯಾಸವನ್ನು ಗಮನಿಸಿಲ್ಲ. ವಿವರಗಳಿಗೆ ನೋಡಿ :
   ಸಾಹಿತ್ಯ ಪ್ರೇರಣೆ ; ಮಾಸ್ತಿ ವೆಂಕಟೇಶ ಅಯ್ಯಂಗಾರ್; ಬಾಪ್ಕೋ ಪ್ರಕಾಶನ, ಮೈಸೂರು ರಸ್ತೆ, ಬೆಂಗಳೂರು 560018; 1975; ಪು. 71.

9. ಈ ಮಾರ್ಗವನ್ನು ಅನುಸರಿಸಿದ್ದಕ್ಕೆ ಪುಟ್ಟಣ್ಣನವರು ಯಾವ ವಿವರಣೆಯನ್ನೂ ಕೊಟ್ಟಿಲ್ಲ. ಮಾಸ್ತಿಯವರು "ಇಲ್ಲಿ not an hour less ಎನ್ನುವುದು ಯುಕ್ತ. Not an hour more ಎನ್ನುವುದು ಅಪ್ರಸ್ತುತ. ಕಡಿಮೆಯಾದರೆ ಮುಪ್ಪು ಕಡಿಮೆಯಾದಂತೆ. ಹೆಚ್ಚಾದರೆ ಅದು ಮುಪ್ಪಿಗೆ ಒಂದು ಕುಂದಾಗುವುದಿಲ್ಲ" ಎಂದು ವಿವರಿಸಿದ್ದಾರೆ.
ವಿವರಗಳಿಗೆ ನೋಡಿ :
ಸಾಹಿತ್ಯಪ್ರೇರಣೆ, ಪೂರ್ವೋಕ್ತ.
10. ಹ್ಯಾಮ್ಲೆಟ್ ; ವೈ. ಎಂ. ಷಣ್ಮುಖಯ್ಯ; ಎಂ. ಎಸ್. ಚಿಂತಾಮಣಿ, ದಿ ಈಸ್ಟರ್ನ್ ಪ್ರೆಸ್ II–ಎ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560002; 1954; xxiii + 165
ಹ್ಯಾಮ್‌ಲೆಟ್ : ಶ್ರೀನಿವಾಸ; ಜೀವನ ಕಾರ್ಯಾಲಯ, ಬೆಂಗಳೂರು; ಎ. ಮು. 1973; 29 + 216
ಹ್ಯಾಮ್ಲೆಟ್ : ಎಂ. ಆನಂದರಾವ್: ಎಂ. ರಾಮರಾವ್ ಹರಪನಹಳ್ಳಿ; 1970; 2 + 176 + iv
ಹ್ಯಾಮ್ಲೆಟ್ ; ರಾಮಚಂದ್ರದೇವ; ಅಕ್ಷರಪ್ರಕಾಶನ, ಸಾಗರ; 1978; 158.
11. ಈ ಪದ ಚಮತ್ಕಾರ ಸಿದ್ಧಿಸಿರುವುದು ವೈ. ಎಂ. ಷಣ್ಮುಖಯ್ಯನವರಿಗೆ ಮಾತ್ರ.
"ಹ್ಯಾಮ್ಲೆಟ್—(ಸ್ವಗತ) ಜ್ಞಾತಿಗಿನ್ನೂ ಕೊಂಚ ಹೆಚ್ಚು. ಜಾತಿಗಿನ್ನೂ ತುಸು ಕಡಮೆ."
ವೈ. ಎಂ. ಷಣ್ಮುಖಯ್ಯ, ಪೂರ್ವೋಕ್ತ, ಪು. 11
12. ರಾಮಚಂದ್ರದೇವ ಅವರು ತಮ್ಮ ಕೃತಿಯಲ್ಲಿ ಇದನ್ನು ಸಾಧಿಸಿದ್ದಾರೆ.
"ಮಾರ್ಸೆಲಸ್—ಡೆನ್ಮಾರ್ಕ್ ಕೊಳೆಯುತ್ತಿದೆ."
ರಾಮಚಂದ್ರದೇವ, ಪೂರ್ವೋಕ್ತ, ಪು. 32
13. ಈ ಭಾಗ ಮೂಲದಲ್ಲಿದ್ದಂತೆ ಸೂಚ್ಯವಾಗಿರುವುದು ವೈ. ಎಂ. ಷಣ್ಮುಖಯ್ಯನವರಲ್ಲಿ ಮಾತ್ರ.
"ಹ್ಯಾಮ್ಲೆಟ್—...ಇಂಥವನು ನಿನ್ನ ಗಂಡನಾಗಿದ್ದ...ಇಲ್ಲಿದ್ದಾನೆ ನಿನ್ನ ಗಂಡ."
ವೈ. ಎಂ. ಷಣ್ಮುಖಯ್ಯ, ಪೂರ್ವೋಕ್ತ, ಪು. 99.
14. The History of Sandford and Merton; Thomas Day; Ward, Lock and co., Limited, London; ? ; xii + 388.
15. ಗುಣಸಾಗರ; ಬೆಳ್ಳಾವೆ ವೆಂಕಟನಾರಾಯಣಪ್ಪ; ಎಸ್. ಎಸ್. ಎನ್. ಬುಕ್. ಡಿಪೋ, ಸಿಟಿಮಾರ್ಕೆಟ್, ಬೆಂಗಳೂರು 560002: ಸಾ. ಮು. 1962; iv + 92.
16. The adventures of Hatim Tai; Translation from Persian by Duncan Forbes, A. M.; Oriental Translation Committee, Royal Asiatic Society's house, Grafton Street, Bond Sreet, London; 1830; xi + 214 + 4.
17. ಸಂಶೋಧನೆಯ ಕಾರ್ಯಕ್ಕೆಂದು ಕರ್ನಾಟಕದ ಪ್ರಮುಖ ಗ್ರಂಥಾಲಯಗಳಲ್ಲೂ ಹಲವು ವೈಯಕ್ತಿಕ ಸಂಗ್ರಹಗಳಲ್ಲೂ ಅನೇಕ ಗ್ರಂಥಗಳನ್ನೂ ನಿಯತಕಾಲಿಕೆಗಳನ್ನೂ ನೋಡಿದ್ದೇನೆ. ಈ ಭಾಷಾಂತರ ಪ್ರಕಟವಾಗಿರುವುದು ನನ್ನ ಗಮನಕ್ಕೆ ಬಂದಿಲ್ಲ.

## 4. ಸಂಶೋಧನ ಕೃತಿಗಳು

ಎಂ. ಎಸ್. ಪುಟ್ಟಣ್ಣನವರು ಪಾಳಯಗಾರರನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜನವರಿ 1922ರಲ್ಲಿ ಚಿಕ್ಕಮಗಳೂರಿನಲ್ಲಿ ಸಾದರ ಪಡಿಸಿದ ಐದು ಪ್ರಚಾರೋಪನ್ಯಾಸಗಳು ಒಂದುಗೂಡಿದ ಪ್ರಕಟಣೆಯೇ ಪಾಳಯಗಾರರು (1923) ಎಂಬ ಕೃತಿಯಾಗಿದೆ. ಈವರೆಗೆ ಇಂಥದೊಂದು ಕೃತಿ ಬಂದಿರಲಿಲ್ಲ. ಪಾಳಯಗಾರರನ್ನು ಕುರಿತು ಪ್ರಕಟವಾದ ಸಂಶೋಧನ ಲೇಖನಗಳಲ್ಲಿ ಇದೇ ಮೊದಲ ನೆಯದೆಂದು ಉಪಲಬ್ಧ ಆಧಾರಗಳು ತಿಳಿಸುತ್ತವೆ. ಮುಂದೆ 'ಚಿತ್ರದುರ್ಗದ ಪಾಳಯಗಾರರು' (1924), 'ಗುಮ್ಮನಾಯಕನ ಪಾಳಯದ ಪಾಳಯಗಾರರು' (1926), 'ಹಾಗಲವಾಡಿ ಪಾಳಯಗಾರರು' (1931), ಮತ್ತು 'ಇಕ್ಕೇರಿ ಸಂಸ್ಥಾನದ ಚರಿತ್ರೆ' (1931) ಗಳು ಪ್ರಕಟಗೊಂಡವು.

ಇತಿಹಾಸ ಎಂದರೆ ಗತಕಾಲದ ಘಟನೆಗಳ ವ್ಯವಸ್ಥಿತ ದಾಖಲೆ. ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳ ಕ್ರಮವಾದ ಅಧ್ಯಯನವೇ ಇತಿಹಾಸ. ನಾಗರಿಕತೆ ಮತ್ತು ಸಂಸ್ಕೃತಿಗಳ ಎಳೆಗಳು ಇತಿಹಾಸದಲ್ಲಿ ಪ್ರವಹಿಸುವ ಓಟವನ್ನು ಅರ್ಥೈಸುವುದು ಸುಲಭವಲ್ಲ. ಪುಟ್ಟಣ್ಣನವರು ಇತಿಹಾಸಜ್ಞರಲ್ಲ, ಪ್ರಾಕ್ತನ ಶಾಸ್ತ್ರಜ್ಞರಲ್ಲ, ಸಂಶೋಧನೆಗೆ ಬೇಕಾದ ಶಿಕ್ಷಣವನ್ನಾಗಲೀ. ಸಲಕರಣೆಗಳನ್ನಾಗಲೀ ಹೊಂದಿದ್ದವರಲ್ಲ. ಆದರೆ ಸಂಶೋಧಕಪ್ರವೃತ್ತಿ ಅವರಲ್ಲಿತ್ತು. ತಾವು ಆಳಿದ ಪ್ರದೇಶಗಳ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಈ ಪಾಳಯಗಾರರ ವಿಚಾರಗಳನ್ನು ದೊರೆತ ದಾಖಲೆಗಳ ಮೂಲಕ ಉಳಿಸಿಡುವ ನಮ್ರ ಪ್ರಯತ್ನ ಮಾತ್ರ ಪುಟ್ಟಣ್ಣನವರದು. ನಾಡುನುಡಿಗಳ ಅಭಿಮಾನ ಇದಕ್ಕೆ ಪ್ರೇರಕಶಕ್ತಿ. ಹಲವು ಮಿತಿಗಳಿದ್ದರೂ ತಮಗೆ ಸಿಕ್ಕಿದ ದಾಖಲೆಗಳನ್ನೇ ನೆಚ್ಚಿ ಗ್ರಂಥರಚನೆಯ ಸಾಹಸಕ್ಕೆ ಪುಟ್ಟಣ್ಣನವರು ಕೈಹಾಕಿದರು.

ಪುಟ್ಟಣ್ಣನವರು ತಮ್ಮ ಅಮಲ್ದಾರ ವೃತ್ತಿಯಲ್ಲಿ ಹಲವು ಊರುಗಳನ್ನು ಸುತ್ತ ಬೇಕಾದ ಪ್ರಸಂಗ ಒದಗಿದಾಗ ಆಯಾ ಪಾಳಯಗಾರರ ವಂಶಸ್ಥರ ಬಳಿಯಲ್ಲಿದ್ದ ದಾಖಲೆಗಳನ್ನು ಕಾಡಿಬೇಡಿ ಸಂಗ್ರಹಿಸಿದರು. ರೈಸರ ಶಾಸನ ಸಂಪುಟಗಳನ್ನು ಅಧ್ಯಯನ ಮಾಡಿದರು, ತಾವು ಪಡೆದ ದಾಖಲೆಗಳೆಲ್ಲವನ್ನೂ ಕೃತಿರಚನೆಗೆ ಉಪ ಯೋಗಿಸಿದರು. ಪುಟ್ಟಣ್ಣನವರು ಬರೆದ ಗ್ರಂಥಗಳಲ್ಲದೆ ಈ ಪಾಳಯಗಾರರ ವಿಚಾರ ವಾಗಿ ಬೇರೆ ದಾಖಲೆಗಳು ಇಷ್ಟು ವ್ಯವಸ್ಥಿತವಾಗಿ ಸಿಗುವುದಿಲ್ಲ. ಈ ಕೃತಿಗಳ ಪುನಾರಚನೆಗೆ ಈಗ ಬೇರೆ ಯಾರಾದರೂ ಕೈಹಾಕಿದರೆ ಪುಟ್ಟಣ್ಣನವರ ಗ್ರಂಥಗಳೇ ಆಕರಗ್ರಂಥಗಳೂ ಆಧಾರಗ್ರಂಥಗಳೂ ಆಗುವುದು ನಿಸ್ಸಂದೇಹ. ಎಂ. ಎಸ್. ಪುಟ್ಟಣ್ಣನವರಿಗಿಂತ ಕೆಲವು ಕಾಲ ಮೊದಲೇ ಹುಲ್ಲೂರು ಶ್ರೀನಿವಾಸ ಜೋಯಿಸರು ಚಿತ್ರದುರ್ಗದ ಸಂಬಂಧವಾಗಿ ದೊರಕಿದ ಎಲ್ಲ ಅಪ್ರಕಟಿತ ದಾಖಲೆಗಳನ್ನೂ ಕಾಪಾಡಿ ಹಲವು

ಸಂಗತಿಗಳನ್ನು ಬೆಳಕಿಗೆ ತರುವ ಕೃತ್ಯದಲ್ಲಿ ತೊಡಗಿದ್ದರೆಂದು ಹೇಳಲಾಗಿದೆ.[1] ಮಿಕ್ಕ ಪಾಳಯಗಾರರನ್ನು ಕುರಿತಂತೆ ಅಷ್ಟಾಗಿ ಅಧ್ಯಯನ ನಡೆದಂತೆ ಆಧಾರಗಳಿಲ್ಲ.

ಪಾಳಯಗಾರರೆಂದರೆ ದೊರೆಗಳಂತೆ ಆಳುತ್ತಿದ್ದ ಪ್ರಮುಖರು. ಇವರುಗಳು ಚಿಕ್ಕಪುಟ್ಟ ಪಾಳೆಯಪಟ್ಟುಗಳನ್ನು ಹೊಂದಿದ್ದರೂ ಚಕ್ರವರ್ತಿಗಳಂತೆಯೇ ವರ್ತಿಸುತ್ತಿದ್ದರು. ಆಗಿನ ಸಮಾಜ ಸ್ಥಿತಿಯನ್ನು ಗಮನಿಸಿದರೆ ಇದೊಂದು ವಿಲಕ್ಷಣ ಸಂಗತಿಯಲ್ಲ. ರಾಜರೆಂದರೆ ಪ್ರತ್ಯಕ್ಷ ದೇವರು ಎಂಬ ಆಗಿನ ಪ್ರಜಾನೀತಿ, ಅನೂಚಾನವಾಗಿ ಬಂದ ಶ್ರೀಮಂತಿಕೆ, ಸಾರಿಗೆ ಸಂಪರ್ಕಗಳ ಸೌಲಭ್ಯ ಕಡಿಮೆ ಇದ್ದು ಪ್ರತಿ ಚಿಕ್ಕ ಪ್ರದೇಶವೂ ತನ್ನಷ್ಟಕ್ಕೆ ದೊಡ್ಡದಾಗಿ, ಸ್ವತಂತ್ರ ಘಟಕವಾಗಿ, ಭಾವಿಸಲ್ಪಟ್ಟ ಸ್ಥಿತಿ—ಇವುಗಳು ಈ ಭಾವನೆಗೇ ನೀರೆರೆಯುತ್ತಿದ್ದವು. ಪಾಳೆಯಗಾರರಿಗೂ ಮಿಕ್ಕ ರಾಜರಿಗೂ ಇದ್ದ ಒಂದೇ ವ್ಯತ್ಯಾಸವೆಂದರೆ ಪಾಳಯಗಾರರು ಅಧೀನರೆಂಬುವುದೇ. ಚಿಕ್ಕ ಚಿಕ್ಕ ಸಂಸ್ಥಾನಗಳಲ್ಲಿ ಹಲವು ಬಾರಿ ಪರಿಸ್ಥಿತಿಯ ಲಾಭ ಪಡೆದು, ಹಲವು ಬಾರಿ ಪೂರ್ಣ ಸ್ವಸಾಮರ್ಥ್ಯದಿಂದ ರಾಜ್ಯಕಟ್ಟಿ ಆಳುತ್ತಿದ್ದ ಇವರುಗಳ ವೃತ್ತಾಂತವಿಲ್ಲದೆ ದಕ್ಷಿಣಭಾರತದ ಚರಿತ್ರೆ ಅಪೂರ್ಣ. "ಈ ಪಾಳಯಗಾರರಿಗೂ ಅನ್ಯರಾಜ್ಯಗಳವರಿಗೂ ಇದ್ದ ಸಂಬಂಧವು ತುಂಗಭದ್ರಾ ತೀರವಾಸಿಗಳಾಗಿದ್ದ ಚಕ್ರಾಧೀಶ್ವರರ ಆಳಿಕೆಯೊಳಗೆ ಎಷ್ಟರಮಟ್ಟಿಗೆ ಸೇರಿಕೊಂಡು ಇತ್ತೆಂದರೆ, ಈ ಅಧೀನ ರಾಜರಿಲ್ಲದಿದ್ದರೆ, ರಾಜಾಧಿರಾಜರೆಂದು ಖ್ಯಾತಿಯನ್ನು ಪಡೆದಿದ್ದ ಆ ಚಕ್ರವರ್ತಿಗಳು ಚಿತ್ರದಲ್ಲಿ ಬರೆದ ಚಕ್ರವರ್ತಿಗಳಂತಾಗುತಿದ್ದರು." (ಪಾಳಯಗಾರರು, ಪೀಠಿಕೆ ಪು. 1) ಎಂದು ಪುಟ್ಟಣ್ಣವರು ಹೇಳಿದ್ದಾರೆ. ಇಕ್ಕೇರಿ ಶಿವಪ್ಪನಾಯಕನ ಶಿಸ್ತು, ಕಂದಾಯ ಪದ್ಧತಿ, ಚಿತ್ರದುರ್ಗದ ಪಾಳೆಯಗಾರರ ಸ್ಥಳೀಯವಾದ ಕಂದಾಯ ವ್ಯವಸ್ಥೆ ಹಾಗೂ ಬೇಗಾರರ ಪದ್ಧತಿ, ಗುಮ್ಮನಾಯಕನ ಪಾಳಯದವರ ನ್ಯಾಯ ನೀತಿ ಧರ್ಮಗಳ ವ್ಯವಸ್ಥೆ, ಹಾಗಲವಾಡಿ ಪಾಳಯಗಾರರ ನೈತಿಕ ಶ್ರದ್ಧೆ ಇವು ಗಮನಾರ್ಹವಾದ ವಿಚಾರಗಳು. ಈ ಎಲ್ಲ ಪಾಳಯಗಾರರೂ ಶೂರರೂ ಧರ್ಮಭೀರುಗಳೂ ಆಗಿದ್ದವರು. "The valour or heroism which we read about in the legendary stories of the puranas were transformed into actual facts in the actions of these palayagars."
(ಪಾಳಯಗಾರರು preface p. 1) ಎಂಬ ಪುಟ್ಟಣ್ಣನವರ ಮಾತನ್ನು ನೆನೆಯಬಹುದು.

ಪಾಳಯಗಾರ ಎಂಬ ಪದವನ್ನು ಅರ್ಥೈಸುತ್ತಾ ಪುಟ್ಟಣ್ಣನವರು ದಂಡಿನೊಡನೆ ಪಾಳಯವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರೆಂದು ಹೇಳುತ್ತಾರೆ. ಗೌರವಾರ್ಥಕ್ಕಾಗಿ ಉಪಯೋಗಿಸುತ್ತಿದ್ದ ಈ ಪಾಳಯಗಾರ ಎಂಬ ಶಬ್ದ ಕ್ರಮೇಣ ದುಷ್ಟರಿಗೆ ಪ್ರಯೋಗವಾಗುವ ಸ್ಥಿತಿ ಬಂದಿತು. ಹಲವು ರಾಜ್ಯಗಳಲ್ಲಿ ಬಲಶಾಲಿಗಳಾಗಿದ್ದ ಜಮೀನುದಾರರು, ಜಹಗೀರುದಾರರು, ದೇಶಾಯಿ, ದೇಶಮುಖ, ದೇಶಪಾಂಡೆ, ದೇಶಕುಲಕರಣಿ ಮೊದಲಾದ ಉದ್ಯೋಗಸ್ಥರು ಸಮಯ ಬಂದ ಹಾಗೆಲ್ಲಾ

ಪ್ರಬಲವಾಗಿ ಹೆಚ್ಚು ಭೂಮಿಯನ್ನೂ, ಸೈನ್ಯವನ್ನೂ ಪಡೆದು ಸಾಮಂತರಾಗುತ್ತಿದ್ದರು. ಮುಂದೆ ಇವರುಗಳೇ ಪಾಳಯಗಾರರಾಗುತ್ತಿದ್ದರು. ಇವರಲ್ಲದೆ ಬಹಮನಿ ದೊರೆಗಳು ಮತ್ತು ಐದುಜನ ಷಾಹಿದೊರೆಗಳು ನೇಮಿಸಿದ ಸರ್ವಾಧಿಕಾರಿಗಳೂ ಸರಿಯಾದ ಕಾಲ ನೋಡಿ ದೊರೆಯನ್ನು ಪ್ರತಿಭಟಿಸಿ ಪಾಳಯಗಾರರಾಗಿ ಪರಿವರ್ತಿತ ರಾಗುತ್ತಿದ್ದರು. ಪಶ್ಚಿಮ ಸಮುದ್ರತೀರದ ಪ್ರಾಂತ್ಯಗಳಲ್ಲಿನ ಹಲವು ಚಿಕ್ಕಪುಟ್ಟ ಆಧಿಪತ್ಯಗಳಲ್ಲೂ ಇದೇ ಸ್ಥಿತಿಯಿತ್ತು. ಉತ್ತರದ ಮೊಗಲರೂ ದಕ್ಷಿಣದ ಬಹಮನಿ ಸಂತತಿಯವರೂ ಇವರನ್ನು ತಮ್ಮ ಸಮಯಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳು ತ್ತಿದ್ದರು. ಅಂಥ ಹೊತ್ತಿನಲ್ಲಿ ವೈಯಕ್ತಿಕ ಬಲವೊಂದೇ ಅಧೀನರು ಯಾರು, ಯಾರು ಅಲ್ಲ ಎಂಬುದನ್ನು ನಿಶ್ಚಯಿಸುವ ಅಳತೆಗೋಲಾಗಿತ್ತು.

ಆ ಕಾಲದಲ್ಲಿ ದೇಶದಲ್ಲೆಲ್ಲ ಹರಡಿದ್ದ ಈ ಪಾಳಯಗಾರರು ಸಾಹಸ ಪರಾಕ್ರಮ ಗಳಿಂದ ಹಾಗೂ ಸುಲಿಗೆ ಲೂಟಿಗಳಿಂದ ಸಾಮಾನ್ಯ ಜನಗಳಿಗೆ ಸಿಂಹಪ್ರಾಯರಾಗಿ ಯುದ್ಧಕಲೆಗಳಲ್ಲಿ ಪರಿಣತರಾಗಿ ಸಂದರ್ಭವೊದಗಿದಾಗ ಚಿಗುರಿಕೊಂಡು ರಾಜ್ಯಕಟ್ಟಿ ತಮ್ಮವರಿಂದಲೇ ಪಟ್ಟಾಭಿಷಿಕ್ತರಾಗಿ ಅನಂತರ ನಂಬಿದವರನ್ನು ಕಾಪಾಡುತ್ತ ಬಾಳು ತ್ತಿದ್ದರು. ಸಾಮಾನ್ಯವಾಗಿ ಇವರೆಲ್ಲ ದೈವಭಕ್ತರು. ಮೈಸೂರಿನ ದೊರೆಗಳಿಗೂ, ವಿಜಯನಗರದ ಚಕ್ರವರ್ತಿಗಳಿಗೂ ಶೂರರಾದ ಪಾಳಯಗಾರರು ಕೊಡುತ್ತಿದ್ದ ಸಹಾಯ ಅಪರಿಮಿತವಾಗಿತ್ತು. ಈ ಎರಡು ಸಾಮ್ರಾಜ್ಯದ ದೊರೆಗಳೂ ತಮ್ಮ ವಿಸ್ತಾರವಾದ ರಾಜ್ಯಪದವಿಯ ಎಲ್ಲ ಕಷ್ಟಸಂಕಟಗಳನ್ನೂ ತಾವೇ ಹೊರಲಾಗದಾಗ ಶಾಂತಿಪಾಲನೆ, ಕಂದಾಯ ವಸೂಲಿ, ಯುದ್ಧಕಾಲದಲ್ಲಿ ಸಹಾಯ ಮುಂತಾದವುಗಳಿಗೆ ಈ ಪಾಳಯ ಗಾರರನ್ನು ನೇಮಿಸುತ್ತಿದ್ದರು. ವಿಜಯನಗರದವರಿಗೆ ಅಥವಾ ಮೈಸೂರಿನವರಿಗೆ ನಿಷ್ಠರಾಗಿದ್ದ ಈ ಪಾಳಯಗಾರರನ್ನು ಮೊಗಲರು ಬಲಪ್ರದರ್ಶನದಿಂದ ಮಾತ್ರ ತಮ್ಮ ಅಧೀನಕ್ಕೆ ತೆಗೆದುಕೊಳ್ಳಬಹುದಾಗಿತ್ತೇ ವಿನಹ ಈ ಪರಿಸ್ಥಿತಿಯಲ್ಲಿ ಅವರುಗಳಲ್ಲಿ ಸೌಹಾರ್ದ ಸಂಬಂಧ ತೀರಾ ಅನಿರೀಕ್ಷಿತವಾಗಿತ್ತು.

ಈ ಪಾಳಯಗಾರರ ಧುರೀಣತ್ವದ ಬೆಂಬಲದಿಂದ ಹಲವು ಬಾರಿ ಯುದ್ಧಗಳಲ್ಲಿ ರಾಷ್ಟ್ರದ ಭವಿಷ್ಯ ನಿರ್ಧಾರವಾಗುತ್ತಿತ್ತು. ಇವರುಗಳ ಶತ್ರುತ್ವ ಚಕ್ರವರ್ತಿಗೆ ನುಂಗ ಲಾರದ ತುತ್ತಾಗಿ ಪರಿಣಮಿಸಿದ್ದೂ ಉಂಟು. ಸಂಖ್ಯೆಯಲ್ಲಿ ಬಹಳವಾಗಿದ್ದ ಈ ಚಿಕ್ಕಪುಟ್ಟ ಪಾಳಯಗಾರರ ಪಾತ್ರ ಹಿರಿದಾದ್ದನ್ನು ಸಾಧಿಸುತ್ತಿತ್ತು. ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಉಳಿಸಲು ಕೂಡ ಈ ಪಾಳಯಗಾರರು ಶ್ರಮಿಸಿದರು. ಜಾತಿಮತಗಳ ಭೇದವಿಲ್ಲದೆ ಈ ಪಾಳಯಗಾರರು ಕಟ್ಟಿಸಿದ, ಜೀರ್ಣೋದ್ಧಾರ ಮಾಡಿಸಿದ ದೇವಾ ಲಯ, ಮಸೀದಿ, ಚರ್ಚುಗಳು ಇದಕ್ಕೆ ಸಾಕ್ಷಿ. ಲಲಿತಕಲೆಗಳಿಗೂ ವಿದ್ಯಾಭ್ಯಾಸಕ್ಕೂ ಅವರು ಸಹಾಯ ಮಾಡಿದರು.

ಯಾರಾದರೊಬ್ಬ ಪಾಳಯಗಾರ ಅಥವಾ ರಾಜರ ವಿಜಯಾಕಾಂಕ್ಷೆ ಮಹತ್ತ್ವ ದ್ದಾದಾಗ ಬಲದಲ್ಲಿ ಕಡಿಮೆಯಾಗಿದ್ದ ಸುತ್ತಮುತ್ತಲ ಪಾಳಯಗಾರರು ತಮ್ಮ ಪಾಳಯ

ಪಟ್ಟುಗಳನ್ನು ವಿಜಯಶಾಲಿಗಳಿಗೆ ಅಧೀನಮಾಡಿಕೊಡಬೇಕಾಗಿತ್ತು. ಮೊಗಲರ ಕಾಲದಲ್ಲಿ ಹಿಂದೂಗಳಿಗೆ ಆಗುತ್ತಿದ್ದ ಹಿಂಸೆಯನ್ನು ಅಡಗಿಸುವ ಉದ್ದೇಶದಿಂದ ಶಿವಾಜಿಯು ರಾಜ್ಯಕಟ್ಟಲು ಮೊದಲುಮಾಡಿ ಹಲವು ಜಮೀನುದಾರರನ್ನೂ ಜಹಗೀರು ದಾರರನ್ನೂ ನಾಶಮಾಡಿ ಅವರ ಪಾಳಯಗಳನ್ನು ತನ್ನ ಸಂಸ್ಥಾನಕ್ಕೆ ಸೇರಿಸಿಕೊಂಡನು. ಮೈಸೂರಿನ ದಳವಾಯಿ ದೇವರಾಜಯ್ಯ, ನಂಜರಾಜಯ್ಯ, ಮುಂದೆ ಹೈದರಾಲಿ ಇವರುಗಳು ಹಲವು ಪಾಳಯಪಟ್ಟುಗಳನ್ನು ಗೆದ್ದು ರಾಜ್ಯವಿಸ್ತರಣೆ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ಎಲ್ಲ ಪಾಳಯಪಟ್ಟುಗಳೂ ಹೀಗೆಯೇ ನಾಶವಾಗಿ ಹೋದವು. ಸ್ವಜನದ್ವೇಷ, ಸ್ವಯೂಥಕಲಹ, ಮೋಸ, ದ್ರೋಹಗಳು ಈ ಪರಿಸ್ಥಿತಿಗೆ ಕಾರಣವಾಗಿದ್ದವು. ಭಾರತದ ಇತರ ಕಡೆಗಳಲ್ಲಿ ಹಲವು ಪಾಳೆಯಪಟ್ಟುಗಳು ಸ್ವಾತಂತ್ರ್ಯದವರೆಗೆ ಉಳಿದುಕೊಂಡೇ ಬಂದುವು. ಸ್ವಾತಂತ್ರ್ಯಾನಂತರ ಸರದಾರ್ ವಲ್ಲಭಭಾಯಿಪಟೇಲರ ಕುಶಲತೆಯಿಂದ ಸಂಸ್ಥಾನಗಳ ವಿಲೀನೀಕರಣಕ್ಕೆ ಇವೆಲ್ಲವೂ ಒಳಗಾದುವು.

'ಪಾಳಯಗಾರರು' ಕೃತಿಯಲ್ಲಿ ಪುಟ್ಟಣ್ಣನವರು ಈ ಶಬ್ದಪ್ರಯೋಗದ ಬಗ್ಗೆ ಪ್ರಸ್ತಾಪಿಸಿದ್ದಾರೆ. ವಿಜಯನಗರದ ರಾಜರು ಈ ಪಾಳಯಗಾರರನ್ನು ನೇಮಿಸಲಿಲ್ಲ ವೆಂದೂ ಪಾಳಯಗಾರಿಕೆಯ ಪದ್ಧತಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೂ ಸುಮಾರು ತೊಂಬತ್ತೆರಡು ವರ್ಷಗಳಿಗೂ ಮುಂಚೆಯೇ ಇತ್ತೆಂದೂ ಹೇಳಿದ್ದಾರೆ.

ಯೂರೋಪಿನ ಫ್ಯೂಡಲ್‌ಸಂಸ್ಥೆಗಳು ಐದರಿಂದ ಎಂಟನೇ ಶತಮಾನದಲ್ಲಿನ ಕಾಲದಲ್ಲಿ ರೂಢಿಯಲ್ಲಿದ್ದವು. ಸರಕಾರದ ಉದ್ಯೋಗಸ್ಥರ ಹಿಂಸೆ, ಪರರಾಜರ ತೊಂದರೆ, ಒಳನಾಡಿನ ಪ್ರಬಲರ ಕಾಟ ಇವುಗಳಿಂದ ರಕ್ಷಿಸಲು ಸ್ಥಳೀಯರೊಬ್ಬರ ಪ್ರಭಾವಶಾಲಿ ಮುಖಂಡತ್ವ ಅಗತ್ಯವಾಗಿದ್ದು ರೈತರೆಲ್ಲ ಈ ವಿಧಾನಕ್ಕೆ ಅನುಮೋದಿಸಿದರು. ಪ್ರತಿಫಲವಾಗಿ ರಕ್ಷಣೆ ಪಡೆದ ರೈತರು ಈ ಪ್ರಮುಖನ ಅಧಿಕಾರವನ್ನು ಮನ್ನಿಸಬೇಕು. ಹೀಗೆ ಪರಸ್ಪರ ಸಹಾಯದ ಪದ್ಧತಿ ಜಾರಿಗೆ ಬಂತು. ಪ್ರಮುಖನ ಮುಖ್ಯ ಕೆಲಸ ರೈತರಿಗೆ ಹಿಂಸೆ ಆಗದಂತೆ ಮಾಡುವುದು ಹಾಗೂ ಅವರ ಸ್ವತ್ತನ್ನು ಕಾಪಾಡುವುದು. ಕಾಲಕ್ರಮೇಣ ಈ ಪ್ರಮುಖನಾದವನು ಅಥವಾ ದೊರೆ ತನ್ನ ಬಂಧುವರ್ಗ, ಮೆಚ್ಚಿನವರು ಮೊದಲಾದವರಿಗೆ ಭೂಪ್ರದೇಶಗಳನ್ನು ಮಾನ್ಯವಾಗಿ ಕೊಡುವ ಪದ್ಧತಿ–ಮೊದಲು ಒಂದು ತಲೆಗೆ ಮಾತ್ರ, ಅನಂತರ ಸಂತತಿ ಎಲ್ಲಕ್ಕೂ ಕೊಡುವ ಪದ್ಧತಿ–ಬೆಳೆಯಿತು. ಯೂರೋಪಿನಲ್ಲಿ ಚರ್ಚಿನ ಪಾದ್ರಿಗಳಿಗೆ ವಿಶೇಷ ಅಧಿಕಾರವಿತ್ತು. ರಾಜಪ್ರಜೆಗಳ ಸಂಬಂಧದಲ್ಲಿ ಕೆಲವು ತಿಕ್ಕಾಟಗಳಿದ್ದುವು. ಮುಂದೆ ಈ ಮಾರ್ಪಾಡಿನಲ್ಲಿ ಭೂಸಂಬಂಧ ಹೋಗಿ ಬರಿಯ ಸ್ವಾಮಿಭೃತ್ಯರ ಸಂಬಂಧ ಮಾತ್ರ ಉಳಿಯಿತು. ಆದರೆ ಬೇರೆ ಭೂಮಿಯನ್ನು ಸಾಗುವಳಿ ಮಾಡಲು ನಿರ್ಬಂಧ ವಿರಲಿಲ್ಲ. ಯುದ್ಧಸಂದರ್ಭಗಳಲ್ಲಿ ಸಹಾಯ ಮಾಡುವುದು ರೂಢಿಗೆ ಬಂತು. ದೊರೆಯಿಂದ ದೇಶ ಹಾಗೂ ಅಧಿಕಾರದ ಕಾಣಿಕೆ ಸಿಗುತ್ತಿತ್ತು. ಮೊದಲಿಂದ ತಮಗೆ ದೊರೆತ





ಅಧಿಕಾರವನ್ನು ದೊರೆಯ ಪೋಷ್ಯವರ್ಗದಲ್ಲಿದ್ದು ಕಾಪಾಡಿಕೊಳ್ಳುತ್ತಿದ್ದರು. ಈ ರೀತಿ ಈ ಫ್ಯೂಡಲ್ ಪ್ರಮುಖರು ವೃದ್ಧಿಗೊಂಡರು. ಜಮೀನುದಾರರು ಅವರ ಕೈ ಕೆಳಗೆ ಉಪಜಮೀನುದಾರರು, ಅವರ ಕೈ ಕೆಳಗೆ ರೈತರು, ಮಾನ್ಯದ ಹಿಡುವಳಿದಾರರ ತರುವಾಯ ವಿಲೆನ್‌ಗಳೆಂಬ ಜನರು. ಇವರಿಗೆ ಸಾಗುವಳಿ ಮಾಡದೆ ಇರಲು ಹಕ್ಕಿಲ್ಲ, ಜಮೀನುದಾರರಿಗೆ ಜಮೀನು ಬಿಡಿಸಲು ಹಕ್ಕಿಲ್ಲ. ಈ ವಿಲೆನ್‌ಗಳಿಗೂ ಕಡಿಮೆ ಆದವರು ಹುಟ್ಟಾಜೀತಗಾರರು. ಇವರು ಗುಲಾಮರಾಗಿ ಬಾಳಬೇಕಿತ್ತು.

ಭರತಖಂಡದ ಪಾಳಯಗಾರರ ಪದ್ಧತಿಯಲ್ಲಿ ಈ ಉಪಜಮೀನುದಾರರೂ, ವಿಲೆನ್‌ಗಳೂ ಇರಲಿಲ್ಲ. ಇದು ಪ್ರಮುಖವ್ಯತ್ಯಾಸ. ಅಲ್ಲದೆ ಹಲವು ಬಾರಿ ಸ್ವಸಾಮರ್ಥ್ಯದಿಂದ ರಾಜ್ಯಕಟ್ಟಿದ ಪಾಳಯಗಾರರೂ ಉಂಟು. ಚಿತ್ರದುರ್ಗದ ಪಾಳಯಪಟ್ಟು, ಗುಮ್ಮನಾಯಕನ ಪಾಳಯಪಟ್ಟು ಇದಕ್ಕೆ ಉದಾಹರಣೆಗಳು. ಸಾಧ್ಯವಿದ್ದ ಕಡೆಯಲ್ಲೆಲ್ಲ ಪುಟ್ಟಣ್ಣನವರು ಪಾಶ್ಚಾತ್ಯ ಹಾಗೂ ನಮ್ಮ ದೇಶಗಳ ಪದ್ಧತಿಗಳಲ್ಲಿ ಹೋಲಿಕೆ ವ್ಯತ್ಯಾಸಗಳನ್ನು ತಿಳಿಸಿದ್ದಾರೆ. ಗುಮ್ಮನಾಯಕನ ಪಾಳಯದವರು ಸೇನೆಯನ್ನು ಸಾಕಿ ಯುದ್ಧಪ್ರಸಂಗದಲ್ಲಿ ಮಾತ್ರ ಅವರಿಂದ ಸಹಾಯ ಪಡೆದು ಅವರಿಗೆ ಎಲ್ಲ ಸೌಕರ್ಯಗಳನ್ನು ಮಾಡಿಕೊಟ್ಟಿದ್ದರು. ಆ ಜನರು ಸರ್ಕಾರದ ಕೆಲಸಕ್ಕೆ ಬರದೇ ಇದ್ದರೆ, ಬರಲು ತಡಮಾಡಿದರೆ ಅಂಥವರಿಗೆ ಮರಣದಂಡನೆ ವಿಧಿಸುತ್ತಿದ್ದ ಏರ್ಪಾಟನ್ನು ಪಾಶ್ಚಾತ್ಯರ 'ಮಿಲಿಷಿಯಾ' ಪದ್ಧತಿಗೆ ಸಂವಾದಿ ಎಂದು ಸೂಚಿಸಿದ್ದಾರೆ.

ಪಾಳಯಗಾರರ ಸೇನೆಯ ಏರ್ಪಾಡಿನ ಬಗೆಗೆ ವಿಸ್ತಾರವಾದ ವಿಚಾರವಿದೆ. ನಾವೆ, ಕೋಟೆಗಳ ವಿಚಾರ, ಕಂದಾಯ ಗಡಿಗಳ ವಿಚಾರ, ಸರಕಾರದ ಬೇರೆ ಬೇರೆ ಇಲಾಖೆಗಳು, ಇತರ ಪದ್ಧತಿಗಳು ಮತ್ತು ಸಂದರ್ಭಾನುಸಾರವಾಗಿ ಆಯಾ ಪಾಳಯಪಟ್ಟಿನ ಉದಾಹರಣೆಗಳು ಇಲ್ಲಿವೆ. ಲೋಕೋಪಕಾರಾರ್ಥವಾಗಿ ಮಾಡಿದ ಕಾರ್ಯಗಳು, ಕೆರೆತೋಪುಗಳ, ದೇವಾಲಯ ಮತ್ತು ಇತರ ಕಟ್ಟಡಗಳ ನಿರ್ಮಾಣ, ವಿಶೇಷವಾದ ಪದ್ಧತಿಗಳು, ದೊರೆಯ ಚುನಾವಣೆ, ಮುಖಂಡರ ಸಭೆ ಇತ್ಯಾದಿಗಳ ವಿವರಣೆ ಇದೆ.

ಈ ಪಾಳಯಗಾರರಲ್ಲಿ ಕಲಹಗಳೂ ರಾಜ್ಯದ ಒತ್ತುವರಿಗಳೂ ಸಾಮಾನ್ಯವಾಗಿದ್ದವು. ಪ್ರಬಲರ ಅಧಿಕಾರ ಹೆಚ್ಚು ಎಂಬುದು ಅಂಗೀಕೃತ ನಿಯಮಾವಳಿಯ ಒಂದು ಅಂಶವಾಗಿತ್ತು. ಮೈಸೂರು ರಾಜರುಗಳು ಬಲಿಷ್ಠರಾಗುತ್ತ ಬಂದಹಾಗೆಲ್ಲ ಪಾಳಯಗಾರರ ಸ್ವಾತಂತ್ರ್ಯ ಕಡಿಮೆಯಾಗುತ್ತಾ ಬಂತು. ತಮ್ಮ ಸರ್ವಾಧಿಕಾರವನ್ನು ಮನ್ನಿಸಿದ ಪಾಳಯಗಾರರನ್ನು ಬಿಟ್ಟು ಮಿಕ್ಕವರನ್ನು ನಿಗ್ರಹಿಸಿ ಅವರ ರಾಜ್ಯಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳುತ್ತಿದ್ದ ರೂಢಿ ಸಾಮಾನ್ಯವಾಗಿತ್ತು. ಹೈದರಾಲಿಯ ತೀವ್ರವಾದ ರಾಜಕೀಯ ಪೆಟ್ಟುಗಳಿಂದ ಪಾಳಯಗಾರರಲ್ಲಿ ಬಹುಮಂದಿ ತಮ್ಮ ರಾಜ್ಯಸಂಪತ್ತುಗಳಿಗೆ ಎರವಾದರು. ಇಂಥ ಆಕ್ರಮಣಗಳಿಂದ ಹಲವು ಚಿಕ್ಕಪುಟ್ಟ ಸಂಸ್ಥಾನಗಳು ಒಂದು ದೊಡ್ಡ ಪ್ರಭುತ್ವದ ಅಧಿಕಾರಕ್ಕೆ ಒಳಗಾಯಿತು.

ಹೊಸ ವಿಚಾರಗಳು ಜಾರಿಗೆ ಬರುತ್ತವೆ, ಹಳೆಯ ವಿಚಾರಗಳು ಅಳಿಯುತ್ತವೆ. ಪುಟ್ಟಣ್ಣನವರು ಈ ಕೃತಿಗಳ ರಚನೆಗೆ ಕೈ ಹಾಕುವ ಕಾಲಕ್ಕೆ ಪಾಳಯಪಟ್ಟುಗಳ ಕುರುಹುಗಳು ಕೂಡ ವಿರಳವಾಗಿದ್ದವು. ಸ್ಥಿತ್ಯಂತರಕ್ಕೊಳಗಾದ ಪಾಳಯಗಾರರ ವಂಶಸ್ಥರು ಕಾಲಕ್ಕೆ ಹೊಂದಿಕೊಳ್ಳಬೇಕಾದ ಪರಿಸ್ಥಿತಿಯನ್ನು ಪುಟ್ಟಣ್ಣನವರು ಸೂಚಿಸಿದ್ದಾರೆ.

'ಚಿತ್ರದುರ್ಗ ಪಾಳಯಗಾರರು' 1924ರಲ್ಲಿ ರಚಿತವಾಯಿತು. ಚಿತ್ರದುರ್ಗ ತಾಲ್ಲೂಕು ಸುಲ್ತಾನಿಪುರದ ಶಾನುಭೋಗ ಚಿನ್ನದವನೆ ರಾಮಣ್ಣ ಎಂಬುವವರ ಬಳಿ ದೊರಕಿದ ಒಂದು ಓಲೆಪ್ರತಿ, ಚಿತ್ರದುರ್ಗ ಪಾಳಯಗಾರರ ವಂಶಸ್ಥ ಬಸಪ್ಪನಾಯಕರು ಕೊಟ್ಟ ಬಖೈರಿನ ಪ್ರತಿ, ಕಡೇ ಮದಕರಿ ನಾಯಕನ ಚರಿತ್ರೆಯ ಪ್ರತಿ ಹಾಗೂ ಮೈಸೂರು ಗೆಜೆಟಿಯರ್‌ಗಳು ಈ ಕೃತಿಗೆ ಆಕರಗ್ರಂಥಗಳು. "ಇವುಗಳ ಮತ್ತು ಶಾಸನಗಳ ಆಧಾರದ ಮೇಲೆ ಈಗಿನ ಕಾಲದ ಪುಸ್ತಕಗಳ ರೀತಿಯಲ್ಲಿ ಒಂದು ಪ್ರತಿಯನ್ನು ಬರೆದಿದೇನೆ" (ಚಿತ್ರದುರ್ಗದ ಪಾಳಯಗಾರರು, ಪೀಠಿಕೆ ಪು. 5) ಎಂದು ಪುಟ್ಟಣ್ಣನವರು ಹೇಳಿದ್ದಾರೆ. ಇಲ್ಲಿ 'ಈಗಿನ ಕಾಲದ' ಎಂಬ ಮಾತು ಬಹು ಮುಖ್ಯ. ಸಂವಹನ ಎಂಬುದು ಪುಟ್ಟಣ್ಣನವರು ಎಂದೂ ಮರೆಯದಿದ್ದ ಒಂದು ಗುಣ. "ರ್ಸ 1565ನೇ ಈಸವಿಯಲ್ಲಿ ನಡೆದ ತಾಳಿಕೋಟೆಯುದ್ಧದಲ್ಲಿ ತುರಕರು ವಿಜಯನಗರ ಸಂಸ್ಥಾನವನ್ನು ಮುರಿದಾಗಿನಿಂದ ಶ್ರೀಮರ್ಜ ಮೈಸೂರ ಮಹಾರಾಜರವರ ಪೂರ್ವಿಕರು ಹೊಂದಿದ ವಿಜಯ, ನವಾಬ ಹೈದರಲ್ಲಿಖಾರ್ನ ಈತನ ಮಗ ಟೀಪು ಸುಲ್ತಾರ್ನ ಈ ತಂದೆ ಮಕ್ಕಳು ಎಲ್ಲವನ್ನೂ ಆಕ್ರಮಿಸುವ ರೀತಿಯಲ್ಲಿ ಮಾಡಿದ ಒಟ್ಟುಗಾಗಳ, ಸಹಾ ಜರಗುವವರೆಗೂ, ದಕ್ಷಿಣದೇಶದಲ್ಲಿ ನಡೆದ ಸುಮಾರು 250 ವರ್ಷಗಳ ಚರಿತ್ರೆಯು ಇದುವರೆಗೆ ಹೊರಪಟ್ಟಿಲ್ಲ. ಇದು ಕೃಷ್ಣಾನದಿಗೆ ದಕ್ಷಿಣದಲ್ಲಿ ವಿಶೇಷವಾಗಿದ್ದ ಪಾಳಯಪಟ್ಟುಗಳ ಚರಿತ್ರೆಯೇ ಆಗಿದೆ." (ಚಿತ್ರದುರ್ಗದ ಪಾಳಯಗಾರರು, ಪೀಠಿಕೆ ಪು. 5)

ಚಿತ್ರದುರ್ಗದ ಪಾಳಯಗಾರರಲ್ಲಿ ಎರಡು ಮುಖ್ಯ ಮನೆತನಗಳು ಪಾಲುಗೊಳ್ಳುತ್ತವೆ. ಕ್ರಿ.ಶ. 1555 ರಲ್ಲಿ ರಾಜ್ಯಸ್ಥಾಪನೆ ಮಾಡಿದವರು ಮತ್ತಿಸಂತತಿಯವರು. ವಿಜಯನಗರದವರು ಕ್ರಿ. ಶ. 1567 ರಲ್ಲಿ ಮತ್ತಿ ತಿಮ್ಮಣ್ಣನಾಯಕನನ್ನು ಚಿತ್ರದುರ್ಗದ ನಾಯಕನನ್ನಾಗಿ ನೇಮಿಸಿದರು. ಈ ಸಂತತಿಯಲ್ಲಿ ಒಟ್ಟು ಆರುಜನ ಆಳಿದರು. ಅನಂತರ ಸೈನ್ಯದವರು ದಂಡೆದ್ದು ಮತ್ತಿ ರಾಜಸಂತತಿ ಹಾಳಾಯಿತು. ಅನಂತರ ನಾಲ್ವರು ಬಿಳಿಚೋಡು ಸಂತತಿಯವರು ರಾಜ್ಯವಾಳಿದರು. ಈ ಸಂತತಿಯ ಪ್ರಥಮ ಪಾಳೆಯಗಾರ ಭರಮಪ್ಪ ಬಹು ಪ್ರಸಿದ್ಧನಾದವನು. ಇವನ ಕಾಲದಲ್ಲಿ ರಾಜ್ಯವಿಸ್ತರಣೆ ಬಹಳ ಚೆನ್ನಾಗಿ ಆಯಿತು. ಮೊಗಲರೊಡನೆಯೂ ಮರಾಟೆಯವರೊಡನೆಯೂ ಸ್ನೇಹಸಂಬಂಧಗಳಿದ್ದುವು. ಮುಲ್ಕೀ ಕಂದಾಯ ಒಂದು ಶಿಸ್ತಿಗೆ ಒಳಪಟ್ಟಿತ್ತು. ಮತ್ತಿ ಹಾಗೂ ಬಿಳಿಚೋಡು ಸಂತತಿಗಳಿಂದ ಒಟ್ಟು 10 ಜನ ದೊರೆಗಳು

211 ವರ್ಷಗಳ ಕಾಲ (ಕ್ರಿ. ಶ. 1567 ರಿಂದ ಕ್ರಿ. ಶ. 1778 ರವರೆಗೆ) ಆಳಿದರು. ಇವರಲ್ಲಿ ಎಲ್ಲರೂ ಶೂರ ದೊರೆಗಳೇ. ರಾಜ್ಯವಿಸ್ತರಣೆ ಹಾಗೂ ಆದಾಯವನ್ನು ಹೆಚ್ಚಿಸಿಕೊಳ್ಳಬೇಕೆಂಬ ಬಯಕೆ ಎಲ್ಲರಿಗೂ ಇತ್ತು. ಸಮರ್ಥರಾದ ಪ್ರಧಾನಿಗಳ ಮಂತ್ರಾಲೋಚನೆಯಿಂದ ಎಲ್ಲವೂ ಸಾಧಿತವಾಗುತ್ತಿತ್ತು. ಈ ದೊರೆಗಳು ಶೈವ ಭಕ್ತರೂ ದೇವರ ಸೇವೆಗೆಂದೇ ಹಲವು ತೋಟ, ದೇವಾಲಯುಗಳನ್ನು ನಿರ್ಮಿಸಿದ ವರೂ ಆಗಿದ್ದರು. ಪ್ರಜೆಗಳಲ್ಲಿ ಅನುಕಂಪಶಾಲಿಗಳಾಗಿದ್ದರು. ರಾಜರೆಂದರೆ ಜೀವ ಕೊಡುತ್ತಿದ್ದ ಪ್ರಜೆಗಳು, ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ರಾಜರು ಆಗಿನ ಭಾಗ್ಯವಾಗಿತ್ತು.

ಮೊಗಲರ, ಮರಾಟೆಯುವರ ಇತರ ಅಸೂಯಾಪರ ರಾಜರ ಕಾಟಗಳ ನಿವಾರ ಣೆಗಾಗಿ ಸೈನ್ಯವ್ಯವಸ್ಥೆ ಸದಾ ಸಿದ್ಧವಾಗಿರುತ್ತಿತ್ತು. ಯಾವ ದೊರೆಯ ಆಳ್ವಿಕೆಯಲ್ಲೂ ಯುದ್ಧಗಳಿಲ್ಲದೆ ಇರಲಿಲ್ಲ. ಪುರಾತನ ಪದ್ಧತಿಯ ಕುಶಲವಾದ ಯುದ್ಧವ್ಯವಸ್ಥೆಗಳು ಸಿದ್ಧವಿದ್ದುವು. ಕೋಟೆಯ ರಕ್ಷಣಾ ವಿಧಾನಗಳು ಅತ್ಯಂತ ಚತುರವಾಗಿದ್ದವು. ಸೈನ್ಯ ದವರಿಗೆ ವಿಶೇಷ ಸವಲತ್ತುಗಳು ಲಭ್ಯವಾಗಿದ್ದುವು. ಕ್ಷಾಮರೋಗಗಳ ಹಾವಳಿ ಇಲ್ಲೂ ಇತ್ತು.ಗ್ರಾಮಗಳ ಬಾರಾಬಲೂತಿ ಪದ್ಧತಿ ಇವರ ಕಾಲದಲ್ಲಿ ಜಾರಿಗೆ ಬಂತು. ಗ್ರಾಮಗಳ ಮುಖ್ಯವಾದ 12 ಜನ ಆಯಗಾರರು ಸರಕಾರದಿಂದ ನೇಮಿಸಲ್ಪಡುತ್ತಿದ್ದರು. ಅವರಲ್ಲಿ ನಿಜ ಆಯಗಾರರು ಮತ್ತು ಅರೆ ಆಯಗಾರರು ಎಂಬ ಎರಡು ವಿಧ. ಪ್ರತಿಗ್ರಾಮದಲ್ಲಿ ಆರು ಜನ ನಿಜ ಆಯಗಾರರು (ಗೌಡ, ಶಾನುಭೋಗ, ಬಡಗಿ, ಕಮ್ಮಾರ, ತಳವಾರ ಮತ್ತು ಬೇಗಾರ) ಆರು ಜನ ಅರೆ ಆಯಗಾರರು (ಜೋಯಿಸ ಕುಂಬಾರ, ನಾಪಿತ, ಅಗಸ, ನೀರಗಂಟಿ, ಅಕ್ಕಸಾಲೆ) ಇರುತ್ತಿದ್ದರು.

ವಿಜಯನಗರಕ್ಕೂ ಚಿತ್ರದುರ್ಗಕ್ಕೂ ಹಾರ್ದಿಕ ಸಂಬಂಧವಿತ್ತು. ಒಟ್ಟಿನಲ್ಲಿ ಸರ್ವಾಧಿಕಾರವನ್ನು ಮನ್ನಿಸುವ ವಿನಯ ಚಿತ್ರದುರ್ಗದವರಲ್ಲಿದ್ದರೆ, ತಮ್ಮ ಉದ್ದೇ ಶಕ್ಕೆ ಭಂಗ ತರದ ಚಿತ್ರದುರ್ಗದ ನಾಯಕರಲ್ಲಿ ವಿಜಯನಗರದರಸರಿಗೆ ಅಭಿಮಾನ ವಿತ್ತು. ಯುದ್ಧಸಂದರ್ಭಗಳಲ್ಲಿ, ಶಾಂತಿ ನೆಲೆಸಿದಾಗ ಎರಡೂ ವೇಳೆಗಳಲ್ಲಿ ಪರಸ್ಪರ ಹೊಂದಾಣಿಕೆ ಇತ್ತು. "ಹೀಗೆ ಚಿತ್ರದುರ್ಗಜಿಲ್ಲೆಯು ವಿಜಯನಗರದ ಕಾಲದಲ್ಲಿ ಆ ಸಾಮ್ರಾಜ್ಯದ ಭಾಗವಾಗಿದ್ದು, ಅದರ ಆಸೆ, ಆಕಾಂಕ್ಷೆಗಳನ್ನು ಪೂರೈಸುವ ಬಹು ಮುಖ್ಯವಾದ ಘಟಕವಾಗಿತ್ತು. ವಿಜಯನಗರ ಅರಸರು ಪರಂಪರೆಯಿಂದ ಬಂದಿದ್ದ ಆಡಳಿತದ ಸಂಪ್ರದಾಯಕ್ಕೆ ತಮ್ಮದೇ ಆದ ಮೆರುಗನ್ನು ಕೊಟ್ಟರು. ಪ್ರಜಾಕ್ಷೇಮ ಮತ್ತು ಹಿಂದೂಧರ್ಮದ ರಕ್ಷಣೆ ವಿಜಯನಗರ ಆಡಳಿತದ ಪ್ರಮುಖಧ್ಯೇಯಗಳಾ ಗಿದ್ದು, ಅವು ಈ ಜಿಲ್ಲೆಯಲ್ಲೂ ಅನುಷ್ಠಾನಕ್ಕೆ ಬಂದವು. ಚಿತ್ರದುರ್ಗದ ಪಾಳೆಯಗಾರ ರಂತೆಯೇ ಈ ಜಿಲ್ಲೆಯಲ್ಲಿ ಆಳಿದ ಇತರ ಪಾಳೆಯಗಾರರೂ ವಿಜಯನಗರ ಸಾಮ್ರಾಜ್ಯದ ಶಕ್ತಿಗೆ ಬೆಂಬಲವಾಗಿ ನಿಂತಿದ್ದರು; ಅವರ ಪರಂಪರೆಯಲ್ಲೇ ಸಾಗಿದರು. ವಿಜಯ ನಗರ ಪ್ರಬಲವಾಗಿರುವಷ್ಟು ಕಾಲ ಅವರ ಸಾರ್ವಭೌಮಾಧಿಕಾರಕ್ಕೆ ಈ ಜಿಲ್ಲೆಯ

ನಾಯಕರು ತಲೆಬಾಗಿ ನಡೆದರು. 1565 ರಲ್ಲಿ ಅದು ನಾಶವಾದಾಗ ಈ ಜಿಲ್ಲೆಯನ್ನು ಆಳುತ್ತಿದ್ದ ಪಾಳೆಯಗಾರರಲ್ಲಿ ಪ್ರಬಲರಾದ ಚಿತ್ರದುರ್ಗದ ಪಾಳೆಯಗಾರರು ಸರ್ವ ಸ್ವತಂತ್ರರಾದರು."[2] ಎಂಬ ಮಾತು ಸೂಕ್ತವಾದುದು.

ಚಿತ್ರದುರ್ಗದ ಸಂಸ್ಥಾನ ಒಳಜಗಳಗಳಿಂದ 1778 ರಲ್ಲಿ ನಾಶವಾಯಿತು. ಚಿತ್ರ ದುರ್ಗದ ಸಹಾಯಕ್ಕೆಂದು ಬಂದ ಮರಾಟೆಯವರು ಹೈದರನ ಮೋಸಕ್ಕೆ ಒಳಗಾಗದೆ ಇನ್ನೂ ಮೂರು ವರ್ಷಗಳು ತಡೆದಿದ್ದರೆ ಪರಿಸ್ಥಿತಿ ಹೇಗೆ ಬೇರೆಯಾಗುತ್ತಿತ್ತು ಎಂಬು ದನ್ನು ಪುಟ್ಟಣ್ಣನವರು ಸೂಚಿಸುತ್ತಾರೆ. ಒಬ್ಬ ಸಾಮಾನ್ಯ ಅಧಿಕಾರಿಯಾಗಿದ್ದ ಹೈದರ್ ತನ್ನ ತೀಕ್ಷ್ಣಮತಿಯಿಂದ ಉತ್ತರೋತ್ತರ ಅಭಿವೃದ್ಧಿ ಪಡೆದು ತನ್ನ ಶತ್ರುಗಳನ್ನು ನಿರ್ನಾಮ ಮಾಡಿ ಸ್ಪರ್ಧಿಗಳನ್ನು ಮೂಲೆಗುಂಪಾಗಿಸಿ ಮೈಸೂರು ರಾಜ್ಯದ ನಿಜವಾದ ಸೂತ್ರಧಾರನಾಗಿದ್ದನು, ಸಣ್ಣಪುಟ್ಟ ಪಾಳಯಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳು ವುದು ಹೈದರನಿಗೆ ವಿನೋದದಂತೆ ಇತ್ತು. ಅವನಿಗೆ ನಿಜವಾದ ಕಷ್ಟಕೊಟ್ಟಿದ್ದೆಂದರೆ ಚಿತ್ರದುರ್ಗದ ಮದಕರಿನಾಯಕ ಮಾತ್ರ. ಹೈದರನ ಮರಣಾನಂತರ ರಾಜ್ಯಕ್ಕೆ ಸರ್ವಾಧಿಕಾರಿಯಾದ ಟಿಪ್ಪುಸುಲ್ತಾನನು ಇಂಗ್ಲಿಷರು ಮರಾಟೆಯವರು ಮುಂತಾದವ ರೊಡನೆ ಇದ್ದ ವೈಷಮ್ಯಗಳನ್ನು ತೀರಿಸಲು ವೇಳೆ ತೆಗೆದುಕೊಂಡನೇ ಹೊರತು, ಇತರ ಸಂಸ್ಥಾನಗಳ ಮೇಲೆ ದಂಡೆತ್ತಿ ಬರಲು ಹೆಚ್ಚು ಉತ್ಸುಕನಾಗಿರಲಿಲ್ಲ, ಅವನಿದ್ದ ರಾಜ ಕೀಯ ಪರಿಸ್ಥಿತಿಯಲ್ಲಿ ಅದು ಸಾಧ್ಯವೂ ಇರಲಿಲ್ಲ. ಆಗ ಬಹುಶಃ ಚಿತ್ರದುರ್ಗ ಸಂಸ್ಥಾನ ಉಳಿದು, ಅವರು ಸಹಾಯ ಮಾಡಿದ ಮರಾಟೆಯವರಿಗೆ ದಕ್ಷಿಣದಲ್ಲಿ ಪ್ರಾಬಲ್ಯ ಹೆಚ್ಚಾಗುತ್ತಿತ್ತು. ಆಗ ಚರಿತ್ರೆ ಬೇರೆಯಾಗುತ್ತಿದ್ದ ಸಂಭವವನ್ನು ಪುಟ್ಟಣ್ಣನವರು ಗುರುತಿಸಿದ್ದಾರೆ.

'ಗುಮ್ಮನಾಯಕನ ಪಾಳಯದ ಪಾಳಯಗಾರರು' 1926 ರಲ್ಲಿ ರಚಿತವಾ ಯಿತು. ಈ ಪಾಳಯಗಾರರ ವಂಶಸ್ಥರಾದ ರಾಮಲಿಂಗಪ್ಪನಾಯಕರು ಹಾಗೂ ಬಂಗಾರಪ್ಪನಾಯಕರು ಹೊಂದಿದ್ದ ಅವರ ಪೂರ್ವಿಕರ ಚರಿತ್ರೆಯ ಪ್ರತಿಯೊಂದೇ ಮೂಲಾಧಾರ. ಇದರಲ್ಲಿ ಒಬ್ಬ ದೊರೆ ತೀರಿದ ವರ್ಷ, ಮತ್ತೊಬ್ಬ ಪಟ್ಟಕ್ಕೆ ಬಂದ ವರ್ಷಗಳನ್ನು ಬಿಟ್ಟರೆ ಇತರ ಮುಖ್ಯ ಘಟನೆಗಳ ವರ್ಷಗಳಿರಲಿಲ್ಲವೆಂದು ಪುಟ್ಟಣ್ಣನ ವರು ಹೇಳಿದ್ದಾರೆ. ಮೈಸೂರು ಗೆಜೆಟಿಯರ್‌ಗಳು, ಬುಕನನ್ನನ ಚರಿತ್ರೆ, ಮೆಕೆಂಜಿಯ ಹಸ್ತಪ್ರತಿಗಳು, ಸುವೆಲ್ ಬರೆದ ವಿಜಯನಗರದ ಚರಿತ್ರೆ, ಸೂರ್ಯನಾರಾಯಣರಾವ್ ಬರೆದ ವಿಜಯನಗರದ ಚರಿತ್ರೆ—ಮೊದಲ ಸಂಪುಟ ಹಾಗೂ ರೈಸರ ಶಾಸನ ಸಂಪುಟ ಗಳು ಮಿಕ್ಕ ಆಕರ ಸಾಮಾಗ್ರಿಗಳು. ದೊರೆಯುತ್ತಿದ್ದ ಎಲ್ಲ ಸಾಮಗ್ರಿಯನ್ನು ವ್ಯವ ಸ್ಥಿತವಾಗಿ ಕಲೆ ಹಾಕಿರುವುದು ಪುಟ್ಟಣ್ಣನವರ ಶ್ರಮದ ಫಲವಾಗಿದೆ.

ಬಾಗಿಪಲ್ಲಿ, ಕೊಡಿಕೊಂಡ ಮುಂತಾದ ಗೋರಂಟಲ ಸಮ್ಮತೂ, ಕಂದಕೂರು ಪ್ರಾಂತದ ಸುತ್ತ ಇರುವ ಕೆಲವು ಪ್ರದೇಶಗಳೂ ಒಟ್ಟಾಗಿ ಸೇರಿ ಗುಮ್ಮನಾಯಕನ ಪಾಳಯದ ರಾಜ್ಯವಾಗಿತ್ತು. ಇವರ ರಾಜಧಾನಿ ಕಲ್ಯಾಣನಗರ. ಈ ವಂಶದಲ್ಲಿ ಒಟ್ಟು

25 ಜನ ಪಾಳಯಗಾರರು, 560 ವರುಷಗಳ ಕಾಲ (ಕ್ರಿ. ಶ. 1243–1803) ಆಳಿದರು. ದೀರ್ಘಕಾಲದ ಪ್ರಭುತ್ವವನ್ನು ಹೊಂದಿದ್ದವರು ಇಬ್ಬರು – ಹಿರಿಸಿಂಗಪ್ಪ ನಾಯಕ (69 ವರ್ಷ), ಮುಮ್ಮಡಿ ವಸಂತನಾಯಕ (60 ವರ್ಷ). ಎಲ್ಲ ದೊರೆಗಳಿಗೂ ಸಂತಾನವಿದ್ದು, ಔರಸಪುತ್ರರಿಗೇ ಪಟ್ಟವಾಯಿತು. ಯಾರೂ ದತ್ತು ಸ್ವೀಕಾರ ಮಾಡಲಿಲ್ಲ. ನಾಲ್ಕನೇ ಪಾಳಯಗಾರನಾದ ಗುಮ್ಮನಾಯಕನ ಕಾಲದಿಂದ ಇವರು ವಿಜಯನಗರದವರ ಅಧೀನರಾದರು. ಮುಂದೆ ಸಮಯ ಬಂದಾಗೆಲ್ಲಾ ವಿಜಯನಗರದವರಿಗೆ ತಮ್ಮ ಸೇವೆಯನ್ನು ಮೀಸಲು ಮಾಡಿದರು. ಯುದ್ಧಕಾಲದಲ್ಲಿ ಪರಾಕ್ರಮವನ್ನು ಜೊತೆಗೂಡಿಸಿದರು, ಶಾಂತಿಕಾಲದಲ್ಲಿ ಸೌಹಾರ್ದಹಸ್ತವನ್ನು ನೀಡಿದರು. ವಿಜಯನಗರದವರು ಈ ಪಾಳಯಗಾರರ ಶೌರ್ಯ ಹಾಗೂ ವಿನಯಗಳಿಗೆ ಮೆಚ್ಚಿ ಹಲವು ಬಿರುದುಗಳನ್ನು ಜಹಗೀರುಗಳನ್ನು ಕೊಟ್ಟರು. ಏಳನೇ ದೊರೆ ಹಿರಿಕದರಪ್ಪನಾಯಕನ ಕಾಲದಲ್ಲಿ ಈ ಪಾಳಯಕ್ಕೆ ಸಂಸ್ಥಾನದ ದರ್ಜೆ ಲಭಿಸಿತು. ವಿಜಯನಗರದವರಿಗೆ ತಾಳಿಕೋಟೆಯಲ್ಲಿ ಭಾರಿ ಸೋಲಾದ ಮೇಲೂ ಇವರು ಸ್ವಾಮಿಭಕ್ತಿಯನ್ನು ಬಿಡದೆ ಅವರಿಗೆ ಪೊಗದಿಯನ್ನು ಕೊಡುತ್ತಲೇ ಇದ್ದರು. ಹೈದರಾಬಾದಿನ ನಿಜಾಮರು, ಮರಾಟೆಯವರು, ಮೈಸೂರಿನ ಹೈದರಾಲಿ ಇವರುಗಳ ಧಾಳಿಗಳು, ಇಂಗ್ಲಿಷರ ಮೋಸ ಇವುಗಳಿಂದ ಗುಮ್ಮನಾಯಕನ ಪಾಳಯ ಹರಿದು ಹಂಚಿಹೋಯಿತು.

ಈ ಪಾಳಯಗಾರರು ಹೆಚ್ಚಿನವುಟ್ಟಿಗೆ ತಮ್ಮ ಶ್ರಮದಿಂದ ಕಾಡುಮೇಡುಗಳನ್ನು ಕಡಿದು ಹೊಸಗ್ರಾಮಗಳನ್ನು ಕಟ್ಟಿ ದೇಶಾಭಿವೃದ್ಧಿ ಮಾಡಿದರು. ಕೆಲವು ಪ್ರದೇಶಗಳನ್ನು ಚಕ್ರವರ್ತಿಗಳಿಂದ ಇನಾಮಾಗಿ ಕೆಲವನ್ನು ಮರಾಟೆಯವರಿಂದ ಕ್ರಯಕ್ಕೆ ಪಡೆದರು. ರಾಜ್ಯಭಾರಕ್ರಮ ಉಚಿತರೀತಿಯಲ್ಲಿತ್ತು. ಹಲವು ಹೊಸ ಇಲಾಖೆಗಳು ಏರ್ಪಟ್ಟಿದ್ದವು. ನಾಲ್ವಡಿ ನಾರಸಿಂಹನಾಯಕನ ಹೆಸರು ವಿಶೇಷ ಗಮನಾರ್ಹವಾದುದು. ದೊರೆ ವಾರಕ್ಕೆ ಮೂರುದಿನ ಪ್ರಜೆಗಳ ಕಷ್ಟಸುಖ ನಿವಾರಣೆ, ಸರ್ಕಾರದ ಲೆಕ್ಕಪತ್ರಗಳು ರಾಜಕೀಯ ವ್ಯಾಪಾರಗಳ ನಿಲುವಳಿಗಳನ್ನು ನಿಯಮನ ಮಾಡುತ್ತಿದ್ದನು. ರಾಮಕ್ಕ ನಾಯಕರಾಲು ಮೊದಲಾದ ರಾಣಿಯರೂ ಕೂಡ ಮಂತ್ರಾಲೋಚನೆಯಲ್ಲಿ ಪಳಗಿದವರಾಗಿದ್ದರು. ಬಟಾಯಿ ಸಾಗುವಳಿ, ಕಂದಾಯ ಸಾಗುವಳಿಗಳು ಎರಡೂ ಪ್ರಚಲಿತವಿದ್ದುವು. ಭೂ ಕಂದಾಯ ನಿಗದಿ ಸುವ್ಯವಸ್ಥಿತವಾಗಿತ್ತು. ಲೆಕ್ಕಪತ್ರ ವ್ಯವಹಾರ ಅಚ್ಚುಕಟ್ಟಿನಲ್ಲಿತ್ತು. ದಾನಧರ್ಮಗಳಿಗೆ ಪ್ರೋತ್ಸಾಹವಿತ್ತು. ಸೇನೆಯಲ್ಲಿ ಹೆಚ್ಚಾದ ಜನಗಳಿಗೆ ಬೇರೆ ಉದ್ಯೋಗಗಳನ್ನು ಕೊಟ್ಟು ಅಗತ್ಯವಿದ್ದಾಗ ಸೇನೆಯ ಕೆಲಸಗಳಿಗೆ ಬರಬೇಕೆಂದು ತಿಳಿಸಲಾಗಿತ್ತು. ಅಪರೂಪವಾಗಿ ಸಹಗಮನಪದ್ಧತಿ ಕಂಡುಬರುತ್ತಿತ್ತು. ಪ್ರಜೆಗಳು ದಂಗೆ ಎದ್ದಾಗ ಕಠಿಣಶಿಕ್ಷೆಗಳ ಮೂಲಕ ಅಡಗಿಸಲಾಗುತ್ತಿತ್ತು. ಇಂಗ್ಲಿಷರ ಪೊಳ್ಳು ಆಶ್ವಾಸನೆಗಳನ್ನು ನಂಬಿದ ನಾರಸಿಂಹನಾಯಕನ ಕಾಲಕ್ಕೆ ಈ ಪಾಳಯ ಹೋಯಿತು.

'ಹಾಗಲವಾಡಿ ಪಾಳಯಗಾರರು' 1931ರಲ್ಲಿ ಪುಟ್ಟಣ್ಣನವರು ದಿವಂಗತರಾದ

ಮರುವರ್ಷ ಪ್ರಕಟವಾಯಿತು. ಹಾಗಲವಾಡಿ ಪಾಳಯಗಾರರ ವಂಶಸ್ಥರಾದ ಬಸವ ಲಿಂಗರಾಜರಲ್ಲಿದ್ದ, ಹಳೆಯ ದಾಖಲೆಗಳನ್ನೊಳಗೊಂಡ ಒಂದು ಕಾಗದ ಈ ಕೃತಿಗೆ ಮೂಲಾಧಾರ. ಮನ್ನಾರೈಯ್ಯ ಎಂಬುವವರು ಕೆಲವು ದಾಖಲೆಗಳನ್ನು ದೊರಕಿಸಿದ್ದಾಗಿ ತಿಳಿಯುತ್ತದೆ. ಬೇರೆ ಹೆಚ್ಚು ಸಾಮಗ್ರಿ ದೊರಕಿಲ್ಲ. "ಯುದ್ಧಗಳಲ್ಲಿಯಾಗಲಿ, ರಾಜ್ಯಭಾರಕ್ರಮದಲ್ಲಿಯಾಗಲೀ, ಈ ರಾಜ್ಯದಲ್ಲಿ ಹುಟ್ಟಿದ ಗ್ರಂಥಗಳಿಗಾಗಲಿ, ಲೋಕೋಪಕಾರವಾದ ಕಟ್ಟಡಗಳಿಗಾಗಲಿ, ಮತ್ತೆ ಯಾವ ಕುಶಲ ವಿದ್ಯಕ್ಕೇ ಆಗಲಿ ಈ ಸಂಸ್ಥಾನವು ಹೆಸರನ್ನು ಪಡೆದಿರಲಿಲ್ಲ." (ಹಾಗಲವಾಡಿ ಪಾಳಯಗಾರರು, ಪೀಠಿಕೆ ಪು. V) ಎಂದು ಪುಟ್ಟಣ್ಣನವರು ತಿಳಿಸಿದ್ದಾರೆ.

ಹಾಗಲವಾಡಿ ಪಾಳಯದ ಮುಖ್ಯಪಟ್ಟಣ ಗುಬ್ಬಿ ತಾಲ್ಲೂಕಿನ ಹಾಗಲವಾಡಿ. ಈ ಪಾಳಯಗಾರರ ವಂಶಕ್ಕೆ ಮೂಲಪುರುಷ ಎರಿಮಾದನಾಯಕ. ಈ ಪಾಳಯವನ್ನು ಒಟ್ಟು 13 ಜನ ಪಾಳಯಗಾರರು 298 ವರ್ಷಗಳ ಕಾಲ (1478—1776 ರ ವರೆಗೆ) ಆಳಿದರು. ಪ್ರಜಾಕ್ಷೇಮಕ್ಕಾಗಿ ಅನೇಕ ಜಲಾಶಯಗಳನ್ನು ನಿರ್ಮಾಣ ಮಾಡಿದರು. ದೇವಾಲಯಗಳನ್ನು ನಿರ್ಮಿಸಿದರು. ಶಿವಭಕ್ತರಾದ ಇವರಿಗೆ ಸ್ವಮತಾಭಿಮಾನವಿದ್ದರೂ ಅನ್ಯಮತವೈರವಿರಲಿಲ್ಲ. ಹಲವುಬಾರಿ ರಾಜ್ಯವಿಸ್ತರಣೆ, ರಾಜ್ಯನಷ್ಟ, ಯುದ್ಧ ಪ್ರಮೇಯಗಳು ಇವುಗಳೆಲ್ಲ ಈ ಪಾಳಯಗಾರರಿಗೂ ಸಾಮಾನ್ಯವಾದ ರೂಢಿಗತ ಸಂಗತಿಗಳಾಗಿದ್ದವು. ಈ ಪಾಳಯಗಾರರಲ್ಲಿ 9ನೆಯವನಾದ ಇಮ್ಮಡಿ ಮುದಿಯಪ್ಪನಾಯಕ ಬಹಳ ಸದ್ಗುಣಶೀಲನಾಗಿ ರಾಜರ್ಷಿ ಎಂಬ ಹೆಸರಿಗೆ ಪಾತ್ರನಾಗಿದ್ದು ಸತ್ಯದಿಂದ ಪ್ರಭುತ್ವಪಾಲನೆ ಮಾಡಿ, ಅನಂತರ ಸನ್ಯಾಸ ಸ್ವೀಕಾರ ಮಾಡಿ ತಪಸ್ಸಿಗಾಗಿ ಹೊರಟುಹೋದನು. ಈತನ ಮಗ ಮುದ್ದುವೀರಪ್ಪನಾಯಕನ ಕಾಲದಲ್ಲಿ ಹೈದರಾಬಾದಿನ ಸಲಾಬತ್‌ಜಂಗನು ಯುದ್ಧಕ್ಕೆ ಬಂದು ಸೋತುಹೋದನು. 12ನೇ ಪಾಳಯಗಾರ ಚನ್ನಬಸಪ್ಪನಾಯಕನನ್ನು ಹೈದರಾಲಿ ಮೋಸದಿಂದ ಶ್ರೀರಂಗ ಪಟ್ಟಣದಲ್ಲಿ ಸೆರೆಯಲ್ಲಿಟ್ಟಾಗ ಅವನು ಅಲ್ಲೇ ಸತ್ತು ಆತನ ಮಗ ಮುಮ್ಮಡಿ ಮುದಿಯಪ್ಪನಾಯಕನಿಗೆ ಪಟ್ಟವಾಯಿತು. ಹೈದರಾಲಿಯು ಈತನು ಎಳೆಹುಡುಗನೆಂದು ಆ ಬಾಲಕನ ಜೀವನಕ್ಕಾಗಿ ಮೂರು ಹಳ್ಳಿಗಳನ್ನು ಮಾತ್ರ ಬಿಟ್ಟು ಮಿಕ್ಕ ಇಡೀ ಹಾಗಲವಾಡಿ ಪಾಳಯವನ್ನು ಶ್ರೀರಂಗಪಟ್ಟಣಕ್ಕೆ ಸೇರಿಸಿಕೊಂಡುಬಿಟ್ಟನು.

'ಇಕ್ಕೇರಿ ಸಂಸ್ಥಾನದ ಚರಿತ್ರೆ'ಯೂ 1931ರಲ್ಲಿ ಪುಟ್ಟಣ್ಣನವರು ದಿವಂಗತರಾದ ಮರುವರ್ಷ ಪ್ರಕಟವಾಯಿತು. 'ಕೆಳದಿನೃಪ ವಿಜಯ,' ರೈಸ್ ಗೆಜೆಟೀರುಗಳು, ಮೈಸೂರು ಶಾಸನಗಳು, ಪಾದ್ರಿಸುವೆಲ್ ಸಾಹೇಬರ ವಿಜಯನಗರ ಚರಿತ್ರೆ, ಫೆರಿಪ್ತನೆಂಬ ಪಾರ್ಷಿ ಗ್ರಂಥಕರ್ತನ ದಕ್ಷಿಣ ದೇಶದ ಮುಸಲ್ಮಾನರ ಚರಿತ್ರೆ, ಬುಕನನ್ನನ ಚರಿತ್ರೆ, ಸ್ಟ್ಯೂವರ್ಟನ ಲೇಖನ, ಕೆಳದಿರಾಜರ ವಂಶಸ್ಥರಾದ ಸೋಮಶೇಖರ ರಾಜರು ಕೊಟ್ಟ ಹಳೆಯ ದಾಖಲೆಗಳು, ಮರಾಠಿ ಕಾಗದಗಳು ಈ ಕೃತಿಗೆ ಮೂಲಸಾಮಗ್ರಿಯನ್ನು ಒದಗಿಸಿವೆ.

ವಿಜಯನಗರದವರು ಏರ್ಪಡಿಸಿದ ಹಲವು ಪಾಳಯಪಟ್ಟುಗಳಲ್ಲಿ ಇಕ್ಕೇರಿ ಸಂಸ್ಥಾನವೂ ಒಂದು. ಮೂಲಪುರುಷ ಚೌಡಪ್ಪನಾಯಕ, ಒಟ್ಟು 18 ದೊರೆಗಳು, 264 ವರ್ಷಗಳ ಆಳ್ವಿಕೆ, ಕ್ರಿ. ಶ. 1500 ರಿಂದ 1763ರವರೆಗೆ ಇವರ ರಾಜ್ಯಭಾರ. ವಿಜಯನಗರದವರ ಕೃಪಾಕಟಾಕ್ಷ ಇವರ ಮೇಲೆ ಚೆನ್ನಾಗಿತ್ತು. ಅದಕ್ಕೆ ತಕ್ಕಂತೆ ಈ ಕೆಳದಿ ಅರಸರೂ ಮೊದಲಿನಿಂದಲೂ ವಿಜಯನಗರದವರಲ್ಲಿ ಭಕ್ತಿವಿಶ್ವಾಸಗಳಿಂದ ನಡೆಯುತ್ತಿದ್ದರು. ಅವರಿಗೆ ತಾಳಿಕೋಟೆ ಯುದ್ಧದಲ್ಲಿ ಸೋಲಾದ ಮೇಲೂ ಅವರ ವಿಷಯದಲ್ಲಿ ಭಯಭಕ್ತಿಗಳನ್ನು ತಾಳಿದ್ದರು. ಇವರಲ್ಲಿ ಹೆಚ್ಚಿನ ಮಂದಿ ಪರಾಕ್ರಮಿಗಳು. 8ನೇ ದೊರೆ ಶಿವಪ್ಪನಾಯಕ, ಹಾಗೂ 13ನೇ ರಾಜಪದವಿಯನ್ನು ಪಡೆದ ಚನ್ನಮ್ಮಾಜಿ ಇಬ್ಬರೂ ಒಳ್ಳೆಯ ರಾಜತಜ್ಞರು. 12ನೇ ದೊರೆ ಕುತ್ಸಿತ ಶಿವಪ್ಪ ನಾಯಕ, 18ನೇ ದೊರೆ ಸೋಮಶೇಖರನಾಯಕ ಇಬ್ಬರೂ ನೆಪಮಾತ್ರದ ದೊರೆಗಳು, 4ನೇ ದೊರೆ ಚಿಕ್ಕಸಂಕಣ್ಣನಾಯಕ, 6ನೇ ದೊರೆ ಹಿರೀವೆಂಕಟಪ್ಪನಾಯಕ, 7ನೇ ದೊರೆ ವೀರಭದ್ರನಾಯಕ, 8ನೇ ದೊರೆ ಶಿವಪ್ಪನಾಯಕ 15ನೇ ದೊರೆ ಇಮ್ಮಡಿ ಸೋಮ ಶೇಖರ ನಾಯಕ ಮತ್ತು 16ನೇ ದೊರೆ ಬೂದಿಬಸಪ್ಪ ನಾಯಕರ ಕಾಲದಲ್ಲಿ ರಾಜ್ಯ ವಿಸ್ತಾರ ಬಹುವಾಗಿ ಆಯಿತು. 15ನೇ ಇಮ್ಮಡಿ ಸೋಮಶೇಖರ ನಾಯಕ ಶಾಂತಿ ಪಾಲನೆಗಾಗಿ ಹೆಸರಾಗಿದ್ದನು. ವಿಜಯನಗರದ ಪತನವಾದ ಮೇಲೆ ತಿರುಮಲರಾಯನ ವಂಶೀಯರಾದ ಶ್ರೀರಂಗರಾಜನಿಗೆ ಶಿವಪ್ಪನಾಯಕನು ಸಕ್ಕರೆಪಟ್ಟಣದಲ್ಲಿ ಚಕ್ರವರ್ತಿ ಎಂದು ಪಟ್ಟಾಭಿಷೇಕ ಮಾಡಿಸಿದನು.

ಬಿಜಾಪುರದ ಮುಸಲ್ಮಾನ ದೊರೆಗಳಿಗೂ ಇಕ್ಕೇರಿಯ ದೊರೆಗಳಿಗೂ ಯಾವಾಗಲೂ ಯುದ್ಧಗಳಾಗುತ್ತಿದ್ದವು. ಇಕ್ಕೇರಿ ದೊರೆಗಳು ಯುದ್ಧವನ್ನೂ ರಾಜಿ ಪ್ರಯತ್ನವನ್ನೂ ಒಟ್ಟೊಟ್ಟಿಗೇ ಮಾಡುತ್ತಿದ್ದರು. ಈ ರಾಜರ ಯುದ್ಧಪ್ರಮೇಯ ಗಳ ವಿವರಗಳಿಂದ ಹಲವು ಅಂಶಗಳು ಹೊರಪಡುವುದನ್ನು ಪುಟ್ಟಣ್ಣನವರು ಗುರುತಿಸಿದ್ದಾರೆ.

(1) ತಾಳಿಕೋಟೆ ಯುದ್ಧದಲ್ಲಿ ಅದಿಲ್‌ಷಹನು ರಾಮರಾಜನನ್ನು ಮೋಸದಿಂದ ಕೊಲ್ಲಿಸುವುದು.

(2) ಹೊಯಿಸಲ ಬಲ್ಲಾಳರ ಪೂರ್ಣಪತನ 1600ರ ನಂತರ ಎಂಬ ವಿಚಾರವನ್ನು ಗುರುತಿಸುವುದು.

(3) ಇವರ ಕಾಲದಲ್ಲಿ ಅನ್ಯದೇಶೀಯರ ಹಡಗುಗಳು ಇಲ್ಲಿ ಬಂದು ವ್ಯಾಪಾರ ಮಾಡುತ್ತಿದ್ದುದು; ವಿಜಯನಗರದವರಿಗೂ ಮೊಗಲರಿಗೂ ನಡೆಯುತ್ತಿದ್ದ ಯುದ್ಧಗಳಿಂದ ಇವರ ಹಾವಳಿ ಕಡಿಮೆಯಾಯಿತು.

(4) ಇಕ್ಕೇರಿ ಹಾಗೂ ಮೈಸೂರಿನವರಿಗೆ ಇದ್ದ ದ್ವೇಷ ಪ್ರಬಲಿಸಿ ಹೈದರಾಲಿ ಇಕ್ಕೇರಿಯನ್ನು ನಾಶಮಾಡಿದ್ದು.

(5) ಶಿವಾಜಿಯ ಎರಡನೇ ಮಗ ರಾಜಾರಾಮ ಮೊಗಲರಿಗೆ ಹೆದರಿ ಕೆಳದಿಯ

ಚನ್ನಮ್ಮಾಜಿಯು ಮರೆಹೊಕ್ಕಾಗ ಆಕೆ ರಾಜಾರಾಮನನ್ನು ಕಾಪಾಡಿದ್ದು. ಶಿವಾಜಿಯನ್ನು ಬಿಟ್ಟರೆ ಔರಂಗಜೇಬನಿಗೆ ಈ ಮಟ್ಟಿನ ಕಿರುಕುಳವನ್ನು ಕೊಟ್ಟ ಖ್ಯಾತಿಗೆ ಚನ್ನಮ್ಮಾಜಿಯೊಬ್ಬಳೇ ಪಾತ್ರಳು.

ಕೆಳದಿ ದೊರೆಗಳ ಯುದ್ಧಚಾತುರ್ಯ, ರಾಜ್ಯಭಾರಕ್ರಮಗಳು ಬಹು ಬಿಗಿಯಾಗಿದ್ದವು. ಹಲವು ಬಾರಿ ಅರಾಜಿಕ ಪರಿಸ್ಥಿತಿ ಒದಗಿದಾಗ ಶಿವಪ್ಪನಾಯಕನ ಹಾಗೂ ಚನ್ನಮ್ಮಾಜಿಯಂತಹ ಕುಶಲರಿಂದ ಸುಭದ್ರಸ್ಥಿತಿ ಏರ್ಪಟ್ಟಿತು. ಶಿವಪ್ಪನಾಯಕನ ಕಾಲದಲ್ಲಿ ಭೂಕಂದಾಯದ ಶಿಸ್ತು ಅತ್ಯಂತ ಶ್ಲಾಘನೀಯವಾಗಿ ಏರ್ಪಟ್ಟಿತು. ಶಿವಪ್ಪ ನಾಯಕನ ಶಿಸ್ತು ಎಂಬ ಮಾತು ರೂಪುಗೊಂಡಿತು. ಈ ದೊರೆಗಳು ದೇವಾಲಯ, ಬಸದಿ, ಮಸೀದಿಗಳಿಗೆ ಹಲವು ದಾನಧರ್ಮಗಳನ್ನು ಮಾಡಿದರು. ಶೃಂಗೇರಿ ಮಠಕ್ಕೆ ಇವರು ಮಾಡಿದ ದಾನಗಳಿಗೆ ಲೆಕ್ಕವಿಲ್ಲ. ಈ ದೊರೆಗಳೆಲ್ಲ ಅಕ್ಷರಸ್ಥರು, ವಿದ್ವತ್ತಿನ ಪೋಷಕರು. 6ನೇ ಹಿರಿವೆಂಕಟಪ್ಪನಾಯಕನು ಹಲವು ಕಾವ್ಯಗಳ ರಚನೆಗೆ ಪ್ರೋತ್ಸಾಹ ಕೊಟ್ಟನು. 14ನೇ ಹಿರಿಬಸಪ್ಪ ನಾಯಕನಿಗೆ 'ಸೂರಿನಿಕರ ಕಲ್ಪದ್ರುಮ' ಎಂಬ ಬಿರುದಿತ್ತು. ಇವನು ಹಲವು ತೆರಿಗೆಗಳನ್ನು ತೆಗೆದು ಹಾಕಿದನು. ಹಸಿದವರಿಗೆ ಅನ್ನ ವನ್ನೂ ಶಿಶುಗಳಿಗೆ ಹಾಲುಬೆಣ್ಣೆಯನ್ನೂ ಕೊಡುವ ವ್ಯವಸ್ಥೆ ಮಾಡಿದನು. ಸ್ತ್ರೀಯರಲ್ಲಿ ಸಹಗಮನ ಆಚರಣೆಯಲ್ಲಿತ್ತು.

## ಸಂಶೋಧಕ ಪ್ರವೃತ್ತಿ

ಪುಟ್ಟಣ್ಣನವರ ಸಂಶೋಧಕ ಪ್ರವೃತ್ತಿ ಪ್ರಖರವಾದುದು. ಸತ್ಯಕ್ಕೆ ತಲೆಬಾಗುವ, ಮರೆಯಾಗಿದ್ದ ಸೂಕ್ಷ್ಮ ವಿವರಗಳನ್ನು ಬೆಳಕಿಗೆ ತರುವ ರೀತಿಯದು. ಅವರ ಸಂಶೋಧನ ಕೃತಿಗಳಲ್ಲಿ ಇದಕ್ಕೆ ಹಲವಾರು ಉದಾಹರಣೆಗಳು ಸಿಗುತ್ತವೆ.

1. ಪಾಳಯಗಾರರನ್ನು ಕುರಿತು ತಮ್ಮ ಸಂಶೋಧನೆಗಳನ್ನು ಮುಂದುವರಿಸಿದಂತೆ ಪುಟ್ಟಣ್ಣನವರು ತಮ್ಮ ಮೊದಲಿನ ಹಲವು ಸಿದ್ಧಾಂತಗಳನ್ನು ಬೇರೆಯಾಗಿಸಿಕೊಂಡಿದ್ದು ತಿಳಿಯುತ್ತದೆ. ಪೂರ್ವಗ್ರಹಪೀಡಿತವಲ್ಲದ ಅವರ ಧೋರಣೆಗೆ ಇದು ಸಾಕ್ಷಿ.

(ಅ) ವಿಜಯನಗರ ಸಾಮ್ರಾಜ್ಯ ಪತನಾನಂತರ ಮಾತ್ರ ಪಾಳಯಪಟ್ಟುಗಳ ಅಸ್ತಿತ್ವ ಎಂಬ ತಮ್ಮ ಮೊದಲ ವಾದವನ್ನು, ಸಾಮಾನ್ಯವಾಗಿ ಅಂಗೀಕೃತವಾಗಿದ್ದ ಅಭಿಪ್ರಾಯವನ್ನು ಮುಂದೆ ತಕ್ಕ ದಾಖಲೆಗಳ ಮೂಲಕ ಪುಟ್ಟಣ್ಣನವರು ನಿರಾಕರಿಸಿದರು. ವಿಜಯನಗರ ಸ್ಥಾಪನೆಗೂ ಸುಮಾರು ನೂರುವರ್ಷಗಳ ಮೊದಲು ಗುಮ್ಮನಾಯಕನ ಪಾಳಯಪಟ್ಟು ಅಸ್ತಿತ್ವಕ್ಕೆ ಬಂದುದನ್ನು ತೋರಿಸಿಕೊಟ್ಟರು. (ಗುಮ್ಮನಾಯಕನ ಪಾಳಯದ ಪಾಳಯಗಾರರು, ಪೀಠಿಕೆ ಪು. vi),

(ಅ) ಗುಮ್ಮನಾಯಕನ ಪಾಳಯದ ಪಾಳಯಗಾರರ ವಂಶಸ್ಥರಾದ ರಾಮಲಿಂಗಪ್ಪ ನಾಯಕರು ತಮ್ಮ ಪೂರ್ವಿಕರ ಬಗೆಗೆ ಪುಟ್ಟಣ್ಣನವರು ಎರಡು ಸ್ಖಾಲಿತ್ಯಗಳನ್ನು ಮಾಡಿರುವುದಾಗಿ ಪತ್ರ ಬರೆದಾಗ, ಪುಟ್ಟಣ್ಣನವರು ಆಧಾರಗಳ ಮೂಲಕ ಮೊದಲನೆಯದು ಸ್ಖಾಲಿತ್ಯವಲ್ಲವೆಂದು ಸಮರ್ಥಿಸಿಕೊಂಡಿದ್ದಾರೆ. ಎರಡನೆಯದನ್ನು ಸ್ಖಾಲಿತ್ಯವೆಂದು ಒಪ್ಪಿ ತಮ್ಮದು ತಪ್ಪೆಂದು ಒಪ್ಪಿಕೊಂಡು ಆ ಅಂಶವನ್ನು ಬೆಳಕಿಗೆ ತಂದಿದ್ದಾರೆ. (ಪಾಳಯಗಾರರು, ಪರಿಶಿಷ್ಟ ಪು. 91) ಆ ಅಂಶದ ವಿವರಗಳು ಹೀಗಿವೆ : ಪಾತಪಾಳಯದ ಗುಮ್ಮರೆಡ್ಡಿ ಲಕ್ಕರೆಡ್ಡಿಯವರು ಖಾದ್ರಿಪತಿನಾಯಕನನ್ನು ತಮ್ಮೂರಿಗೆ ಕರೆತಂದು ಮಗಳನ್ನು ಕೊಟ್ಟು ಮದುವೆ ಮಾಡಿದ್ದಾಗಿ ಬರೆದದ್ದು ಸರಿಯಲ್ಲವೆಂದೂ ಖಾದ್ರಿಪತಿನಾಯಕನು ಪಾತಪಾಳಯಕ್ಕೆ ಬರುವ ವೇಳೆಗೇ ಅವನಿಗೆ ಮದುವೆಯಾಗಿ ಚಿನ್ನಮನಾಯಕನೆಂಬ ಒಂದು ವರುಷದ ಮಗನಿದ್ದುದಾಗಿ ತಿಳಿಸಿದ್ದನ್ನು ಪುಟ್ಟಣ್ಣನವರು ಮೂಲ ದಾಖಲೆಗಳನ್ನು ಪುನಃ ಹುಡುಕಿ ನೋಡಿ ಸರಿಯೆಂದಿದ್ದಾರೆ. ಅಲ್ಲದೆ ಮುಂದೆ 'ಗುಮ್ಮನಾಯಕನ ಪಾಳಯದ ಪಾಳಯಗಾರರು' ಎಂಬ ಸ್ವತಂತ್ರ ಕೃತಿ ಬಂದಾಗ ಆ ಪ್ರಕರಣದ ಸಂದರ್ಭದಲ್ಲಿ ತಿದ್ದಲ್ಪಟ್ಟ ಅಂಶವನ್ನು ಬರವಣಿಗೆಯಲ್ಲಿ ಅಳವಡಿಸಿಕೊಂಡಿದ್ದಾರೆ. (ಗುಮ್ಮನಾಯಕನ ಪಾಳಯದ ಪಾಳಯಗಾರರು, ಪೀಠಿಕೆ ಪು. 5–6)

(ಇ) ಸಾಮಗ್ರಿ ಸಂಗ್ರಹಣೆ ನಡೆದಂತೆ ಮೊದಲು ಮಂಡಿಸಿದ ವಿಚಾರಗಳನ್ನು ಸರಿಮಾಡಿಕೊಳ್ಳುವ ಪುಟ್ಟಣ್ಣನವರ ಧೋರಣೆಗೆ ಇನ್ನೊಂದು ನಿದರ್ಶನವನ್ನು ನೋಡಬಹುದು. "ಪಾಳಯಗಾರರ ವಿಷಯವಾಗಿ ನಾನು ಕೊಟ್ಟ 5 ಉಪನ್ಯಾಸಗಳನ್ನು ನಾನು ಬರೆಯುವಾಗ ಚಿತ್ರದುರ್ಗ, ಹಾಕನಗೆರೆ ಅಥವಾ ಹಾಗಿನಗಿರಿ ಈ ಎರಡು ಸಂಸ್ಥಾನದ ಪಾಳಯಪಟ್ಟುಗಳೇ ಪ್ರಖ್ಯಾತ ವಾದುವುಗಳೆಂದು ನಮೂದಿಸಿದ್ದೆ. ಇದು ಅವಿಚಾರದಿಂದ ಮಾಡಿದ ದೋಷವಾಗಿದೆ. ಇವೆರಡಕ್ಕಿಂತಲೂ ಅಥವಾ ಪಾಳಯಪಟ್ಟುಗಳಲ್ಲಿ ಎಲ್ಲಾದಕ್ಕಿಂತಲೂ ಇಕ್ಕೇರಿ ಸಂಸ್ಥಾನವು ದೊಡ್ಡ ರಾಜ್ಯವೆನಿಸಿಕೊಳ್ಳುವುದಕ್ಕೆ ಅರ್ಹವಾಗಿದ್ದಾಗಿದೆ." (ಇಕ್ಕೇರಿ ಸಂಸ್ಥಾನದ ಚರಿತ್ರೆ, ಪೀಠಿಕೆ ಪು. V)

2. ದೊಡ್ಡ ಕದರಪ್ಪನಾಯಕನ (1460–1473) ಆಳ್ವಿಕೆಯು ಮುಗಿಯುವ ಕಾಲದಲ್ಲಿ ವಿಜಯನಗರದ ಕೃಷ್ಣದೇವರಾಯನು ದಿಳ್ಳಿಗಜಪತಿರಾಯನ ಮಗಳು ಲುಕ್ಖಾದೇವಿಯನ್ನು ಮದುವೆಯಾದನೆಂದೂ ಗಜಪತಿರಾಯರ ಹಾಗೂ ಕೃಷ್ಣದೇವರಾಯರ ವಿರಸ ಈ ಮದುವೆಯಿಂದ ನಿಂತಿತೆಂದೂ, ವಿಜಯನಗರದ ಆಹ್ವಾನದ ಮೇರೆಗೆ

ಹಿರಿಕದರಪ್ಪನಾಯಕನು ಈ ಮದುವೆಗೆ ಹೋಗಿದ್ದು ಬಹುಮಾನಿತನಾಗಿ ಬಂದನೆಂದೂ ಸ್ಥಳದ ಬಖೈರಿನಲ್ಲಿದೆ. ಪುಟ್ಟಣ್ಣನವರು ಇದನ್ನು ಪರಿಶೀಲಿಸಿ, ಗಜಪತಿರಾಯ ಹಾಗೂ ಕೃಷ್ಣದೇವರಾಯರಿಗೆ ಯುದ್ಧವಾಗಿ ಕಡೆಗೆ ಒಪ್ಪಂದ ಮಾಡಿಕೊಂಡು ಗಜಪತಿರಾಯರ ಕುವರಿಯನ್ನು ಕೃಷ್ಣದೇವರಾಯ ಮದುವೆಯಾದುದು, ನಿಜ. ಆದರೆ ಆ ಗಜಪತಿ ದಿಳ್ಳಿಯಲ್ಲಿರಲಿಲ್ಲ. ಉತ್ಕಲ (ಒರಿಸ್ಸ)ದಲ್ಲಿದ್ದನು, ಅವನ ಪೂರ್ಣ ಹೆಸರು ಪ್ರತಾಪ ರುದ್ರ ಗಜಪತಿ, ಅವನ ಮಗಳು ಲುಕ್ಮಾದೇವಿಯಲ್ಲ, ತುಕ್ಕಾದೇವಿ. ಮದುವೆ 1515–16ರಲ್ಲಿ ನಡೆಯಿತು. ಆಗ ಗುಮ್ಮನಾಯಕನ ಪಾಳಯದ ದೊಡ್ಡ ಕದರಪ್ಪ ನಾಯಕನು ಜೀವಂತನಾಗಿರಲಿಲ್ಲ. ಆ ಘಟನೆಯ ಕಾಲದಲ್ಲಿ ಗುಮ್ಮನಾಯಕನ ಪಾಳಯದ ದೊರೆಯಾಗಿದ್ದವನು 14ನೇ ಪಾಳಯಗಾರ ಹಿರಿಕದರಪ್ಪನಾಯಕ (1514–1517). ಈತನು ಕೂಡ ಮದುವೆಗೆ ಹೋಗಿ ಬಂದುದಕ್ಕೆ ಆಧಾರಗಳಿಲ್ಲ ಎಂದಿದ್ದಾರೆ. (ಗುಮ್ಮನಾಯಕನ ಪಾಳಯದ ಪಾಳಯಗಾರರು, ಪು. 44, 45 ಮತ್ತು 59)

3. ವಿಜಯನಗರದ ಶ್ರೀರಂಗನಾಯಕನು ಶ್ರೀರಂಗದಲ್ಲಿ ದೇವಸ್ಥಾನದ ಜೀರ್ಣೋದ್ಧಾರ ಮಾಡಿಸುವಾಗ ಗುಮ್ಮನಾಯಕನ ಪಾಳಯದ ಇಮ್ಮಡಿ ವಸಂತ ನಾಯಕನು (1524–1548) ಆ ಕೆಲಸಕ್ಕೆ ಸಹಾಯಕರಾಗಿ ಕಾರೇಗಾರರನ್ನು ಕೂಲಿಯವರನ್ನೂ ಒದಗಿಸಿದನೆಂದು ಹಳೆಯ ಬಖೈರಿನಲ್ಲಿದ್ದ ಅಂಶವನ್ನು ಹೇಳಿ ಈ ವಿಚಾರ ತಪ್ಪು ಎಂದಿದ್ದಾರೆ. ಶ್ರೀರಂಗರಾಯನ ಕಾಲ 1574 ರಿಂದ 1587ರವರೆಗೆ. ಆ ವೇಳೆಗೆ ಇಮ್ಮಡಿ ವಸಂತನಾಯಕ ಇರಲಿಲ್ಲ. ಆತನು ವಿಜಯನಗರದ ಕೃಷ್ಣದೇವ ರಾಯನ ಸಮಕಾಲೀನ. ಶ್ರೀರಂಗರಾಯನ ಕಾಲದಲ್ಲಿ ಗುಮ್ಮನಾಯಕನ ಪಾಳಯದಲ್ಲಿ ಆಳುತ್ತಿದ್ದವನು ಮುಮ್ಮಡಿ ವಸಂತನಾಯಕ (1584–1644). ಆತನು ದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ ಬಹುಮಾನ ಹೊಂದಿದ್ದು ನಿಜ ಎನ್ನುತ್ತಾರೆ. (ಗುಮ್ಮನಾಯಕನ ಪಾಳಯದ ಪಾಳಯಗಾರರು, ಪು. 61, 65–67).

4. ಇಮ್ಮಡಿ ಭೈರಪ್ಪನಾಯಕನ ಕಾಲದಲ್ಲಿ (1608–1646) ದಿಳ್ಳಿಯಿಂದ ರಣದುಲ್ಲಾಖಾನನೆಂಬ ಸೇನಾಪತಿಯು ತನ್ನ ಸೇನೆಯೊಂದಿಗೆ ದಕ್ಷಿಣದೇಶಕ್ಕೆ ಬಂದು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಹೈದರಾಲಿಯಿಂದ ಸೋಲಿಸಲ್ಪಟ್ಟು ತನ್ನ ಸೀಮೆಗೆ ಓಡಿಹೋದನೆಂದೂ ದಾರಿಯಲ್ಲಿ ಹಾಗಲವಾಡಿಗೆ ಬಂದು ಹೋದನೆಂದೂ ಈ ಪಾಳಯಗಾರರ ಸಂಕ್ಷೇಪ ವಂಶಾವಳಿ ಚರಿತ್ರೆಯಲ್ಲಿ ಹೇಳಿದ್ದನ್ನು ಪ್ರಸ್ತಾಪಿಸಿ ಪುಟ್ಟಣ್ಣ ನವರು ವಸ್ತುಸ್ಥಿತಿ ಹಾಗಿರಲಿಲ್ಲ ಎಂದಿದ್ದಾರೆ. ರಣದುಲ್ಲಾಖಾನನು ಬಿಜಾಪುರದ ಸೇನಾಪತಿ. ಬಿಜಾಪುರದ ಆದಿಲ್‌ಷಾಹಿ ಸಂಸ್ಥಾನವನ್ನು ಕ್ರಿ. ಶ. 1687ರಲ್ಲಿ ಔರಂಗಜೇಬನು ಜಯಿಸಿ ಮೊಗಲ್ ಸೀಮೆಗೆ ಸೇರಿಸಿಕೊಂಡನು. ಇಮ್ಮಡಿ ಭರಮಪ್ಪ ನಾಯಕನ ಆಳಿಕೆ 1646ಕ್ಕೆ ಮುಕ್ತಾಯವಾಯಿತು. ಹೈದರಾಲಿ ಆಗ ಹುಟ್ಟಿಯೂ ಇರಲಿಲ್ಲ. 1760–61 ರಿಂದ ಅವನು ಪ್ರಾಬಲ್ಯ ಹೊಂದಿದ್ದು. ಬಿಜಾಪುರ ಸಂಸ್ಥಾನದ

ನಾಶದ ನಂತರ ರಣದುಲ್ಲಾಖಾನನ ವಿಚಾರ ತಿಳಿದು ಬರುವುದಿಲ್ಲ. ಹೀಗಾಗಿ ರಣದುಲ್ಲಾಖಾನನನ್ನು ಹೈದರಾಲಿಯು ಸೋಲಿಸಿದನೆಂಬುದು ಸುಳ್ಳು ಸಂಗತಿ ಎಂದಿದ್ದಾರೆ. (ಹಾಗಲವಾಡಿ ಪಾಳಯಗಾರರು, ಪು. 15)

ಚಾರಿತ್ರಿಕ ಸಂಗತಿಗಳನ್ನು ಹೀಗೆ ವೈಜ್ಞಾನಿಕವಾಗಿ ನಿಷ್ಕರ್ಷಿಸಿರುವ ಪುಟ್ಟಣ್ಣನವರು ಪವಾಡಗಳ ಉಲ್ಲೇಖಗಳು ಬಂದಾಗ ಅಪಹಾಸ್ಯವನ್ನಾಗಲೀ ಗೇಲಿಯನ್ನಾಗಲೀ ಮಾಡದೆ ಇರುವ ಸಂಯಮ ತೋರಿದ್ದಾರೆ. ತಮಗೆ ತಿಳಿದು ಬಂದ ವಿಷಯಗಳನ್ನು ದಾಖಲಿಸುವುದರಲ್ಲಿ ಪುಟ್ಟಣ್ಣನವರದು ಅಪ್ರತಿಮ ನಿಷ್ಠೆ. ಯಾವ ದೊರೆಯ ಮೂಲವನ್ನು, ಯಾವ ರಾಜ್ಯದ ಮೂಲವನ್ನು ಹುಡುಕಿಕೊಂಡು ಹೋದರೂ ಅಮಾನುಷ ವ್ಯಾಪಾರದ ಅಸ್ತಿತ್ವವೊಂದು ದೊರಕುವುದನ್ನು ಸೂಚಿಸಿ ಇದು ಎಲ್ಲ ಚರಿತ್ರಕರ್ತರುಗಳ ಅನುಭವಕ್ಕೂ ಬರುವಂತಹುದೇ ಎನ್ನುತ್ತಾರೆ. "ಆದರೆ ಇಂಥಾ ಸಂಗತಿಗಳನ್ನು ಕೆಲವರು ಸ್ಪಷ್ಟವಾಗಿ ಬರೆದು ವಿವರಿಸಿದ್ದಾರೆ, ಮತ್ತೆ ಕೆಲವರು ಕುಚೋದ್ಯವಾಗಿ ಕಾಣಿಸಿದಾರೆ. ಇದು ಎಂತಾದರೂ ಆಗಲಿ, ಆ ಕಾಲದಲ್ಲಿ ಸಾಧಾರಣ ಜನರಿಗೂ ಪದವಿಯಲ್ಲಿದ್ದವರಿಗೂ ಈ ವಿಧವಾದ ನಂಬಿಕೆ ಇತ್ತು ಎಂದು ತೋರಿಸುವುದೂ ಕೂಡ ಚರಿತ್ರಕರ್ತರ ಧರ್ಮವಾಗಿದೆ, ಎಂದು ತೋರುವುದು." (ಚಿತ್ರದುರ್ಗದ ಪಾಳಯಗಾರರು, ಪು. 8) ಎಂಬ ಹೇಳಿಕೆ ಅವರ ನಿಲುವನ್ನು ಸೂಚಿಸಿದೆ. ನಿಧಿ ನಿಕ್ಷೇಪಗಳ ಸಂಗತಿಗಳನ್ನು ತಳ್ಳಿ ಹಾಕುವುದಕ್ಕೆ ಬದಲಾಗಿ ಅಂಥ ಸಂಗತಿಗಳಿಗೆ ವೈಜ್ಞಾನಿಕವಾದ ಆಧಾರವೇನಾದರೂ ಸಿಗಬಹುದೇ ಎಂಬ ಹವಣಿಕೆಯಲ್ಲಿ ಪುಟ್ಟಣ್ಣನವರ ಮನಸ್ಸು ತೊಡಗಿದ್ದುಂಟು. "ಅನೇಕ ಸಾವಿರ ಜನ ದೊರೆಗಳು ಆಳುತಿದ್ದ ಈ ದೇಶದಲ್ಲಿ ಆಯಾ ಕಾಲಗಳಲ್ಲಿದ್ದ ದೊರೆಗಳೂ, ಐಶ್ವರ್ಯವಂತರಾದ ಪ್ರಜೆಗಳೂ, ವರ್ತಕರೂ, ಪ್ರಬಲರಾಗಿದ್ದ ಅಧಿಕಾರಿಗಳೂ ರಾಜಿಕ ದೈವಿಕಾದಿ ಪೀಡ್ವರಗಳಿಂದುಟಾಗತಕ್ಕ ವಿಪತ್ತುಗಳಿಗೆ ಭೀತರಾಗಿ ಇಂಥಾ ದ್ರವ್ಯರಾಶಿಗಳನ್ನು ಭೂಸ್ಥಾಪನೆ ಮಾಡಿರಬಹುದು ಎನ್ನುವುದಕ್ಕೆ ಅನೇಕ ದೃಷ್ಟಾಂತಗಳಿವೆ." (ಹಾಗಲವಾಡಿ ಪಾಳಯಗಾರರು, ಪು. 3–4) ಎಂಬ ಮಾತನ್ನು ಗಮನಿಸಬಹುದು.

## ಗದ್ಯಶೈಲಿ

ವಸ್ತು ನಿರೂಪಣೆಯಲ್ಲಿ ಪುಟ್ಟಣ್ಣನವರು ಶಕ್ತರಾದವರು. ಪೆಡಸು, ಜಿಗುಟುಗಳಿಲ್ಲದೆ ಯಾವುದೇ ವಸ್ತುವನ್ನು ಅವರು ಸರಳವಾಗಿ ನಿರೂಪಿಸಬಲ್ಲವರಾಗಿದ್ದುದಕ್ಕೆ ಒಂದು ಉದಾಹರಣೆಯನ್ನು ನೋಡಬಹುದು.

"ಹೈದರನು ಕೇವಲ ಸಾಹಸಿ, ತಂತ್ರಗಾರ, ಸಮಯ ಬಂದ ಹಾಗೆ ತಿರುಗಿಕೊಂಡು ತನ್ನ ಕಾರ್ಯವನ್ನು ಗೆಲ್ಲುವುದರಲ್ಲಿ ಬಹಳ ಸಮರ್ಥ. ಮದಕರಿನಾಯಕನ ಕಡೆಯಲ್ಲಿ ಮದಕರಿನಾಯಕ ಒಬ್ಬ ಹೊರತು ಹೈದರನ ಸಮಪಾಂತಿ ಮನುಷ್ಯರು ಬೇರೆ ಯಾರೂ ಇರಲಿಲ್ಲ. ಈ ದೊರೆಯು ಹೈದರನನ್ನು ಗೆಲ್ಲುವುದಕ್ಕೆ ಮಾಡಿದ್ದ ಪ್ರಯತ್ನಗಳೇನೂ

ಕಡಮೆಯಾಗಿರಲಿಲ್ಲ. ಮೊಟ್ಟಮೊದಲು ದುರ್ಗದ ಕೋಟೆಯೇ ಬಲವಾದ್ದು. ಒಳಗೆ ಎಷ್ಟು ಸ್ವಲ್ಪ ಸೇನೆ ಇದ್ದಾಗ್ಯೂ ಹೊರಗಡೆ ಇದ್ದ ನಾಲ್ಕರಷ್ಟು ಸೇನೆಗೆ ಆಸ್ಪದ ಕೊಡಲಿಲ್ಲ. ಯಾವಾಗ ಯಾವ ಕಡೆ ಹಲ್ಲಾ ಹತ್ತುವುದಕ್ಕೆ ಹೋದರೂ ಶತ್ರುಗಳಿಗೆ ಸೋಲಾಗುತ್ತಲೇ ಬಂತು. ಒಂದು ವರುಷದವರೆಗೂ ಹೀಗೇ ಆಯಿತು. ಆಗ ನವಾಬನು ಯುಕ್ತಿಯಾಗಿ ಪೊಳ್ಳು ಸಮಾಧಾನವನ್ನು ಮಾಡಿಕೊಂಡು ನಾಲ್ಕು ಲಕ್ಷ ವರಹ ಖಂಡಣಿಯನ್ನೂ ತೆಗೆದುಕೊಂಡು ಹೊರಟುಹೋದಂತೆ ಮಾಡಿದನು. ಮದಕರಿನಾಯಕನಿಗೆ ಮರಾಟೆಯವರ ಸಹಾಯದ ವಾಗ್ದಾನ ಒಂದು ಆಸೆಯನ್ನು ಹುಟ್ಟಿಸಿತ್ತು. ಆಡಿದ ಮಾತಿನಂತೆ ಪೇಶ್ವೆಯು 50 ಸಾವಿರ ಸೇನೆಯನ್ನೇನೋ ಕಳುಹಿಸಿದ, ಆದರೆ ಅವರ ಕಡೆ ಸೇನಾಪತಿಗಳು, ಕೃಷ್ಣಾ, ತುಂಗಭದ್ರಾ ತೀರದಿಂದ ಈಚೆಗೆ ಬಂದಿದ್ದವರು, ಲಂಚಕ್ಕೆ ಆಸೆಬಿದ್ದು ಹಿಂತಿರುಗಿದರು. ದುರ್ಗದವರ ಕಡೆ ಇದ್ದ ಜರಿಮಲೆ ಮೊದಲಾದ ಚಿಲ್ಲರೆ ಪಾಳಯಗಾರರು ಮೊದಲಿನಿಂದಲೂ ದುರ್ಗದ ಕೋಟೆಯ ಮತ್ತು ಅಲ್ಲಿನ ರಾಜರ ಗುಟ್ಟನ್ನೆಲ್ಲಾ ತಿಳಿದುಕೊಂಡಿದ್ದು ಒಳ್ಳೇ ಸಮಯದಲ್ಲಿ ಹೈದರನ ಕಡೆಗೆ ತಿರುಗಿಕೊಂಡು ದೊಡ್ಡ ಒಳಗಂಡ ಕಳ್ಳರಾಗಿ ಹಗೆತನವನ್ನು ಸಾಧಿಸಲು ನಿಂತರು. ದುರ್ಗದ ತುರುಕ ಪ್ರಜೆಗಳೂ, ತುರುಕ ಅಧಿಕಾರಿಗಳೂ, ಹಾಸಿಗೆ ಹಾವಾಗಿ ತಮ್ಮ ದ್ರೋಹಿತನವನ್ನು ಮತವೈರಕ್ಕಿಂತಲೂ ಹೆಚ್ಚಾಗಿ ತೋರಿಸಿದರು. ದುರ್ಗದ ಮರಾಟೆ ತುಕಡಿಯವರೂ ತುರುಕರ ಜೊತೆಗೆ ಸೇರಿಕೊಂಡರು. ಕಡೆಗೆ ದುರ್ಗದ 50 ಸಾವಿರ ದಂಡಿನಲ್ಲಿ 5 ಸಾವಿರ ಕೂಡಾ ದೊರೆಯ ಸಂಗಡ ಯುದ್ಧಕ್ಕೆ ಹೊರಡಲು ಇಲ್ಲವಾಯಿತು." (ಚಿತ್ರದುರ್ಗದ ಪಾಳಯಗಾರರು, ಪು. 101–102)

ಕಾಲದಿಂದ ಕಾಲಕ್ಕೆ ಉಂಟಾದ ಪರಭಾಷೆಗಳ ಸಂಪರ್ಕದಿಂದ ಆಯಾ ಭಾಷೆಗಳ ಪದಗಳು ಕನ್ನಡಕ್ಕೆ ನುಸುಳಿವೆ. ದಕ್ಷಿಣದಲ್ಲಿ ಮುಸಲ್ಮಾನರ ಆಳ್ವಿಕೆ ಉಂಟಾದ ಮೇಲೆ ಹಿಂದಿ, ಉರ್ದು, ಫಾರ್ಸಿ ಹಾಗೂ ಅರಬ್ಬೀ ಪದಗಳು ಸರಕಾರದ ವ್ಯವಹಾರಗಳಲ್ಲಿ ಸ್ಥಳವನ್ನು ಪಡೆದವು. ಪುಟ್ಟಣ್ಣನವರ ಸಂಶೋಧನ ಕೃತಿಗಳಲ್ಲಿ ಈ ಅನ್ಯಭಾಷಾ ಪದಗಳ ಬಳಕೆ ವಸ್ತುವಿನ ವಿಚಾರಕ್ಕೆ ತಕ್ಕಂತೆ ಸಹಜವಾಗಿ ಮೈದೋರಿದೆ, ಒಂದು ಹಾವಳಿಯಾಗಿ ಕಾಣದೆ ಸಹಜ ಸ್ವೀಕರಣದ ಒಂದು ಅತ್ಯುತ್ತಮ ಮಾದರಿಯಾಗಿ ಕಾಣಿಸಿಕೊಂಡಿದೆ. ಪುಟ್ಟಣ್ಣನವರ ಮಿಕ್ಕ ಕೃತಿಗಳ–ಮುಖ್ಯವಾಗಿ ಕಾದಂಬರಿಗಳ–ಶೈಲಿಗೂ ಇಲ್ಲಿಯ ಶೈಲಿಗೂ ಕಾಣುವ ವ್ಯತ್ಯಾಸಕ್ಕೆ ಇದೇ ಪ್ರಮುಖ ಕಾರಣ. ಅನ್ಯ ಭಾಷಾಪದಗಳ ಬಳಕೆಯನ್ನು ಒಂದು ಉದಾಹರಣೆಯ ಮೂಲಕ ತಿಳಿಯಬಹುದು.

"ಹೈದರ – ರಾಜಾಸಾಹೇಬರು ಜಂಗಿಸರಂಜಾಮು ತಯಾರ್ಮಾಡಿಸುತಾ ಇದಾ ರಂತೆ, ಪಟ್ಟಣಕ್ಕೆ ಮಳೆ ಬಾರದಿದ್ದರೆ ನೀರಿನ ಅಮದಾನಿ ಇಲ್ಲವೆಂತ ಕೇಳುತೇವೆ, ಗಡಖಿಲ್ಲೇದ ತಟಾಕದಲ್ಲಿ ತೋಫಿನ ಆವಾಜಿಗೆ ನೀರು ನಿಲ್ಲುವುದಿಲ್ಲ, ಚಿತ್ರದುರ್ಗದ ಜಾಗ ನಾಮರ್ದ ಎಂತ ಕೇಳುತೇವೆ. ಸೀಮೆ ಎಷ್ಟು ಲಕ್ಷವರಹದ್ದು.

ವಕೀಲರು–ಈಗ ಜಂಗೀಸರಂಜಾಮು ಏನೂ ತಯಾರ್ಮಾಡಿಸುವುದಿಲ್ಲ. ಚಿತ್ರ ದುರ್ಗದ ಸಂಸ್ಥಾನಕ್ಕೆ ಆಜೂ ಬಾಜು ಬಿದನೂರು, ಹರಪನ ಹಳ್ಳಿ, ರಾಯದುರ್ಗ, ನಿಡಗಲ್ಲು, ತರೀಕೆರೆ ವಗೈರೆ ಪಾಳಯಗಾರರು ಶತ್ರುಗಳಾಗಿರುವುದರಿಂದ, ಚಿತ್ರದುರ್ಗದ ಪೂರ್ವ್ವದ ದೊರೆಗಳು ತಯಾರ್ಮಾಡಿಸಿ ಹಾಕಿರುವ ಮದ್ದುಗುಂಡು ತೋಪುಖಾನೆ ಬಾಣ ಮುಂತಾದ್ದರ ಜಖೀರು ಬಹಳವಾಗಿದೆ. ಹನೆರಡು ವರುಷ ಕೋಟೆಗೆ ಮುತ್ತಿಗೆ ಆದಾಗ್ಯೂ ಜಂಗೀಸರಂಜಾಮು ಕಮ್ಮಿಯಾಗುವ ಹಾಗಿಲ್ಲ. ಖಿಲ್ಲೇದಲ್ಲಿ ಫೌಜು ಆಯುಧ ಸಮೇತ ಒಂದೇ ಮನಸ್ಸಿನಿಂದ ಯುದ್ಧಾಪೇಕ್ಷೆಯಲ್ಲಿ ಇದೆ. ಕೋಟೆಯೊಳಗೆ ನೀರು ಕಮ್ಮಿಯಾಗುವುದಿಲ್ಲ. ಪೂರ್ವ್ವದಲ್ಲಿ ರಸಸಿದ್ಧರು ಬಂದು ತಮ್ಮ ಆನ್ಹಿಕಕ್ಕೆ ಎಂಥಾ ಅನಾವೃಷ್ಟಿಕಾಲದಲ್ಲಿಯೂ ನೀರಿರಬೇಕೆಂದು ಪ್ರಾರ್ಥಿಸಿದ ಪ್ರಕಾರ ದೇವರ ವರವಾಗಿದೆ. ಹಿಂದಿನ ಯುಗದಲ್ಲಿ ಹಿಡಿಂಬಾಸುರನು ಭೀಮನಿಗೆ ಸೋತು ಬಿದ್ದು ಕೊಂಡಿರುವಾಗ – ನಾನನಕ ಸೋತೆ, ಮುಂದಕ್ಕೆ ಇಲ್ಲಿನ ಜನರು ಯಾವಾಗಲೂ ಆರೋಗ್ಯವಾಗಿದ್ದು ಯಾರು ಬಂದರೂ ಗೆಲ್ಲಬೇಕೇ ಹೊರತು ಸೋಲಕೂಡದು ಎಂದು ಬೇಡಲು, ಭೀಮನು ಆ ಪ್ರಕಾರ ವರವನ್ನು ಕೊಟ್ಟಿದ್ದಾನೆ.

ಆದ್ದರಿಂದ ಚಿತ್ರದುರ್ಗವು ಬಹಳ ಗಂಡುಭೂಮಿಯಾಗಿದೆ. ಹಿಂದಕ್ಕೆ ಅನೇಕರು ಪ್ರಯತ್ನ ಮಾಡಿದರು. ಅವರಿಗೆ ಇದು ಸ್ವಾಧೀನವಾಗಲಿಲ್ಲ. ಸೀಮೆ ಇಷ್ಟು ಲಕ್ಷ ದ್ದೆಂದು ಲೆಕ್ಕ ಬರೆಯಲು ದಂಡಕವಿಲ್ಲ. ಖಜಾನೆ ನೆಲೆ ತಿಳಿಯದು. ಪ್ರಜೆಗಳು ಸಂತೋಷಿಗಳಾಗಿದಾರೆ." (ಚಿತ್ರದುರ್ಗದ ಪಾಳಯಗಾರರು. ಪು. 73–74)

ಹೀಗೆ ರಾಜಾಸ್ಥಾನಕ್ಕೆ ಸಂಬಂಧಿಸಿದ, ಸ್ಥಳದ ಬರವಣಿಗೆಯ ಮೇಲೆ ಆಡಳಿತ ವನ್ನು ನಿರ್ವಹಿಸುವ ಇನ್ನೊಂದು ಭಾಷೆಯ ಪ್ರಭಾವ ಕಾಣುವುದು ಕನ್ನಡದಲ್ಲಿ ಮಾತ್ರ ವಲ್ಲದೇ ಇತರ ಭಾರತೀಯ ಭಾಷೆಗಳಲ್ಲೂ ಗಮನಿಸಬಹುದು. ಆದರೆ ಇದು ಪ್ರಮುಖ ವಾದ ಒಂದು ಸಾಹಿತ್ಯಪ್ರಕಾರವಾಗಿ ಬೆಳೆದಿರುವುದು ಅಸ್ಸಾಮೀಭಾಷೆಯಲ್ಲಿ ಮಾತ್ರ. ಬುರಂಜಿಗಳ ಅಂದರೆ ಆಸ್ಥಾನದ ಕಾಗದ ಪತ್ರಗಳ ಬೆಳವಣಿಗೆ ಅಸ್ಸಾಮೀ ಸಾಹಿತ್ಯದ ಒಂದು ಮಹತ್ವಪೂರ್ಣ ಸಾಧನೆ. ಸೈನ್ಯದ ಹಾಗೂ ಗಡಿ ಅಧಿಕಾರಿಗಳಿಂದ ಕಾಲಕಾಲಕ್ಕೆ ಬಂದ ವರದಿಗಳು, ಆಸ್ಥಾನಕ್ಕೆ ಒಪ್ಪಿಸಲ್ಪಟ್ಟ ನ್ಯಾಯ ಹಾಗೂ ಕಂದಾಯ ಪತ್ರಗಳು, ನ್ಯಾಯಾಲಯದಲ್ಲಿ ನಡೆಯುವ ಕಾರ್ಯಗಳು ಇವೆಲ್ಲವೂ ಬುರಂಜಿಯ ವಿಷಯವ್ಯಾಪ್ತಿ ಯಲ್ಲಿ ಬರುವಂತಹವು. ಬುರಂಜಿಗಳು ಮೊದಲು ಅಹೋಮ ಭಾಷೆಯಲ್ಲಿ ಬರೆಯ ಲ್ಪಡುತ್ತಿದ್ದು ಅನಂತರ ಅಸ್ಸಾಮಿಯಲ್ಲೂ ರಚನೆಗೊಂಡವು. ಈ ಬುರಂಜಿಗಳಿಂದ ಅಸಾಮಿಯ ಗದ್ಯ ಬೇರೊಂದು ನಾವೀನ್ಯವನ್ನು ಗಳಿಸಿತು. ರಾಜ್ಯಾಡಳಿತದ ಪೂರ್ಣ ಜ್ಞಾನವಿರುವ ಜನರಿಂದ ರಚಿತವಾಗುತ್ತಿದ್ದ ಈ ಬುರಂಜಿಗಳು ಗಂಭೀರವಾದ ವರದಿ ಗಳಾಗಿದ್ದು ಅವುಗಳ ಭಾಷೆ, ಸುಲಭವಾಗಿಯೂ ನೇರವಾಗಿಯೂ ಇರುತಿತ್ತು, ಹಾಗೂ ಅನಗತ್ಯವಾದ ಭಾವನಾಪರವಶತೆ ಇರುತ್ತಿರಲಿಲ್ಲ. ಜೊತೆಗೆ ಆನುಷಂಗಿಕವಾಗಿ ಇವು ರಾಜಮನೆತನದ ದಿನಚರಿಗಳೂ ಸಾಮಾಜಿಕ ಜೀವನದ ಚಿತ್ರಗಳೂ ಆಗಿವೆ. ರಾಜ

ಮನೆತನ, ಆಸ್ಥಾನಗಳ ವಿದ್ಯಮಾನಗಳನ್ನು ತಿಳಿಸುತ್ತಿದ್ದುದರಿಂದ ಅವುಗಳ ಭಾಷೆ ಸಂಸ್ಕಾರ ಹೊಂದಿದ ಭಾಷೆಯೇ ಆಗಿರಬೇಕೆಂಬ ವಿಧಿ ಪ್ರಾರಂಭದಲ್ಲಿ ಉಂಟಾಗಿತ್ತು. ಐತಿಹಾಸಿಕ ಕಥನಕ್ಕೆ ಬೇಕಾದ ಸ್ಪಷ್ಟತೆ ಇವುಗಳ ಪ್ರಮುಖಗುಣ. ಕಲ್ಪನೆ ಅತಿರಂಜಿತತೆಗಳಿಂದ ಇವು ದೂರವಾದರೂ ಶುಷ್ಕವಲ್ಲ. ಇಲ್ಲಿ ಕಾಣುವ ಪ್ರಾಪಂಚಿಕ ಜ್ಞಾನ ಅಚ್ಚರಿಗೊಳಿಸುವಂಥದು. ಇಲ್ಲಿನ ಆಡುನುಡಿಯ ಶೈಲಿ, ದೇಸಿಯ ಪದಪ್ರಯೋಗಗಳಲ್ಲಿ, ಆಡಳಿತ, ನ್ಯಾಯಾಸ್ಥಾನಗಳಲ್ಲಿ ಬಳಕೆಯಲ್ಲಿದ್ದ ಹಲವು ಅಪೂರ್ವಪದಗಳು ಕಾಣಿಸಿಕೊಳ್ಳುತ್ತವೆ. ಅರಬ್ಬಿ ಹಾಗೂ ಪರ್ಷಿಯದ ಹಲವು ಶಬ್ದಗಳು ಇಲ್ಲಿ ಪ್ರವೇಶ ಪಡೆದವು. ಗದ್ಯದ ಹಾಗೂ ಲೌಕಿಕ ಸಾಹಿತ್ಯದ ಬೆಳವಣಿಗೆ ಬುರಂಜಿಗಳಿಂದ ಅಪ್ರತಿಮವಾಗಿ ಬೆಳೆದವು. ಗದ್ಯಪದ್ಯಮಿಶ್ರಿತ ಚಾರಿತ್ರಿಕ ಬರಹಗಳಾದ ವಂಶಾವಳಿಗಳು ಸ್ವಲ್ಪ ಬೇರೆಯಾದ ವರ್ಗಕ್ಕೆ ಸೇರುತ್ತದೆ.

## ಕೃತಿಗಳಲ್ಲಿ ಕಾಣುವ ಮನೋಧರ್ಮ

ಪುಟ್ಟಣ್ಣನವರ ಒಟ್ಟು ಬರಹಗಳನ್ನೂ ಅಲ್ಲಿ ಕೆಲಸ ಮಾಡಿರುವ ಮನಸ್ಸನ್ನೂ ಗಮನದಲ್ಲಿಟ್ಟುಕೊಂಡು ಈ ಸಂಶೋಧನ ಕೃತಿಗಳನ್ನು ಓದಿದರೆ ಹಲವು ಕುತೂಹಲಕರ ಅಂಶಗಳು ಹೊರಪಡುತ್ತವೆ. ಧರ್ಮ, ಸರಕಾರ ಇವೆರಡೂ ಪುಟ್ಟಣ್ಣನವರ ಆಸಕ್ತಿಯ ಎರಡು ಕೇಂದ್ರಗಳು. ಅಪರಿಗ್ರಹಣ ದೀಕ್ಷೆಯ ಧರ್ಮಿಷ್ಠರಲ್ಲೂ ಆಳುವ ರಾಜರಲ್ಲೂ ಪುಟ್ಟಣ್ಣನವರಿಗೆ ಅಸೀಮ ಗೌರವ, ನಂಬಿಕೆಗಳಿದ್ದುವು. ಅವರ ಮೂರು ಕಾದಂಬರಿಗಳಲ್ಲೂ ರಾಜಾಸ್ಥಾನದ ಚಿತ್ರಣವಿದೆ, ಅಂತ್ಯದಲ್ಲಿ ನೀತಿಯ ಗೆಲುವಿದೆ. ಅವರ ಜೀವನ ಚರಿತ್ರೆಗಳಲ್ಲಿ ಕೂಡ ರಾಜರಿಗೆ ದೊರೆತ ಮನ್ನಣೆ ಗೌರವಗಳು ಸ್ಪಷ್ಟವಾಗಿವೆ. ಪಾಳಯಗಾರರ ಕೃತಿಗಳಲ್ಲೂ ರಾಜರ ಶೌರ್ಯ, ಪ್ರಜಾಪಾಲನೆ, ನ್ಯಾಯಪರತೆಗಳಿಗೆ ಆದ್ಯಗೌರವ ಲಭಿಸಿದೆ. ಹೀಗೆ ಪುಟ್ಟಣ್ಣನವರ ಮನೋಧರ್ಮ ಬರಹಗಳಿಗೆ ಇರುವ ಆಂತರಿಕ ಸಂಬಂಧವನ್ನು ಗುರುತಿಸಬಹುದು. ಈ ಸಂಶೋಧನ ಕೃತಿಗಳ ರಚನೆಗೆ ಪುಟ್ಟಣ್ಣನವರಿಗಿದ್ದ ಧರ್ಮ ಅಧಿಕಾರಗಳ ಬಗೆಗಿನ ಒಲವೇ ಕಾರಣ. ಹಳೆಯ ದಾಖಲೆಗಳು ಕಳೆಯಬಾರದು ಎಂಬ ಪ್ರಜ್ಞೆ ಈ ಬರವಣಿಗೆಯ ವೇಗವರ್ಧಕ ಅಂಶ ಮಾತ್ರ.

ಹಾಗಲವಾಡಿಯ ಪಾಳಯಗಾರ 2ನೇ ಮುದಿಯಪ್ಪ ನಾಯಕನ ಸಾತ್ತ್ವಿಕತೆಯನ್ನು ವಿವರಿಸುತ್ತಾ ಪುಟ್ಟಣ್ಣನವರು ಬರೆದಿರುವ ಭಾಗ ಅವರ ಸಾತ್ತ್ವಿಕ ಮನಸ್ಸಿನ ಚಿಂತನೆಯನ್ನು ಪ್ರಕಟಿಸುವ ಭಾಗ. ('ಕಾಂಪೂಷನ ಚರಿತ್ರೆ'ಯಲ್ಲಿ ಇಂಥ ಭಾಗಗಳು ಹೇರಳವಾಗಿವೆ.) ರಾಜರ ಗುಣಶೀಲಗಳ ಬಗೆಗೆ ವಿಸ್ತಾರವಾದ ವಿವೇಚನೆ ಇಲ್ಲಿ ಇದೆ. ಅಧಿಕಾರ, ಐಶ್ವರ್ಯಗಳ ಮದದಿಂದ ಪ್ರಜೆಗಳನ್ನು ಪೀಡಿಸುತ್ತಾ ತಾವೇ ಪ್ರಾಮಾಣಿಕರೆಂದು ನಟಿಸುವವರ ಬಗೆಗೆ ಪುಟ್ಟಣ್ಣನವರು ಸಾತ್ತ್ವಿಕವಾದ, ಉತ್ಕಟವಾದ, ಸಂತಾಪವನ್ನು ಕುದಿಯನ್ನು ವ್ಯಕ್ತಪಡಿಸುತ್ತಾರೆ. "ಕೆಲವು ಭೂಪತಿಗಳು ಯಾವ ಸಂದರ್ಭ ಸಿಕ್ಕಿದಾಗ್ಯೂ ಪ್ರಜೆಗಳ ದ್ರವ್ಯವನ್ನು ತಾರತಮ್ಯವಿಲ್ಲದೆ ಸೆಳೆದುಕೊಂಡು ಕೃತ್ರಿಮ

ಕಾರಣಗಳನ್ನು ಕಲ್ಪನೆಮಾಡಿ ತಮ್ಮ ಸ್ವಪ್ರಯೋಜನಕ್ಕೆ ಶೇಖರಮಾಡಿಕೊಂಡೋ, ವ್ಯಯಮಾಡಿಕೊಂಡೋ ಉಪಯೋಗಿಸಿಕೊಳ್ಳುತಾ ರಾಜ್ಯದ ವ್ಯಯವನ್ನು ಮನಸ್ಸಿ ವೃದ್ಧಿಮಾಡಿ ಹಣ ಸಾಲದೆಂದು ಪ್ರಜೆಗಳಿಂದ ಹೆಚ್ಚಾದ ವರಿಯನ್ನು ಕಿತ್ತುಕೊಂಡು ಪ್ರಜೆಗಳ ಬಡತನವನ್ನು ಅಧಿಕಮಾಡುವರು : ತಮ್ಮ ದುಃಖವನ್ನು ಹೇಳಿಕೊಳ್ಳಲು ಹೋದರೆ ಕೇವಲ ಖುಕ್ತರಿಗೆ ತಡಕಣ್ಣಿನ ಸೇವೆಯೋ, ಬಾಯಿಲ್ಲದವರಿಗೆ ಅರ್ಧಚಂದ್ರ ಪ್ರಯೋಗವೋ, ಪುಷ್ಟರು ಹೋದರೆ ಮುಟ್ಟಗೋಲೋ, ಸುಲಿಗೆ ಸೇವೆಯೋ ಅಥವಾ ರೂಪಾಂತರದಲ್ಲಿ ಮತ್ತೆ ಯಾವುದಾದರೂ ಒಂದು ವರಿಯೋ, ಕಡೆಗೆ ಕೇವಲ ಮರ್ಯಾದಾ ರೂಪವಾದ ನಜರಾಣೆಯೋ ಸಿದ್ಧವಾಗುವುದು." (ಹಾಗಲವಾಡಿ ಪಾಳಯಗಾರರು, ಪು. 21). ರಾಜಕೀಯ ಚದುರಂಗದಾಟದಲ್ಲಿನ ಇಂಥ ಭಾಗಗಳಲ್ಲಿ ಪುಟ್ಟಣ್ಣನವರ ಉತ್ಸಾಹ ಉಕ್ಕುತ್ತದೆ. ಅಂಥ ಹೊತ್ತಿನಲ್ಲಿ ಅವರು ವ್ಯಕ್ತಪಡಿಸುವ ಭಾವನೆಗಳು ಕೃತಿಯ ರಾಸಾಯನಿಕ ರಚನೆಯ ಒಂದು ಭಾಗವಾಗಿ ಬರುತ್ತದೆಯೇ ಹೊರತು ಬೇರೆಯಾಗಿ ನಿಲ್ಲುವುದಿಲ್ಲ. ಈ ಭಾಗಗಳ ಮೂಲಕ ಪುಟ್ಟಣ್ಣನವರು ಓದುಗರ ಆತ್ಮೀಯತೆ, ಅಂತಃಕರಣಗಳನ್ನು ಸೆಳೆದುಕೊಳ್ಳುತ್ತಾರೆ. ಇಂಥ ಭಾಗಗಳು ಈ ಕೃತಿಗಳನ್ನು ಬರಿಯ ಚರಿತ್ರೆಯ ಅಥವಾ ಸಂಶೋಧನೆಯ ದಾಖಲೆಗಳನ್ನಾಗಿಸದೆ ಅವುಗಳಿಗೆ ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನು ಕೊಡುತ್ತವೆ.

**ಮುಕ್ತಾಯ**

ದೊರೆತ ಮಾಹಿತಿಗಳ ಆಧಾರದಿಂದ ಪುಟ್ಟಣ್ಣನವರು ತಮ್ಮ ಸಂಶೋಧನ ಕೃತಿಗಳಲ್ಲಿ ಕಾಲಾನುಸಾರವಾಗಿ ರಾಜರ ವಿಚಾರಗಳು, ಅವರ ಆಳ್ವಿಕೆಯಲ್ಲಿನ ಮುಖ್ಯ ಘಟನೆಗಳ ಕಾರಣ, ಪರಿಣಾಮಗಳು, ಆಸ್ಥಾನದ ವಿವರಗಳು, ಮತಾಚಾರ, ವಂಶಾವಳಿ, ಇತ್ಯಾದಿ ವಿಚಾರಗಳನ್ನು ತಮ್ಮ ಬರವಣಿಗೆಯಲ್ಲಿ ಸೆರೆಹಿಡಿದಿದ್ದಾರೆ. ಆನುಷಂಗಿಕ ವಿಚಾರಗಳನ್ನು ಅಗತ್ಯವಿದ್ದೆಡೆಯಲ್ಲೆಲ್ಲ ಹೇಳಿದ್ದಾರೆ. ಉದಾಹರಣೆಗೆ ಇಕ್ಕೇರಿಯ ಸದಾಶಿವ ನಾಯಕನ (1513–1546) ವಿಷಯವನ್ನು ಹೇಳುವಾಗ ಬಹಮನಿ ನವಾಬರ ಮೂಲ, ಬಹಮನಿ ರಾಜ್ಯ ಒಡೆದುಹೋದದ್ದು, ಷಾಹಿ ಸಂಸ್ಥಾನಗಳು, ಹಿಂದೂ ಮುಸಲ್ಮಾನರ ವೈಷಮ್ಯ (ಇಕ್ಕೇರಿ ಸಂಸ್ಥಾನದ ಚರಿತ್ರೆ, ಪು. 15–20) ಇವುಗಳನ್ನು ಕುರಿತು ಹೇಳಿದ್ದಾರೆ. ಒಟ್ಟು ಚಿತ್ರಣವನ್ನು ಎದುರಿಗೆ ಇಟ್ಟು ಪ್ರಕೃತ ಸಮಸ್ಯೆಯ ಮೇಲೆ ಬೆಳಕು ಚೆಲ್ಲುವುದು ಸಾಮಾನ್ಯವಾಗಿ ಇಂಥಕಡೆ ಪುಟ್ಟಣ್ಣನವರು ಅನುಸರಿಸುವ ತಂತ್ರ. ಮುಖ್ಯವಲ್ಲದ ಅಂಶವನ್ನು ಮೊಟಕಾಗಿಸುತ್ತಾರೆಯೇ ವಿನಹ ಪೂರ್ಣವಾಗಿ ಕೈ ಬಿಡುವುದಿಲ್ಲ. ಹೀಗಾಗಿ ಹಲವು ಕಡೆ ಪರಿಸ್ಥಿತಿಯ ಚಿತ್ರಣ ಎಂಬುದು ಸಾಮಾಜಿಕ ಶಾಸ್ತ್ರಗಳನ್ನು ಒಳಗೊಳ್ಳುತ್ತದೆ. ವ್ಯವಸಾಯ ಪದ್ಧತಿ, ಮತಾಚಾರಗಳು, ಚುನಾವಣೆಗಳು, ಆಚಾರವಿಚಾರಗಳು, ಪರಂಪರೆ ಸಂಪ್ರದಾಯಗಳು ಕೂಡ ಇಲ್ಲಿ ಸ್ಥಳವನ್ನು ಪಡೆದಿವೆ. ತಾತ್ತ್ವಿಕ ಚಿಂತನೆಗೂ ಅನುವು ದೊರೆತಿರುವುದನ್ನು ಹಿಂದೆ ಸೂಚಿಸಿದೆ.

ಪಾಳಯಗಾರರನ್ನು ಕುರಿತು ಮೊದಲ ಕೃತಿಯನ್ನು ರಚಿಸುವ ವೇಳೆಗೇ ಪುಟ್ಟಣ್ಣನವರ ವಯಸ್ಸು 69ನ್ನು ಮುಟ್ಟಿತ್ತು. ನಿವೃತ್ತರಾದ ಮೇಲೆ ಇಂಥ ಬರವಣಿಗೆಯಲ್ಲಿ ಗಂಭೀರವಾಗಿ ತೊಡಗಲು ಅವರಿಗೆ ಸಾಧ್ಯವಾಯಿತು. ಪಾಳಯಗಾರರ ಬಗೆಗೆ ಪುಟ್ಟಣ್ಣನವರು ಎಷ್ಟು ಪ್ರಭಾವಿತರಾಗಿದ್ದರೆಂದರೆ, ಮಾಹಿತಿ ದೊರಕಿಸಿದ್ದರೆಂದರೆ, ಅವರು ಈ ವಿಷಯವಾಗಿ ಹಲವು ಬಿಡಿಲೇಖನಗಳನ್ನೂ ರಚಿಸಿದರು. ಸಾಮಗ್ರಿ ಸಂಗ್ರಾಹಕನ ಆಸಕ್ತಿ, ಸಂಶೋಧಕನ ಎಚ್ಚರ ಇವುಗಳೆರಡೂ ಇಲ್ಲಿನ ಬರವಣಿಗೆಯಲ್ಲಿ ಮೇಳವಿಸಿದುದರಿಂದ ಈ ಕೃತಿಗಳು ಆಯಾ ವಿಚಾರಗಳ ಬಗೆಗೆ ಇಂದಿಗೂ ಆಧಾರ ಗ್ರಂಥಗಳಾಗಿವೆ.

### ಟಿಪ್ಪಣಿಗಳು

1. ಚಂದ್ರವಳ್ಳಿ ; (ಸಂ.) ಎಂ. ವಿ. ಶ್ರೀನಿವಾಸ್ ಮತ್ತು ಲಕ್ಷ್ಮಣ್ ತೆಲಗಾವಿ ; ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ; 1976; ಹುಲ್ಲೂರು ಶ್ರೀನಿವಾಸ ಜೋಯಿಸರು ಮತ್ತು ಚಿತ್ರದುರ್ಗದ ಇತಿಹಾಸ (ಲಕ್ಷ್ಮಣ್ ತೆಲಗಾವಿ), ಪು. 54.

2. ಅದೇ, ಚಿತ್ರದುರ್ಗ ಜಿಲ್ಲೆಯಲ್ಲಿ ವಿಜಯನಗರ ಅರಸರ ಆಳ್ವಿಕೆ (ಕೆ. ಎಸ್. ಶಿವಣ್ಣ), ಪು. 62.

## 5. ಪಠ್ಯಪುಸ್ತಕಗಳು

ಕ್ರಿ. ಶ. 1881ರಲ್ಲಿ ಚಾಮರಾಜ ಒಡೆಯರು ಪಟ್ಟಕ್ಕೆ ಬಂದಾಗ ದೇಶಭಾಷೆಗಳು ಅಭಿವೃದ್ಧಿಮುಖವಾಗಿದ್ದವು. ನಾಡಿನ ವಿದ್ಯಾಭ್ಯಾಸಕ್ಕೆ ಹೊಸ ಚಲನೆ ಉಂಟಾಯಿತು. ಇಂಗ್ಲಿಷ್ ಭಾಷೆಯ ಸಂಪರ್ಕದಿಂದ ನಾಡಿನ ಶಿಕ್ಷಣರಂಗದಲ್ಲಿಯೂ ಹೊಸಗಾಳಿ ಬೀಸಿತು. ಹೊಸದೊಂದು ಕಸಿ ಉಂಟಾಯಿತು. ಹಳೆಯ ಪದ್ಧತಿಗಳಲ್ಲಿ ಇಲ್ಲದಿದ್ದ ಹಲವು ಹೊಸ ಅಂಶಗಳು ಸೇರಿಕೊಂಡವು. ಶಿಕ್ಷಣಪದ್ಧತಿ ಪುನರ್ವ್ಯವಸ್ಥೆಗೊಳಗಾಯಿತು. ಚಾಮರಾಜ ಒಡೆಯರ ಅಧಿಕಾರಾವಧಿಯಲ್ಲಿ ಹಲವು ಪಾಠಶಾಲೆಗಳು ಪ್ರಾರಂಭವಾದುವು. ಅರಮನೆಯ ದರ್ಬಾರು ಬಕ್ಷಿಗಳಾದ ಅಂಬಿಲ್ ನರಸಿಂಹಯ್ಯಂಗಾರರ ಪ್ರೋತ್ಸಾಹ ಈ ದಿಕ್ಕಿನಲ್ಲಿ ಎಲ್ಲ ಸಹಕಾರವನ್ನೂ ನೀಡಿತು. ದಿವಾನ್ ರಂಗಾಚಾರ್ಲು ಮತ್ತು ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರ್ ಲೂಯಿ ರೈಸ್ ಅವರುಗಳ ಪ್ರೋತ್ಸಾಹದಿಂದ ಪಾಠಶಾಲೆಗಳ ಅಭಿವೃದ್ಧಿಗೆ ತಕ್ಕಂತೆ ಪಠ್ಯಪುಸ್ತಕಗಳು ಹೊರಬರಲಾರಂಭಿಸಿದವು. ಶಿಕ್ಷಣಖಾತೆಯ ಅಧಿಕಾರಿಗಳಾದ ಎಚ್. ಜೆ. ಭಾಭಾ ಮತ್ತು ಎಂ. ಶಾಮ

ರಾವ್ ಇವರುಗಳು ಕೂಡ ಪಠ್ಯರಚನೆಗೆ ಪ್ರೋತ್ಸಾಹಕೊಟ್ಟರು. ಎಂ. ಎಸ್. ಪುಟ್ಟಣ್ಣನವರಿಂದ ರಚಿತವಾದ ಪಠ್ಯಪುಸ್ತಕಗಳು ಈ ಪ್ರೋತ್ಸಾಹದ ಫಲ. 'ಹಿಂದೂ ಚರಿತ್ರ ದರ್ಪಣ' (ಎರಡು ಭಾಗಗಳು), 'ಹಿಂದೂ ಚರಿತ್ರ ಸಂಗ್ರಹ', 'ಕನ್ನಡ ಒಂದನೆಯ ಪುಸ್ತಕವು' ಹಾಗೂ 'ಕನ್ನಡ ಲೇಖನ ಲಕ್ಷಣ' ಇವುಗಳು ಪುಟ್ಟಣ್ಣನವರಿಂದ ರಚಿತವಾದ ನಾಲ್ಕು ಪಠ್ಯಗಳು. ಇವುಗಳಲ್ಲಿ ಮೊದಲ ಎರಡು ಕೃತಿಗಳನ್ನು ಎಂ. ಎಸ್. ಪುಟ್ಟಣ್ಣನವರು ಎಂ. ಬಿ. ಶ್ರೀನಿವಾಸಯ್ಯಂಗಾರರ ಸಹಕರ್ತೃತ್ವದಲ್ಲಿ ರಚಿಸಿದರು. ಇಬ್ಬರೂ ಉಪಾಧ್ಯಾಯ ವೃತ್ತಿಯಲ್ಲಿ ಕೆಲವು ಕಾಲ ದುಡಿದವರು.

**'ಹಿಂದೂ ಚರಿತ್ರ ದರ್ಪಣ'(ಎರಡು ಭಾಗಗಳು) ಮತ್ತು 'ಹಿಂದೂ ಚರಿತ್ರಸಂಗ್ರಹ'**

'ಹಿಂದೂ ಚರಿತ್ರ ದರ್ಪಣ' (ಎರಡು ಭಾಗಗಳು) 1882 ರಲ್ಲಿ ಬೆಳಕುಕಂಡಿತು. ಅನಂತರ ಇದರ ಸಂಗ್ರಹರೂಪ 'ಹಿಂದೂ ಚರಿತ್ರ ಸಂಗ್ರಹ' ಎಂಬ ಹೆಸರಿನಲ್ಲಿ 1887 ರಲ್ಲಿ ಬಂದಿತು. ಇದು ಮೊದಲಿನ ಕೃತಿಗಿಂತ ಹೆಚ್ಚು ಜನಪ್ರಿಯವಾಯಿತು. ಮುಂದಿನ ಆವೃತ್ತಿಯನ್ನು 'ಹಿಂದೂ ಚರಿತ್ರ ದರ್ಪಣ' ಕಂಡ ದಾಖಲೆಗಳು ಉಪಲಬ್ಧವಾಗಿಲ್ಲ. ಆದರೆ 'ಹಿಂದೂ ಚರಿತ್ರ ಸಂಗ್ರಹ'ದ ಎರಡು ಸಾವಿರ ಪ್ರತಿಗಳು ಕೇವಲ ಐದೇ ತಿಂಗಳಲ್ಲಿ ಮುಗಿದು ಎರಡನೇ ಮುದ್ರಣ 1888 ರಲ್ಲಿ ಬಂದಿತು. 'ಹಿಂದೂ ಚರಿತ್ರ ದರ್ಪಣ' ದಲ್ಲಿ ವಿವರವಾಗಿ ಭಾರತದ ಗಡಿಗಳು, ಪರ್ವತಗಳು, ನದಿಗಳು, ವಾಯುಗುಣ, ಜನಸಂಖ್ಯೆ, ಜನಾಂಗಗಳು, ಭಾಷೆಗಳು, ಮತಗಳು, ಪುರಾಣ ಪ್ರಸಿದ್ಧರಾದ ದೊರೆಗಳು, ರಾಮಾಯಣ ಮಹಾಭಾರತಗಳು, ಯುಗಗಳು, ಸೂರ್ಯಚಂದ್ರವಂಶಗಳು ಇತ್ಯಾದಿಗಳನ್ನು ಪರಿಚಯಿಸುತ್ತಾರೆ. 'ಹಿಂದೂ ಚರಿತ್ರ ಸಂಗ್ರಹ'ದಲ್ಲಿ ಇವುಗಳ ಅತಿ ಸಂಕ್ಷಿಪ್ತ ರೂಪವಿದೆ. ಇಲ್ಲೆಲ್ಲ ಕಳೆದ ಶತಮಾನದ ಮನೋಧರ್ಮದ ಒಂದು ಮುದ್ರೆ ಸಿಗುತ್ತದೆ. ಪುರಾಣ ಇತಿಹಾಸಗಳ ವ್ಯತ್ಯಾಸ ಇಲ್ಲಿ ಗೆರೆ ಕೊರೆದಂತೆ ಸ್ಪಷ್ಟವಾಗಿಲ್ಲ. ಈ ಕೃತಿಗಳಲ್ಲಿ ಇದೊಂದು ಮಿತಿ.

'ಹಿಂದೂ ಚರಿತ್ರ ದರ್ಪಣ' ದ ಮೊದಲ ಭಾಗದಲ್ಲಿ ಹಿಂದೂ ಮತ್ತು ಮಹಮ್ಮದೀಯರ ಆಳ್ವಿಕೆಯಿದೆ. ಎರಡನೇ ಭಾಗದಲ್ಲಿ ಇಂಗ್ಲಿಷರ ಆಳ್ವಿಕೆಯಿದೆ. ಈ ಮೂರು ಆಳ್ವಿಕೆಗಳ ಕಾಲದಲ್ಲಿ ಜನರ ಸಾಮಾನ್ಯ ಸ್ಥಿತಿಗತಿಗಳನ್ನು ಸೂಚಿಸಿರುವ ಭಾಗ ಕುತೂಹಲಕರವಾಗಿದೆ. 'ಹಿಂದೂ ಚರಿತ್ರ ದರ್ಪಣ' ಹಾಗೂ 'ಹಿಂದೂ ಚರಿತ್ರ ಸಂಗ್ರಹ' ಈ ಎರಡು ಕೃತಿಗಳಲ್ಲೂ ಇರುವ ಹಿಂದೂದೇಶದ ಭೂಪಟ ಹಿಂದೂಗಳ ಮತ್ತು ಮಹಮ್ಮದೀಯರ ಕಾಲಕ್ಕೆ ಸೇರಿದ್ದು. ಮುಖ್ಯ ವಂಶಾವಳಿಗಳನ್ನು ನಕ್ಷೆಯ ಮೂಲಕ ತೋರಿಸಿದೆ. ಎರಡು ಕೃತಿಗಳಲ್ಲೂ ಕಾಲಾನುಸಾರಿಯಾದ ವಿವರಣೆ ಇದೆ. ಎಳೆಯರಿಗೆ ಇದು ತೀರ ನಿರಾಯಾಸಕರವಾದ ಪದ್ಧತಿ. ಅತಿಕ್ಲಿಷ್ಟವಾದ ಅಥವಾ ಅತಿ ಸೂಕ್ಷ್ಮವಾದ ವಿವರಗಳು ಇಲ್ಲ. ಬಹುಮುಖ್ಯವಾದ ಇಸವಿಗಳನ್ನು ನೆನಪಿನಲ್ಲಿಟ್ಟು

ಕೊಂಡರೆ ಇಡೀ ಪಠ್ಯವನ್ನು ನೆನಪಿನಲ್ಲಿಡಬಹುದು. ಸ್ಮರಣೆಗೆ ಅನುಕೂಲವಾದ ವಿಧಾನ ಅನುಸರಿಸಿದ್ದಾರೆ.

ಈ ಪಠ್ಯಗಳಲ್ಲಿ ವಿಷಯಗಳ ವಿವರಗಳಿಗೆ ಹೋಗಿಲ್ಲವಾದ್ದರಿಂದ ಮಕ್ಕಳ ಗ್ರಹಣ ಶಕ್ತಿಗೆ ಗಾಸಿ ಇಲ್ಲ. ವಿಷಯಗಳನ್ನು ತುರುಕಿಯೂ ಇಲ್ಲ. ಯಾವುದೇ ವಿಷಯದ ರೂಪುರೇಷೆಗಳು ಮಾತ್ರ ಗಾಢವಾದ ಒತ್ತು ಬೀಳುವಂತೆ ಹೇಳಿದೆ. ಈ ವಿಷಯದಲ್ಲಿ 'ಹಿಂದೂ ಚರಿತ್ರ ದರ್ಪಣ' ಕ್ಕಿಂತ 'ಹಿಂದೂ ಚರಿತ್ರ ಸಂಗ್ರಹ' ಹೆಚ್ಚು ಸಿದ್ಧಿ ಪಡೆದಿದೆ. ವಿಷಯವನ್ನು ಸಂಗ್ರಹಿಸಿ ಹೇಳುವ ಉದ್ದೇಶವಿರುವುದರಿಂದ ನಿರೂಪಣೆಯಲ್ಲಿ ಬಿಗಿ ಬಂದಿದೆ. ಒಂದು ಉದಾಹರಣೆಯನ್ನು ನೋಡಬಹುದು.

"ರುಸಿಯು — ಅಲ್ತಮಷನ ಮಗನಾದ ರಕ್ನುದೀನ್ ಎಂಬುವನು ಕೂಡಲೆ ಗಾದಿಗೆ ಬಂದನು. ಇವನ ನಡತೆಯು ಸರಿಯಾಗಿಲ್ಲದಿದ್ದ ಕಾರಣ 6 ತಿಂಗಳಲ್ಲಿಯೇ ಇವನಿಗೆ ಅಧಿಕಾರ ತಪ್ಪಿ, ಇವನ ಅಕ್ಕ ರುಸಿಯಾ ಬೇಗಂ ಎಂಬಾಕೆಗೆ ತಂದೆಯ ಇಷ್ಟವಿದ್ದಂತೆಯೇ 1236 ರಲ್ಲಿ ಪಟ್ಟವಾಯಿತು. ಇವಳು ತನ್ನ ಬುದ್ಧಿಚಾತುರ್ಯದಿಂದ ದುಷ್ಟರನ್ನು ಶಿಕ್ಷಿಸಿ ನ್ಯಾಯವಾಗಿ ರಾಜ್ಯವನ್ನು ಆಳುತ್ತಿದ್ದಳು. ಆದರೆ ಇವಳು ಹೆಂಗಸಿನ ದುರ್ಬುದ್ಧಿಯನ್ನು ಬಿಡದೆ ಹಬ್ಸೀದೇಶದ (Abyssinia) ಒಬ್ಬ ಕುದುರೇ ಚಾಕರನಿಗೆ ವಿಶೇಷ ದಯೆಯನ್ನು ತೋರಿಸಿದಳು. ಇದು ದೆಹಲೀ ದೊಡ್ಡ ಮನುಷ್ಯರಿಗೆ ಸಹಿಸಲಿಲ್ಲ. 1239 ರಲ್ಲಿ ಲಾಹೋರಿನ ಅಧಿಕಾರಿಯು ದಂಗೇ ಎದ್ದನು. ಈ ರಾಣಿಯು ಅವನನ್ನು ಅಡಗಿಸಿದಾಗ್ಯೂ ಹೀಗೆಯೇ ದಂಗೆ ಎದ್ದಿದ್ದ ಮತ್ತೊಬ್ಬನಿಗೆ ವಶವಾಗಬೇಕಾಯಿತು. ಇಷ್ಟರಲ್ಲಿಯೇ ಇವಳ ತಮ್ಮ ಬೈರಾಮನು ಸಿಂಹಾಸನವನ್ನು ಹಿಡಿದು ಸೇನೆಯೊಡನೆ ಇವಳ ಮೇಲೆ ಯುದ್ಧಕ್ಕೆ ಹೊರಟನು. ಶಕ್ತಳಾದ ಈ ರಾಣಿಯು ಕೊನೆಗೆ ಜಗಳದಲ್ಲಿ ಸೋತು 1239 ರಲ್ಲಿ ಕೊಲ್ಲಲ್ಪಟ್ಟಳು. ಯುದ್ಧದಲ್ಲಿಯಾಗಲಿ ರಾಜ್ಯಭಾರದಲ್ಲಿಯಾಗಲಿ ಇಷ್ಟು ಸಾಮರ್ಥ್ಯವುಳ್ಳ ಹೆಂಗಸರು ಸಿಕ್ಕುವುದು ಕಷ್ಟ." (ಹಿಂ.ಚ.ದ. 1. ಪು. 70)

ಈ ಭಾಗದ ಸಂಗ್ರಹ ರೂಪ ಹೀಗಿದೆ :

"ರುಸಿಯಾ (1236–1239)—ಈಕೆಯು ಬಹು ಚತುರಳಾಗಿ ರಾಜ್ಯಾಂಗದ ವಿಚಾರವನ್ನು ಚನ್ನಾಗಿ ತಿಳಿದು ಆಡಳಿತಗಳನ್ನು ಸರಿಯಾಗಿ ನಡಿಸುತ್ತಿದ್ದಳು. ಆದರೆ ಒಬ್ಬಾನೊಬ್ಬ ಹಬ್ಸೀ ಗುಲಾಮನ ವಿಷಯದಲ್ಲಿ ಇವಳು ತೋರಿಸಿದ ಅಭಿಮಾನವು ದೆಹಲಿಯ ಪ್ರಧಾನಿಗಳಿಗೆ ಸರಿಬೀಳದಿದ್ದರಿಂದ ಮೂರು ವರ್ಷದಲ್ಲಿಯೇ ಇವಳ ಅಧಿಕಾರವು ಕೊನೆಗೊಂಡಿತು. ಇವಳ ತರುವಾಯ ರಾಜಸಂತತಿಯವರಲ್ಲಿ ಜಗಳ ಉಂಟಾಗಿ, ಸ್ವಲ್ಪ ಸ್ವಲ್ಪ ದಿವಸ ಒಬ್ಬೊಬ್ಬರು ಆಳುತ್ತಿದ್ದರು. ಕೊನೆಗೆ ಅಲ್ತಮಷನ ಮೊಮ್ಮಗನಾದ ನಸಿರುದ್ದೀನ್ ಎಂಬುವನನ್ನು ಸೆರೆಯಿಂದ ಕರೆತಂದು ಗಾದಿಯ ಮೇಲೆ 1245 ರಲ್ಲಿ ಕೂರಿಸಿದರು." (ಹಿಂ.ಚ.ಸಂ. ಪು. 25)

ಎರಡು ಕೃತಿಗಳಲ್ಲೂ ಪ್ರಾಸಂಗಿಕವಾಗಿ ಜನರ ಸಂಸ್ಕೃತಿ, ನಾಗರಿಕತೆ, ಆಯಾ

ಕಾಲದ ಸಂಪ್ರದಾಯ, ಕಟ್ಟಳೆಗಳನ್ನು ಸೂಚಿಸಿದೆ. ಮಕ್ಕಳ ವಯಸ್ಸನ್ನು ಗಮನಿಸಿ ಈ ವಿಚಾರಗಳನ್ನು ಸರಳವಾಗಿ ನಿರೂಪಿಸಿದೆ. ಸಮಾಜವೀಕ್ಷಣೆ ಇಲ್ಲಿಯ ಆಸಕ್ತಿ. ಒಂದು ಉದಾಹರಣೆಯನ್ನು ನೋಡಬಹುದು. "ಪ್ರತಿಗ್ರಾಮ ಅಥವಾ ಊರಿನಲ್ಲಿಯೂ ಹೆಗ್ಗಡಿಯಾದ ಒಬ್ಬ ಗೌಡನು ಅಲ್ಲಿನ ಆಡಳಿತವನ್ನು ನೋಡಿಕೊಳ್ಳುತ್ತಾ, ಸರಕಾರದ ಕಂದಾಯವನ್ನು ಗ್ರಾಮದವರಿಂದ ವಸೂಲು ಮಾಡಿಕೊಡುತ್ತಾ, ಚಿಕ್ಕ ಚಿಕ್ಕ ವ್ಯಾಜ್ಯಗಳನ್ನು ತೀರ್ಮಾನ ಮಾಡುತ್ತಾ, ಗ್ರಾಮದ ವಿಚಾರದಲ್ಲಿ ಸರಕಾರಕ್ಕೆ ಜವಾಬುದಾರನಾಗಿರತಕ್ಕದ್ದು. ಇವನ ಸಹಾಯಕ್ಕಾಗಿ ಶಾನುಭಾಗ, ಚಕ್ರ ಮುಂತಾದವರು ಇರತಕ್ಕದ್ದು. ಮತ್ತು ಗ್ರಾಮಸ್ಥರ ಸಹಾಯಕ್ಕಾಗಿ ಜೋಯಿಸ, ಕಮ್ಮಾರ, ಆಗಸ ಮೊದಲಾದವರೂ ಇರತಕ್ಕದ್ದು. ಇವರೆಲ್ಲಾ ಸೇರಿ ಒಟ್ಟು ಹನ್ನೆರಡು ಜನ ಉದ್ಯೋಗಸ್ಥರು ಗ್ರಾಮದ ಬಾರಾಬಲೂತಿ ಎನ್ನಿಸಿಕೊಳ್ಳುತ್ತಾರೆ. ಇಂಥಾ ಕೆಲವು ಗ್ರಾಮಗಳಿಗೆ ಒಬ್ಬ ಕೋಶಾಧಿಕಾರಿ ಇರತಕ್ಕದ್ದು; ಅಂಥಾ ಅಧಿಕಾರಿಗಳು ಹಲವರು ಒಬ್ಬ ರಾಜನ ಕೈ ಕೆಳಗೂ ಅಂಥಾ ರಾಜರು ಒಬ್ಬ ಚಕ್ರವರ್ತಿಯ ಕೈ ಕೆಳಗೂ ಇರತಕ್ಕದ್ದು." (ಹಿಂ.ಚ. ಸಂ. ಪು. 4)

ದೇಶಕಾಲಗಳ ಭೇದವನ್ನರಿಯದ ಮಗುವಿಗೆ ತನ್ನ ಊರು, ದೇಶದ ವಿಚಾರಗಳಿಂದ ವಿಷಯದ ಬಗೆಗೆ ಮೊದಲ ಗ್ರಹಿಕೆ ಮೂಡುತ್ತದೆ. ಇಲ್ಲೆಲ್ಲ ಪೌರನೀತಿಯ ಅಂಶಗಳೂ ಸೇರುತ್ತವೆ.

ಈ ಪಠ್ಯಗಳ ಇನ್ನೊಂದು ಹಿರಿಮೆ ಎಂದರೆ ಹಿನ್ನೆಲೆಯನ್ನು ಕಂಡರಿಸುವ ರೀತಿ. ಯಾವ ವಿಚಾರವನ್ನು ಕುರಿತು ಹೇಳುವಾಗಲೂ ಆಯಾ ವಿಚಾರದ ವರ್ತಮಾನ ಸ್ಥಿತಿಗಿಂತ ಮೊದಲಿನ ವಿಚಾರವನ್ನು ಸಂಕ್ಷಿಪ್ತವಾಗಿ ಹೇಳುತ್ತಾರೆ. ಮೊಗಲರು ಭಾರತಕ್ಕೆ ಬರುವ ಮೊದಲಿನ ಸ್ಥಿತಿಯನ್ನು ತಿಳಿಸಿದಾಗ ಬಂದ ಮೇಲಿನ ವಿದ್ಯಮಾನಗಳು ಚೆನ್ನಾಗಿ ತಿಳಿಯುತ್ತವೆ. ಅದೇ ರೀತಿ ಇಂಗ್ಲಿಷರ ಆಳ್ವಿಕೆಗಿಂತ ಮೊದಲಿನ ಸ್ಥಿತಿ ತಿಳಿದರೆ ಆ ಆಳ್ವಿಕೆಯಲ್ಲಿನ ಸ್ಥಿತಿ ಚೆನ್ನಾಗಿ ತಿಳಿಯುತ್ತದೆ. ರಾಜ್ಯಗಳ ಸ್ಥಾಪನೆ ಮುಕ್ತಾಯಗಳು, ರಾಜರ ಅಭಿವೃದ್ಧಿ ಪತನಗಳು, ಜನಾಂಗಗಳ ಏಳು ಬೀಳುಗಳು ಮಗುವಿಗೆ ಕುತೂಹಲದ ಸರಕಾಗಿರುವಂತೆಯೇ ದೇಶದ ನಾಡಿಯಾಗಿರುವ ಸಾಮಾನ್ಯ ಜನರ ಬಗೆಗೆ ಕೂಡ ಆಸಕ್ತಿ ಮೂಡುವಂತೆ ಮಾಹಿತಿಯನ್ನು ನೀಡಲಾಗಿದೆ.

'ಹಿಂದೂ ಚರಿತ್ರ ದರ್ಪಣ' (ಎರಡು ಭಾಗಗಳು) ಪಠ್ಯದಲ್ಲಿ ಮಾದರಿ ಪ್ರಶ್ನೆಗಳನ್ನು ಕೊಟ್ಟಿಲ್ಲ. 'ಹಿಂದೂ ಚರಿತ್ರ ಸಂಗ್ರಹ' ಪಠ್ಯದಲ್ಲಿ ಪ್ರಶ್ನೆಗಳ ಪಟ್ಟಿಯನ್ನು ಕೊಟ್ಟಿದೆ. ಎಲ್ಲ ಪ್ರಶ್ನೆಗಳೂ ಮಕ್ಕಳ ಚಾಕಚಕ್ಯತೆ, ಸ್ವತಂತ್ರ ಆಲೋಚನೆಗಳನ್ನು ಕಡೆಗಣಿಸದೆ, ಸ್ಮರಣಶಕ್ತಿಗೆ ಆದ್ಯತೆ ಇರುವ, ಅಂದಿನ ರೀತಿಯ, ಪ್ರಶ್ನೆಗಳು. ಕಲಿತದ್ದು ಉಳಿಯಬೇಕು ಎನ್ನುವುದು ಇಲ್ಲಿನ ಮುಖ್ಯ ಆಶಯ. ಪಠ್ಯದ ಸಂಗ್ರಹಗುಣ ಇರುವಂತಹ ಉತ್ತರಗಳನ್ನೇ ಈ ಪ್ರಶ್ನೆಗಳ ಮೂಲಕ ಕೋರಿದೆ. ಸುವ್ಯವಸ್ಥಿತವಾದ ವಿಷಯ, ಕ್ರಮಬದ್ಧವಾದ ಬರವಣಿಗೆ, ನಕ್ಷೆ, ಭೂಪಟಗಳಿಂದ ಕೂಡಿದ ಈ ಪಠ್ಯ

ಪುಸ್ತಕಗಳು ಒಂಬತ್ತು ದಶಕಗಳ ಮೊದಲು ಜನಪ್ರಿಯವಾದುದು ಅಚ್ಚರಿಯಲ್ಲ. ಈ ಎರಡು ಕೃತಿಗಳೂ ಪ್ರಾರಂಭದ ಪಠ್ಯಗಳ ಒಂದು ಮಾದರಿಯಾಗಿ ಕಾಣುತ್ತವೆ.

## ಕನ್ನಡ ಒಂದನೆಯ ಪುಸ್ತಕವು

19ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಾಥಮಿಕ ಶಾಲೆಯಲ್ಲಿ 'ಎ' ಕ್ಲಾಸ್, 'ಬಿ' ಕ್ಲಾಸ್, ಒಂದನೆಯ ತರಗತಿ ಹಾಗೂ ಎರಡನೆಯ ತರಗತಿಗಳೆಂದು ನಾಲ್ಕು ವರ್ಷಗಳ ಓದುವಿಕೆ ಇರುತಿತ್ತು. 'ಎ' ಕ್ಲಾಸ್ ಮತ್ತು 'ಬಿ' ಕ್ಲಾಸ್‌ಗಳಲ್ಲಿ ಚ. ವಾಸು ದೇವಯ್ಯ ಹಾಗೂ ಶ್ರೀನಿವಾಸರಾವ್ ಅವರ ಬಾಲಬೋಧೆಗಳನ್ನು ಪಠ್ಯಪುಸ್ತಕಗಳ ನ್ನಾಗಿ ಇಟ್ಟಿದ್ದರು. ಪ್ರಾಥಮಿಕ ಶಾಲೆಯ ಮೂರನೇ ವರ್ಷವಾವ ಒಂದನೆಯ ತರ ಗತಿಗೆ ಎಂ. ಎಸ್. ಪುಟ್ಟಣ್ಣನವರ 'ಕನ್ನಡ ಒಂದನೆಯ ಪುಸ್ತಕವು' (1895) ಪಠ್ಯ ವಾಗಿತ್ತು. ಇದು ಶಿಕ್ಷಣ ಇಲಾಖೆಗಾಗಿ ಸಿದ್ಧಪಡಿಸಿದ ರಚನೆ. ಪಠ್ಯಪುಸ್ತಕ ಸಮಿತಿಯ ಆದೇಶದಂತೆ ಸದಸ್ಯರಾದ ಎಂ. ಶಾಮರಾಯರು, ಆರ್. ನರಸಿಂಹಾಚಾರ್ಯರು, ಎಸ್. ಜಿ. ನರಸಿಂಹಾಚಾರ್ಯರು ಮತ್ತು ಬಿ. ಮಲ್ಲಪ್ಪನವರು 'ಕನ್ನಡ ಒಂದನೆಯ ಪುಸ್ತಕವು' ಸಿದ್ಧವಾದಾಗ ಕೆಲವು ತಿದ್ದುಪಡಿಗಳನ್ನು ಮಾಡಿದರು.

'ಕನ್ನಡ ಒಂದನೆಯ ಪುಸ್ತಕವು' ಕೃತಿಯಲ್ಲಿ ಒಟ್ಟು 95 ಪಾಠಗಳಿವೆ. ಇವು ಗಳಲ್ಲಿ 'ಜನಗಳ ಪದ್ಧತಿ' ಮೂರುಭಾಗಗಳಲ್ಲಿ, 'ಹೆಣ್ಣುಮಕ್ಕಳ ವಿದ್ಯಾಭ್ಯಾಸ' ಎರಡು ಭಾಗಗಳಲ್ಲಿ ಮತ್ತು 'ಗೋವಿನ ಕಥೆ' ಏಳು ಭಾಗಗಳಲ್ಲಿ ಇವೆ. ಹೆಚ್ಚಾದ 9 (2+1+6) ಉಲ್ಲೇಖಗಳನ್ನು ಬಿಟ್ಟರೆ 86 ಪಾಠಗಳೆನ್ನಬಹುದು. ಇವುಗಳಲ್ಲಿ 76 ಗದ್ಯಪಾಠಗಳು, 10 ಪದ್ಯಪಾಠಗಳು. 'ಗಾಳಿ'ಯ ಮುಂದುವರಿಕೆಯೇ 'ಹೊಸ ಗಾಳಿಯ ಸಂಚಾರ'ವಾಗಿದೆ. ಇಂಥ ಇತರ ಎಡೆಗಳಲ್ಲಿ ಒಂದೇ ಹೆಸರಿರುತ್ತಿತ್ತು. 'ಚಂದ್ರ', 'ಹೊಗೆಯಗಾಡಿ' ಈ ಉಲ್ಲೇಖಗಳು ಪದ್ಯಗದ್ಯಗಳೆರಡರಲ್ಲೂ ಕಾಣಿಸಿ ಕೊಂಡಿವೆ.

ಇಲ್ಲಿನ ಪಾಠಗಳಲ್ಲಿ ಸಿಂಹಪಾಲು ವಸ್ತುಪಾಠಗಳಿಗೆ ಲಭಿಸಿದೆ. ಸಸ್ಯವರ್ಗ, ಪ್ರಾಣಿವರ್ಗ, ಖನಿಜಗಳು, ಧಾನ್ಯಗಳು, ನದಿ, ಗಾಳಿ, ನೀರು ಮುಂತಾದ ಪ್ರಾಕೃತಿಕ ವಿಷಯಗಳು, ದೇಹದ ಅಂಗಾಂಗಗಳು ಮುಂತಾದ ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿದ ಹಲವು ವಿಷಯಗಳು ಈ ಪಟ್ಟಿಯಲ್ಲಿ ಎಡೆ ದೊರಕಿಸಿಕೊಂಡಿವೆ, ಈ ಎಲ್ಲ ಗದ್ಯ ಪಾಠಗಳಲ್ಲೂ ಮುಖ್ಯ ವಿಷಯವನ್ನು ಸಣ್ಣಸಣ್ಣದಾಗಿ ಒಡೆದು ಬಿಡಿಸಿ ಹೇಳುವುದ ರಿಂದ ಮಗುವಿಗೆ ನಿರಾಯಾಸವಾಗಿ ಒಟ್ಟು ಪರಿಚಯ ಲಭಿಸುತ್ತದೆ. ಪಾಠದ ಮುಖ್ಯಾಂಶ ಅದರ ಉಪಭಾಗಗಳ ಜೊತೆ ರಾಸಾಯನಿಕ ರಚನೆಯ ಬಿಗಿಯಿಂದ ಕೂಡಿರುವುದನ್ನು ಗಮನಿಸಬಹುದು. ಒಂದು ವಿಷಯವನ್ನು ಕುರಿತು ಹೇಳುವಾಗ ಪ್ರಾಸಂಗಿಕವಾಗಿಯೂ ಬೇರೆ ವಿಚಾರವನ್ನು ಪ್ರಸ್ತಾಪಿಸದೆ ಇರುವುದೇ ಇದಕ್ಕೆ ಕಾರಣ. ಇದರಿಂದ ಪಾಠಗಳಲ್ಲಿ ಒಂದು ಐಕಾಗ್ರ್ಯ ಪ್ರಕಟವಾಗಿದೆ. ವಿಷಯಗ್ರಹಣೆ ನಿರಾಯಾಸ

ಕರವೂ ಸ್ಮರಣೆಗೆ ಸಹಾಯಕವೂ ಆಗಿದೆ. ಇಂಥ ಕ್ರಮವಾದ ಅಭ್ಯಾಸದಿಂದ ದಿನನಿತ್ಯದ ಪರಿಚಿತ ವಸ್ತುಗಳ ಬಗೆಗೆ ತಿಳುವಳಿಕೆಯುಂಟಾಗುತ್ತದೆ.

ಯಾವುದೇ ಪಾಠದಲ್ಲೂ ಕ್ರಮಸಂಖ್ಯೆ, ಶೀರ್ಷಿಕೆ, ಕಠಿಣವಾದ ಹಾಗೂ ನೂತನವಾದ ಪದಗಳು ಇವುಗಳನ್ನು ಮೊದಲು ಕಾಣಬಹುದು. ಚಿತ್ರಗಳು ಐಚ್ಛಿಕ. ಅನಂತರ ಪಾಠಭಾಗ. ಒಂದು ಉದಾಹರಣೆಯನ್ನು ನೋಡಬಹುದು.

"ಎಪ್ಪತ್ತಾರನೆಯ ಪಾಠ

ಕಣ್ಣು

ಸಮಾನವಾದುದು ಸುಲೋಚನ ಗೋಚರವಾಗುವುವು

1. ನಮ್ಮ ಅಂಗಗಳಲ್ಲಿ ಕಣ್ಣಿಗೆ ಸಮಾನವಾದುದು ಯಾವುದೂ ಇಲ್ಲ. ಕಣ್ಣು ಹೋದರೆ, ಅನೇಕ ವಿಷಯಗಳು ತಿಳಿಯುವುದಿಲ್ಲ. ಕುರುಡರಿಗೆ ಯಾವಾಗಲೂ ಇನ್ನೊಬ್ಬರ ಸಹಾಯವಿದ್ದೇ ಇರಬೇಕು.

2. ಕಣ್ಣಿನಲ್ಲಿ ಬೆಳ್ಳಗೆ ಕಾಣುವುದು ಬಿಳಿಯ ಗುಡ್ಡೆ; ನಡುವೆ ಗುಂಡಾಗಿ ಕರ್ರಗೆ ಕಾಣುವುದು ಕರಿಯ ಗುಡ್ಡೆ. ಕರಿಯ ಗುಡ್ಡೆಯ ನಡುವೆ ಕಾಣುವುದು ಕಣ್ಣಿನ ಪಾಪೆ. ಮೂಗಿನ ಮಗ್ಗುಲಲ್ಲಿರುವ ಮೂಲೆಗೆ ಕಣ್ಣುಕುಣಿಕೆ ಎಂದೂ, ಕಿವಿಯ ಕಡೆ ಇರುವ ಮೂಲೆಗೆ ಕಡೆಗಣ್ಣೆಂದೂ ಹೆಸರು. ಮೇಲುಗಡೆ ಮುಚ್ಚಳದ ಹಾಗೆ ಇರುವುದು ರೆಪ್ಪೆ.

3. ಕಣ್ಣುಗುಡ್ಡೆ ಒಳಕ್ಕೆ ಇಳಿದಿದ್ದರೆ, ಗುಣಿಗಣ್ಣು; ಮುಂದಕ್ಕೆ ಹಾಯ್ದುಕೊಂಡಿದ್ದರೆ, ಗುಡ್ಡೆಗಣ್ಣು. ನೋಟದಲ್ಲಿ ಒಂದುಗುಡ್ಡೆ ಒಂದು ಕಡೆಗೂ, ಇನ್ನೊಂದು ಗುಡ್ಡೆ ಇನ್ನೊಂದು ಕಡೆಗೂ ತಿರುಗಿಕೊಂಡಿದ್ದರೆ, ಅದು ಮಾಲುಗಣ್ಣು, ನೋಟದಲ್ಲಿ ಒಂದು ಗುಡ್ಡೆ ನೆಟ್ಟಗಿದ್ದು, ಇನ್ನೊಂದು ಗುಡ್ಡೆ ರೆಪ್ಪೆಯೊಳಕ್ಕೆ ಸಿಕ್ಕಿಕೊಂಡಿದ್ದರೆ, ಅದು ಮೆಳ್ಳೆಗಣ್ಣು.

4. ರಾತ್ರಿ ಕಾಣಿಸದಿದ್ದರೆ, ಇರುಳುಗಣ್ಣು; ಹಗಲು ಕಾಣಿಸದಿದ್ದರೆ, ಹಗಲುಗಣ್ಣು. ಕೆಲವರಿಗೆ ಹತ್ತಿರವೇ ಕಾಣಿಸುವುದು. ಇನ್ನು ಕೆಲವರಿಗೆ ದೂರವಾಗಿ ಕಾಣಿಸುವುದು. ಸಾಧಾರಣವಾಗಿ 40 ವರುಷವಾದ ಮೇಲೆ ಹತ್ತಿರದಲ್ಲಿರುವ ಸಣ್ಣ ಸಣ್ಣ ಪದಾರ್ಥಗಳು ಚೆನ್ನಾಗಿ ಕಾಣಿಸುವುದಿಲ್ಲ. ಇದಕ್ಕೆ 'ಚಾಳಿಸ'ವೆಂದು ಹೆಸರು. ಇದಕ್ಕಾಗಿ ಸುಲೋಚನವನ್ನು ಹಾಕಿಕೊಳ್ಳುತ್ತಾರೆ.

5. ಬೆಳಕೂ ಬಣ್ಣವೂ ಕಣ್ಣಿಗೆ ಮಾತ್ರ ಗೋಚರವಾಗುವುವು."

(ಕ.ಒಂ.ಪು. ಪು. 79–80)

ಈ ಪಾಠಗಳ ವಾಕ್ಯರಚನೆ ಬಹಳ ಸುಲಭವಾದುದು. ಹಳೆಯ ಜಾಡಿನ ಶೈಲಿಯನ್ನು ದೂರೀಕರಿಸಿ, ಸುಲಭವಾದ ಚುರುಕಾದ ಶೈಲಿಯನ್ನು ಅಳವಡಿಸಿಕೊಂಡಿ

ದ್ದಾರೆ. ಇಲ್ಲಿನದು ಕೆತ್ತಿ ನಯಮಾಡಿದ ಶೈಲಿ, ಜಿಗುಟಿಲ್ಲದ, ಬಿರುಸಿಲ್ಲದ, ಪೆಡಸಲ್ಲದ ಸರಳವಾದ ಶೈಲಿ.

**ಕಥೆಗಳು**

ಕನ್ನಡ ಒಂದನೆಯ ಪುಸ್ತಕದಲ್ಲಿ 22 ಕಥೆಗಳಿವೆ, 21 ಗದ್ಯ ಕಥೆಗಳು ಹಾಗೂ 1 ಪದ್ಯಕಥೆ. ಇಲ್ಲಿನ ಒಟ್ಟು ಇಪ್ಪತ್ತೆರಡು ಕಥೆಗಳಲ್ಲಿ ಸಿಂಹಪಾಲು ಚಾತುರ್ಯದ ಕಥೆಗಳಿಗೆ ದಕ್ಕಿದೆ. ಇದು ಗಮನಾರ್ಹವಾದ ಅಂಶವಾಗಿದೆ. ತಾನು ನೀರು ಕುಡಿದು ಭಾವಿಯಿಂದ ಹೊರಬರಲು ಅನುಕೂಲಿಸುವಂತೆ ಹೋತವನ್ನು ಭಾವಿಯೊಳಗೆ ಬರುವಂತೆ ನರಿ ಮಾಡಿದ ಕಥೆ 'ನರಿಯ ಯುಕ್ತಿ'. ನಾಳೆಯಿಂದ ಮುಖ ತೋರಿಸಬೇಡ ಎಂಬ ಆಜ್ಞೆ ಪಡೆದದ್ದರಿಂದ ಮಡಕೆಗೆ ಎರಡು ತೂತು ಮಾಡಿ ಮುಖಕ್ಕೆ ಕವಿಚಿಕೊಂಡು ದೊರೆಯ ಕೋಪವನ್ನು ಹೋಗಲಾಡಿಸಿದವನ ಕಥೆ 'ನಕಲಿಯ ಶಾಮ', ಕಾಗೆಯ ರೂಪ, ಸಂಗೀತಜ್ಞಾನಗಳನ್ನು ಹೊಗಳಿ ಅದರ ಬಾಯಲ್ಲಿದ್ದ ಮಾಂಸದ ತುಂಡನ್ನು ಗಿಟ್ಟಿಸಿದ ನರಿಯ ಚಮತ್ಕಾರದ ನಿರೂಪಣೆ 'ಕಾಗೆ, ನರಿ'. ಗುಡಿಯೊಳಗೆ ಸೇರಿಕೊಂಡ ಹೋತ, ಗುಡಿಯ ಕೈಸಾಲೆಯೊಳಗೆ ಇದ್ದ ಸಿಂಹವನ್ನು ಬೆದರಿಸಿ ಓಡಿಸಿದ ಕಥೆ 'ಹೋತ, ಸಿಂಹ'. ಇಬ್ಬರ ಜಗಳದಿಂದ ಮೂರನೆಯವನಿಗೆ ಲಾಭ ಎಂದು ಬೋಧಿಸುವ ಕಥೆ 'ಬೆಕ್ಕುಗಳ ವ್ಯಾಜ್ಯ'. ತುಂಟುತನದ ಇಣಿಕುನೋಟವಿರುವ ಕಥೆ 'ತೆನ್ನಾಲ ರಾಮಕೃಷ್ಣನು ಕುದುರೆ ಸಾಕಿದುದು'. ಇಲ್ಲದ ನೆವದಿಂದ ದುಷ್ಟರು ಸಜ್ಜನರನ್ನು ಬಾಧಿಸುವ ಕಥೆ 'ತೋಳ, ಕುರಿಮರಿ'. ಈ ಕಥೆಗಳಲ್ಲಿ 'ನಕಲಿಯ ಶಾಮ', 'ಹೋತ, ಸಿಂಹ'ಗಳಲ್ಲಿ ಶುದ್ಧ ಹಾಸ್ಯವಿದೆ. ಬೇರೆ ಯಾರಿಗೂ ಮೋಸವಾಗದು. ತೆನ್ನಾಲ ರಾಮಕೃಷ್ಣನು ಕುದುರೆ ಸಾಕಿದುದು' ತುಂಟುತನದ ಪ್ರವೃತ್ತಿಯನ್ನು ಹೊಂದಿದೆ. 'ನರಿಯ ಯುಕ್ತಿ', 'ಕಾಗೆ, ನರಿ', 'ಬೆಕ್ಕುಗಳ ವ್ಯಾಜ್ಯ' ಮತ್ತು 'ತೋಳ, ಕುರಿಮರಿ' ಗಳಲ್ಲಿ ಎದುರಾಳಿ ಮೋಸಹೋಗುವುದರಿಂದ ಅನುಕಂಪದ ಎಳೆಯೂ ಕಾಣುತ್ತದೆ.

ಸತ್ಯಕ್ಕಾಗಿ ಪ್ರಾಣವನ್ನು ಲಕ್ಷಿಸದ 'ಗೋವಿನ ಕಥೆ', ತಪ್ಪು ಮಾಡಿದರೂ ಅದನ್ನು ಒಪ್ಪಿಕೊಂಡು ಸೆರೆಮನೆಯ ವಾಸಕ್ಕೆ ಕಳವಳಗೊಳ್ಳದ ಬಂದಿಯ ವೃತ್ತಾಂತ 'ದೊರೆ, ಬಂದಿವಾನರು' ಪುಟ್ಟಣ್ಣನವರ ನೆಚ್ಚಿನ ವಿಷಯ ಪ್ರಾಮಾಣಿಕತೆಯನ್ನು ಕುರಿತವುಗಳು. 'ಸ್ವಲ್ಪ ಕಲಿತರೂ ಚೆನ್ನಾಗಿ ಜ್ಞಾಪಕವಿಡು' ಎಂಬುದು ಹೆಸರಿನ ಮೂಲಕವೇ ಕಲಿಯುವಿಕೆಯ ಮುಖ್ಯ ಅಂಶವೊಂದನ್ನು ತಿಳಿಸುತ್ತದೆ. 'ಕಷ್ಟಪಟ್ಟರೆ ಫಲವುಂಟು' ಹಾಗೂ 'ಒಡಹುಟ್ಟಿದವರಲ್ಲಿ ಪ್ರೀತಿ' ಕಥೆಗಳಲ್ಲಿ ಕೂಡ ಹೆಸರೇ ನೀತಿಯನ್ನು ಸೂಚಿಸುತ್ತದೆ. 'ಒಳ್ಳೆಯ ಹುಡುಗ' ನಿಗೆ ಒಳ್ಳೆಯ ಫಲ, 'ಕೆಟ್ಟಹುಡುಗ' ನಿಗೆ ಕೆಟ್ಟ ಫಲ ದೊರಕುತ್ತದೆ. 'ಇರುವೆ, ದುಂಬಿ' ಕೈ ಕೆಸರಾದರೆ ಬಾಯಿ ಮೊಸರು ಎಂಬುದನ್ನು ಹೇಳುತ್ತದೆ. 'ಹುಲಿಯ ವೇಷದ ಕತ್ತೆ' ಹುಟ್ಟುಬಣ್ಣವೇ ಸ್ಥಿರ,

ಕಟ್ಟಿದ ಬಣ್ಣವಲ್ಲ ಎಂಬುದನ್ನು ತಿಳಿಸುತ್ತದೆ. 'ಆನೆ, ಚಿಪ್ಪಿಗ' ಕಥೆ ಮಾಡಿದ್ದುಣ್ಣೋ ಮಹಾರಾಯ ಎಂಬ ನೀತಿಯನ್ನು ಹೇಳುತ್ತದೆ. ಡಂಭಪಟ್ಟು ಹಾಳಾದ 'ತಿರುಕನ ಕನಸು' ಮರುಕವನ್ನು ಉಕ್ಕಿಸುತ್ತದೆ. ಮಾಲಿನೊಂದಿಗೆ ಸಿಕ್ಕಿಬಿದ್ದ ಕಳ್ಳನ ಕಥೆ 'ಕೋಳಿಯು ಜಗಳವನ್ನು ತೀರಿಸಿದುದು.' ಲೋಕದ ಜನರನ್ನೆಲ್ಲ ಮೆಚ್ಚಿಸಲು ಹೊರಟು ಅಪಹಾಸ್ಯಕ್ಕೀಡಾದವರನ್ನು'ತಂದೆ ಮಕ್ಕಳು, ಕುದುರೆ'ಕಥೆ ತೋರಿಸುತ್ತದೆ. ಪರಿಸರಪ್ರಭಾವವನ್ನು ತಿಳಿಸುವ ಕಥೆ 'ಒಳ್ಳೆಯ ಸಹವಾಸ'. ಬಹಮನಿ ರಾಜ್ಯದ ಮಂತ್ರಿ ಮಹಮದ್ ಗವಾನನ ವೃತ್ತಾಂತವೇ 'ಲೋಕೋಪಕಾರ'ಎಂಬ ಕಥೆಯಾಗಿದೆ. ಈ ಎಲ್ಲ ಕಥೆಗಳೂ ಯಾವುದಾದರೊಂದು ನೀತಿಯನ್ನು ತಮ್ಮ ಒಡಲಲ್ಲಿ ಹುದುಗಿಸಿ ಕೊಂಡಿರುವುದು ಗಮನಾರ್ಹವಾಗಿದೆ.

'ನೀತಿ ಚಿಂತಾಮಣಿ'ಯ ಕಥೆಗಳಿಗೂ ಇಲ್ಲಿಯ ಕಥೆಗಳಿಗೂ ಒಂದು ಮುಖ್ಯ ವ್ಯತ್ಯಾಸವಿದೆ. ಅಲ್ಲಿ ನೀತಿಬೋಧೆಗೇ ಎಲ್ಲ ಪ್ರಾಶಸ್ತ್ಯ, ಇಲ್ಲಿ ನೀತಿಗೆ ಪ್ರಥಮ ಪ್ರಾಶಸ್ತ್ಯವೂ ಇಲ್ಲ. ಬದಲಾಗಿ ಚಾತುರ್ಯ, ಉಲ್ಲಾಸಗಳಿಗೆ ಮೊದಲಮಣೆ. ಇಲ್ಲಿನ ಕಥೆಗಳ ಲವಲವಿಕೆಗೆ ಒಂದು ಉದಾಹರಣೆಯನ್ನು ನೋಡಬಹುದು:

"ಹದಿನೈದನೆಯ ಪಾಠ

ನಕಲಿಯ ಶಾಮ

ಹಾಸ್ಯಗಾರ ಆಕಾರ ಮನ್ನಿಸಿದನು

1. ಒಂದೂರಿನಲ್ಲಿ ಒಬ್ಬ ದೊರೆಯಿದ್ದನು. ಆತನ ಸಮೀಪದಲ್ಲಿ ನಕಲಿಯ ಶಾಮನೆಂಬ ಒಬ್ಬ ಹಾಸ್ಯಗಾರನಿದ್ದನು. ಒಂದು ದಿನ ಇವನ ಮೇಲೆ ರಾಜನಿಗೆ ಕೋಪ ಬಂದು – "ಎಲಾ ನಕಲಿಯ ಶಾಮ! ನಾಳೆಯಿಂದ ನಿನ್ನ ಮುಖವನ್ನು ತೋರಿಸಬೇಡ" ಎಂದನು.

2. ನಕಲಿಯ ಶಾಮನು ಮಾರನೆಯ ದಿನ ಬೆಳಗಿನ ಜಾವಕ್ಕೆ ಎದ್ದು ಒಂದು ಮಡಕೆಯನ್ನು ತೆಗೆದುಕೊಂಡು ಅದರಲ್ಲಿ ಕಣ್ಣು ಕಾಣಿಸುವಂತೆ ಎರಡು ತೂತನ್ನು ಮಾಡಿ ತನ್ನ ಮುಖಕ್ಕೆ ಕವಿಚಿಕೊಂಡನು. ಹಾಗೆ ಮುಖವನ್ನು ಮರಸಿಕೊಂಡು ದೊರೆ ಏಳುವುದಕ್ಕೆ ಮುಂಚೆಯೇ ಅವನು ಮಲಗುವ ಮನೆಯ ಬಾಗಿಲಿಗೆ ಹೋಗಿ ನಿಂತಿದ್ದನು. ಆಗ ಅರಸನ ಹತ್ತಿರ ಮಲಗಿದ್ದ ಮಗು ಎದ್ದು ಬಂದು, ಕತ್ತಿನಿಂದ ಕೆಳಕ್ಕೆ ಮನುಷ್ಯಾಕಾರವೂ ಕತ್ತಿನಿಂದ ಮೇಲಕ್ಕೆ ಕರಿಯ ಮಡಕೆಯೂ ಆಗಿದ್ದ ರೂಪ ವನ್ನು ಕಂಡು ಭಯದಿಂದ ಕಿಟ್ಟನೆ ಕಿರಿಚಿಕೊಂಡಿತು. ಅರಸನು ಗಾಬರಿಯಾಗಿ ಎದ್ದು ನೋಡಲು, ಮಗು ಅಳುತ್ತಾನಿಂತಿತ್ತು. ಅದರ ಇದಿರಿಗೆ ಮಡಕೆ ಕವಿಚಿಕೊಂಡು ನಿಂತಿದ್ದ ಮನುಷ್ಯನು ದೊರೆಗೆ ನಮಸ್ಕಾರಮಾಡಿ– "ಮಹಾಸ್ವಾಮಿ! ನಾನು ನಕಲಿಯ ಶಾಮ, ಇಂದಿನಿಂದ ಮುಖವನ್ನು ತೋರಿಸಬೇಡವೆಂದು ಅಪ್ಪಣೆಯಾಗಿತ್ತು; ಅದ

ರಿಂದ ನನ್ನ ಮುಖವು ತಮಗೆಕಾಣದ ಹಾಗೆ ಮಡಕೆ ಕವಿಚಿಕೊಂಡಿದ್ದೇನೆ" ಎಂದನು. ದೊರೆ ನಕ್ಕು ಅವನನ್ನು ಮನ್ನಿಸಿದನು." (ಕ. ಒಂ. ಪು. ಪು. 15–16)

ಬೆಳೆಯುವ ಮಗುವಿನ ಆಸಕ್ತಿ ಅಪಾರ, ಕಲ್ಪನೆ ಅಸೀಮ, ಅದಕ್ಕೆ ಕೋಲು ಕುದುರೆಯು ಪ್ರತಿನಿಧಿ, ಬೊಂಬೆ ಮಾನವನ ಪ್ರತಿನಿಧಿ. ತಾನು ಕೇಳಿದ ಓದಿದ ಕಥೆಯನ್ನು ಮಗು ಸಂತೋಷದಿಂದ ಮೆಲುಕುಹಾಕುತ್ತದೆ. ಮಕ್ಕಳ ಈ ಆಸಕ್ತಿಯನ್ನರಿತು ಪುಟ್ಟಣ್ಣನವರು 'ಕನ್ನಡ ಒಂದನೆಯ ಪುಸ್ತಕವು' ಪಠ್ಯದಲ್ಲಿ ಇಪ್ಪತ್ತೆರಡು ಕಥೆಗಳನ್ನು ಸೇರಿಸಿದ್ದಾರೆ.

ಗದ್ಯಪಾಠಗಳಲ್ಲಿ ಹಲವು ಸಂಭಾಷಣೆಯ ರೂಪದಲ್ಲಿವೆ, ಕೆಲವು ಪ್ರಶ್ನೋತ್ತರ ರೂಪಗಳಲ್ಲೂ ಇವೆ. ಉಕ್ತಲೇಖನಕ್ಕೆ ಅನುಕೂಲಿಸುವ ಹಲವು ಗದ್ಯಭಾಗಗಳಿವೆ. ಗದ್ಯಪಾಠಗಳ ಜೋಡಣೆಯಲ್ಲಿ ಕಥೆಗಳ ಪೋಣಿಕೆ ಮಗುವಿನ ಉತ್ಸಾಹ ಕಡಿಮೆಯಾಗದಂತೆ ನೋಡಿಕೊಳ್ಳುತ್ತದೆ.

### ಪದ್ಯಗಳು

'ಕನ್ನಡ ಒಂದನೆಯ ಪುಸ್ತಕವು' ಪಠ್ಯದಲ್ಲಿ ಹತ್ತು ಪದ್ಯಗಳಿವೆ. ಅವುಗಳು ಕ್ರಮವಾಗ 'ಗೋವಿನ ಕಥೆ', 'ಕಾವೇರಿ', 'ದುರ್ಜನರ ಸಂಗವನ್ನು ಬಿಡಬೇಕು', 'ಪ್ರಾಣಿದಯೆ', 'ಗೋವಿನ ಚರಿತ್ರೆ', 'ಹೊಗೆಯ ಗಾಡಿ', 'ನೀತಿ', 'ಚಂದ್ರ', 'ಜಾಣ, ಮೂರ್ಖ' ಮತ್ತು 'ದೇವರ ಸ್ತುತಿ'.

ಮಗುವಿಗೆ ಪಾಠದಲ್ಲಿ ರಂಜನೆ ದೊರಕಬೇಕು, ಆಸಕ್ತಿ ಹುಟ್ಟಬೇಕು, ಆಪ್ಯಾಯಮಾನವಾದ ವಾತಾವರಣ ಉಂಟಾಗಬೇಕು ಎಂಬುದು ಈ ಪದ್ಯಗಳನ್ನು ಪಠ್ಯದಲ್ಲಿ ಸೇರಿಸಲು ಕಾರಣವಾಗಿದೆ. ಪದ್ಯಗಳ ಪ್ರಾಸ, ಲಯಗಳು ಮಗುವಿಗೆ ಮುದದಾಯಕವಾದುವು, ಬಾಯಿಪಾಠಕ್ಕೆ ಅನುಕೂಲವಾದುವು, ಸಾಮೂಹಿಕ ಗಾನ ಅಭಿನಯಗಳಿಂದ ಮಗುವಿನ ಮನಸ್ಸಿಗೆ ರಂಜನೆಯನ್ನು ಒದಗಿಸಲೂ ಅನುಕೂಲವಾದುವುಗಳು.

ಪ್ರಾಮಾಣಿಕತೆಯೇ ಪರಮಶ್ರೇಷ್ಠವಾದುದು ಎಂದು ಬೋಧಿಸುವ 'ಗೋವಿನ ಕಥೆ' ಯನ್ನು ಪಠ್ಯಕ್ಕೆಂದು ಆರಿಸಿದವರಲ್ಲಿ ಪುಟ್ಟಣ್ಣನವರೇ ಮೊದಲಿಗರು.[1] ಇದನ್ನು ಪುಟ್ಟಣ್ಣನವರು ಏಳುಭಾಗಗಳಲ್ಲಿ (3, 4, 4, 4, 4, 4, 4, ನುಡಿಗಳಂತೆ) ಕೊಟ್ಟಿದ್ದಾರೆ. 'ಗೋವಿನ ಕಥೆ'ಯ ರೋಚಕವಾದ ಸಂಗತಿಗಳಿಂದ ಮಗುವಿವ ಕಣ್ಣು ಆಸಕ್ತಿಯಿಂದ ಅರಳುತ್ತದೆ, ಕುತೂಹಲ ಕೊನೆಯಿಲ್ಲದೆ ಕೊನರುತ್ತದೆ. ಪದ್ಯದಲ್ಲಿ ವ್ಯಕ್ತವಾಗಿರುವ ಸಾಂಸ್ಕೃತಿಕ ಆಶಯಗಳು ಹಸಿಗೋಡೆಗೆ ಹರಳೊಗೆದಂತೆ ಮಗುವಿನ ಮನಸ್ಸಿನಲ್ಲಿ ನೆಟ್ಟು ನಿಲ್ಲುತ್ತವೆ. ಜನಜೀವನದಲ್ಲಿ ಬಳಕೆಯಾಗಿದ್ದ ಈ ಪದ್ಯವನ್ನು ಪಠ್ಯದಲ್ಲಿ ಸೇರಿಸಿದ್ದು ಮದ್ದಿನ ಗುಣವಿದ್ದರೆ ಹಿತ್ತಲಗಿಡವನ್ನೂ ಪುರಸ್ಕರಿಸುವ ಪುಟ್ಟಣ್ಣನವರ ಗುಣಗ್ರಹಣಶೀಲತೆಯ ದ್ಯೋತಕವಾಗಿದೆ. ನಾಡಿನ ಜನರಿಗೆ

ಪ್ರಾಣದಾಯಿನಿಯಾದ 'ಕಾವೇರಿ', ಕೆಟ್ಟ ಸಹವಾಸವನ್ನು ತೊರೆಯಬೇಕೆಂದು ಬೋಧಿಸುವ 'ದುರ್ಜನರ ಸಂಗವನ್ನು ಬಿಡಬೇಕು', ಪ್ರಾಣಿಗಳಲ್ಲಿ ಕರುಣೆಯಿಂದ ವ್ಯವಹರಿಸಬೇಕು ಎನ್ನುವ 'ಪ್ರಾಣಿದಯೆ', ಮಾನವನ ಸ್ವಾರ್ಥ, ಗೋವಿನ ನಿಸ್ವಾರ್ಥಗಳನ್ನು ತಿಳಿಸುವ 'ಗೋವಿನ ಚರಿತ್ರೆ', ರೈಲುಗಾಡಿಯ ಉಪಯೋಗಗಳನ್ನು ತಿಳಿಸುವ 'ಹೊಗೆಯ ಗಾಡಿ', ಅನ್ವರ್ಥನಾಮಕವಾದ 'ನೀತಿ', ಸುಲಲಿತ ನಡೆಯಿಂದ ಆಕರ್ಷಿಸುವ 'ಚಂದ್ರ', ಬುದ್ಧಿವಂತಿಕೆ ದಡ್ಡತನಗಳ ಭೇದವನ್ನು ವಿವರಿಸುವ 'ಜಾಣ, ಮೂರ್ಖ' ಮತ್ತು ಸರ್ವಸಮರ್ಪಣಭಾವ ಪ್ರಕಟನೆಯ 'ದೇವರ ಸ್ತುತಿ' ಇವುಗಳು ಇತರ ಪದ್ಯಗಳು.

ಒಟ್ಟು ದೃಷ್ಟಿಯಿಂದ ವಿವೇಚಿಸಿದಾಗ ಈ ಪದ್ಯಗಳಲ್ಲಿ ಕಂಡುಬರುವ ಮೌಲ್ಯಗಳು ಇವು: ಪ್ರಾಮಾಣಿಕತೆ, ಕೃತಜ್ಞತೆ, ಒಳ್ಳೆಯ ಸಹವಾಸ, ದಯೆ, ವ್ಯಾಸಂಗದಲ್ಲಿ ಪ್ರೀತಿ, ದೈವಭಕ್ತಿ. ಇಲ್ಲೆಲ್ಲ ಪುಟ್ಟಣ್ಣನವರು ವಾಗಾಡಂಬರದ ಅಸ್ತ್ರ ಹೂಡಿ ಬಾಲ ವಿದ್ಯಾರ್ಥಿಗಳ ಮೇಲೆ ಯುದ್ಧ ಹೂಡದೆ, ಸರಳತೆ ಹಾಗೂ ಪ್ರಸನ್ನತೆಗಳಿಂದ ಅವರನ್ನು ಒಲಿಸಿಕೊಂಡು ಗೆದ್ದಿದ್ದಾರೆ.

'ಗೋವಿನ ಕಥೆ', 'ದುರ್ಜನರ ಸಂಗವನ್ನು ಬಿಡಬೇಕು', 'ನೀತಿ', 'ಜಾಣ, ಮೂರ್ಖ' ಮತ್ತು 'ದೇವರ ಸ್ತುತಿ' ಈ ಐದು ಪದ್ಯಗಳು ಹಳೆಯ ರಚನೆಗಳು. 'ಕಾವೇರಿ', 'ಪ್ರಾಣಿದಯೆ', 'ಗೋವಿನ ಚರಿತ್ರೆ', 'ಹೊಗೆಯ ಗಾಡಿ' ಮತ್ತು 'ಚಂದ್ರ' ಈ ಐದು ಪದ್ಯಗಳು ಹೊಸ ಕಾಲದ ರಚನೆಗಳು. ಈ ಪದ್ಯಗಳನ್ನು ಎಸ್. ಜಿ. ನರಸಿಂಹಾಚಾರ್ಯರು ರಚಿಸಿದುದೆಂದು ಹೇಳಲಾಗಿದೆ.[2] 'ಕಾವೇರಿ', 'ಗೋವಿನ ಚರಿತ್ರೆ', 'ಹೊಗೆಯ ಗಾಡಿ', ಮತ್ತು 'ಚಂದ್ರ' ಈ ನಾಲ್ಕು ಪದ್ಯಗಳೂ ಎಸ್. ಜಿ. ನರಸಿಂಹಾಚಾರ್ಯರ ಕಾವ್ಯಶಕ್ತಿಗೆ ಹೆಸರಾಗಿವೆ. 'ಪ್ರಾಣಿದಯೆ' ಎಂಬ ಪದ್ಯ ಮಾತ್ರ ಮೇಲಿನ ನಾಲ್ಕು ಪದ್ಯಗಳ ಸುಲಲಿತ ನಡೆಯನ್ನು ಹೊಂದಿಲ್ಲದಿರುವುದು ಭಿನ್ನಕರ್ತೃತ್ವದ ಸೂಚನೆಯಾಗಿರಬಹುದು. ಎಸ್.ಜಿ. ನರಸಿಂಹಾಚಾರ್ಯರ ಇಲ್ಲಿನ ರಚನೆಗಳ ಸೊಗಸು, ಸರಳತೆಗಳಿಗೆ ಉದಾಹರಣೆಯಾಗಿ 'ಚಂದ್ರ' ಕವನವನ್ನು ನೋಡಬಹುದು.

"ಮೂಡಲೊಳಗೆ ಚಂದ್ರನೀಗ
ಮೂಡುತಿಹನು ದೂರ ದೂರ
ಕೋಡುತಿಹುದು ಕಳ್ಳನಂತೆ ಕೂಡೆ ಕತ್ತಲೆ ॥
ನೋಡು ಮನೆಯ ಮೇಲೆ ಬೆಳಕು
ಕೂಡಿ ಬೆಳ್ಳಿಯಿಂದ ತಗಡು
ಮಾಡಿ ಹೊದಿಸಿದಂತೆ ಕಣ್ಗೆ ಹೊಳೆಯುತಿರುವುದು ॥ 1 ॥

ಮೇಲೆ ಬೆಳ್ಳಿ ಬಟ್ಟಲನ್ನು
ಹೋಲುತಿಹನು ಸಸಿಯು ನೆಲವು
ಹಾಲ ಮಳೆಯು ಕರೆದ ತೆರದಿ ಬೆಳಗುತಿರುವುದು ॥
ಬಾಲರೆಲ್ಲ ಕೂಡಿ ಮುದದಿ
ಬಾಲಕೇಳಿಯಾಡುತಿಹರು
ಮೇಲೆ ಮೇಲೆ ಹರುಷ ಉಕ್ಕುತಿಹುದು ಜನರಿಗೆ ॥ 2 ॥

(ಕ. ಒಂ. ಪು. ಪು. 87)

ಭಾಷೆಯ ಲಾಲಿತ್ಯ, ಸೊಬಗು, ಬಿಗಿಯಿಲ್ಲದ ಧಾಟಿಗಳಿಂದ ಈ ಕವನ ಆಕರ್ಷಕ ವಾಗಿದೆ, ಹೊಸಗನ್ನಡದ ಕವಿತೆಯ ಲಕ್ಷಣಗಳನ್ನು ಹೊಂದಿದೆ. ಹಳೆಯ ಕಾವ್ಯಭಾಗ ಗಳಿಂದ ಆರಿಸಿದ ಪದ್ಯಗಳಿಗಿಂತ ಇಂಥ ಸುಲಭ ರಚನೆಗಳು ಮಕ್ಕಳಿಗೆ ಪ್ರಿಯವಾಗುವು ದೆಂಬ ಔಚಿತ್ಯಜ್ಞಾನ ಇಲ್ಲಿ ಪ್ರಕಟವಾಗಿದೆ. ಮಗುವಿನ ಮುಗ್ಧ ಮನಸ್ಸಿಗೆ ಪ್ರಿಯವಾದ ರಚನೆಗಳಿವೆಯೇ ಹೊರತು ಕಠಿಣವಾದ ಅಗ್ರಾಹ್ಯವಾದ ರಚನೆಗಳನ್ನು ತುರುಕಿಲ್ಲ. ಸಾಮಾನ್ಯವಾಗಿ ಪ್ರತಿ ಐದು ಗದ್ಯ ಪಾಠಗಳಿಗೆ ಒಂದು ಪದ್ಯಪಾಠ ಬರುವುದನ್ನು ಪರಿವಿಡಿಯಿಂದ ತಿಳಿಯಬಹುದು.

ಪಾಠಗಳ ಜೋಡಣೆಯ ವಿಷಯದಲ್ಲಿ 'ಕನ್ನಡ ಒಂದನೆಯ ಪುಸ್ತಕವು' ಮೆಚ್ಚುಗೆಗೆ ಪಾತ್ರವಾಗುತ್ತದೆ. ಗದ್ಯಪದ್ಯಗಳ ಜೋಡಣೆ ಮಾತ್ರವಲ್ಲ, ಗದ್ಯಪಾಠ ಗಳಲ್ಲಿನ ಜೋಡಣೆ, ಪದ್ಯಪಾಠಗಳಲ್ಲಿನ ಜೋಡಣೆ ಇವುಗಳಲ್ಲಿ ಕೂಡ ಒಂದು ಅಚ್ಚು ಕಟ್ಟಿನ ವೈವಿಧ್ಯ ಕಾಣುತ್ತದೆ. ಯಾವ ಒಂದು ವಿಷಯಕ್ಕೆ ಸಮೀಪ ಸಂಬಂಧಿಗಳಾದ ಎರಡು ಪಾಠಗಳು ಸಾಕಷ್ಟು ಅಂತರವಿಲ್ಲದೆ ಪರಿವಿಡಿಯಲ್ಲಿ ಜೋಡಣೆಗೊಂಡಿಲ್ಲ. ವಸ್ತುಪಾಠಗಳಲ್ಲಿ ಹಲವು ವಿಭಾಗಗಳಿವೆ, ಸಸ್ಯವರ್ಗವನ್ನು ಕುರಿತವು, ಪ್ರಾಣಿವರ್ಗ ವನ್ನು ಕುರಿತವು, ಖನಿಜಗಳು, ದೇಹದ ಅಂಗಾಂಗಗಳು ಇತ್ಯಾದಿ. ಇವುಗಳು ಕೂಡ ವರ್ಗೀಯವಾಗಿಲ್ಲದೆ ಎಲ್ಲ ವಿಭಾಗಗಳೂ ಬೆರೆಸಿದಂತೆ ಬರುತ್ತವೆ. ಒಂದಕ್ಕಿಂತ ಹೆಚ್ಚು ಭಾಗಗಳಲ್ಲಿರುವ ಪಾಠಗಳು ಕೂಡ, ಅವು ಗದ್ಯವಾಗಲಿ ಪದ್ಯವಾಗಲಿ, ಒಟ್ಟಿಗೆ ಬರುವುದಿಲ್ಲ. ಮಧ್ಯೆ ಬೇರೆ ಪಾಠಗಳಿಗೆ ಜಾಗನೀಡಿವೆ. ಮೆಚ್ಚುಗೆಯ ಇನ್ನೊಂದು ಅಂಶವೆಂದರೆ ಯಾವ ಪಾಠವೂ ದೊಡ್ಡದಲ್ಲ. ದೊಡ್ಡವೆನಿಸಿದ ಪಾಠಗಳನ್ನು ಹಲವು ಭಾಗಗಳಾಗಿ ವಿಂಗಡಿಸಿ ಬೇರೆ ಬೇರೆಯಾಗಿಸಿದೆ. ಈ ಕ್ರಮದಿಂದ ಮಗುವಿಗೆ ಏಕತಾನ ತೆಯ ಪೆಟ್ಟು ತಗುಲುವುದಿಲ್ಲ. ಪಠ್ಯದ ಮೊದಲ ಹತ್ತು ಪಾಠಗಳನ್ನು ಮಾದರಿಗಾಗಿ ನೋಡಬಹುದು. ಅವು ಹೀಗಿವೆ :

1. ಕುರಿ — ಗದ್ಯ, ವಸ್ತುಪಾಠ
2. ಆಲದಮರ — ಗದ್ಯ, ವಸ್ತುಪಾಠ
3. ನರಿಯ ಯುಕ್ತಿ — ಗದ್ಯ, ಕಥೆ
4. ಕೆರೆ — ಗದ್ಯ, ವಸ್ತುಪಾಠ

5. ಸ್ವಲ್ಪ ಕಲಿತರೂ ಚೆನ್ನಾಗಿ ಜ್ಞಾಪಕವಿಡು — ಗದ್ಯ, ಕಥೆ
6. ಗೋವಿನ ಕಥೆ — ಪದ್ಯ, ಕಥೆ
7. ಹಲಸಿನ ಮರ — ಗದ್ಯ, ವಸ್ತುಪಾಠ
8. ಕಷ್ಟಪಟ್ಟರೆ ಫಲವುಂಟು — ಗದ್ಯ, ಕಥೆ
9. ಗಾಳಿ — ಗದ್ಯ, ವಸ್ತುಪಾಠ
10. ಒಡಹುಟ್ಟಿದವರಲ್ಲಿ ಪ್ರೀತಿ — ಗದ್ಯ, ಕಥೆ

ಪಠ್ಯದಲ್ಲಿರುವ ಚಿತ್ರಗಳು ಸಾಮಾನ್ಯವಾದುವು. ಆ ಕಾಲದ ಇತರ ಕೃತಿಗಳಲ್ಲಿ ಕಂಡು ಬರುವಂತಹವು. ಕಡೆಯಲ್ಲಿರುವ ಕಠಿಣ ಶಬ್ದಗಳ ಕೋಶ ತನ್ನ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಿದೆ. ಇಷ್ಟು ಅಚ್ಚುಕಟ್ಟಾಗಿರುವ ಪಠ್ಯದಲ್ಲಿ ಕ್ರೀಡೆಗಳನ್ನು ಕುರಿತ ಒಂದೇ ಒಂದು ಉಲ್ಲೇಖವಿಲ್ಲದಿರುವುದು, ಪ್ರಶ್ನೆಗಳ ಪಟ್ಟಿ ಇಲ್ಲದಿರುವುದು ಕುತೂಹಲಕರವಾಗಿದೆ.

**ಇತರ ವಿಷಯಗಳು**

ಪುಟ್ಟಣ್ಣನವರ ಇತರ ಹಲವು ಕೃತಿಗಳಿಗೆ ವಸ್ತುವಾದ ಅನೇಕ ಸಂಗತಿಗಳು ಇಲ್ಲಿ ಕಾಣುತ್ತವೆ. 'ಒಳ್ಳೆಯ ಹುಡುಗ', 'ಇರುವೆ, ದುಂಬಿ', 'ಕೆಟ್ಟ ಹುಡುಗ' ಮತ್ತು 'ಆನೆ, ಚಿಪ್ಪಿಗ' ಈ ನಾಲ್ಕು ಕಥೆಗಳು 'ಸುಮತಿ ಮದನಕುಮಾರರ ಚರಿತ್ರೆ'ಯಲ್ಲಿ ಕಾಣುತ್ತವೆ. 'ಇಬ್ಬನಿ, ಮಂಜು' ಎಂಬುದು 'ಹಿಮ, ಮಂಜು' ಲೇಖನವನ್ನು ನೆನಪಿಸುತ್ತದೆ. 'ಜನಗಳ ಪದ್ಧತಿ–3ನೆಯ ಭಾಗ' 'ಅವರಿಲ್ಲದೂಟ' ಕಾದಂಬರಿಯಲ್ಲಿ ದೀರ್ಘ ಚರ್ಚೆಯ ವಿಷಯವಾಗಿದೆ. 'ಒಳ್ಳೆಯ ಸಹವಾಸ' ಎಂಬ ಕಥೆ 'ನೀತಿ ಚಿಂತಾಮಣಿ'ಯಲ್ಲೂ ಸ್ಥಳ ಗಿಟ್ಟಿಸಿದೆ. 'ಲೋಕೋಪಕಾರ' ಎಂಬುದು 'ಮಹಮೂದ್ ಗವಾನನ ಚರಿತ್ರೆ'ಯ ಕಥಾನಾಯಕನ ವೃತ್ತಾಂತ. 'ಹಣದ ಉಪಯೋಗ ಮತ್ತು 'ನವರಾತ್ರಿಯ ಹಬ್ಬಗಳು' ಕ್ರಮವಾಗಿ 'ಹಣ' ಮತ್ತು 'ನವರಾತ್ರಿ' ಲೇಖನಗಳನ್ನು ನೆನಪಿಸುತ್ತವೆ. ಮೇಲೆ ಹೇಳಿದ ಇತರ ಬರಹಗಳು 'ಕನ್ನಡ ಒಂದನೆಯ ಪುಸ್ತಕವು' ಪಠ್ಯದಲ್ಲಿರುವ ಬರಹಗಳಿಗಿಂತ ಕೆಲವು ಬಾರಿ ದೀರ್ಘವಾಗಿರಬಹುದು, ಬದಲಾವಣೆಗಳನ್ನು ಹೊಂದಿರಬಹುದು. ಆದರೆ ಮುಖ್ಯ ವಿಷಯ ಬೇರೆಯಾಗಿಲ್ಲ.

**ಒಂದು ಸಂದೇಹ ಹಾಗೂ ಅದರ ನಿವಾರಣೆ**

'ಕನ್ನಡ ಒಂದನೆಯ ಪುಸ್ತಕವು' ಪಠ್ಯದ ರಚನೆಗಳಿಗೆ ಎಂ. ಎಸ್. ಪುಟ್ಟಣ್ಣನವರೂ ಎಸ್. ಜಿ. ನರಸಿಂಹಾಚಾರ್ಯರೂ ಹೊಣೆಗಾರರೆಂದೂ ಹೊಸ ಕಾಲದ ಕವಿತೆಗಳಿಗೆ ಎಸ್. ಜಿ. ನರಸಿಂಹಾಚಾರ್ಯರು ಕಾರಣರೆಂದೂ ಆದರೆ ಪಠ್ಯದ ಯಾವ ಯಾವ ಪಾಠಗಳನ್ನು ಯಾರು ಯಾರು ಬರೆದರು ಎಂಬುದು ಸ್ಪಷ್ಟವಾಗಿಲ್ಲ ಎಂದೂ ಹೇಳಲಾಗಿದೆ.[3] ಮೈಸೂರಿನ ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಗಳ ಕಚೇರಿಯ

22-7-1895ರ ಒಂದು ಪತ್ರ[4]ದಿಂದ ಈ ಸಂದೇಹ ನಿವಾರಣೆಯಾಗಿ ಎಂ. ಎಸ್. ಪುಟ್ಟಣ್ಣನವರೊಬ್ಬರೇ ಇಲ್ಲಿನ ಪಾಠಗಳನ್ನು ರಚಿಸಿದವರು ಎಂಬುದು ತಿಳಿಯುತ್ತದೆ. ಈ ಪತ್ರದಲ್ಲಿ ಪುಟ್ಟಣ್ಣನವರು ಸಿದ್ಧಪಡಿಸಿರುವ ಪಾಠಗಳನ್ನು ಒಮ್ಮೆ ಪರಿಶೀಲಿಸಿ ಅಗತ್ಯವಾದ ತಿದ್ದುಪಡಿಗಳನ್ನು ಸೂಚಿಸಲು ಸಮಿತಿಯ ಸದಸ್ಯರಾದ ಎಂ. ಶಾಮರಾಯರು, ಆರ್. ನರಸಿಂಹಾಚಾರ್ಯರು, ಎಸ್. ಜಿ. ನರಸಿಂಹಾಚಾರ್ಯರು ಮತ್ತು ಬಿ. ಮಲ್ಲಪ್ಪನವರನ್ನು ಕೋರಲಾಗಿದೆ. ಜೊತೆಗೆ ಪುಸ್ತಕದ ಗಾತ್ರ ಒಂದನೆಯ ತರಗತಿಗೆ ಹೆಚ್ಚಾಗಬಹುದೆಂದೂ ಪಠ್ಯದ ಇಪ್ಪತ್ತೊಂಬತ್ತು ಪಾಠಗಳನ್ನು ತೆಗೆದುಹಾಕಬಹುದೆಂದೂ (ಆ ಇಪ್ಪತ್ತೊಂಬತ್ತು ಪಾಠಗಳ ಕ್ರಮಸಂಖ್ಯೆಗಳನ್ನು ಕೊಟ್ಟಿದ್ದಾರೆ) ಪುಟ್ಟಣ್ಣನವರು ಸೂಚಿಸಿರುವುದನ್ನು ಹೇಳಿದೆ. ಪಾಠಗಳ ರಚನೆಗೆ ಪುಟ್ಟಣ್ಣನವರ ಹೆಸರಿನ ಹೊರತು ಬೇರೆ ಯಾರ ಹೆಸರನ್ನೂ ನಿರ್ದೇಶಿಸಿಲ್ಲ. ಈ ಎಲ್ಲ ಆಧಾರಗಳಿಂದ ಪಠ್ಯದಲ್ಲಿರುವ ಪದ್ಯಗಳ ಹೊರತು ಮಿಕ್ಕ ಎಲ್ಲ ಪಾಠಗಳ ರಚನೆಗೆ ಪುಟ್ಟಣ್ಣನವರೊಬ್ಬರೇ ಹೊಣೆ ಎಂಬುದು ಖಚಿತವಾಗಿ ತಿಳಿಯುತ್ತದೆ.

ಪ್ರಾಥಮಿಕ ವಿದ್ಯಾಭ್ಯಾಸದ ಇಂಥ ಪಠ್ಯದ ಮುಖ್ಯ ಗುರಿ ಎಂದರೆ ಮಗು ಮೊದಲು ಹೆಜ್ಜೆಹಾಕಬೇಕಾದ ಹಾದಿಯಲ್ಲಿ ಇರುವ ತೊಂದರೆ ಅಡ್ಡಿಗಳನ್ನು ನಿವಾರಿಸಿ ಅದು ತಾನಾಗಿ ನಡೆಯುವಂತೆ ಮಾಡುವುದು. 'ಕನ್ನಡ ಒಂದನೆಯ ಪುಸ್ತಕವು' ಪಠ್ಯದಲ್ಲಿನ ಪಾಠಗಳು ಈ ವಿವೇಕವನ್ನು ಅಂತರ್ಗತವನ್ನಾಗಿಸಿಕೊಂಡಿವೆ. ಎಳೆಯರಿಗೆ ಪಾಠಗಳಲ್ಲಿ ಆಸಕ್ತಿ ಹುಟ್ಟಿಸುವ, ನಿರಾಯಾಸದಿಂದ ಕಲಿಯುವಂತೆ ಮಾಡುವ ಇಲ್ಲಿನ ಪ್ರಯತ್ನ ಸುಸ್ಪಷ್ಟವಾಗಿದೆ. ಪ್ರಾರಂಭದ ಪಠ್ಯವೇ ಇಷ್ಟು ಚೆನ್ನಾಗಿರುವುದು ಸಂತೋಷದ ವಿಷಯವಾಗಿದೆ.

## ಕನ್ನಡ ಲೇಖನ ಲಕ್ಷಣ

ಎಂ. ಎಸ್. ಪುಟ್ಟಣ್ಣನವರ 'ಕನ್ನಡ ಲೇಖನ ಲಕ್ಷಣ (1915) ವಿದ್ಯಾರ್ಥಿಗಳಿಗೆ ಬರವಣಿಗೆಯ ಕ್ರಮವನ್ನು ಬೋಧಿಸಲು ಉದ್ದೇಶಿತವಾದುದು. ಯಾವ ಆಡಂಬರವೂ ಇಲ್ಲದೆ ಅರ್ಥ ಸರಿಯಾಗಿ ತಿಳಿದಿರುವ ಶಬ್ದಗಳನ್ನು ಮಾತ್ರ ಉಪಯೋಗಿಸಿ ಸುಲಭ ವಾಕ್ಯಗಳನ್ನು ರಚಿಸಿದರೆ ಬರವಣಿಗೆಯು ವಸ್ತುವಿನಿಂದ ಸಂದರ್ಭಾನುಸಾರವಾಗಿ ಭಾಷೆಯಲ್ಲಿ ಗಾಂಭೀರ್ಯ ತಾನಾಗಿ ಸಿದ್ಧಿಸುವುದು ಎಂಬುದು ಪುಟ್ಟಣ್ಣನವರ ನಿಲುವು.

ಶಕ್ತಿಯುತವಾದ ಭಾಷೆಯ ಮೂಲಕ ಅರ್ಥಸೂಕ್ಷ್ಮಗಳ ಅಭಿವ್ಯಕ್ತಿ ಸಾಧ್ಯವಾಗುತ್ತದೆ. ಒಂದು ಮಿತಿಯಲ್ಲಿ ವ್ಯಾಕರಣ ಇದಕ್ಕೆ ಸಹಾಯಕವೇ ಹೊರತು ವಿರುದ್ಧವಲ್ಲ. ಸಮಾಜಕ್ಕೆ ಶಾಸನ ಇದ್ದ ಹಾಗೆ, ಭಾಷೆಗೆ ವ್ಯಾಕರಣ. ಎರಡು ಕಡೆಯೂ

ನಿಯಮಗಳು ಸ್ಥಿರವಲ್ಲ, ಬದಲಾವಣೆಗೆ ಪದೇ ಪದೇ ಒಳಗಾಗುವಂಥವು. ಭಾಷೆ ಎನ್ನುವುದು ತೀರ ಕಟ್ಟು ಹರಿದ ಪಂಜಾಗಿರಬಾರದೆಂಬುದು ಮಾತ್ರ ವ್ಯಾಕರಣದ ಉದ್ದೇಶವಾಗಿರಬೇಕು. ಮಿತಪಾತ್ರದ ವ್ಯಾಕರಣಕ್ಕೆ ಅನಗತ್ಯ ಹಿರಿಮೆ ಲಭಿಸಿದರೆ ಭಾಷೆಯಲ್ಲಿ ಪೆಡಸು, ಕೃತಕತೆಗಳು ಬರುವುದಲ್ಲದೆ ಆಡುನುಡಿಯ ಬಳಕೆಗೆ ಅವಕಾಶ ವಾಗುವುದಿಲ್ಲ ಎಂಬುದು ಪುಟ್ಟಣ್ಣನವರ ಅಭಿಮತ. ಕೇವಲ ವ್ಯಾಕರಣಕ್ಷಮವಾದ ಬರವಣಿಗೆ ಪುಟ್ಟಣ್ಣನವರ ಅಭಿಪ್ರಾಯದಲ್ಲಿ ಅಕ್ಷಮ್ಯ. ಭಾಷೆಯ ಜೀವಂತಿಕೆ ಹಾಗೂ ನಯವಂತಿಕೆಗಳನ್ನುಳ್ಳ ಬರವಣಿಗೆಗೆ ಅವರು ಹೆಚ್ಚು ಬೆಲೆ ಕೊಟ್ಟರು. ಆದ್ದರಿಂದಲೇ ಆಡುಮಾತನ್ನು ಬರಹಕ್ಕೆ ಒಳಗಾಗಿಸಬೇಕೆಂದೂ, ಭಾಷೆಯ ಎಲ್ಲ ಬದಲಾವಣೆಗಳಿಗೆ ವ್ಯಾಕರಣದ ಮುದ್ರೆ ಸಿಗುವುದು ನ್ಯಾಯವೆಂದೂ ಅವರು ಅಭಿಪ್ರಾಯಪಟ್ಟರು.

'ಕನ್ನಡ ಲೇಖನ ಲಕ್ಷಣ' ದಲ್ಲಿ ಒಂಬತ್ತು ಭಾಗಗಳಿವೆ. ಮೊದಲ ಭಾಗ ಪೂರ್ಣವಾಗಿ ವ್ಯಾಕರಣ ಪ್ರಕ್ರಿಯೆಗಳಿಗೆ ಸಂಬಂಧಿಸಿದೆ. ಎರಡನೆಯ ಭಾಗದಲ್ಲಿ ವ್ಯಾಕರಣದಿಂದ ಬರವಣಿಗೆಯ ಕ್ರಮಕ್ಕೆ ದಾರಿ ಏರ್ಪಡುತ್ತದೆ. ಮಿಕ್ಕ ಮುಂದಿನ ಭಾಗ ಗಳು ಲೇಖನ ಕ್ರಮಕ್ಕೆ ಸಂಬಂಧಿಸಿದವು. ಇವುಗಳಲ್ಲಿ ಒಂಬತ್ತನೆಯ ಭಾಗ ರಸಗಳನ್ನು ಕುರಿತಿದೆ.

ವ್ಯಾಕರಣವಿಭಾಗದಲ್ಲಿ ಕರ್ತೃಪದ, ಅದಕ್ಕೆ ಸಂಬಂಧಿಸಿದ ವಿಭಕ್ತಿ, ಸರ್ವನಾಮ, ಗುಣವಾಚಕ ಇತ್ಯಾದಿ ವಿಚಾರಗಳು; ಕ್ರಿಯಾಪದ, ಅಕರ್ಮಕ, ಸಕರ್ಮಕ ಮುಂತಾದ ವಿಚಾರಗಳು; ವಾಕ್ಯ ವಿಚಾರಗಳು; ಬರವಣಿಗೆಯ ಚಿಹ್ನೆಗಳು, ಪದ, ವಾಕ್ಯ, ಅರ್ಥ ಗಳ ದೋಷಗಳು ಮುಂತಾದುವುಗಳನ್ನು ವಿವೇಚಿಸಿದೆ.

ಇಲ್ಲಿನ ಉದಾಹರಣೆಗಳಲ್ಲಿ ಪುಟ್ಟಣ್ಣನವರು ಆಡುನುಡಿಯನ್ನು ಕಡೆಗಣಿಸುವು ದಿಲ್ಲ. ಕೆಲವು ಉದಾಹರಣೆಗಳನ್ನು ನೋಡಬಹುದು :

1. ಸೊಸಿ, ಗಿಡ, ಕೊಂಬೆ, ಎಲೆ, ಹೂವು, ಕಾಯಿ, ಹಣ್ಣು ಇಂಥಾ ಒಂದೊಂದೂ, (ಅಥವಾ ಪ್ರತಿಯೊಂದೂ) ಬ್ರಹ್ಮ ಸೃಷ್ಟಿಯಾಗಿದೆ.

(ಕ.ಲೇ.ಲ. ಪು. 18)

2. ಒಳ್ಳೇ ಬಾಳ ಬಾಳಿದನು, ಸಾಯಕೊಲೆ ಕೊಂದನು, ಹೊಡೆತಾ ಹೊಡೆದ.

(ಕ.ಲೇ.ಲ. ಪು. 12)

3. ಮಗು ನಿದ್ರೇ ಮಾಡುತಿದೆ. (ಕ.ಲೇ.ಲ. ಪು. 25)

4. ಅರ್ಜುನ ಏಳುತಾನೆ, ಸಿಂಹನಾದ ಮಾಡುತಾನೆ, ಬಾಣವನ್ನು ಹೆದೆಗೆ ಏರಿಸುತಾನೆ. (ಕ.ಲೇ.ಲ. ಪು. 29)

5. ಕಾಲ ಹೋಗುತ್ತೆ, ಆದರೆ ಮಾತು ಉಳಿಯುತ್ತೆ. (ಕ.ಲೇ.ಲ.ಪು. 39)

ಸೌಲಭ್ಯಕ್ಕೆ ಪುಟ್ಟಣ್ಣನವರು ಬಹಳ ಪ್ರಾಮುಖ್ಯವನ್ನು ಕೊಟ್ಟರು. ಅನಗತ್ಯ ಕ್ಲಿಷ್ಟತೆ ಅವರು ದೂರವಿರಿಸುತ್ತಿದ್ದ ಸಂಗತಿಗಳಲ್ಲಿ ಒಂದು. ಸುಲಭವಾದ ಪದಕ್ಕೆ

ಕಠಿಣವಾದ ಅರ್ಥವನ್ನು ಹೇಳುವುದನ್ನು ಅವರು ಒಂದು ಉದಾಹರಣೆಯನ್ನು ತೋರಿಸಿಕೊಟ್ಟು ಇದು ಸರಿಯಲ್ಲವೆಂದಿದ್ದಾರೆ.

"ಹುಲಿಯು ಕತ್ತಲೆಯಲ್ಲಿ ನಾನು ಮೊದಲಾದವರ ಮೇಲೆ ಹಾರಿತು.

'ಹುಲಿಯು'—ವ್ಯಾಘ್ರವು; 'ಕತ್ತಲೆಯಲ್ಲಿ'—ಗಾಢಾಂಧಂಕಾರದಲ್ಲಿ; 'ನಾನು ಮೊದಲಾದವರ ಮೇಲೆ'—ಅಸ್ಮದಾದಿಗಳ ಮೇಲೆ ; 'ಹಾರಿತು'—ಲಂಘಿಸಿತು" (ಕ.ಲೇ.ಲ. ಪು. 98)

ಕನ್ನಡದಲ್ಲಿ ರೂಢಿಯಾಗುತ್ತಿರುವ ಇತರ ಭಾಷಾಪ್ರಭಾವಗಳನ್ನು ಅಲ್ಲಲ್ಲಿ ಗುರುತಿಸಿದ್ದಾರೆ.

1. " 'ನಿದ್ರೆಮಾಡು' ಎನ್ನುವುದಕ್ಕೆ ಬದಲಾಗಿ, 'ನಿದ್ರೆಹೋಗು' ಎಂದು ಬರೆಯುತಾರೆ. ಇದು ಆಂಧ್ರಪ್ರಯೋಗವಾಗಿದೆ."

(ಕ.ಲೇ.ಲ. ಪು. 11)

" ತೆನಗರು 'ನಿದ್ರೆ ಹೋಗುತಿದೆ' ಎಂದು ಪ್ರಯೋಗಿಸುತಾರೆ. ಇದು ಕನ್ನಡದಲ್ಲಿ ಅಪ್ರಸಿದ್ಧ." (ಕ.ಲೇ.ಲ. ಪು. 25)

" ಉ—ಬೆಳಗ್ಗೆ ಏಳಲು, ಮನೇ ಕೆಲಸ ಮಾಡಲು, ಊಟಾ ಮಾಡಲು, ಚಾಕರಿಗೆ ಹೋಗಲು, ಮನೆಗೆ ಬರಲು ಇದು ನನಗೆ ಬಹು ಬೇಜಾರಾಗಿದೆ.

ಭಾವರೂಪಕ್ಕೆ ಈ ವಿಧವಾದ ಪ್ರಯೋಗವು ಶುದ್ಧವಾಗಿ ತೆಲಗಿನಿಂದ ಬಂದದ್ದು. ಕನ್ನಡವಲ್ಲ. ಈ ಭಾವರೂಪಗಳು ಕ್ರಿಯಾನಾಮದ ಅರ್ಥವನ್ನು ಕೊಡುವವು."

(ಕ.ಲೇ.ಲ. ಪು. 32)

" ಆಂಧ್ರರು ಕನ್ನಡವನ್ನು ಬರೆಯುವಾಗ ಮಾತನಾಡುವಾಗ ಸಹಾ 'ಕಣೋ' ಎನ್ನುವುದಕ್ಕೆ ಬದಲಾಗಿ 'ಓ' ಎಂಬ ಪ್ರತ್ಯಯುವನ್ನು ಉಪಯೋಗಿಸುವರು.

ಉ—ಇಲ್ಲವೊ; ಅವ ಬಂದನೊ.

ಇದು ಕನ್ನಡ ಪ್ರಯೋಗವಲ್ಲ." (ಕ.ಲೇ.ಲ. ಪು. 118)

2. " ತಮಿಳರು ಇದನ್ನು ಸರ್ವನಾಮದ ಕೊನೆಯಲ್ಲಿ ಪ್ರಯೋಗಿಸುವರು. ಉ—"ಏನು ಕಣೊ, ಯಾರು ಕಣೊ, ಇದು ಕನ್ನಡದಲ್ಲಿ ತಪ್ಪು"

(ಕ.ಲೇ.ಲ. ಪು. 117)

3. " ಸುಗ್ರೀವನಿಂದ ವಾಲಿ ಶೂರ

ಇದು ಹಿಂದುಸ್ಥಾನಿ ಭಾಷೆಯ ರೀತಿಯಾಗಿದೆ" (ಕ.ಲೇ.ಲ. ಪು. 23)

ಹಳೆಯ ಮೈಸೂರು ಭಾಗಗಳ ಕನ್ನಡಕ್ಕಿಂತ ಬೇರೆಯಾದುದನ್ನು ಗುರುತಿಸಿ ಹೇಳಿದ್ದಾರೆ.

1. " 'ಬಹಳ ಮಾಡಿ' ಎಂಬುವುದು ಶಿವಮೊಗ್ಗಿ, ಧಾರವಾಡ, ಮೊದಲಾದ ಪ್ರಾಂತಗಳಲ್ಲಿ ಪ್ರಯೋಗವಿದೆ.

ಉ—ಬಹಳಮಾಡಿ ಜನರು ಹೊರಟರು." (ಕ.ಲೇ.ಲ. ಪು. 21)

2. " ಚಿತ್ರದುರ್ಗ, ಧಾರವಾಡ ಮೊದಲಾದ ಪ್ರಾಂತದಲ್ಲಿ 'ಮೆಟ್ಟಿದ ಹೊರತು ಹಾವು ಕಚ್ಚದು' ಎನ್ನುವುದಕ್ಕೆ ಬದಲಾಗಿ 'ಮೆಟ್ಟದ ಹೊರತು' ಎಂದು ಒರೆಯುತಾರೆ. ಇದು ತಪ್ಪು". (ಕ.ಲೇ.ಲ, ಪು. 30)

ಪುಟ್ಟಣ್ಣನವರು ಮೇಲೆ ಹೇಳಿರುವ ಸಂಗತಿಗಳು ಯಾವುವೂ ಈಗ ಬೇರೆ ಯಾಗಿಲ್ಲ, ತಪ್ಪಾಗಿಲ್ಲ. ಭಾಷೆಯಲ್ಲಿನ ಬದಲಾವಣೆಗಳಿಗೆ, ಹೊಸದಾದ ಒಪ್ಪಿಗೆಗಳಿಗೆ ದ್ಯೋತಕವಾಗಿ ಎಲ್ಲವೂ ಅಂಗೀಕೃತವಾಗಿವೆ, ರೂಢಿಯಲ್ಲಿವೆ.

ಅನ್ಯಭಾಷಾ ಪದಗಳ ಅನಿವಾರ್ಯತೆಯನ್ನರಿತು ಪುಟ್ಟಣ್ಣನವರು ಈಗಾಗಲೇ ರೂಢಿಯಾಗಿರುವ, ನಿಸ್ಸಂದಿಗ್ಧ ಅರ್ಥವನ್ನು ಹೊಂದಿದ ಪದಗಳ ಬಳಕೆಯನ್ನು ಕೈಬಿಡ ಬೇಕಿಲ್ಲ ಎಂದಿದ್ದಾರೆ. ರೂಢಿಯಾಗಿರುವ ಅನ್ಯದೇಶ್ಯಗಳ ಸ್ಥಳಗಳಲ್ಲಿ ರೂಢಿಯಲ್ಲಿಲ್ಲದ ದೇಶ್ಯಪದಗಳನ್ನು ಬಳಸುವುದು ಸಂವಹನಕ್ಕೆ ವಿರುದ್ಧ ಎಂದು ಅವರು ಬಲ್ಲವರಾಗಿ ದ್ದರು. ಅವುಗಳಿಂದ ಕೇವಲ ಶಬ್ದಾಡಂಬರ ಮತ್ತು ಆ ಮೂಲಕ ಅಪಹಾಸ್ಯಕರ ಪರಿಸ್ಥಿತಿಗಳು ಮಾತ್ರ ಲಭಿಸುತ್ತವೆ ಎಂದು ಅವರು ಹೇಳುತ್ತಿದ್ದರು. ಅನ್ಯದೇಶ್ಯಗಳ ಬಗೆಗೆ ಆ ಕಾಲಕ್ಕೆ ಅವರ ನಿಲುವು ಕ್ರಾಂತಿಕಾರಿಯಾದುದು. ಕಾಲ ಅದನ್ನು ಅನುಮೋದಿಸಿದೆ. ಅನ್ಯದೇಶ್ಯ ಪದಗಳ ಬಳಕೆಯ ಬಗೆಗೆ ಪುಟ್ಟಣ್ಣನವರು ಇನ್ನೊಂದು ಅತಿರೇಕವನ್ನೂ ಗಮನಿಸಿದ್ದಾರೆ. ಅನಾವಶ್ಯಕವಾಗಿ ಅನ್ಯದೇಶ್ಯ ಶಬ್ದಗಳನ್ನು ಬಳಸುವು ದನ್ನು ಅವರು ಖಂಡಿಸಿದ್ದಾರೆ. ಹೀಗೆ ಹೇಳುವಾಗ ಹಿಂದೂಸ್ಥಾನಿ ಮತ್ತು ಇಂಗ್ಲಿಷ್ ಈ ಎರಡು ಭಾಷೆಯ ಪದಗಳನ್ನೂ ಗಮನಿಸಿದ್ದಾರೆ. ಅನ್ಯದೇಶ್ಯಗಳ ಬಳಕೆಯಿಂದ ಭಾಷೆಯ ಪದಸಂಪತ್ತನ್ನು ಹೆಚ್ಚಿಸಿಕೊಳ್ಳಬೇಕೇ ವಿನಹ ಭಾಷೆಯ ಸ್ವಂತಿಕೆಯನ್ನು ಕಳೆದುಕೊಳ್ಳಬಾರದೆಂಬುದು ಅವರ ಆಶಯ.

ಇಂಗ್ಲಿಷ್ ಮತ್ತು ಹಿಂದೂಸ್ಥಾನಿಯ ಪದಗಳ ಅನಗತ್ಯ ಬಳಕೆಯ ಎರಡು ಉದಾಹರಣೆಗಳನ್ನು ತಿಳಿಸಿ ಗೇಲಿ ಮಾಡಿದ್ದಾರೆ.

1. " ನಮ್ಮ ಫಾದರಿಗೆ ಲೆಟರು ಬರೆದಿದ್ದೆ. ಅವರು ಮನಿಯನ್ನು ರೆಮಿಟ್ ಮಾಡಲಿಲ್ಲ. ಅವರಲ್ಲಿ ಮನಿ ಇರಲಿಲ್ಲವಂತೆ. ಈ ದಿವಸ ಮಾರ್ನಿಂಗು ಟ್ರೇನ ನಲ್ಲಿ ನಮ್ಮ ಸರ್ವೆಂಟು ಅರೈವ್ ಆಗಿ ಬಂದ. ನಮ್ಮ ಬ್ರದರಿಗೆ ಫೀವರು ಬಂದಿತ್ತಂತೆ. ಆ ಕನ್‌ಫ್ಯೂರ್ಷನಲ್ಲಿ ಮನಿ ಕಳುಹಿಸುವುದನ್ನು ಫರಗೆಟ್ಟು ಮಾಡಿಬಿಟ್ಟರಂತೆ. ಈ ನ್ಯೂಸನ್ನು ಅವನು ತಂದ. ಇದರಲ್ಲಿ ಟ್ರೂತು ಎಷ್ಟೋ ಫಾಲ್‌ಸುಡ್ಡು ಎಷ್ಟೋ ಗೊತ್ತಿಲ್ಲ."

2. " ಖಾವಾಖಾಂ ಮನೇ ಕಾಮಗಾರಿಗೆ ಷುರು ಮಾಡಬೇಕೆಂದು ನಾನು ಹುಕ್ಕುಂ ಮಾಡಿದ್ದೆ, ಸದರಿ ಹುಕ್ಕುಂ ಬೋಮೋಜೀಬು ದರೋಬಸ್ತು ನೌಕರರೂ ಹಾಜರಾದರು."

ಭಾಷೆ, ಶೈಲಿ ಇವುಗಳನ್ನು ಕುರಿತು ವಿಶ್ಲೇಷಿಸುವಾಗ ಅವರು ಕನ್ನಡದ ಸಾಧ್ಯತೆ

ಗಳನ್ನು ಗಮನಿಸುತ್ತಾರೆಯೇ ವಿನಹ ಬೇರೊಂದು ಭಾಷೆಯ ಚೌಕಟ್ಟಿನಲ್ಲಿ ಅದನ್ನು ವಿಶ್ಲೇಷಿಸುವುದಿಲ್ಲ. ಇದರಿಂದ ಅವರ ಪರೀಕ್ಷಾಕ್ರಮದ ವಿವೇಕ ಹಾಗೂ ವೈಜ್ಞಾನಿಕವಾದ ನಿಖರತೆಗಳು ಸುಸ್ಪಷ್ಟವಾಗಿವೆ. ವ್ಯಾಕರಣ ವಿಭಾಗದಲ್ಲಿ ಪುಟ್ಟಣ್ಣನವರ ಸಾಧನೆ ಹೆಚ್ಚಿನದಲ್ಲ. ಅಂದಿನ ಇತರ ಹಲವು ವ್ಯಾಕರಣಗ್ರಂಥಗಳಿಗಿಂತ ಬೇರೆಯಾದ ಅಂಶಗಳು ಕಡಿಮೆ. ಹಿಂದಿನ ಅನುಸರಣೆಯೇ ಹೆಚ್ಚು. ಆದರೆ ಲೇಖನಕ್ರಮದ ವಿಚಾರದಲ್ಲಿ ಪುಟ್ಟಣ್ಣನವರ ಆಶಯಗಳು ಹೊಸದಾದವು. ಸೊಗಸಾದುವು. 'ಕನ್ನಡ ಲೇಖನ ಲಕ್ಷಣ'ದ ಉದ್ದೇಶ ಹಾಗೂ ಸಾಧನೆಗಳನ್ನು ಪುಟ್ಟಣ್ಣನವರ ಮಾತಿನಲ್ಲೇ ಹೀಗೆ ಹೇಳಬಹುದು. "ಭಾಷೆಯು ವಿಷಯಕ್ಕೆ ತಕ್ಕ ಹಾಗಿರಬೇಕು. ಕೂಡಿದ ಮಟ್ಟಿಗೂ ಎಲ್ಲರಿಗೂ ತಿಳಿಯುವ ಹಾಗಿರಬೇಕಲ್ಲದೆ ಅಪೂರ್ವವಾಗಿರುವ ಶಬ್ದಗಳನ್ನು ಪ್ರಯೋಗಿಸಿ ಅರ್ಥವಾಗುವುದು ಕಷ್ಟವಾಗಿರುವಂತೆ ಬರೆಯಬಾರದು. ಅರ್ಥವೇ ಮುಖ್ಯವಾದ್ದಲ್ಲದೆ ಶಬ್ದಸ್ವರೂಪವು ಮುಖ್ಯವಾದ್ದಲ್ಲ. ಇತರರಿಗೆ ತಿಳಿಯಲೆಂದು ಬರವಣಿಗೆಯನ್ನು ಬರೆಯುತಾರೆ. ಬರೆದದ್ದು ತಿಳಿಯದ ಹಾಗಾದರೆ ಅದನ್ನು ಬರೆದೂ ಪ್ರಯೋಜನವಿಲ್ಲ. ಸುಲಭವಾದ ಭಾಷೆಯನ್ನು ಪ್ರಯೋಗಿಸಿದರೆ ಎಲ್ಲರಿಗೂ ಸರಾಗವಾಗಿ ಅರ್ಥವಾಗುವುದು. ಇದು ನೆರವೇರಿದರೆ ಬರೆದ ಬರವಣಿಗೆ ಪ್ರಯೋಜನಕಾರಿಯಾಯಿತು; ಇಲ್ಲದಿದ್ದರೆ ವ್ಯರ್ಥವಾಯಿತು. ಆದ್ದರಿಂದ ಹೇಳುವ ವಿಷಯಕ್ಕೆ ಅನುಸಾರವಾಗಿ ಕೂಡಿದ ಮಟ್ಟಿಗೂ ಸುಲಭವಾದ ಭಾಷೆಯನ್ನು ಪ್ರಯೋಗಿಸಬೇಕು. ಇದೂ ಅಲ್ಲದೆ ಕ್ಲಿಷ್ಟವಾದ ಶಬ್ದಗಳ ಅರ್ಥ ತಿಳಿಯದ ಹಾಗೆ ಡಂಭವನ್ನೂ ಪಾಂಡಿತ್ಯವನ್ನೂ ತೋರ್ಪಡಿಸುವುದಕ್ಕಾಗಿ ಭಾಷೆಯನ್ನು ಪ್ರಯೋಗಿಸುವುದು ಮತ್ತೂ ಕೇಡು." (ಕ.ಲೇ.ಲ. ಪು. 80–81)

**ಮುಕ್ತಾಯ**

ಪುಟ್ಟಣ್ಣನವರ ಹಲವು ಕೃತಿಗಳು ಪಠ್ಯಪುಸ್ತಕಗಳಾಗಿದ್ದುಂಟು. ಆದರೆ ಪಠ್ಯಪುಸ್ತಕರಚನೆಯ ಉದ್ದೇಶದಿಂದಲೇ ಬರೆಯಲ್ಪಟ್ಟವು 'ಹಿಂದೂ ಚರಿತ್ರ ದರ್ಪಣ', 'ಹಿಂದೂ ಚರಿತ್ರ ಸಂಗ್ರಹ', 'ಕನ್ನಡ ಒಂದನೆಯ ಪುಸ್ತಕವು' ಹಾಗೂ 'ಕನ್ನಡ ಲೇಖನ ಲಕ್ಷಣ'–ಈ ನಾಲ್ಕು ಕೃತಿಗಳು ಮಾತ್ರ. ಇವುಗಳಲ್ಲಿ ಮೊದಲ ಎರಡು ಪಠ್ಯಗಳನ್ನು ಪುಟ್ಟಣ್ಣನವರು ಶ್ರೀನಿವಾಸಯ್ಯಂಗಾರರ ಸಹಕರ್ತೃತ್ವದಲ್ಲಿ ರಚಿಸಿದರು. ಮೂರನೆಯ ಪಠ್ಯದಲ್ಲಿ ಗದ್ಯಪಾಠಗಳನ್ನು ಪುಟ್ಟಣ್ಣನವರೂ ಹೊಸ ಕಾಲದ ಕವಿತೆಗಳನ್ನು ಎಸ್. ಜಿ. ನರಸಿಂಹಾಚಾರ್ಯರೂ ರಚಿಸಿದರು. ನಾಲ್ಕನೆಯ ಪಠ್ಯವನ್ನು ಪುಟ್ಟಣ್ಣನವರೊಬ್ಬರೇ ರಚಿಸಿದ್ದಾರೆ. ಕನ್ನಡದಲ್ಲಿ ಇಂಥಪಠ್ಯಗಳ ರಚನೆಗೆ ಸಿದ್ಧಸೂತ್ರಗಳಿಲ್ಲದಿದ್ದ ಕಾಲದಲ್ಲಿ ಮಕ್ಕಳಿಗೆ ಬೋಧಿಸಬೇಕಾದ ಅಂಶಗಳನ್ನು ಒಂದು ಕ್ರಮಕ್ಕೆ ಅಳವಡಿಸಿ ರಚಿಸಿದ ಈ ಕೃತಿಗಳು ತಮ್ಮ ಮುಂದಿನಇಂಥ ಕೃತಿಗಳಿಗೆ ಮಾರ್ಗದರ್ಶಿಗಳಾದವು.

ಎಳೆಯರನ್ನು ಕಂಡರೆ ಪುಟ್ಟಣ್ಣನವರಿಗಿದ್ದ ಪ್ರೀತಿ, ಅವರ ಶಿಕ್ಷಣದಲ್ಲಿದ್ದ ಆಸಕ್ತಿ ಈ ಪದ್ಯಗಳನ್ನು ರಚಿಸಲು ಮುಖ್ಯ ಪ್ರಚೋದನೆಗಳಾಗಿ ಕೆಲಸ ಮಾಡಿವೆ. ಪುಟ್ಟಣ್ಣನವರ ಬರವಣಿಗೆ ಆರಂಭವಾದುದು ಪದ್ಯರಚನೆಯಿಂದ ಎಂಬುದೂ ಅವರ ವೃತ್ತಿ ಜೀವನ ಪ್ರಾರಂಭವಾದುದು ಉಪಾಧ್ಯಾಯರಾಗಿ ಎಂಬುದೂ ಆಕಸ್ಮಿಕವಾಗಿದ್ದರೂ ಗಮನಾರ್ಹವಾದ ಸಂಗತಿಗಳಾಗಿವೆ.

## ಕನ್ನಡ ಪಾಠಗಳ ಎರಡನೇ ಪುಸ್ತಕವು : ಒಂದು ವಿವರಣೆ

ಶ್ರೀನಿವಾಸ ಹಾವನೂರರ 'ಹೊಸಗನ್ನಡದ ಅರುಣೋದಯ'ದಲ್ಲಿ 'ಕನ್ನಡ ಪಾಠಗಳ ಎರಡನೇ ಪುಸ್ತಕವು' (5ನೇ ಆವೃತ್ತಿ, 1873) ಎಂ. ಎಸ್. ಪುಟ್ಟಣ್ಣನವರ ಮೊತ್ತಮೊದಲ ಕೃತಿಯೆಂದು ಹೇಳಿದೆ.[5] ಈ ಕೃತಿ ನನಗೆ ಯಾವುದೇ ಗ್ರಂಥಾಲಯದಲ್ಲಿಯಾಗಲೀ ವೈಯಕ್ತಿಕ ಸಂಗ್ರಹದಲ್ಲಿಯಾಗಲೀ ದೊರಕಲಿಲ್ಲ. ಶ್ರೀನಿವಾಸ ಹಾವನೂರರಿಗೆ ಪತ್ರಬರೆದು ವಿಚಾರಿಸಿದೆ. ಅವರು ಕೂಡಲೇ ಉತ್ತರಿಸಿ ಈ ಪುಸ್ತಕದ ಉಲ್ಲೇಖವನ್ನು ಬ್ರಿಟಿಷ್ ಲೈಬ್ರರಿಯ ಪುಸ್ತಕಪಟ್ಟಿಯಲ್ಲಿ ನೋಡಿರುವುದಾಗಿಯೂ ತಮಗೆ ದೊರೆತ ಮಾಹಿತಿಗೆ ಅದೇ ಅಧಿಕೃತ ಆಧಾರವೆಂದೂ ತಿಳಿಸಿದರು.[6] ಮುಂದೆ ಬ್ರಿಟಿಷ್ ಲೈಬ್ರರಿಯ ಅಧಿಕಾರಿಗಳನ್ನು ಸಂಪರ್ಕಿಸಲಾಯಿತು. ಆ ಕೃತಿ ತಮ್ಮಲ್ಲಿರುವುದನ್ನು ಅವರು ಖಚಿತಪಡಿಸಿದರಲ್ಲದೆ ಅದರ ಗ್ರಾಂಥಿಕ ವಿವರಗಳನ್ನೂ ಒದಗಿಸಿದರು. ಅನಂತರ ಆ ಇಡೀ ಪುಸ್ತಕದ ಜೆರಾಕ್ಸ್ ಪ್ರತಿಯನ್ನು ತರಿಸಿಕೊಳ್ಳಲಾಯಿತು.

'ಕನ್ನಡ ಪಾಠಗಳ ಎರಡನೇ ಪುಸ್ತಕವು'[7] ಕೃತಿಯಲ್ಲಿ ಎಲ್ಲಿಯೂ ಗ್ರಂಥಕರ್ತರ ಹೆಸರಿಲ್ಲ. ಮುಖಪತ್ರದಲ್ಲಿ ಪ್ರಕಟಣ ವರ್ಷ, ಆವೃತ್ತಿ ಮುಂತಾದ ಗ್ರಾಂಥಿಕ ವಿವರಗಳು ಮಾತ್ರ ಇವೆ. ಅನುಕ್ರಮಣಿಕೆಯ ಅನಂತರ ಪದ್ಯಭಾಗವಿದೆ. ಮುನ್ನುಡಿ, ಪ್ರಸ್ತಾವನೆ, ಮೊದಲಮಾತು ಇತ್ಯಾದಿ ವಿಷಯಗಳ ಪ್ರಸಕ್ತಿ ಇಲ್ಲ. ಕಠಿಣ ಶಬ್ದಕೋಶವಾಗಲೀ ಪ್ರಶ್ನೋತ್ತರಗಳಾಗಲೀ ಇಲ್ಲ. ಗ್ರಂಥಾಲಯದ ಅಧಿಕಾರಿಗಳೂ ಕೂಡ ಈ ಕೃತಿಯಲ್ಲಿ ಪದ್ಯಭಾಗ ಮಾತ್ರವೇ ಇರುವುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.[8]

ಈ ಪದ್ಯಪುಸ್ತಕದ ಶೈಲಿ ಇದು ಪುಟ್ಟಣ್ಣನವರದಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿನ ಬರವಣಿಗೆ ಕ್ರೈಸ್ತ ಮತದಲ್ಲಿ ಶ್ರದ್ಧೆ ನಂಬಿಕೆ ಇರುವವರದು ಎನ್ನುವುದಂತೂ ನಿಶ್ಚಯವಾದ ಮಾತು. ಹಿಂದೂ ಧರ್ಮದಲ್ಲಿ ಅಪರಿಮಿತ ಶ್ರದ್ಧೆ ನಂಬಿಕೆಗಳನ್ನು ಹೊಂದಿದ್ದ ಪುಟ್ಟಣ್ಣನವರ ರಚನೆಗಳಲ್ಲಿ ಇದೂ ಒಂದಾಗಿರಬಹುದೆನ್ನಲು ಯಾವ ಆಂತರಿಕ ಪ್ರಾಮಾಣ್ಯವೂ ಇಲ್ಲಿ ದೊರೆಯುವುದಿಲ್ಲ. ಎರಡು ಉದಾಹರಣೆಗಳನ್ನು ನೋಡಬಹುದು.

"ಭೂಲೋಕದ ನಾನಾ ದೇಶಗಳಲ್ಲಿ ವಾಸ ಮಾಡುವ ಸರ್ವಜನರು ದೇವರ

ಕುಟುಂಬವಾಗಿರುತ್ತಾರೆ. ಕುರುಬನು ಮಂದೆಯ ಎಲ್ಲ ಕುರಿಗಳ ಗುರ್ತು ತಿಳುಕೊಳ್ಳುವ ಪ್ರಕಾರ, ದೇವರಿಗೆ ಸಮಸ್ತ ಜನರ ಗುರ್ತು ತಿಳಿದದೆ. ನಾನಾ ಭಾಷೆಗಳಲ್ಲಿ ಮನುಷ್ಯರು ಅವನಿಗೆ ಪ್ರಾರ್ಥನೆ ಮಾಡುತ್ತಾರೆ. ಅವನು ಎಲ್ಲರ ಅಭಿಪ್ರಾಯಗಳನ್ನೂ ಅಪೇಕ್ಷೆಗಳನ್ನೂ ತಿಳುಕೊಳ್ಳುತ್ತಾನೆ. ಯಾರೂ ಎಷ್ಟು ನೀಚನಾಗಿದ್ದರೂ, ದೇವರು ಅವನನ್ನು ಪರಾಮ್ಮರಿಸದೆ ಬಿಡುವುದಿಲ್ಲ. ಸೆರೆಯಲ್ಲಿ ವ್ಯಸನಪಟ್ಟು ಕೂತಕೊಂಡಿರುವ ಹಬಸೀ ಹೆಂಗಸೇ, ನಿನ್ನನ್ನು ಯಾರೂ ನೋಡದಿದ್ದರೂ, ದೇವರು ನೋಡುತ್ತಾನೆ; ನಿನ್ನ ಮೇಲೆ ಯಾರೂ ಕರುಣವಿಡದಿದ್ದರೂ, ದೇವರು ಕರುಣಿಸುತ್ತಾನೆ. ಸೆರೆಯ ನಡುವೆ ಅವನಿಗೆ ಮೊರೆಯಿಡು ! ಅವನು ನಿನ್ನ ಬಿನ್ನಹಕ್ಕೆ ಕಿವಿ ಕೊಡುವನು. ನೂರು ರಾಜ್ಯಗಳನ್ನು ಆಳುವ ಅರಸನೇ, ನಿನಗಿಂತ ಶ್ರೇಷ್ಠನು ಯಾರೂ ಇಲ್ಲವೆಂದು ಆತ್ಮಸ್ತುತಿ ಮಾಡಿಕೊಳ್ಳಬೇಡ. ದೇವರು ನಿನಗಿಂತ ಬಹಳ ಶ್ರೇಷ್ಠನಾಗಿರುತ್ತಾನೆ. ನೀನು ಅನ್ಯಾಯ ಮಾಡಿದರೆ, ನಿನಗೆ ಶಿಕ್ಷೆ ಕೊಡುವನು.

ಭೂಮಿಯ ಮೇಲೆ ಇರುವ ಸಕಲ ಜನಾಂಗಗಳೇ, ಕರ್ತನಿಗೆ ಭಯಪಡಿರಿ ! ಮನುಷ್ಯರ ಕುಟುಂಬಗಳೇ, ನಿಮ್ಮ ದೇವರ ಹೆಸರನ್ನು ಹೊಗಳಿರಿ!

ದೇವರು ಧೊರೆಗಳಿಗೆ ಧೊರೆಯಾಗಿದ್ದಾನೆ. ಪರಲೋಕವು ಅವನ ಸಿಂಹಾಸನವು; ಭೂಮಿಯು ಅವನ ಪಾದಪೀಠವು. ಅವನು ಅಪ್ಪಣೆ ಕೊಡಲು, ಕಾರ್ಯ ಉಂಟಾಗುತ್ತದೆ; ಆತನು ಹೇಳುತ್ತಲೇ, ಎಲ್ಲ ಒದಗುತ್ತದೆ; ಆತನೇ ಸರ್ವಾಧಿಕಾರಿಯು. ಮನುಷ್ಯನ ಕಣ್ಣಿಗೆ ಕಾಣದಂಥಾ ಅವನ ಮಹಿಮೆಯನ್ನು ವರ್ಣಿಸುವುದು ಮನುಷ್ಯನ ನಾಲಿಗೆಗಳವಲ್ಲ." (ಮನುಷ್ಯರ ಕುಟುಂಬವು, ಪು. 130–131)

ಅನುಬಂಧದಲ್ಲಿ ಪತ್ರ ಬರೆಯುವ ವಿಧಾನವನ್ನು ತೋರಿಸಿಕೊಡಲು ಹಲವು ಮಾದರಿ ಪತ್ರಗಳನ್ನು ಕೊಟ್ಟಿದೆ. ಗೆಳೆಯರ ನಡುವಿನ ಪತ್ರಗಳಲ್ಲಿ ಹನುಮಂತರಾಯ ನೆಂಬಾತನು ಆನಂದರಾಯನೆಂಬುವನಿಗೆ ಬರೆದ ಪತ್ರದ ಒಂದು ಭಾಗ ಹೀಗಿದೆ:

"ಲೋಕಚರಿತ್ರಾಭ್ಯಾಸವು ನನಗೂ ಬಹಳ ಹಿತಕರವಾಗೆದೆ. ಒಂದೇ ಜಾತಿಯವರಾದ ಮನುಷ್ಯರಲ್ಲಿ ನಾನಾ ವಿಧದ ಭಾಷೆಗಳೂ ಧರ್ಮಗಳೂ ರಾಜ್ಯಪದ್ಧತಿಗಳೂ ಮತಗಳೂ ಮರ್ಯಾದೆಗಳೂ ನಡತೆಗಳೂ ಹುಟ್ಟಿದ್ದು ನನ್ನ ಮನಸ್ಸಿಗೆ ಬಹಳ ಚೋದ್ಯವಾಗಿ ತೋರುತ್ತದೆ. ಎಲ್ಲಾ ಜನಗಳ ಚರಿತ್ರಗಳಿಗಿಂತ ಯಹೂದರ ಚರಿತ್ರವು ಶ್ರೇಷ್ಠವಾದ್ದೆಂದು ಕಾಣುತ್ತದೆ. ಅವರ ಪೂರ್ವಕಾಲದ ವಿದ್ಯಮಾನವು ಅದೇ ಕಾಲದಲ್ಲಿಯೇ ಬರೆಯಲ್ಪಟ್ಟದ್ದಾಗಿ ಉಳಿದದೆ. ನಮ್ಮ ದೇಶದಲ್ಲಿ ನಡೆದ ಪೂರ್ವಕಾಲದ ಚರಿತ್ರೆಗಳು ಕವಿಗಳು ರಚಿಸಿದ ಪುರಾಣದ ಮಡುವಿನಲ್ಲಿ ಮುಣುಗಿ ಹೋಗಿವೆ; ಎಷ್ಟು ಶೋಧನೆ ಮಾಡಿದರೂ, ದೃಢವು ಕಾಣುವದೇ ಇಲ್ಲ."

(ಸ್ನೇಹಿತನಿಗೆ ಪ್ರತ್ಯುತ್ತರ ಬರೆಯುವುದು, ಪು. 135–136)

'ಕನ್ನಡ ಪಾಠಗಳ ಎರಡನೇ ಪುಸ್ತಕವು' ಕೃತಿಯ ಐದನೆಯ ಆವೃತ್ತಿ, ಪ್ರಕಟವಾದಾಗ (1873) ಪುಟ್ಟಣ್ಣನವರಿಗೆ (ಜನನ 1854) ಕೇವಲ ಹತ್ತೊಂಬತ್ತು

ವರ್ಷಗಳು ಮಾತ್ರ. ಅವರು ಆಗ ಇನ್ನೂ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿರಲಿಲ್ಲ, ವೃತ್ತಿಜೀವನವನ್ನೂ ಪ್ರಾರಂಭಿಸಿರಲಿಲ್ಲ. ಹೀಗಿರುವಲ್ಲಿ ಈ ಕೃತಿಯ ರಚನೆಗೆ ಕಾರಣರಾಗಿರಬಹುದಾದ ಅಥವಾ ಆ ಸಂಬಂಧದಲ್ಲಿ ಏನೇ ಸಹಾಯವನ್ನು ಮಾಡಿರಬಹುದಾದ ಸಂಭವನೀಯತೆಗೆ ಆಗ ಪುಟ್ಟಣ್ಣನವರಿಗಿದ್ದ ಅರ್ಹತೆಗಳೇನು ಎಂಬ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ.

ಮಿಶನರಿಗಳ ಜೊತೆ ಸೇರಿ ಅವರು ಕೆಲಸ ಮಾಡಿದ್ದಿರಬಹುದಾದ ಸಂಭವವಂತೂ ತೀರ ಕಡಮೆ ಎಂದೇ ತೋರುತ್ತದೆ. ಹೀಗಾಗಿ ಮಿಕ್ಕ ಆಧಾರಗಳ ಜೊತೆ ಈ ಅಂಶವೂ ಪುಟ್ಟಣ್ಣನವರ ಕರ್ತೃತ್ವಕ್ಕೆ ವಿರುದ್ಧ ಸಾಕ್ಷ್ಯವನ್ನೇ ನುಡಿಯುತ್ತದೆ.

ಆದ್ದರಿಂದ ಬ್ರಿಟಿಷ್ ಲೈಬ್ರರಿಯ ಪುಸ್ತಕಪಟ್ಟಿಯಲ್ಲಿ ಈ ಕೃತಿ ಪುಟ್ಟಣ್ಣನವರ ಹೆಸರಿನಲ್ಲಿರುವುದು ಒಂದು ತಪ್ಪು ದಾಖಲೆ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಬೇರೇನಾದರೂ ಆಧಾರ ದೊರಕದ ಹೊರತು ಈ ಕೃತಿಗೂ ಪುಟ್ಟಣ್ಣನವರಿಗೂ ಯಾವ ಸಂಬಂಧವೂ ಇಲ್ಲ ಎಂದೇ ತಿಳಿಯಬೇಕಾಗುತ್ತದೆ.[9]

## ಟಿಪ್ಪಣಿಗಳು

1 ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಈ ಪದ್ಯ ಎಂ. ಎಸ್. ಪುಟ್ಟಣ್ಣನವರಿಗೆ ಬಹಳ ಪ್ರಿಯವಾದುದಾಗಿತ್ತು. ಅಲ್ಲಿ ವ್ಯಕ್ತವಾಗಿರುವ ಪ್ರಾಮಾಣಿಕತೆ ಪುಟ್ಟಣ್ಣನವರಿಗೆ ಪರಮ ಪ್ರಿಯವಾದ ಗುಣ ಎಂದು ಈ ಹಿಂದೆ ಹೇಳಿದೆ. ಜೊತೆಗೆ ಹುಟ್ಟಿದ ಹತ್ತು ದಿನದಲ್ಲೇ ತಾಯಿ ಸತ್ತು ತಬ್ಬಲಿಯಾಗಿ ಬೆಳೆದದ್ದರಿಂದ ಬಾಲ್ಯದ ಮುಗ್ಧ ಮನಸ್ಸಿನ ಮೇಲೆ ಉಂಟಾದ ಘೋರ ಪರಿಣಾಮಗಳು ಗೋವಿನ ಕರುವಿನ ಆಕ್ರಂದನದಲ್ಲಿ ಅವರಿಗೆ ಅಚ್ಚೊತ್ತಿದಂತೆ ಕಂಡಿರಬೇಕು. ತಬ್ಬಲಿ ಮಕ್ಕಳನ್ನು ಕಂಡರೆ ಅವರಿಗೆ ಗೋವಿನ ಕಥೆ ನೆನಪಿಗೆ ಬರುತ್ತಿತ್ತೆಂದು ಅವರ ಹಲವು ಬಂಧುಗಳಿಂದ ಕೇಳಿ ತಿಳಿದಿದ್ದೇನೆ.

2 ಸ್ವಾರಸ್ಯ ; ಜಿ. ಪಿ. ರಾಜರತ್ನಂ ; ವಿದೇಹ, 14, 17ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-560003 ; 1970 ; ಕನ್ನಡದಲ್ಲಿ ಶಿಶುಸಾಹಿತ್ಯ ಪು. 188.

3 ಅದೇ, ಪು. 187.

4 ಈ ಪತ್ರವನ್ನು ನನಗೆ ದೊರಕಿಸಿಕೊಟ್ಟ ಪುಟ್ಟಣ್ಣನವರ ಮೊಮ್ಮಗ ಎಸ್. ಎಲ್. ಸಿಂಹ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

5 ಹೊಸಗನ್ನಡದ ಅರುಣೋದಯ ; ಶ್ರೀನಿವಾಸ ಹಾವನೂರ ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ; 1974 ; ಪು. 280.

6 ಶ್ರೀನಿವಾಸ ಹಾವನೂರರ ಪತ್ರ, ದಿನಾಂಕ 27-9-1979.

7 ಕನ್ನಡ ಪಾಠಗಳ ಎರಡನೇ ಪುಸ್ತಕವು :?; ಬಾಸೆಲ್ ಮಿಶನ್, ಮಂಗಳೂರು ; ಐ. ಮು. 1873 ; ಪು. vi + 138.

8 ಬ್ರಿಟಿಷ್ ಲೈಬ್ರರಿಯ ಪತ್ರ, ದಿನಾಂಕ 2–11–1979.

9 ಈ ಅಂಶವನ್ನು ಬೆಳಕಿಗೆ ತರಲು ಸಹಕರಿಸಿದ ಶ್ರೀನಿವಾಸ ಹಾವನೂರರಿಗೂ ಬ್ರಿಟಿಷ್ ಲೈಬ್ರರಿಯ ಅಧಿಕಾರಿಗಳಿಗೂ ನಾನು ಕೃತಜ್ಞನಾಗಿದ್ದೇನೆ.

## 6. ಪತ್ರಿಕೋದ್ಯಮ

ಎಂ. ಎಸ್. ಪುಟ್ಟಣ್ಣನವರು 'ಹಿತಬೋಧಿನಿ' ಮಾಸಪತ್ರಿಕೆಯನ್ನು ತಮ್ಮ ಸ್ನೇಹಿತರಾದ ಎಂ. ಬಿ. ಶ್ರೀನಿವಾಸಯ್ಯಂಗಾರರೊಡನೆ 1883ರ ಅಕ್ಟೋಬರ್ ತಿಂಗಳಲ್ಲಿ ಪ್ರಾರಂಭಿಸಿದರು. "By that time the Mysore Maharani's Girls' school had been started and was in its full working order. A Kannada journal for the use of the female pupils was thought a desideratum. I and a friend of mine started a monthly under the disignation of the Hithabodhini."[1] ಎಂದು ಪುಟ್ಟಣ್ಣನವರು ಪತ್ರಿಕೆ ಪ್ರಾರಂಭವಾದ ಉದ್ದೇಶವನ್ನು ಹೇಳಿಕೊಂಡಿದ್ದಾರೆ. ಆದರೆ 'ಹಿತಬೋಧಿನಿ'ಯಲ್ಲಿ ಶಾಲಾಬಾಲಿಕೆಯರಿಗಾಗಿ ಮೀಸಲಾದ ಲೇಖನಗಳಿಗಿಂತ ಸಾರ್ವಜನಿಕ ಹಿತದೃಷ್ಟಿಯೇ ಪ್ರಮುಖವಾಗಿ ಕಾಣುತ್ತದೆ.

'ಹಿತಬೋಧಿನಿ'ಯ ಪ್ರತಿ ಸಂಚಿಕೆಯಲ್ಲಿ ಡೆಮಿ ಆಕಾರದ ಪುಟಗಳು ಸಂಖ್ಯೆಯಲ್ಲಿ 22ರಿಂದ 40ರವರೆಗೆ ಇರುತ್ತಿದ್ದವು. ಮುಖಪುಟದ ಮೇಲೆ ವಾಗ್ದೇವಿಯ ಸ್ತುತಿಯಿದ್ದ ಒಂದು ಕಂದಪದ್ಯ ಇತ್ತು. ಬಸವಪ್ಪ ಶಾಸ್ತ್ರಿಗಳ ಆಶುಕವಿತ್ವಕ್ಕೆ ಇದರ ರಚನೆ ಒಂದು ಉದಾಹರಣೆಯಾದ ಸಂದರ್ಭ ಹೀಗಿದೆ : "ಅಷ್ಟರಲ್ಲಿ ಸಭೆಗೆ ಆಹ್ವಾನಿತರಾಗಿದ್ದ ಬಸವಪ್ಪ ಶಾಸ್ತ್ರಿಗಳು ಬಂದರು. ಅಲ್ಲಿಯ ಪ್ರಮುಖರು ತಮಗೆ ಬಂದಿದ್ದ ಕಷ್ಟವನ್ನು ವಿವರಿಸಲಾಗಿ ಬಸವಪ್ಪಶಾಸ್ತ್ರಿಗಳವರು ನಸುನಕ್ಕು ತಮ್ಮ ಎಡ ಹೆಬ್ಬೆರಳ ಮೇಲೆ ಅಲ್ಲಿದ್ದ ಒಂದು ಲೇಖನಿಯಿಂದ ಏನೋ ಗುರುತು ಮಾಡಿಕೊಂಡು "ನಾನು ಹೇಳುವುದನ್ನು ಬರೆದುಕೊಳ್ಳಿ, ಹೇಗಿರುತ್ತದೋ ನೋಡೋಣ" ಎಂದು ಹೀಗೆ ಹೇಳಿದರು :

ಆವಳ ಕೈ ವಿಡಿದಾ ರಾ– ।
ಜೀವಭವಂ ನಿಖಿಲಲೋಕನಿರ್ಮಾಣಕಲಾ– ।
ಕೋವಿದನಾದನೊ ಆ ವಾ– ।
ಗ್ದೇವತೆ ಮೆಯ್ವೆತ್ತು ಮೆರೆಗೆ ಹಿತಬೋಧಿನಿಯೊಳ್"

ಇದನ್ನು ಕೇಳಿದೊಡನೆಯೇ ಅಲ್ಲಿದ್ದ ಎಲ್ಲರ ಮುಖಗಳೂ ಪ್ರಸನ್ನವಾದವು. "ಕವಿತೆಯೆಂದರೆ ಇಂಥದಲ್ಲವೆ ಕವಿತೆ !" ಎಂದರು.[2]

ಮುಖಪುಟದಲ್ಲಿ ಪ್ರಕಟವಾಗುತ್ತಿದ್ದ ಕಂದಪದ್ಯದ ಸರಿಯಾದ ಪಾಠ ಹೀಗಿದೆ :

ಆವಳ ಕೈವಿಡಿದಾ ರಾ ।
ಜೀವಭವಂ ನಿಖಿಲ ಲೋಕ ನಿರ್ಮ್ಮಾಣ ಕಲಾ ॥
ಕೋವಿದನೆನಸಿದನಾ ವಾ !
ಗ್ದೇವತೆ ಸನ್ಮತಿಯನಿತ್ತು ಸಲಹಲಿ ಜಗವಂ ॥

ಹೆಸರೇ ಸೂಚಿಸುವಂತೆ ಹಿತವನ್ನು–ಯಾವುದೇ ರಂಗದ ಹಿತವನ್ನು–ಬೋಧಿಸುವುದು 'ಹಿತಬೋಧಿನಿ'ಯ ಉದ್ದೇಶವಾಗಿತ್ತು. ಜನಾಂಗದ ತಿಳುವಳಿಕೆಗೆ ಮೀಸಲಾದ ಪತ್ರಿಕೆ ಅದು. "ನಮ್ಮ ಕರ್ಣಾಟಕ ದೇಶದಲ್ಲಿ ಈ ರೀತಿಯಾದ ಪತ್ರಿಕೆಗಳು ಯಾವದೂ ಇರಲಿಲ್ಲ. ಆದಕಾರಣ ಈ ಹಿತಬೋಧಿನಿಯ ಮೂಲಕ ಜನಗಳಿಗೆ ಕೈಲಾದ ಮಟ್ಟಿಗೆ ತಿಳುವಳಿಕೆಯನ್ನು ಹೆಚ್ಚಿಸಬೇಕೆಂದು ಯತ್ನಿಸಿದೇವೆ. ನಮ್ಮ ಶಾಸ್ತ್ರಗಳಲ್ಲಿರುವ ವಿಷಯಗಳನ್ನೂ ಹೇಳುವುದಲ್ಲದೆ ಇಂಗ್ಲಿಷದಲ್ಲಿರತಕ್ಕ ನೂತನವಾದ ಕುಶಲ ವಿದ್ಯದ ಮತ್ತು ಉಪಯುಕ್ತವಾದ ಶಾಸ್ತ್ರಗಳ ಸಂಗತಿಗಳನ್ನು ಆಗಾಗ್ಯೆ ಈ ಪತ್ರಿಕೆಯಲ್ಲಿ ಬರೆಯುತ್ತಾ ಬರುವೆವು. ವಿನೋದಕರವಾಗಿಯೂ ನೀತಿಪ್ರದರ್ಶಕವಾಗಿಯೂ ಇರುವ ಕೆಲವು ಕಥೆಗಳೂ ಇದರಲ್ಲಿ ಬರೆಯಲ್ಪಡುವವು. ದೇಶಾಂತರ ವರ್ತಮಾನ ಸಂಗ್ರಹವೂ ಇದರಲ್ಲಿರುವದು. ಜನರು ಈ ಪತ್ರಿಕೆಯನ್ನು ಓದುವದರಲ್ಲಿ ಕಳೆದ ಕಾಲವನ್ನು ವ್ಯರ್ಥವಾಗಿ ಕಳೆದ ಹಾಗಾಗಲಿಲ್ಲವೆಂದೂ, ಇದರಿಂದ ತಮಗೆ ಸ್ವಲ್ಪವಾದರೂ ತಿಳುವಳಿಕೆ ಉಂಟಾಯಿತೆಂದೂ ಭಾವಿಸುವ ಮಟ್ಟಿಗೆ ಈ ನಮ್ಮ ಪ್ರಯತ್ನವು ಸಾಗಿದರೆ, ನಮ್ಮ ಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇವೆ. ಆದ್ದರಿಂದ ಈ "ಹಿತಬೋಧಿನಿ"ಗೆ ಹಿತವನ್ನೇ ಕೋರಬೇಕೆಂದು ಸತ್ಪುರುಷರನ್ನು ಪ್ರಾರ್ಥಿಸುತ್ತೇವೆ." 'ಹಿತಬೋಧಿನಿ'ಯ ಮೊದಲ ಸಂಪಾದಕೀಯ ಲೇಖನದಲ್ಲಿ ಸಂಪಾದಕರ ಸಾಮಾಜಿಕ ಪ್ರಜ್ಞೆ ಕಳಕಳಿಗಳು ಹೀಗೆ ವ್ಯಕ್ತವಾಗಿವೆ. ಈ ದೃಷ್ಟಿಯಿಂದ ಸಾಹಿತ್ಯ, ಕಲೆ, ವಿಜ್ಞಾನ, ಇತಿಹಾಸ, ಜೀವನಚರಿತ್ರೆ, ದೇಶಾಂತರದ ವರ್ತಮಾನ ಸಂಗ್ರಹ, ಕಥೆಗಳು ಇತ್ಯಾದಿ ಹಲವು ಉಪಯುಕ್ತವಾದ ಮಾಹಿತಿಗಳನ್ನು ಪ್ರಸಾರ ಮಾಡಲು, ಆ ಮೂಲಕ ಜನತೆಯ ತಿಳುವಳಿಕೆಯನ್ನು ಹೆಚ್ಚಿಸಲು 'ಹಿತಬೋಧಿನಿ' ಶ್ರಮಿಸಿತು.

ಕನ್ನಡ ನುಡಿ ಮನ್ನಣೆಯ ಜೊತೆಗೇ ಕನ್ನಡ ಲೇಖಕರಿಗೆ ಪ್ರೋತ್ಸಾಹ, ಗದ್ಯದ ಬೆಳವಣಿಗೆಗೆ ಸಹಕಾರ ಇವು 'ಹಿತಬೋಧಿನಿ'ಯ ಮುಖ್ಯ ಸಾಧನೆಗಳು. ಆಧುನಿಕ ಸೌಲಭ್ಯಗಳನ್ನು ಅಳವಡಿಸಿಕೊಳ್ಳುವುದು, ಸಂಧಿಕಾಲದ ಬಿಕ್ಕಟ್ಟುಗಳನ್ನು ಪರಿಹರಿಸಿಕೊಳ್ಳುವುದು ಈ ಎರಡು ವಿಚಾರಗಳೂ ಕೂಡಿದ ಒಂದು ಎಳೆ ಇಲ್ಲಿ ಕಾಣುವುದು ಮಹತ್ತ್ವದ ಸಂಗತಿಯಾಗಿದೆ ವಿಷಯಜ್ಞಾನವನ್ನು ಉಳ್ಳವರೂ, ಕನ್ನಡದಲ್ಲಿ ತಿಳಿಯಾದ ಶೈಲಿಯಲ್ಲಿ ಬರೆಯಬಲ್ಲವರೂ ಆದವರನ್ನು ಕಂಡುಹಿಡಿದು ಅವರಿಂದ ಬರವಣಿಗೆಯ ಕೆಲಸ ಮಾಡಿಸುವುದೇ ಸಂಪಾದಕರ ಮುಖ್ಯ ಕರ್ತವ್ಯವಾಗಿತ್ತು. ಸ್ವತಃ ಎಂ. ಎಸ್. ಪುಟ್ಟಣ್ಣನವರು ಅನೇಕ ಲೇಖನಗಳನ್ನು ಬರೆದರು. ಎಚ್. ವಿ. ನಂಜುಂಡಯ್ಯ, ಬಿ. ರಾಮಸ್ವಾಮಿ, ಮ. ರಂಗಾಚಾರ್ ಮುಂತಾದವರು 'ಹಿತ

ಬೋಧಿನಿ'ಗಾಗಿ ಅನೇಕ ಶಾಸ್ತ್ರಲೇಖನಗಳನ್ನು ಬರೆದರು, ಚಾಮರಾಜನಗರದ ಶ್ರೀಕಂಠ ಶಾಸ್ತ್ರಿಗಳು 'ಹಿತಬೋಧಿನಿ'ಗಾಗಿ ಲೇಖನಗಳನ್ನು ಓದಿ ಆಯ್ಕೆ ಮಾಡುವುದು, ಕರಡು ತಿದ್ದುವುದು ಮುಂತಾದ ಕೆಲಸಗಳನ್ನು ಮಾಡಿಕೊಟ್ಟರು. ಮಧ್ಯಮವರ್ಗಕ್ಕಾಗಿ ಈ ಪತ್ರಿಕೆ ಮೀಸಲಾಗಿತ್ತು. ಲೇಖನ ವೈವಿಧ್ಯದಿಂದ ಪತ್ರಿಕೆ ಜನಪ್ರಿಯವಾಗಿತ್ತು. ದೇಶ ಭಾಷೆಗಳಲ್ಲಿ ಆಸಕ್ತರಾದವರನ್ನೆಲ್ಲ 'ಹಿತಬೋಧಿನಿ' ಆಕರ್ಷಿಸುತ್ತಿತ್ತು. ಸಂಪಾದಕರ ಕಾರ್ಯೋತ್ಸಾಹ, ಸಾಮಾಜಿಕ ಕಾಳಜಿಗಳಿಂದ ಈ ಉದ್ಯಮ ಜನಮೆಚ್ಚುಗೆಯನ್ನು ಗಳಿಸಿತು. 'ನಿರಂಕುಶಪ್ರಭುತ್ವ', 'ಪ್ರಜಾಪ್ರತಿನಿಧಿಗಳ ಸಭೆ', 'ಸರಕಾರದ ನಿಬಂಧನೆಗಳ ಭಾಷಾಂತರ', 'ಷಹರುಗಳ ಸ್ವತಂತ್ರಾಡಳತ, ಅಥವಾ ಮ್ಯೂನಿಸಿಪಾಲಿಟಿ', ರೈಲ್ವೇ ಅಭಿವೃದ್ಧಿ–ಈ ಮುಂತಾದ ಸರಕಾರಕ್ಕೆ ಸಂಬಂಧಿಸುವ ವಿಷಯಗಳನ್ನು ಚರ್ಚಿಸಿರುವ ಲೇಖನಗಳು, 'ನಮ್ಮ ಭೂಮಿಯ ಪೂರ್ವ ಸ್ಥಿತಿಯನ್ನು ಕುರಿತು', 'ನೀರನ್ನು ಕುರಿತು', 'ಮೇಘವಾಗುವ ರೀತಿ', 'ಮಂಜು ಆಗುವ ರೀತಿ', 'ವ್ಯವಸಾಯ ವಿಚಾರ' ಮುಂತಾದ ವಿಜ್ಞಾನ ವಿಷಯಗಳ ಲೇಖನಗಳು, 'ನವರಾತ್ರಿ', 'ನರಕಚತುರ್ದಶಿ ಮತ್ತು ದೀಪಾವಳಿ' ಮತ್ತು 'ಮೋಹರಂ ಹಬ್ಬದ ಉತ್ಪತ್ತಿ'ಮುಂತಾದ ಹಬ್ಬಗಳನ್ನು ಕುರಿತ ಲೇಖನಗಳು, ಕಾವ್ಯ, ಇತಿಹಾಸ, ಪುರಾಣಗಳಿಂದ ಆಯ್ದ ಸಣ್ಣ ಸಣ್ಣ ಕತೆಗಳು, ದೇಶಾಂತರ ವರ್ತಮಾನ ಹಾಗೂ ಮೈಸೂರಿನ ಸುದ್ದಿಗಳು, ನೀತಿಮುಕ್ತಕಗಳು, ಒಗಟುಗಳು ಮುಂತಾದವು 'ಹಿತಬೋಧಿನಿ'ಯಲ್ಲಿ ಪ್ರಕಟವಾಗುತಿದ್ದ ವಿಚಾರಗಳ ದಿಕ್ಕನ್ನು ಸೂಚಿಸುತ್ತವೆ. ಲೇಖನಗಳ ವಿಷಯ ವ್ಯಾಪ್ತಿಯನ್ನು ಒಂದೆರಡು ಉದಾಹರಣೆಗಳ ಮೂಲಕ ತಿಳಿಯಬಹುದು.

1. "ಚಿನ್ನ, ಬೆಳ್ಳಿಯೇ ಮುಂತಾದ ಲೋಹಗಳನ್ನು ಕಾಯಿಸಿದರೆ ಅವುಗಳು ಕರಗಿ ದ್ರುವ ರೂಪವನ್ನು ಹೊಂದುತ್ತವೆ. ಹೀಗೆ ಕಾಯಿಸುವುದರಿಂದ ಕರಗಿರುವ ಲೋಹಗಳನ್ನು ತಣ್ಣೀರಲ್ಲಿ ಹಾಕಿದರೆ ಅವು ಪುನಃ ಘನೀಭೂತವಾಗಿ ಘಟ್ಟಿಯಾಗುತ್ತವೆ. ಪಾದರಸವನ್ನು ಬಹಳ ಕಾಲ ಕಾಯಿಸಿದರೆ ಆದು ಕಣ್ಣಿಗೆ ಕಾಣದಂತೆ ಹೋಗಿಬಿಡುತ್ತದೆ. ಕರಗಿರುವ ಸತ್ವವನ್ನು ಹೆಚ್ಚಾಗಿ ಕಾಯಿಸಿದರೆ ಅದು ಹೊಗೆಯ ಹಾಗೆ ಏಳುತ್ತದೆ. ಘಟ್ಟಿಯಾಗಿರುವ ತುಪ್ಪವನ್ನು ಕಾಯಿಸಿದರೆ, ಅದು ನೀರಾಗುತ್ತದೆ. ಮಂಜಿನ ಗಡ್ಡೆಯನ್ನೂ, ಛಳಿಗಾಲದಲ್ಲಿ ಮಳೆಯೊಡನೆ ಬೀಳುವ ಆಲಿಕಲ್ಲುಗಳನ್ನೂ ಕಾಯಿಸಿದರೆ, ಅವು ಮೊದಲು ನೀರಾಗಿ, ಆಮೇಲೆ ಹಬೆಯಾಗಿ ಹೋಗುತ್ತವೆ. ಇವುಗಳಿಂದ ನಾವು ತಿಳಕೊಳ್ಳತಕ್ಕದ್ದೇನು ? ಲೋಕದಲ್ಲಿ ಸಕಲವಸ್ತುಗಳೂ ಸಾಧಾರಣವಾಗಿ ಮೂರು ಸ್ಥಿತಿಯಲ್ಲಿ ಇರಬಲ್ಲವು. ಅವು ಯಾವವೆಂದರೆ :

1. ಘಟ್ಟಿಯಾಗಿರುವ ಸ್ಥಿತಿ ಅಥವಾ ಘನರೂಪ
2. ನೀರಾಗಿರುವ ಸ್ಥಿತಿ ಅಥವಾ ದ್ರುವರೂಪ

3. ಹಬೆಯಂತೆ ಎದ್ದುಹೋಗುವ ಸ್ಥಿತಿ ಅಥವಾ ವಾಯುರೂಪ"
('ನಮ್ಮ ಭೂಮಿಯ ಪೂರ್ವ ಸ್ಥಿತಿಯನ್ನು ಕುರಿತು', ಹಿತಬೋಧಿನಿ 1-1, ಪು. 14)

2. "ಒಬ್ಬ ಮನುಷ್ಯನಿಗೆ ಮತ್ತೊಬ್ಬ ಮನುಷ್ಯನು ಒಂದು ಸಾವಿರ ರೂಪಾಯಿ ಕೊಟ್ಟರೆ, ಕೊಟ್ಟವನ ಭಾಗ್ಯ ಕಡಿಮೆಯಾಗುತ್ತದೆ, ತೆಗೆದುಕೊಂಡವನ ಭಾಗ್ಯ ಹೆಚ್ಚಾಗುತ್ತದೆ. ಆದರೆ ದೇಶದಲ್ಲಿರುವ ಒಟ್ಟು ಭಾಗ್ಯದಲ್ಲಿ ಹೆಚ್ಚಾಗಲಿ ಕಡಿಮೆಯಾಗಲಿ ಆಗುವದಿಲ್ಲ. ದೇಶದಲ್ಲಿರುವ ಒಟ್ಟುಭಾಗ್ಯ ಹೆಚ್ಚಾಗಬೇಕಾದರೆ, ಹೊರಗಿನಿಂದ ಉಪಯೋಗಕರವಾದ ಪದಾರ್ಥಗಳು ಬಂದುಸೇರಬೇಕು, ಇಲ್ಲದಿದ್ದರೆ ಸ್ವದೇಶದಲ್ಲೇ ಉತ್ಪತ್ತಿಯಾಗಬೇಕು. ಮನುಷ್ಯರೆಲ್ಲರೂ ಕಷ್ಟವ್ಯವಸಾಯ ಮುಂತಾದ ಮಾರ್ಗಗಳಿಂದ ಬೇಕಾದ ಧಾನ್ಯ ಮೊದಲಾದವುಗಳನ್ನು ಬೆಳೆದು ವೃದ್ಧಿ ಮಾಡದೆ ನಿಲ್ಲಿಸಿಬಿಟ್ಟರೆ, ದೇಶವು ಬಹಳ ಜಾಗ್ರತೆಯಾಗಿ ಹಾಳಾಗುವುದು. ಹೀಗೆ ಕೆಲಸಕಾರ್ಯಗಳೆಲ್ಲ ನಿಂತುಹೋದ ತರುವಾಯ, ಜನರು ಅಲ್ಲಲ್ಲಿರುವ ದವಸ ಧಾನ್ಯಗಳನ್ನು ಕೆಲವು ದಿವಸಗಳವರಿಗೂ ಉಪಯೋಗಿಸಿಕೊಂಡು ಜೀವನ ಮಾಡಬಹುದು. ಅವೂ ಮುಗಿದ ಮೇಲೆ ದೇಶದಲ್ಲಿರುವ ನಗನಾಣ್ಯಗಳನ್ನು ವ್ರಯ ಮಾಡಿ ಮತ್ತೊಂದು ದೇಶದಿಂದ ಆಹಾರಕ್ಕೆ ಬೇಕಾದ ವಸ್ತುಗಳನ್ನು ತರಿಸಿಕೊಂಡು ಇನ್ನೂ ಕೆಲವು ದಿನ ಜೀವನ ಮಾಡಬಹುದು. ಹೀಗೆ ಸ್ವಲ್ಪ ದಿವಸಗಳಲ್ಲಿ ದೇಶದಲ್ಲಿದ್ದದ್ದೆಲ್ಲಾ ಮುಗಿದುಹೋಗುವದು. ಆದ್ದರಿಂದ ಯಾವ ದೇಶವಾದರೂ ಸುಭಿಕ್ಷವಾಗಿರಬೇಕಾದರೆ, ಅಲ್ಲಿನ ಜನಗಳಿಗೆ ಬೇಕಾದ ಪದಾರ್ಥಗಳನ್ನೆಲ್ಲಾ ಆ ದೇಶಸ್ಥರು ವ್ಯವಸಾಯ ಮುಂತಾದ ವೃತ್ತಿಗಳಿಂದ ಉತ್ಪತ್ತಿ ಮಾಡಬೇಕು; ಇಲ್ಲದಿದ್ದರೆ ಕೆಲವು ಪದಾರ್ಥಗಳನ್ನು ತಮಗೆ ಬೇಕಾದ್ದಕ್ಕಿಂತ ಹೆಚ್ಚಾಗಿ ಉಂಟುಮಾಡಿ, ಹೆಚ್ಚಾದದ್ದನ್ನು ಮತ್ತೊಂದು ದೇಶದವರಿಗೆ ಕೊಟ್ಟು, ಅದಕ್ಕೆ ಬದಲಾಗಿ ಆ ಸೀಮೆಯಲ್ಲಿ ಉಂಟಾಗುವ ತಮಗೆ ಪ್ರಯೋಜನಕರವಾದ ಪದಾರ್ಥಗಳನ್ನು ಪಡೆಯಬೇಕು. ನಮ್ಮ ದೇಶದಲ್ಲಿ ಹತ್ತಿ ಹೆಚ್ಚಾಗಿ ಬೆಳೆಯುತ್ತದೆ, ಇದೆಲ್ಲಾ ಇಲ್ಲಿ ಬೇಕಾಗಿಲ್ಲದೆ ಇರುವದ್ದರಿಂದ ಅದನ್ನು ಇಂಗ್ಲೆಂಡಿಗೆ ಕಳುಹಿಸುತ್ತಾರೆ. ಇಂಗ್ಲೆಂಡಿನಲ್ಲಿ ಇದನ್ನೆಲ್ಲಾ ಬಟ್ಟೆಯಾಗಿ ನೇಯುತ್ತಾರೆ. ಅಲ್ಲಿ ಆ ಬಟ್ಟೆಯೆಲ್ಲಾ ಅಗತ್ಯವಿಲ್ಲದೆ ಇರುವದ್ದರಿಂದ, ನಮ್ಮ ದೇಶವೇ ಮುಂತಾದ ಇತರ ಸೀಮೆಗಳಿಗೆ ಹೆಚ್ಚಾದದ್ದನ್ನು ಕಳುಹಿಸುತ್ತಾರೆ."
('ಐಶ್ವರ್ಯವನ್ನು ಕುರಿತು', 'ಹಿತಬೋಧಿನಿ' 1-1 ಪು. 11-12)

ಮೇಲಿನ ಎರಡು ಭಾಗಗಳಲ್ಲೂ ಜನರ ಸಾಮಾನ್ಯ ಜ್ಞಾನ ಹೆಚ್ಚಿಸುವುದೇ ಮುಖ್ಯ ಉದ್ದೇಶ. ತಿಳಿಯಾದ ಶೈಲಿ, ಗೊಂದಲವಿಲ್ಲದೆ ಹೇಳುವ ರೀತಿ ಇಲ್ಲಿ ಗಮನಾರ್ಹವಾದುವು. ಮೊದಲ ಉದಾಹರಣೆಯಲ್ಲಿ ವೈಜ್ಞಾನಿಕ ವಿಷಯಗಳನ್ನು ಸರಳ ರೀತಿಯಲ್ಲಿ ತಿಳಿಸುವ ಉದ್ದೇಶವಿದ್ದರೆ ಎರಡನೆಯ ಉದಾಹರಣೆಯಲ್ಲಿ ನಾಡಿನ ಸಂಪತ್ತಿನ ಉತ್ಪತ್ತಿ, ವಿಭಾಗ ಇವುಗಳ ವಿವೇಚನೆ ಇದೆ. ಈ ಲೇಖನದಲ್ಲಿ ವ್ಯಕ್ತ

ವಾಗಿರುವ ನಮ್ಮ ದೇಶದಿಂದ ಹತ್ತಿ ಕಳಿಸಿ, ಪರದೇಶದಿಂದ ಬಟ್ಟೆ ಕೊಳ್ಳುವ–ಒಂದೆಕ್ಕೆರಡು ದುಡ್ಡು ಕೊಟ್ಟು–ಜಾಣತನಕ್ಕೇನನ್ನಬೇಕೋ ತಿಳಿಯದು. ವಸ್ತುಸ್ಥಿತಿಯನ್ನು ಒಡಲಿನಲ್ಲಿ ಬಚ್ಚಿಟ್ಟುಕೊಂಡ ಇಂತಹ ಭಾಗಗಳು ಕುತೂಹಲಕರವಾಗಿವೆ.

ದೇಶಾಂತರ ವರ್ತಮಾನ ಸಂಗ್ರಹದಡಿಯಲ್ಲಿ ಹಲವು ಸಂಗತಿಗಳು ಪ್ರಚಲಿತ ವಿಷಯಗಳನ್ನು ಜನರಿಗೆ ತಲುಪಿಸುತ್ತವೆ. ಕೆಲವು ಉದಾಹರಣೆಗಳನ್ನು ನೋಡಬಹುದು:

"ಈಗ ಕಾಲಾಣೆಯ ಪೋಸ್ಟು ಕಾರ್ಡ್ ಎಂಬ ಚೀಟಿಯು ಚಲಾವಣೆಯಲ್ಲಿರುವದು ಸರಿಯಷ್ಟೆ. ಇದೇ ಮಾದ್ರಿಯಾಗಿ ಅವಳೀ ಕಾರ್ಡುಗಳು ಈ ತಿಂಗಳು ಮೊದಲುನಿಂದ ಚಲಾವಣೆಯಲ್ಲಿ ಬರುವದಾಗಿದೆ. ಪ್ರತಿಯೊಂದು ಕಾರ್ಡು ಎರಡು ಭಾಗಗಳಾಗಿ ಮಾಡಿ, ಅವುಗಳ ಮೇಲೆ ಕಾಲು ಕಾಲು ಆಣೆಯ ಮುದ್ರೆಯು ಹಾಕಲ್ಪಡುವುದು. ಇವುಗಳಲ್ಲಿ ಒಂದು ಭಾಗದ ಮೇಲೆ ಕಾಗದ ಬರೆಯುವವನು ತಾನು ಬರೆಯಬೇಕಾದದ್ದನ್ನು ಬರೆಯಬೇಕೆಂತಲೂ, ಮತ್ತೊಂದು ಭಾಗದ ಮೇಲೆ ಈ ಕಾಗದವನ್ನು ಯಾರಿಗೆ ಬರೆದು ಇರುತ್ತಾನೋ ಅವರು ಉತ್ತರವನ್ನು ಬರೆದು ಕಳುಹಿಸಬೇಕೆಂತಲೂ, ನಿರ್ಣಯಿಸಿದಾರೆ. ಇಂಥಾ ಹೊಸ ಕಾರ್ಡ್‌ನಿಂದ, ಪ್ರತ್ಯುತ್ತರಕ್ಕೋಸ್ಕರ ಅರ್ಧ ಆಣೆಯ ಲೇಬಿಲ್ಸ್‌ಗಳನ್ನು ಕಾಗದದಲ್ಲಿ ಇಟ್ಟು ಕಳುಹಿಸುವ ಅಗತ್ಯ ಯಾರಿಗೆ ಬೀಳುತ್ತಿತ್ತೋ, ಅಂಥಾ ಜನಗಳಿಗೆಲ್ಲಾ ಬಹಳ ಉಪಯೋಗವಾಗುವುದು."

(ಪು. 121–122)

"ಮೈಸೂರಿನಲ್ಲಿ ಚೀಫ್‌ಕೋರ್ಟ್ ಎಂಬ ದೊಡ್ಡ ನ್ಯಾಯಾಸ್ಥಾನದಲ್ಲಿ 3 ಜನ ಜಡ್ಜಿಗಳನ್ನು ಇಡಬೇಕೆಂದು ಮೈಸೂರು ಸರಕಾರದವರು ನಿಶ್ಚೈಸಿದಾರೆ. ಮೊದಲನೇ ಜಡ್ಜಿಯು ಪ್ಲುಮರ್ ಸಾಹೇಬರು; 2ನೇ ಯವರು ಮ॥ ರಾ॥ ತಂಬೂಸೆಟ್ಟರವರು; 3ನೇ ಜಡ್ಜೀ ಕೆಲಸವು ಮಧುರೆಜಿಲ್ಲಾ ಸಬ್‌ಜಡ್ಜ್ ಮ॥ ರಾ॥ ಕೃಷ್ಣಸ್ವಾಮಿರಾಯರಿಗೆ ಆಯಿತೆಂದು ದೊಡ್ಡ ಸ್ಥಳಗಳಲ್ಲಿ ಪ್ರವಾದವಿದೆ. (ಪು. 146)

ಕುತೂಹಲಕರವಾದ ತುಣುಕುಗಳಿಗೂ ದೇಶಾಂತರ ವೃತ್ತಾಂತದಲ್ಲಿ ಸ್ಥಳವಿತ್ತು.

"ಫ್ರಾನ್ಸ್ ದೇಶದಲ್ಲಿ ಒಂದು ದಿನ ಸಾಯಂಕಾಲ ಒಬ್ಬ ಶಾಸ್ತ್ರಜ್ಞನು ಆಕಾಶವನ್ನು ನೋಡುತ್ತಿರುವಾಗ ಬಿಳೀ ಕಾಮನಬಿಲ್ಲನ್ನು ಕಂಡನು. ಅದರ ಬೇರೆ ಬೇರೆ ಬಣ್ಣಗಳು ಕಾಣಲಿಲ್ಲ. ಓಹೋ ! ಇದೇನು ಕುದುರೆಗೆ ಕೊಂಬು ಹುಟ್ಟುವ ದಿವಸವಾಯಿತು !" (ಪು. 123)

'ಹಿತಬೋಧಿನಿ' ಯಲ್ಲಿ ಚಿಕ್ಕ ಚಿಕ್ಕ ಕಥೆಗಳು ಪ್ರಕಟವಾಗುತ್ತಿದ್ದವು. ಹೆಚ್ಚಿನವು ತೀರ ಚಿಕ್ಕವು. ಅರ್ಧ ಪುಟದ ವ್ಯಾಪ್ತಿಯೊಳಗೆ ಬರುವಂತಹವು. ಸಂಪಾದಕರು ಬರೆದ ಕಥೆಗಳಲ್ಲಿ ಕೆಲವು 'ನೀತಿಚಿಂತಾಮಣಿ' ಯಲ್ಲೂ ಪ್ರಕಟವಾದವು. 'ಹಿತಬೋಧಿನಿ' ಯಲ್ಲಿನ ಒಂದು ಕಥೆಯನ್ನು ನೋಡಬಹುದು.

"ಒಬ್ಬಾನೊಬ್ಬ ಹಣಗಾರನ ಬಳಿಗೆ ಒಬ್ಬ ವಿದ್ವಾಂಸನು ಹೋದನು. ಆ

ಸಾಹುಕಾರನು ವಿದ್ವಾಂಸನೊಡನೆ ಬೇಕಾದ ಮಾತುಗಳನ್ನಾಡುತ್ತಾ, ತನ್ನ ಹತ್ತಿರಿದ್ದ ಉತ್ಕೃಷ್ಟವಾದ ಒಡವೆಗಳನ್ನೂ, ಜವಾಹಿರನ್ನೂ, ಅವನಿಗೆ ತೋರಿಸುತ್ತ ಬಂದನು. ಆಗ ಪಂಡಿತನು—ಅಯ್ಯಾ, ಸಾಹುಕಾರನೆ, ಈ ಜವಾಹಿರುಗಳಲ್ಲಿ ನನಿಗೂ ಒಂದು ಪಾಲು ಕೊಟ್ಟಿದ್ದಕ್ಕಾಗಿ ಬಹಳ ಕೃತಜ್ಞನಾಗಿದೇನೆ, ಎಂದನು. ಹಣವಂತನು ಬೆಚ್ಚಿ ಬಿದ್ದು, ಹಾ ! ನಿಮಗೆ ಪಾಲೇ, ಹಾಗಂದರೇನು ಎಂದನು. ವಿದ್ವಾಂಸನು ಅಯ್ಯಾ, ನನಗೆ ಇದನ್ನೆಲ್ಲಾ ತೋರಿಸಿದ್ದರಿಂದ ನನಿಗೂ ಪಾಲು ಕೊಟ್ಟ ಹಾಗಾಯಿತು; ಇದನ್ನು ನೀನು ನೋಡಿ ನೋಡಿ ಸಂತೋಷಪಡುತ್ತೀಯೆ; ಇದಕ್ಕಿಂತಲೂ ಹೆಚ್ಚಾದ ಪ್ರಯೋಜನವನ್ನು ಇದರಿಂದ ನೀನು ತಾನೇ ಏನು ಹೊಂದೀಯೇ ? ಎಂದನು." ('ಜವಾಹಿರನ್ನು ಹಂಚಿಕೊಂಡದ್ದು' ಹಿತಬೋಧಿನಿ 1–4, ಪು. 96)

'ಹಿತಬೋಧಿನಿ' ಯ ಒಂದು ಗಮನಾರ್ಹ ಸೇವೆ ಎಂದರೆ ಕನ್ನಡ ಗದ್ಯಕ್ಕೆ ಅದು ಸಲ್ಲಿಸಿದ ಕಾಣಿಕೆ. ಕಳೆದ ಶತಮಾನದಲ್ಲಿ ಇದ್ದ ಬಿಕ್ಕಟ್ಟುಗಳ ನಡುವೆ ಈ ಸುಲಲಿತ ವಾದ ಶೈಲಿ ಅಚ್ಚರಿಯನ್ನು ಮೆಚ್ಚುಗೆಯನ್ನು ತರುತ್ತದೆ. ಒಂದು ಉದಾಹರಣೆ :

"ಲೋಕದಲ್ಲಿ ಮನುಷ್ಯನು ಸ್ನೇಹಿತರಿಲ್ಲದೆ ಏಕಾಕಿಯಾಗಿರುವುದು ಬಹಳ ಕಷ್ಟ. ಹೀಗೆ ಏಕಾಕಿಯಾಗಿರುವವನು ಋಷಿಯಾಗಿ ಪ್ರಪಂಚಧರ್ಮವನ್ನೆಲ್ಲಾ ಬಿಟ್ಟು ದೇವರ ಧ್ಯಾನದಲ್ಲಿ ಇರುವವನಾಗಿರಬೇಕು. ಸಾಧಾರಣವಾಗಿ ಪ್ರಪಂಚಧರ್ಮಗಳನ್ನು ಅನು ಸರಿಸಿ ಇರತಕ್ಕ ಮನುಷ್ಯನು ಏಕಾಕಿಯಾಗಿ ಮಿತ್ರರಿಲ್ಲದೆ ಇದ್ದರೆ, ಅಂಥಾ ಮನುಷ್ಯ ನನ್ನು ಮೃಗದಂತೆ ಎಣಿಸಬಹುದು. ಯಾತಕ್ಕಂದರೆ ಅವನಿಗೆ ಅನುರಾಗವೆಂಬ ಗುಣವು ಇಲ್ಲವೆಂದು ಊಹಿಸಬೇಕು. ನಮಗೆ ತಿಳಿದಮಟ್ಟಿಗೂ ಯೋಚಿಸಿ ನೋಡಿ ದ್ದಾದರೆ ಬಹುಶಃ ಎಲ್ಲರಿಗೂ ಸ್ನೇಹಿತರು ಇದ್ದೇ ಇದಾರೆ. ಮನುಷ್ಯನಿಗೆ ದೊಡ್ಡ ಅಧಿಕಾರ, ದ್ರವ್ಯ, ಆರೋಗ್ಯ, ಇವೇ ಮೊದಲಾದ ಅನೇಕ ಅನುಕೂಲ್ಯಗಳು ಇದ್ದಾಗ್ಯೂ ಮಿತ್ರನಿಲ್ಲದಿದ್ದರೆ ಅವನಿಗೆ ಪೂರ್ಣ ಸುಖವಿಲ್ಲ. ಆದ್ದರಿಂದ ಲೋಕ ದಲ್ಲಿ ಅರಸಾದರೂ ಆಳಾದರೂ ತಮಗೆ ತಕ್ಕಂಥಾ ಮಿತ್ರರನ್ನು ಸಂಪಾದಿಸಿ ಇರುತ್ತಾರೆ. ಅರಸರಿಗೆ ಸಂಪತ್ತಿನಲ್ಲಿ ಸಮನಾದವರು ಬಹುಶಃ ಇಲ್ಲ. ಆದ್ದರಿಂದ ತಮಗಿಂತಲೂ ಕೀಳಾದ ಪ್ರಜೆಗಳಲ್ಲಾದರೂ ಸ್ನೇಹಿತರನ್ನು ಸಂಪಾದಿಸಿಕೊಂಡಿರುತ್ತಾರೆ. ಇದರಿಂದ ಅರಸನಾದಾಗ್ಯೂ ಸ್ನೇಹಿತನಿಲ್ಲದೆ ಸುಖಿಯಾಗಿರಲಾರನೆಂದು ಊಹಿಸಬಹುದು." ('ಮಿತ್ರರನ್ನು ಕುರಿತು', ಹಿತಬೋಧಿನಿ 1–1, ಪು. 15)

'ಹಿತಬೋಧಿನಿ'ಯ ಸಂಪಾದಕರು ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುವುದರಲ್ಲಿ ತಡಮಾಡುತ್ತಿರಲಿಲ್ಲ. ಪತ್ರಿಕೆಯ ಮೊದಲ ಸಂಚಿಕೆ ಹೊರಬಿದ್ದಾಗ ಅದರ ಹೆಸರಿನ ಬಗೆಗೆ ವ್ಯಕ್ತವಾದ ಒಂದು ಅಭಿಪ್ರಾಯಕ್ಕೆ ತಮ್ಮ ಪ್ರತಿಕ್ರಿಯೆಯನ್ನು ಎರಡನೆ ಸಂಚಿಕೆ ಯಲ್ಲಿ ಹೀಗೆ ಹೇಳಿದ್ದಾರೆ : " 'ಹಿತಬೋಧಿನಿ' ಎಂಬ ನಮ್ಮ ಪತ್ರಿಕೆಯ ಹೆಸರಿನ ಕೊನೇ ಅಕ್ಷರವು "ನೀ" ಎಂದು ದೀರ್ಘವಾಗಿರಬೇಕೆಂಬುದಾಗಿ ಅನೇಕರು ಹೇಳಿಕ್ಕೊಂಡರಂತೆ. ಏಕಾಕ್ಷರ ಶಬ್ದಗಳು ಹೊರತು ಉಳಿದ ದೀರ್ಘಾಂತವಾದ

ಸಂಸ್ಕೃತ ಈಕಾರಾಂತ ಊಕಾರಾಂತ ಶಬ್ದಗಳೆಲ್ಲಾ ಕನ್ನಡದಲ್ಲಿ ಹ್ರಸ್ವಾಂತವಾಗಿ ನಿಲ್ಲುವುವು (ಶಬ್ದಮಣಿ ದರ್ಪಣ, ಮಂಗಳೂರು ಪ್ರತಿ. ಅ. 2. ಸೂ 83)"

(ಹಿತಬೋಧಿನಿ 1–2, ಪು. 52)

'ಹಿತಬೋಧಿನಿ'ಯ ಸಂಪಾದಕರು ತಪ್ಪು ಕಂಡಲ್ಲಿ ಚುಚ್ಚಿ ಹೇಳಲು ಹಿಂದೆಗೆ ಯುತ್ತಿರಲಿಲ್ಲ. ಸರಕಾರದವರು ಮಾಡಿಸಿದ ಕೆಲವು ಭಾಷಾಂತರಗಳು ಸಾಮಾನ್ಯ ಜನರಿಗೆ ಅರ್ಥವಾಗಲಿಲ್ಲವೆಂದು ಮೊನಚು ಮಾತುಗಳಲ್ಲಿ ತಿಳಿಸಿರುವಲ್ಲಿ ವ್ಯಕ್ತವಾಗಿರುವ ಭಾಷಾಸಂಬಂಧವಾದ ಕಳಕಳಿ ಗಮನಾರ್ಹವಾಗಿದೆ.

"ಉಪ್ಪಿಗೆ ವ್ಯಾಪಕತ್ವ ಗುಣವೂ ತಿರುಗುವ ಕಾಲದಲ್ಲಿ ಥಂಡಿಯು ಹುಟ್ಟಿಸುವ ಗುಣ ಇರುವದರಿಂದ ಸಂದುಗಳ ಮತ್ತು ಪಾದಗಳ ಸಂಬಂಧವಾದ ಮುಖ್ಯವಾಗಿ ಜಾನುವಾರುಗಳ ಅಡುಗಳ ಕುರಿಗಳ ಈ ಸಂಬಂಧವಾದ ಪಾಲವು ರೋಗಗಳಿಗೆ ಅದು ಹೆಚ್ಚು ಉಪಯೋಗಕರದ್ದಾಗಿ ಇದೆ." ಇದು ಯಾವ ಭಾಷೆಯೋ ನಾವರಿಯೆವು. ಇಂಥಾ ಕನ್ನಡವನ್ನು ಯಾರ ಉಪಯೋಗಕ್ಕೋಸ್ಕರ ಬರೆದರೋ ಅವರ ದುರದೃಷ್ಟ ಕ್ಕಿಂತಲೂ ಹೀನವಾದದ್ದನ್ನು ಯಾರು ಬಲ್ಲರು ? ಇಂಥಾ ಅವಿವೇಕವಾದ ತರ್ಜುಮೆ ಗಳು ಬೇಕಾದಷ್ಟಿವೆ. ದಿನೇ ದಿನೇ ಇನ್ನೂ ಹೆಚ್ಚುತ್ತಲಿವೆ."

('ಸರಕಾರದ ನಿಬಂಧನೆಗಳ ಭಾಷಾಂತರ', 1–5, ಪು. 108–109)

'ಹಿತಬೋಧಿನಿ' ಯಲ್ಲೇ ಪ್ರಕಟವಾದ 'ಇಂಗ್ಲೆಂಡ್ ದೇಶದ ಚರಿತ್ರೆ' (ಮೊದಲ ಭಾಗ) ಯನ್ನು ಕುರಿತು ಸಂಪಾದಕರ ಅಭಿಪ್ರಾಯ ಪದ್ಯದ ಕೆಳಗೇ ಪ್ರಕಟವಾಗಿದೆ. ಐದು ನುಡಿಗಳ ಈ ಕಾವ್ಯದ ಒಂದು ಮಾದರಿ ಹೀಗಿದೆ :

"ಭಾ ॥ ಷ ॥

ಕಡಲು ಅಟ್ಲಾಂಟಿಕ್ಕುಯೆಂಬದ ।
ರೆಡೆಯೊಳಗೆ ನೆಲಸಿಹವು ಯೂರೋ ।
ಪೆಡೆಕೆ ನಿಲ್ಪುವು ಗ್ರೇಟು ಬ್ರಿಟನೈರ್ಲ್ಯಾಂಡು ದ್ವೀಪಗಳು ॥
ಪೊಡವಿಯೊಳು ಪೇರ್ವೆತ್ತ ಬ್ರಿಟನಿನೊ ।
ಳಡಗಿಯಿರ್ಪುವು ಇಂಗಲಾಂಡಾ ।
ಯೆಡದ ವೇಲ್ಸುಂ ಸ್ಕಾಟಲಾಂಡನೆ ಮೂರು ಭಾಗಗಳು ॥2॥"

## ಸಂಪಾದಕರ ಪ್ರತಿಕ್ರಿಯೆ

"ಈ ಪದ ಮೈತ್ರಿ, ಈ ಶಯ್ಯೆ, ಈ ಛಂದಸ್ಸು, ಇವುಗಳುಳ್ಳ ಪದ್ಯಗಳನ್ನು ಜನರು ನೋಡಿ ಹಾಸ್ಯ ಮಾಡಿಕೊಂಡು ನಕ್ಕು ಸ್ವಲ್ಪ ಹೊತ್ತು ವಿನೋದವಾಗಿ ಕಾಲವನ್ನು ಕಳೆಯುವುದಕ್ಕೆ ಇದರಿಂದ ಒಂದು ಸಮಯ ದೊರೆಯುವದಲ್ಲದೆ, ಅವರಿಗೆ ಮತ್ತೆ ಯಾವ ಪ್ರಯೋಜನವೂ ಕಾಣಿಸಲಿಲ್ಲ. ಬರವಣಿಗೆ ಬರೆಯುತಕ್ಕ ಸಾಮರ್ಥ್ಯ

ವುಳ್ಳವರು ತಮ್ಮ ಶಕ್ತಿಯನ್ನು ಹೀಗೆ ವ್ಯರ್ಥವಾಗಿ ವ್ಯಯಮಾಡದೆ ಚರಿತ್ರೆ ಮುಂತಾದದ್ದನ್ನು ವಚನರೂಪವಾಗಿ ಬರೆದರೆ, ಜನಗಳಿಗೆ ಬಹಳ ಉಪಯೋಗಕರವಾಗಿರುವದು; ಮತ್ತು ವಚನಪ್ರಬಂಧಗಳು ಬಹಳ ಕಡಮೆಯಾಗಿರುವ ನಮ್ಮ ಕನ್ನಡ ಭಾಷೆಯ ಅಭಿವೃದ್ಧಿಗೆ ಬಹು ಸಹಾಯ ಮಾಡಿದ ಹಾಗೆಯೂ ಆಗುವದು."

(ಹಿತಬೋಧಿನಿ 1-5, ಪು. 120-121)

ಸಾಮಾಜಿಕ ಕಾಳಜಿ ಇರುವ ಲೇಖನಗಳು ಅಚ್ಚಾಗುತ್ತಿದ್ದುದರಿಂದ ಬೇಗನೇ ಜನರ ಮೆಚ್ಚುಗೆ ದೊರಕಿತು. ಜನಾಂಗದ ಸಾಮಾನ್ಯ ಜ್ಞಾನವನ್ನು ಹೆಚ್ಚಿಸುವುದು ಮುಖ್ಯೋದ್ದೇಶವಾದುದರಿಂದ ವೈವಿಧ್ಯಕ್ಕೂ ಕೊರತೆ ಇರಲಿಲ್ಲ. ಸಾಹಿತ್ಯ, ಕಲೆ, ವಿಜ್ಞಾನ, ಸರಕಾರಕ್ಕೆ ಉತ್ತರ, ಸರಕಾರದ ಕಾರ್ಯಗಳ ಗುಣದೋಷ ವಿಮರ್ಶೆ, ಸುದ್ದಿ ಪ್ರಸಾರಗಳು, ಮುಂತಾದವು 'ಹಿತಬೋಧಿನಿ' ಯಲ್ಲಿ ಬೆಳಕು ಕಂಡವು. ಸಾರ್ವಜನಿಕರ ತಿಳುವಳಿಕೆಯನ್ನು ಹೆಚ್ಚಿಸುವುದು ಪತ್ರಿಕೆಯ ಮುಖ್ಯಗುರಿಯಾಗಿತ್ತು. ಸಂಪಾದಕರ ಹಲವು ಲೇಖನಗಳು ಪತ್ರಿಕೆಯಲ್ಲಿ ಬೆಳಕು ಕಂಡವು, ಇತರ ಅನೇಕ ಬರಹಗಾರರಿಗೆ ಮಾದರಿಯಾದುವು. ಹೊಸಗನ್ನಡದ ಭಾಷೆ, ಶೈಲಿಗಳು ಆವಿಷ್ಕಾರಗೊಳ್ಳುತ್ತಿದ್ದ ಕಾಲದ ಕನ್ನಡ ಗದ್ಯದ ಮಾದರಿಗಳು ಇಲ್ಲಿ ದೊರಕುತ್ತವೆ. ಕನ್ನಡ ಭಾಷೆಯ ಸಾಧ್ಯತೆಗಳನ್ನು, ಅದರ ಬನಿಸೊಗಡುಗಳನ್ನು ಅರಿತು ತಿಳಿಯಾದ ಶೈಲಿಯಲ್ಲಿ ಸುಲಭವಾದ ರೀತಿಯಲ್ಲಿ ವಿಷಯ ಬೋಧನೆ ಮಾಡುವುದು ಪತ್ರಿಕೆಯ ಧ್ಯೇಯವಾಗಿದ್ದು ಅದರ ಸಮರ್ಪಕ ಸಾಧನೆ 'ಹಿತಬೋಧಿನಿ'ಯ ಮೂಲಕ ನಡೆಯಿತು. ಪತ್ರಿಕೋದ್ಯಮ ಹಾಗೂ ಗದ್ಯಕೃಷಿ ಕೈ ಕೈ ಹಿಡಿದು ಸಾಗಿದವು. ಈ ಎಲ್ಲ ಕಾರಣಗಳಿಂದ 'ಹಿತಬೋಧಿನಿ'ಗೆ ಒಂದು ಗೌರವಾರ್ಹವಾದ ಸ್ಥಾನವಿತ್ತು.

'ಹಿತಬೋಧಿನಿ'ಯನ್ನು ಪುಟ್ಟಣ್ಣನವರು ಅಕ್ಟೋಬರ್ 1883 ರಿಂದ ಮಾರ್ಚ್ 1884 ರವರೆಗೆ ಅಂದರೆ ಕೇವಲ ಆರುತಿಂಗಳ ಕಾಲ ಮಾತ್ರ ನಡೆಸಿದರು. ಅಷ್ಟರಲ್ಲಿ ಪತ್ರಿಕೆ ಜನರ ಆಸಕ್ತಿಯನ್ನು ಗಳಿಸಿಕೊಂಡು ಮೇಲ್ಮಟ್ಟದ್ದೆಂದು ಹೆಸರುಗಳಿಸಿತ್ತು. ಆರುತಿಂಗಳ ನಂತರ ಪುಟ್ಟಣ್ಣನವರು ತಮ್ಮ ಬಿ.ಎ. ಪರೀಕ್ಷೆಗಾಗಿ ಮದರಾಸಿಗೆ ಹೋಗುವಾಗ ತಮ್ಮ ನೆಚ್ಚಿನ ಪತ್ರಿಕೆಯನ್ನು ಮರಿಮಲ್ಲಪ್ಪ ಶಾಲೆಯ ಮುಖ್ಯೋಪಾಧ್ಯಾಯರೂ, ತಮ್ಮ ಆಪ್ತರೂ ಆದ ಎಂ. ವೆಂಕಟಕೃಷ್ಣಯ್ಯನವರಿಗೆ ಒಪ್ಪಿಸಿದರು. ಇದರಿಂದ ವೆಂಕಟಕೃಷ್ಣಯ್ಯನವರ ಪತ್ರಿಕಾಜೀವನದ ನಾಂದಿ ಆದುದು ಕನ್ನಡ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಒಂದು ಮಹತ್ತ್ವದ ಸಂಗತಿಯಾಗಿದೆ. ತಮ್ಮಿಂದ ಪತ್ರಿಕೋದ್ಯಮ ದೀಕ್ಷೆಯನ್ನು ಪಡೆದ ಸಿಡಿಲಮರಿಯ ಉಜ್ವಲ ವ್ಯಕ್ತಿತ್ವವನ್ನು ಪುಟ್ಟಣ್ಣನವರು ಗುರುತಿಸಿದ್ದು ಗಮನಾರ್ಹವಾದ ಸಂಗತಿಯಾಗಿದೆ. ಮುಂದೆ ಕೆಲವು ದಿನಗಳು ನಡೆಸಿದ ಮೇಲೆ 'ಹಿತಬೋಧಿನಿ'ಯ ಸಂಪಾದಕತ್ವ ಸಿ. ಸುಬ್ಬರಾಯರ ಕೈಗೆ ಬಂತು. ಪತ್ರಿಕೆ ದುಡ್ಡಿನ ಕೊರತೆಯಿಂದ ನಿಲ್ಲುವವರೆಗೆ ಇದು ಸುಬ್ಬರಾಯರ ಸಂಪಾದಕತ್ವದಲ್ಲೇ ಇತ್ತು.

'ಹಿತಬೋಧಿನಿ'ಯ ಬಗೆಗೆ ಕೆಲವು ತಪ್ಪು ಉಲ್ಲೇಖಗಳಿವೆ. ಒಂದು ಉದಾಹರಣೆಯನ್ನು ನೋಡಬಹುದು. "1881 ರಲ್ಲಿ ಕನ್ನಡದ ಪ್ರಥಮ ಮಾಸಪತ್ರಿಕೆಯಾದ ಹಿತಬೋಧಿನಿಯು ಮೈಸೂರು ನಗರದಲ್ಲಿ ಜನಿಸಿತು. ರಾಮಾನುಜ ಅಯ್ಯಂಗಾರ್ಯರು ಅದರ ಸಂಪಾದಕರಾಗಿಯೂ, ಮಾಲೀಕರಾಗಿಯೂ ಇದ್ದರು. ವಿಜ್ಞಾನದ ಬೆಳವಣಿಗೆಗೆ ಸಂಬಂಧ ಪಟ್ಟ ಲೇಖನಗಳನ್ನು ಹೆಚ್ಚಾಗಿ ಈ ಮಾಸ ಪತ್ರಿಕೆಯು ಪ್ರಕಟಿಸುತ್ತಿತ್ತು."[3] ಎಂದು ನಾಡಿಗ ಕೃಷ್ಣಮೂರ್ತಿಯವರು ಹೇಳಿದ್ದಾರೆ. 'ಹಿತಬೋಧಿನಿ' ಪ್ರಾರಂಭವಾದುದು 1881ರಲ್ಲಿ ಅಲ್ಲ, 1883ರಲ್ಲಿ. ಮೈಸೂರಿನಲ್ಲಿ ಅಲ್ಲ, ಬೆಂಗಳೂರಲ್ಲಿ. ಸಂಪಾದಕರು ರಾಮಾನುಜ ಅಯ್ಯಂಗಾರ್ಯರಲ್ಲ, ಎಂ. ಎಸ್. ಪುಟ್ಟಣ್ಣ ಮತ್ತು ಎಂ. ಬಿ. ಶ್ರೀನಿವಾಸಯ್ಯಂಗಾರರು. ಅಲ್ಲದೆ 'ಹಿತಬೋಧಿನಿ' ಕನ್ನಡದ ಪ್ರಥಮ ಮಾಸಪತ್ರಿಕೆಯೂ ಅಲ್ಲ.

ಕನ್ನಡ ಪತ್ರಿಕೋದ್ಯಮದಲ್ಲಿ 1882–83ರದು ಒಂದು ಮುಖ್ಯವಾದ ವರ್ಷ. "ಕ್ರಿ. ಶ. 1882-83ನೆಯ ವರ್ಷಾವಧಿಯಿಂದ ಪ್ರಕಟವಾಗತೊಡಗಿದ 'ಹಿತಬೋಧಿನಿ' (ಬೆಂಗಳೂರು), 'ಚಂದ್ರೋದಯ' (ಧಾರವಾಡ) ಮತ್ತು 'ಕನ್ನಡ ಸುವಾರ್ತೆ' (ಮುಂಬಯಿ)–ಈ ಪತ್ರಿಕೆಗಳ ಮೂಲಕ ಕನ್ನಡ ಪತ್ರಿಕಾ ವ್ಯವಸಾಯವು ಹೊಸ ಹಾದಿಯನ್ನು ಹಿಡಿಯಿತು. ಆ ಮಾರ್ಗವೆಂದರೆ – ವಿಚಾರ ಜಾಗೃತಿ ; ಸ್ವಂತ ಅಭಿಪ್ರಾಯಗಳ ಅಭಿವ್ಯಕ್ತಿ ಮತ್ತು ರಾಷ್ಟ್ರೀಯ ಮನೋವೃತ್ತಿ. ಅದಕ್ಕೂ ಹಿಂದೆ, 'ಕರ್ನಾಟಕ ಪ್ರಕಾಶಿಕಾ' ಮತ್ತು 'ಶೋಧಕ' – ಇವುಗಳ ಪತ್ರಿಕಾಕರ್ತರು ಹಾಗೆ ಮಾಡಿದ್ದಾರೇನೋ ನಿಜ. ಆದರೆ, ಅದು ಒಬ್ಬಿಬ್ಬ ವ್ಯಕ್ತಿಗಳ ಎತ್ತುಗಡೆಯಾಗಿದ್ದಿತಲ್ಲದೆ, ಒಂದು ಪ್ರಭಾವೀ ಪರಂಪರೆಯಾಗಿ ಕಂಡು ಬಂದದ್ದು ಮೇಲೆ ಕಾಣಿಸಿದ ಪತ್ರಿಕೆಗಳ ಮೂಲಕವೆನ್ನಬಹುದು."[4] ಎಂಬ ಶ್ರೀನಿವಾಸ ಹಾವನೂರರ ಮಾತನ್ನು ನೆನೆಯಬಹುದು. ಸದ್ದುಗದ್ದಲವಿಲ್ಲದೆ ಕಾಲಕ್ಕೆ ತಕ್ಕಂತೆ ಅಗತ್ಯ ಪರಿಕರಗಳನ್ನು ಕಂಡುಹಿಡಿದು ಅದರ ಸಾಧ್ಯತೆಗಳನ್ನು ಸೂಕ್ತರೀತಿಯ ಮೂಲಕ ದುಡಿಸಿಕೊಂಡ ಎಂ. ಎಸ್. ಪುಟ್ಟಣ್ಣನವರ ಚೈತನ್ಯಕ್ಕೆ 'ಹಿತಬೋಧಿನಿ' ಒಂದು ಅತ್ಯುತ್ತಮ ಉದಾಹರಣೆ. ನಾಡುನುಡಿಗಳ ಸೇವೆಗೆ 'ಹಿತಬೋಧಿನಿ'ಯ ಕೊಡುಗೆ ಮರೆಯಲಾಗದುದು. ಜನಾಂಗದಲ್ಲಿ ಜ್ಞಾನ ಪ್ರಸಾರ, ಗದ್ಯದ ಬೆಳವಣಿಗೆ ಮತ್ತು ಎಂ. ವೆಂಕಟಕೃಷ್ಣಯ್ಯನವರಂಥವರಿಗೆ ಪತ್ರಿಕೋದ್ಯಮದ ದೀಕ್ಷೆಯನ್ನು ಕೊಟ್ಟದ್ದು – ಇವು 'ಹಿತಬೋಧಿನಿ'ಯ ಮೂಲಕ ಪುಟ್ಟಣ್ಣನವರು ಮಾಡಿದ ಮಹತ್ತ್ವದ ಕಾಣಿಕೆಗಳಾಗಿವೆ.

## ಟಿಪ್ಪಣಿಗಳು

1 The late Mr. H. V. Nunjundayya ; M. S. Puttanna ; manuscript p. 28; ?.
2 ಸಾಹಿತ್ಯೋಪಾಸಕರು ; ಡಿ. ವಿ. ಗುಂಡಪ್ಪ ; ಕಾವ್ಯಾಲಯ, ಮೈಸೂರು ; 1970; ಬಸವಪ್ಪ ಶಾಸ್ತ್ರಿಗಳು, ಪು. 32–33.
3 ಭಾರತೀಯ ಪತ್ರಿಕೋದ್ಯಮ ; ನಾಡಿಗ ಕೃಷ್ಣಮೂರ್ತಿ ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ; 1969; ಪು. 392.
4 ಹೊಸಗನ್ನಡದ ಅರುಣೋದಯ ; ಶ್ರೀನಿವಾಸ ಹಾವನೂರ ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; 1974; ಪು. 498.

# 7. ಲೇಖನಗಳು

ಎಂ. ಎಸ್. ಪುಟ್ಟಣ್ಣನವರ ಒಟ್ಟು ಐವತ್ತು ಉಪಲಬ್ಧ ಲೇಖನಗಳನ್ನು ಇಲ್ಲಿ ವಿವೇಚಿಸಲಾಗಿದೆ. ಇವುಗಳಲ್ಲಿ ಮೂವತ್ತೈದು ಕನ್ನಡ ಲೇಖನಗಳು (ಇಪ್ಪತ್ತನಾಲ್ಕು ಪ್ರಕಟಿತ + ಹನ್ನೊಂದು ಅಪ್ರಕಟಿತ). ಹದಿನೈದು ಇಂಗ್ಲಿಷ್ ಲೇಖನಗಳು (ಏಳು ಪ್ರಕಟಿತ + ಎಂಟು ಅಪ್ರಕಟಿತ). ಕನ್ನಡ ಇಂಗ್ಲಿಷ್ ಎರಡೂ ಭಾಷೆಗಳಲ್ಲಿನ ಒಟ್ಟು ಪ್ರಕಟಿತ ಲೇಖನಗಳ ಸಂಖ್ಯೆ ಮೂವತ್ತೊಂದು, ಅಪ್ರಕಟಿತ ಲೇಖನಗಳ ಸಂಖ್ಯೆ ಹತ್ತೊಂಬತ್ತು. ಈ ಎಲ್ಲ ಹತ್ತೊಂಬತ್ತು ಅಪ್ರಕಟಿತ ಲೇಖನಗಳೂ ಪುಟ್ಟಣ್ಣನವರ ಹಸ್ತಾಕ್ಷರದಲ್ಲಿಯೇ ದೊರೆತಿವೆ. ಈ ಲೇಖನಗಳನ್ನು ಅಪ್ರಕಟಿತ ಎಂದು ಇಲ್ಲಿ ಪರಿಗಣಿಸಿದ್ದರೂ ಅವುಗಳು ಹಿಂದೆ ಎಂದಾದರೂ ಪ್ರಕಟಗೊಂಡು ಈಗ ದೊರಕದೇ ಇರುವ ಸಾಧ್ಯತೆ ಇದೆ ಎಂಬುದನ್ನು ಮರೆಯುವ ಹಾಗಿಲ್ಲ. ಇಲ್ಲಿನ ಐವತ್ತು ಲೇಖನಗಳಲ್ಲಿ 'ಗ್ರಾಮ ಪಾಥೇಯ', 'ದಿವಾನ್ ರಂಗಾಚಾರ್ಲು', 'ಎರಡನೇ ಪುಲಿಕೇಶಿ', 'ಪಿಸುಣನಾದ ಅಧಿಕಾರಿ', 'ಅಪ್ರಶಿಖ' ಮತ್ತು 'The late Mr. H. V. Nanjundayya C.I.E.' –ಈ ಆರು ಲೇಖನಗಳು ಅಪೂರ್ಣವಾಗಿ ದೊರೆತಿವೆ. ಇವುಗಳಲ್ಲಿ 'ದಿವಾನ್ ರಂಗಾಚಾರ್ಲು' ಮತ್ತು 'The late Mr. H.V. Nanjundayya C.I.E.' ಇವುಗಳನ್ನು ಪೂರ್ಣಪ್ರಮಾಣದ ಗ್ರಂಥಗಳಾಗಿಸುವ ಉದ್ದೇಶ ಪುಟ್ಟಣ್ಣನವರಿಗಿತ್ತೆಂಬುದು ಈ ಲೇಖನಗಳ ವಿವರಣಾತ್ಮಕ ವಿಚಾರಗಳಿಂದ ತಿಳಿಯುತ್ತದೆ. 'ಕಾಲನಿಯಮ' ಮತ್ತು 'Krishnaraja Wodeyar III' ಈ ಎರಡು ಲೇಖನಗಳು ಕ್ರಮವಾಗಿ 'ನೀತಿಚಿಂತಾಮಣಿ' ಯ 'ಹನುಮಂತನು ಸಂಜೀವನ ಪರ್ವತವನ್ನು ತಂದದ್ದು' ಹಾಗೂ 'ಮುಮ್ಮಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರ ಬಿಲ್ಲುಗಾರಿಕೆ (ಉಲ್ಲೇಖ 24) ಇವುಗಳ ಪಾಠಾಂತರಗಳಾದ್ದರಿಂದ ಅವುಗಳನ್ನು ಪ್ರತ್ಯೇಕವಾಗಿ ಪರಿಗಣಿಸಿಲ್ಲ.

ಇಲ್ಲಿನ ಐವತ್ತು ಲೇಖನಗಳಲ್ಲಿ ಪ್ರಕಟಗೊಂಡ ಮೂವತ್ತೊಂದು ಲೇಖನಗಳ ವಿವರಗಳು ಕಾಲಾನುಕ್ರಮವಾಗಿ ಹೀಗಿವೆ :

1. ಹಿತಬೋಧಿನಿ (ಹಿತಬೋಧಿನಿ, 1-1 ; 1883)
2. ನವರಾತ್ರಿ (ಹಿತಬೋಧಿನಿ, 1-1 ; 1883)
3. ಮಿತ್ರರನ್ನು ಕುರಿತು (ಹಿತಬೋಧಿನಿ, 1-1 ; 1883)
4. ಪ್ರಜಾಪ್ರತಿನಿಧಿಗಳ ಸಭೆ (ಹಿತಬೋಧಿನಿ, 1-2 ; 1883)
5. ಮೈಸೂರು ಪ್ರಜಾಪ್ರತಿನಿಧಿಗಳ ಸಭೆ (ಹಿತಬೋಧಿನಿ, 1-2; 1883)
6. ರೇಲ್ವೇ ಅಭಿವೃದ್ಧಿ (ಹಿತಬೋಧಿನಿ, 1-2; 1883)
7. ನರಕಚತುರ್ದಶಿ ಮತ್ತು ದೀಪಾವಳಿ (ಹಿತಬೋಧಿನಿ, 1-2; 1883)
8. ನಂಜನಗೂಡು ರೇಲ್‌ರಸ್ತೆ (ಹಿತಬೋಧಿನಿ, 1-3; 1883)
9. ಇನಾಂಗ್ರಾಮಗಳ ವಿಷಯದಲ್ಲಿ ದಿವಾನರವರು ಮಾಡಿದ ಹುಕ್ಕುಂ (ಹಿತಬೋಧಿನಿ, 1-4; 1884)
10. ನಿರಂಕುಶಪ್ರಭುತ್ವ (ಹಿತಬೋಧಿನಿ, 1-3,4 ಮತ್ತು 5; 1883-84)
11. ಸರಕಾರದ ನಿಬಂಧನೆಗಳ ಭಾಷಾಂತರ (ಹಿತಬೋಧಿನಿ, 1-5; 1884)
12. ಷಹರುಗಳ ಸ್ವತಂತ್ರಾಡಳತ, ಅಥವಾ ಮ್ಯೂನಿಸಿಪ್ಯಾಲಿಟಿ (ಹಿತ ಬೋಧಿನಿ, 1-6; 1884)
13. ಗುರುಶಿಷ್ಯ ಸಂಬಂಧ (ವಿದ್ಯಾದಾಯಿನಿ, 2-1,2 ಮತ್ತು 5; 1894)
14. ಹಿಮ, ಮಂಜು (ವಿದ್ಯಾದಾಯಿನಿ, 2-11; 1894)
15. ಹಣ (ವಿದ್ಯಾದಾಯಿನಿ, 3-2; 1895)
16. ಮೈಸೂರು ಸೀಮೆಯಲ್ಲಿ ನಶಿಸಿಹೋದ ವೃತ್ತಿಗಳು (ಅರ್ಥಸಾಧಕ ಪತ್ರಿಕೆ, 7-6-1917)

17-22

Thimmanna Naik of Chitradurg
Kadarappa Naik
Gudagatti
Hiri Medakeri Naik as a hero in battles
Vobavva of Chitradurg
Dodda Vasantha Naik
(The Indian Heroes, (ed.) M.Shama Rao; 1922)

23. ಗ್ರಾಮಪಾಥೇಯ (ಮೈಸೂರು ಸಹಕಾರ ಪತ್ರಿಕೆ, 2-2; 1926)
24. ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ ಬಿಲ್ಲುಗಾರಿಕೆ (ಒಕ್ಕಲಿಗರ ಪತ್ರಿಕೆಯ ವಾರ್ಷಿಕ ಸಂಚಿಕೆ; 1928)
25. ಲಂಚ (ಪ್ರಬುದ್ಧ ಕರ್ಣಾಟಕ, 59-3; 1977)

26. ಪದವಿಯುಳ್ಳವರು (ಪ್ರಬುದ್ಧ ಕರ್ಣಾಟಕ, 59–4; 1978)
27. ಕನ್ನಡ: ಕೆಲವು ವಿಚಾರಗಳು (ಪ್ರಬುದ್ಧ ಕರ್ಣಾಟಕ, 60–1; 1978)
28. ದಿವಾನ ರಂಗಾಚಾರ್ಲು (ಪ್ರಬುದ್ಧ ಕರ್ಣಾಟಕ, 60–2; 1978)
29. ಪ್ಯಾಲಿಸ್ಸಿಯ ಜನ್ಮಚರಿತೆ (ಪ್ರಬುದ್ಧ ಕರ್ಣಾಟಕ, 60–3; 1978)
30. ವಿಲಿಯಂ ಮರಡಾಕನ ಚರಿತ್ರೆ (ಪ್ರಬುದ್ಧ ಕರ್ಣಾಟಕ, 60–4; 1979)
31. The condition of our Kannada (A booklet)

ಮಿಕ್ಕ ಹತ್ತೊಂಬತ್ತು ಲೇಖನಗಳು ('ಕಲಾಪತ್ತು ಮಾಡುವ ಯಂತ್ರ ಮಾಡಿದವನು ಜಾನ ಹೀತ ಕೇಟನು', 'ಪೀಲ್', 'ಜೇಮ್ಸ್‌ವಾಟ್', 'ಪುಷ್ಯಮಿತ್ರ – ವಸುಮಿತ್ರ', 'ಚಂದ್ರಗುಪ್ತ', 'ಸಮುದ್ರಗುಪ್ತ', 'ಸ್ಕಾಂದ ಗುಪ್ತ', 'ಎರಡನೇ ಪುಲಿಕೇಶಿ', 'ಹರ್ಷ', 'ಪಿಸುಣನಾದ ಅಧಿಕಾರಿ', 'ಅಪ್ರುಶಿಖ', 'Meer Meeran Srinivasa Rau killing a tiger', 'The great athlet of Srirangapattana', 'The last hour of Tippu Sultan', 'Gangabai Badami', 'Aliya Lingaraja Arasu of Mysore', 'The late Mr. H. V. Nanjundayya C.I.E.', 'A hunter killing a tiger' ಮತ್ತು 'Ranabir Singh') ಪುಟ್ಟಣ್ಣನವರ ಹಸ್ತಾಕ್ಷರಗಳಲ್ಲಿ ದೊರೆತಿವೆ. ಪುಟ್ಟಣ್ಣನವರು ಇವುಗಳನ್ನು ಬರೆದ ಕಾಲ ಹಸ್ತಪ್ರತಿಗಳಲ್ಲಿ ಸೂಚಿತವಾಗಿಲ್ಲ. ಅವುಗಳು ಪ್ರಕಟಗೊಂಡ ದಾಖಲೆಗಳೂ ಸಿಗುವುದಿಲ್ಲ.

**ಕನ್ನಡ ಲೇಖನಗಳು**

'ಹಿತಬೋಧಿನಿ' ಮಾಸಪತ್ರಿಕೆಯನ್ನು ಎಂ. ಎಸ್. ಪುಟ್ಟಣ್ಣನವರು ಎಂ. ಬಿ. ಶ್ರೀನಿವಾಸ ಅಯ್ಯಂಗಾರರ ಸಹಸಂಪಾದಕತ್ವದೊಡನೆ ಆರಂಭಿಸಿದರು. ಪತ್ರಿಕೆಯ ಸಂಪಾದಕತ್ವದ ಜೊತೆ ಜೊತೆಗೇ ಪುಟ್ಟಣ್ಣನವರು ಹಲವು ಲೇಖನಗಳನ್ನು ಬರೆದರು. 'ಹಿತಬೋಧಿನಿ' ಯ ಮೊದಲ ಸಂಪುಟದ ಆರು[1] ಸಂಚಿಕೆಗಳ ಹಲವು ಹೆಸರಿಲ್ಲದ ಲೇಖನಗಳು ಸಂಪಾದಕರು ಬರೆದದ್ದಾಗಿರಬೇಕು. ಮಿಕ್ಕೆಲ್ಲ ರಚನೆಗಳಿಗೂ ಹೆಸರಿದ್ದು ಕೆಲವೇ ಲೇಖನಗಳಿಗೆ ಹೆಸರಿಲ್ಲದಿರುವುದು ಈ ಗ್ರಹಿಕೆಗೆ ಕಾರಣವಾಗಿದೆ. ಪುಟ್ಟಣ್ಣನವರ ಒಲವು ಸಾಮಾಜಿಕ ವಿಷಯಗಳೆಡೆ, ಎಂ. ಬಿ ಶ್ರೀನಿವಾಸಯ್ಯಂಗಾರರ ಒಲವು ಪಾರಮಾರ್ಥಿಕ ವಿಷಯಗಳೆಡೆ ಇದ್ದುದು ಈ ಇಬ್ಬರು ಸಂಪಾದಕರ ಲೇಖನಗಳನ್ನು ವಿಂಗಡಿಸುವಾಗ ಸಹಾಯಕ ಅಂಶವಾಗಿದೆ. ಇಬ್ಬರೂ ಸಂಪಾದಕರ ಈ ಬೇರೆ ಬೇರೆ ಒಲವುಗಳು ಅವರುಗಳ ಮುಂದಿನ ಸ್ವತಂತ್ರ ಸಾಹಿತ್ಯರಚನೆಯಲ್ಲಿ ಸ್ಪಷ್ಟ ಅಭಿವ್ಯಕ್ತಿಯನ್ನು ಪಡೆದವು ಎಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ವಸ್ತುವಿನ ಆಯ್ಕೆ, ಆಲೋಚನೆಯ ಧಾಟಿ, ಕಾಗುಣಿತ, ಪದಪ್ರಯೋಗ, ವಾಕ್ಯರಚನೆಗಳಿಂದ ಸಿದ್ಧಿಸುವ ಶೈಲಿ, ಪುಟ್ಟಣ್ಣನವರ ಇತರ ಲೇಖನಗಳ ಛಾಯೆ—ಇವುಗಳ ಸಹಾಯ

ದಿಂದ ಹನ್ನೆರಡು ಲೇಖನಗಳನ್ನು ಎಂ. ಎಸ್. ಪುಟ್ಟಣ್ಣನವರದೆಂದು ತೀರ್ಮಾನಿಸಲಾಗಿದೆ. ('ಹಿತಬೋಧಿನಿ' ಯಲ್ಲಿ ಪ್ರಕಟವಾದ ಹಲವು ಕಥೆಗಳಿಗೆ ಲೇಖಕರ ಹೆಸರನ್ನು ಸೂಚಿಸಿದೆ. ಕೆಲವೇ ಕಥೆಗಳಿಗೆ ಲೇಖಕರ ಹೆಸರಿಲ್ಲ. ಅಂಥ ಹಲವು ಹೆಸರಿಲ್ಲದ ಕಥೆಗಳು 'ನೀತಿಚಿಂತಾಮಣಿ' ಯಲ್ಲಿ ಕಾಣಿಸಿಕೊಂಡಿವೆ. ಅದೇ ರೀತಿ ಹೆಸರಿಲ್ಲದ ಲೇಖನಗಳಲ್ಲಿ ಹಲವಾದರೂ ಪುಟ್ಟಣ್ಣನವರದೆಂದು ಭಾವಿಸುವುದು, ಪುಟ್ಟಣ್ಣನವರೇ ಸಂಪಾದಕರೆಂಬ ಹಿನ್ನೆಲೆಯಲ್ಲಿ, ಸಾಧುವಾದ ಮಾರ್ಗವೇ ಆಗಿದೆ.) ಪುಟ್ಟಣ್ಣನವರ ಮಗ ಎಂ. ಪಿ. ಸೋಮಶೇಖರರಾಯರು ತಮ್ಮ ತಂದೆಯವರದೆಂದು ಹೆಸರಿಸಿದ ಲೇಖನವೊಂದು ಈ ಹನ್ನೆರಡು ಲೇಖನಗಳಲ್ಲಿ ಸೇರಿರುವುದು ಇಲ್ಲಿ ಅನುಸರಿಸಿದ ಪದ್ಧತಿ ಸರಿಯಾಗಿದೆ ಎಂಬುದಕ್ಕೆ ಆಧಾರವನ್ನು ಒದಗಿಸುತ್ತದೆ. ಸ್ವಲ್ಪ ಅನುಮಾನವಿರುವ ಹಲವು ಲೇಖನಗಳನ್ನು, ಇನ್ನೂ ಹೆಚ್ಚಿನ ಪ್ರಮಾಣ ದೊರೆಯದೆ, ಪುಟ್ಟಣ್ಣನವರ ಬರಹಗಳಲ್ಲಿ ಸೇರಿಸುವುದು ಸಾಧುವಲ್ಲವೆಂಬ ಗ್ರಹಿಕೆಯಿಂದ ಕೈ ಬಿಡಲಾಗಿದೆ.

'ಹಿತಬೋಧಿನಿ' ಮಾಸಪತ್ರಿಕೆ ಪ್ರಾರಂಭವಾದಾಗ ಅದರ ಉದ್ದೇಶ, ವಿದೇಶೀಯರ ಆಕ್ರಮಣದಿಂದ ನಾಡಿನ ಜನಜೀವನದಲ್ಲಿ ಆದ ಬದಲಾವಣೆ, ಆಧುನಿಕ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ, ಪತ್ರಿಕೆಗಳ ಪಾತ್ರ ಇತ್ಯಾದಿ ವಿಷಯಗಳನ್ನು ಕುರಿತು ಬರೆದದ್ದು 'ಹಿತಬೋಧಿನಿ' ಎಂಬ ಸಂಪಾದಕೀಯ ಲೇಖನ. ಸ್ನೇಹದ ಅವಶ್ಯಕತೆಯನ್ನು 'ಮಿತ್ರರನ್ನು ಕುರಿತು' ಹೇಳುತ್ತದೆ. ನವರಾತ್ರಿಯ ಹಬ್ಬಕ್ಕೆ ಹಿಂದೂಗಳು ಕೊಡುವ ಪ್ರಾಶಸ್ತ್ಯ, ಉತ್ತರ ದಕ್ಷಿಣ ಭಾರತಗಳಲ್ಲಿನ ಸಂಪ್ರದಾಯಗಳು, ಅರಮನೆಯ ದರ್ಬಾರು ದೃಶ್ಯ ಇವುಗಳ ವಿವರಗಳು 'ನವರಾತ್ರಿ'ಯಲ್ಲಿವೆ. ನರಕಾಸುರನ ವಧೆ, ಬಲಿಯನ್ನು ವಾಮನ ಪಾತಾಳಕ್ಕೆ ತುಳಿದದ್ದು ಮೊದಲಾದ ವಿವರಗಳು 'ನರಕ ಚತುರ್ದಶಿ ಮತ್ತು ದೀಪಾವಳಿ'ಯಲ್ಲಿವೆ. ನಿರಂಕುಶಪ್ರಭುತ್ವ ಎಂದರೆ ಅಧಿಕಾರದ ಕೇಂದ್ರೀಕರಣ. ದೊರೆಯ ಹೊಣೆ ಹೆಚ್ಚು. ಆದರೆ ತಕ್ಕ ಸಿಬ್ಬಂದಿ ಇರಬೇಕು. ಇದರ ಮೇಲೆ ದೊರೆ ಅವಿವೇಕಿ ಆದರೆ ಎಲ್ಲ ಹಾಳು, ಅಲ್ಲದೆ, ದೊರೆ ಬಹು ಶಕ್ತನಾದರೂ ಆ ಸ್ಥಿತಿಯಿಂದ ಸಾಮಾನ್ಯ ಜನರ ಕಾರ್ಯಕ್ಷಮತೆಗೆ ಆಸ್ಪದ ದೊರೆಯದೆ ಜನತೆಯ ಬುದ್ಧಿಶಕ್ತಿ ಇಳಿಮುಖವಾಗುತ್ತದೆ. ಈ ಮಿತಿಗಳು ನಿರಂಕುಶ ಪ್ರಭುತ್ವಕ್ಕೆ ನಿತ್ಯವಾದುವು ಎಂಬುದನ್ನು 'ನಿರಂಕುಶ ಪ್ರಭುತ್ವ' ತಿಳಿಸುತ್ತದೆ. ಇಂಗ್ಲಿಷ್, ಹಿಂದೂಸ್ಥಾನಿ ಭಾಷೆಗಳ ಪ್ರಾಬಲ್ಯದಿಂದ ಕನ್ನಡ ಹಿಂದೆ ಬಿದ್ದಿತು. ಹಳ್ಳಿಗಳಲ್ಲಿ ಆ ಹೊತ್ತಿನಲ್ಲಿ ಹಕ್ಕುದಾರಿ ಪದ್ಧತಿ ನಾಶವಾಯಿತು. ಕೆಲವು ದಿನಗಳ ನಂತರ ಹಳೆಯ ಪದ್ಧತಿಗಳೇ ಪ್ರಾರಂಭವಾದವು. ಅದರ ಅರ್ಥ ಜನರಿಗೆ ತಿಳಿಯಬೇಕೆಂದರೆ ಆಡಳಿತ ಕನ್ನಡದಲ್ಲಿ ನಡೆಯಬೇಕು ಮುಂತಾದ ವಿಚಾರಗಳನ್ನು 'ಷಹರುಗಳ ಸ್ವತಂತ್ರಾಡಳತ, ಅಥವಾ ಮ್ಯೂನಿಸಿಪ್ಯಾಲಿಟಿ' ಎಂಬ ಲೇಖನ ತಿಳಿಸುತ್ತದೆ. ಸರಕಾರದ ಕೆಲಸ ಸುಲಭವಾಗುವಂತೆ, ಜನಗಳಲ್ಲಿ ಆಡಳಿತ ವಿಚಾರಗಳನ್ನು ಕುರಿತ ತಿಳುವಳಿಕೆ ಹರಡುವಂತೆ ಮಾಡುವ ಉದ್ದೇಶ

ದಂತೆ ದಿವಾನ್ ರಂಗಾಚಾರ್ಲು ಅವರು ಸ್ಥಾಪಿಸಿದ ಪ್ರಜಾಪ್ರತಿನಿಧಿ ಸಭೆ ನಾಡಿನ ಮುನ್ನಡೆಗೆ ನೆರವಾಯಿತು. 'ಪ್ರಜಾಪ್ರತಿನಿಧಿಗಳ ಸಭೆ' ಎಂಬ ಲೇಖನ ಇದನ್ನು ಕುರಿತಿದೆ. ಇಂಥದೊಂದು ಸಭೆಯ ಪೂರ್ಣವರದಿ 'ಮೈಸೂರು ಪ್ರಜಾಪ್ರತಿನಿಧಿಗಳ ಸಭೆ' ಎಂಬ ಲೇಖನದಲ್ಲಿದೆ. ರೈಲುಮಾರ್ಗಗಳಿಂದ ಓಡಾಟ ಶೀಘ್ರ, ಸರಕು ಸಾಗಾಣಿಕೆಗೆ ಅನುಕೂಲ ಎಂಬುದನ್ನು 'ರೇಲ್ವೆ ಅಭಿವೃದ್ಧಿ' ತಿಳಿಸುತ್ತದೆ. 'ನಂಜನ ಗೂಡು ರೇಲ್‌ರಸ್ತೆ'ಯಲ್ಲಿ ಹಣವಿಲ್ಲದೆ ಕಾರ್ಯನಿಂತಿರುವುದನ್ನು, ಶ್ರೀಮಂತರು ಷೇರು ಗಳನ್ನು ಕೊಂಡು ಹಣ ಹಾಕಿ ಕಾರ್ಯ ಮುಂದುವರಿಯುವಂತೆ ಮಾಡಬಹುದು ಎನ್ನುವುದನ್ನು ಹೇಳಿದೆ. ಮಹಾರಾಜರಿಂದ ಪಡೆದ ಸರ್ವಮಾನ್ಯ, ಜೋಡಿ, ಕಾಯಂ ಗುತ್ತಾ, ಕೊಡಗಿ ಇವೇ ಮೊದಲಾದ ಬಹುಮಾನಗಳಿಂದ ರಾಜ್ಯದ ಬೊಕ್ಕಸ ಬರಿದಾದು ದನ್ನು ಕಂಡು ಇಂಡಿಯಾ ಸರ್ಕಾರದವರು ಅವುಗಳಿಗೆ ತಡೆ ಹಾಕಿದ್ದು ಅನ್ಯಾಯವೆಂಬ ಪ್ರತಿಕ್ರಿಯೆ ಹಾಗೂ ಬಹುಮಾನ ಪಡೆದವರ ನಿಜವಾದ ದಾರುಣವಾದ ಸ್ಥಿತಿ–ಇವು ಗಳನ್ನು, ಅವುಗಳಿಗೆ ಪರಿಹಾರವನ್ನು 'ಇನಾಂ ಗ್ರಾಮಗಳ ವಿಷಯದಲ್ಲಿ ದಿವಾನರವರು ಮಾಡಿದ ಹುಕ್ಕುಂ' ಲೇಖನ ತಿಳಿಸುತ್ತದೆ. ದೇಶಭಾಷೆಗಳಲ್ಲಿ ಜನರಿಗೆ ತಿಳುವಳಿಕೆ ನೀಡದೆ ಅವರನ್ನು ಕಾನೂನಿನ ಇಕ್ಕಳದಲ್ಲಿ ಸಿಲುಕಿಸುವುದು ತಪ್ಪೆಂದೂ ಈ ದಿಕ್ಕಿನಲ್ಲಿ ಸರಕಾರದವರು ಆಡಳಿತ ವಿಚಾರಗಳನ್ನು ತಿಳಿಸುವ ಉದ್ದೇಶದಿಂದ ಮಾಡಿರುವ ಭಾಷಾಂತರಗಳು ಪೆಡಸಾಗಿದ್ದರೆ ಮೂಲೋದ್ದೇಶವೇ ವ್ಯರ್ಥವೆಂದೂ 'ಸರಕಾರದ ನಿಬಂಧನೆಗಳ ಭಾಷಾಂತರ' ತಿಳಿಸುತ್ತದೆ.

ಪುಟ್ಟಣ್ಣನವರ 'ಹಿತಬೋಧಿನಿ'ಯ ಲೇಖನಗಳಲ್ಲಿನ ಒಟ್ಟು ಬರವಣಿಗೆ ಒಂದು ರಾಸಾಯನಿಕ ರಚನೆ. ಒಂದರ ಛಾಯೆ ಇನ್ನೊಂದರಲ್ಲಿ ಬೀಳುತ್ತದೆ. ಒಂದರ ವಿಚಾರ ಇನ್ನೊಂದರಲ್ಲಿ ಮುಂದುವರಿಯುತ್ತದೆ. ಒಂದರ ಧೋರಣೆ ಇನ್ನೊಂದರಲ್ಲಿ ಸ್ಪಷ್ಟೀಕರಣ ಪಡೆಯುತ್ತದೆ. ಹಲವು ಲೇಖನಗಳಲ್ಲಿ ಆಂತರಿಕ ಸಂಬಂಧಗಳು ಸುಸ್ಪಷ್ಟ ವಾಗಿ ತೋರುತ್ತವೆ.

ಈ ಎಲ್ಲ ಲೇಖನಗಳೂ ಸಾಮಾಜಿಕ ಕಳಕಳಿಯನ್ನು ತೀವ್ರವಾಗಿ ಹೊಂದಿರುವ ಲೇಖನಗಳು, ಪ್ರಚಲಿತ ಸಮಸ್ಯೆಗಳಿಗೆ ಪ್ರತಿಕ್ರಿಯೆಗಳು. ಆದ್ದರಿಂದ ಇವುಗಳಿಗೆ ಐತಿಹಾಸಿಕ ಮಹತ್ತ್ವವಿದೆ. ಪುಟ್ಟಣ್ಣನವರಿಗೆ ಸಾರ್ವಜನಿಕ ವಿಚಾರಗಳಲ್ಲಿ ಮೊದಲಿ ನಿಂದಲೂ ಬಹಳ ಆಸಕ್ತಿ. ಅವರು ಹಲವು ಸಂಘ ಸಂಸ್ಥೆಗಳಲ್ಲಿ ಸಕ್ರಿಯಪಾತ್ರವನ್ನು ವಹಿಸಿದ್ದವರು. ಅವರ ಪತ್ರಿಕೋದ್ಯಮಕ್ಕೂ ಈ ಸಾಮಾಜಿಕ ಕಳಕಳಿಯೇ ಮೂಲ ಚಾಲಕಶಕ್ತಿಯಾಗಿತ್ತು. ಜನಸಾಮಾನ್ಯರಲ್ಲಿ ತಿಳುವಳಿಕೆಯನ್ನು ಹೆಚ್ಚಾಗಿಸುವುದು ಅವರ ಗುರಿಯಾಗಿತ್ತು.

'ಹಿತಬೋಧಿನಿ'ಯ ಈ ಹನ್ನೆರಡು ಲೇಖನಗಳು ಪುಟ್ಟಣ್ಣನವರವೆಂದು ತೀರ್ಮಾನಿಸಲು ಸಹಾಯಕವಾದ ಅಂಶಗಳು :

1. ಹಿತಬೋಧಿನಿ—ಇದು ಸಂಪಾದಕೀಯ ಲೇಖನ.

2. ನವರಾತ್ರಿ — ಈ ಲೇಖನದಲ್ಲಿ ಉಕ್ತವಾಗಿರುವ ಕರಾಡಿಗರು ನವರಾತ್ರಿಯಲ್ಲಿ ದುರ್ಗಾಷ್ಟಮಿಯ ದಿವಸ ಮಹಾಕಾಳಿಗೆ ನರಬಲಿ ಕೊಡುವ ಸಂಪ್ರದಾಯ (ಹಿ.ಪು. 6) 'ಮುಸುಗ ತೆಗೆಯೇ ಮಾಯಾಂಗನೆ'ಯಲ್ಲಿ ದೀರ್ಘವಾಗಿ ವಿವೇಚಿಸಲಾಗಿರುವ ಇದೇ ಸಂಪ್ರದಾಯ (ಮು.ತೆ.ಮಾ. ಪು.143–145)—ಇವುಗಳಲ್ಲಿ ಹೋಲಿಕೆಯಿದೆ.

3. ನರಕಚತುರ್ದಶಿ ಮತ್ತು ದೀಪಾವಳಿ —
ಹೋಲಿಸಿ :— "ಈ ನರಕಾಸುರನ ರಾಣಿವಾಸದಲ್ಲಿ ನರಳುತ್ತಿದ್ದ 16000 ಹೆಂಗಸರು ತಮ್ಮ ನಿರ್ಬಂಧವನ್ನು **ಬಿಡಿಸಿದನಲ್ಲಾ ಎಂಬ ಸಂತೋಷದಿಂದ** ಕೃಷ್ಣನ ಹಿಂದುಗಡೆಯೇ ಬಂದರು." (ಹಿ.ಪು 45)

"ಇಪ್ಪರಮಟ್ಟಿನ ಅಡಿಗೆಯನ್ನು ತಾನು ಮಾಡಬಲ್ಲಳು ಎಂಬ ನಂಬಿಕೆ ಮಾವನವರಿಗೆ **ಇದೆಯಲ್ಲಾ...ಎಂಬ ಔತ್ಸುಕ್ಯದಿಂದ,** ಸೀತಮ್ಮನು ಮೇಲೋಗರವನ್ನು ಹೆಚ್ಚಿ,...ಇರಿಸಿದಳು." (ಮಾ.ಮ. ಪು. 102)

"ಆಗಿನಿಂದಲೂ ಸುಮತಿಯು ಹೊರಕ್ಕೆ ಹೊರಟರೆ ಪ್ರಾಣಿ ಮಾತ್ರಕ್ಕೆ ಎಲ್ಲಿಯಾದರೂ **ನೋಯಿಸಿಯೇನಲ್ಲಾ ಎಂದು ಅತಿ ಜಾಗರೂಕತೆಯಿಂದ**... ಮೆಲ್ಲಗೆ ಬಿಡುತಾ ಇದ್ದನು." (ಸು.ಮ.ಚ. ಪು. 6–7)

4. ನಿರಂಕುಶಪ್ರಭುತ್ವ — ಹೈದರಾಲಿಗೂ ಅನಂತರ ಟಿಪ್ಪುವಿಗೂ ಮಂತ್ರಿಯಾಗಿದ್ದ ಕೃಷ್ಣರಾಯ ಎಂಬಾತನನ್ನು ಮೋಸದಿಂದ ಕೊಂದ ಪ್ರಕರಣವನ್ನು Ranabir Singh ಲೇಖನದಲ್ಲೂ ಹೇಳಿದೆ.
ಹೋಲಿಸಿ : "ಅರಸುಗಳು ವ್ಯಭಿಚಾರಿಗಳಾಗಿ ನಡಿಸಿದ ಹೊಲಸು ಕೆಲಸಗಳನ್ನು ವಿವರಿಸಬೇಕೆಂದು ತವಕಪಡುವ ನಮ್ಮ ಮನಸ್ಸನ್ನು ಮಾನದ ಮೇಲಿನ ದೃಷ್ಟಿಯು ಹಿಂದಕ್ಕೆ ಎಳೆಯುತ್ತಿದೆ". (ಹಿ.ಪು. 54)

"ಅಮೀಲರು ಗ್ರಾಮಾಂತರಗಳಿಗೆ ಒಂಟಿಯಾಗಿ ಹೋದಾಗ ಸ್ತ್ರೀ ವಿಷಯವಾಗಿ ಇವರು ನಡೆಸುತ್ತಿದ್ದ ಚರ್ಯವನ್ನು ವಿವರಿಸಲು ಅಸಹ್ಯವಾಗುತ್ತೆ." (ಮಾ.ಮ. ಪು. 32)

5. ಷಹರುಗಳ ಸ್ವತಂತ್ರಾಡಳತ, ಅಥವಾ ಮ್ಯೂನಿಸಿಪ್ಯಾಲಿಟಿ — ಇಲ್ಲಿ ಬರುವ ಗ್ರಾಮುಗಳಲ್ಲಿನ ಬಾರಾಬಲೂತಿಗಳ ಬಗೆಗಿನ ವಿವರಗಳು (ಹಿ.ಪು. 126) 'ಹಿಂದೂ ಚರಿತ್ರ ಸಂಗ್ರಹ' (ಪು. 4) ಮತ್ತು 'ಚಿತ್ರದುರ್ಗದ ಪಾಳಯಗಾರರು' (ಉಪೋ. ಪು. 8)ಗಳಲ್ಲಿ ಪುನರುಕ್ತವಾಗಿವೆ.

6. ಪ್ರಜಾಪ್ರತಿನಿಧಿ ಸಭೆ — ಪ್ರಜಾಪ್ರತಿನಿಧಿ ಪ್ರಭುತ್ವದ ತತ್ತ್ವವು ಜನರಿಗೆ ತಿಳಿಯುವಂತೆ ಪುಟ್ಟಣ್ಣನವರು ಒಂದು ಲೇಖನವನ್ನು 'ಹಿತಬೋಧಿನಿ'ಯಲ್ಲಿ ಪ್ರಕಟಿಸಿದರೆಂದು ಎಂ. ಪಿ. ಸೋಮಶೇಖರರಾಯರು ತಿಳಿಸಿದ್ದಾರೆ. (ಚೇತನಾ ವಾರಪತ್ರಿಕೆ, 10–11–1957, ಪು. 5)

7. ಸರಕಾರದ ನಿಬಂಧನೆಗಳ ಭಾಷಾಂತರ — ಅನ್ಯದೇಶ್ಯ ಶಬ್ದಗಳನ್ನು ಕುರಿತು ಅನಗತ್ಯ ಕ್ರೋಧ ಬೇಡವೆಂದೂ ಈಗಾಗಲೇ ರೂಢಿಯಲ್ಲಿರುವ ಪದಗಳನ್ನು ಕಿತ್ತೊಗೆಯಲು ಮಾಡುವ ಯತ್ನ ಸರಿಯಲ್ಲವೆಂದೂ ಪುಟ್ಟಣ್ಣನವರು 'The Condition of our Kannada'ದಲ್ಲಿ ತಿಳಿಸುವ ಮಾತುಗಳು ಇಲ್ಲೂ ಪ್ರಕಟವಾಗಿವೆ.

ಪುಟ್ಟಣ್ಣನವರ ಶಿಥಿಲ ಕಾಗುಣಿತ ಇಲ್ಲಿಯ ಹಲವು ಲೇಖನಗಳಲ್ಲಿ ಕಾಣಿಸಿಕೊಂಡಿದೆ. ಈ ಲೇಖನಗಳು ಪುಟ್ಟಣ್ಣನವರದೆನ್ನಲು ಈ ಶಿಥಿಲ ಕಾಗುಣಿತ ಇನ್ನೊಂದು ಸಹಾಯಕ ಅಂಶ.

8. ಮಿತ್ರರನ್ನು ಕುರಿತು — ನಮಿಗಿಂತ, ನಮಗಳಿಗೆ, ಒಳ್ಳೇ ಮಿತ್ರರಿಂದ (ಹಿ.ಪು. 15–17)
9. ಮೈಸೂರು ಪ್ರಜಾಪ್ರತಿನಿಧಿಗಳ ಸಭೆ—ವಾಯಿದೇ, ಸಾಗುವಳೀ, ಅಪ್ಪಣೇ, ಯೂರಪ್ಪಿಯನ್, ಮಾದ್ರಿ (ಮಾದರಿ) (ಹಿ.ಪು. 29–37)
10. ರೇಲ್ವೇ ಅಭಿವೃದ್ಧಿ—ಹೆಚ್ಚಿಸುವದು, ಹೊಗೇಗಾಡಿ, ಸರ್‍ವೇಮಾಡು, ನಮಿಗೂ. (ಹಿ.ಪು. 37–39)
11. ನಂಜನಗೂಡು ರೇಲ್‌ರಸ್ತೆ—ಮೇಲಕ್ಕೆ ಯಳೆದು, ಸೀಮೆ ಮರ, ಹುಣಿಮೇ ಸೇವೆ, ಪ್ರಾಣಾಬಿಟ್ಟದ್ದು, (ಹಿ.ಪು. 50–60)
12. ಇನಾಂ ಗ್ರಾಮಗಳ ವಿಷಯದಲ್ಲಿ ದಿವಾನರವರು ಮಾಡಿದ ಹುಕ್ಕುಂ— ವಡೆಯರವರು, ಗುತ್ತಿಗೇ ರೈತರು, ಈಚಿಗೆ, ಜಪ್ತೀ, ಸರ್ವೇ (ಹಿ.ಪು. 81–84)

ಈ ಎಲ್ಲ ಲೇಖನಗಳೂ ಪುಟ್ಟಣ್ಣನವರ ಸಂಪಾದಕತ್ವದ ಮೊದಲ ಆರು ಸಂಚಿಕೆಗಳಲ್ಲಿ ಪ್ರಕಟವಾಗಿರುವುದು ಗಮನಾರ್ಹವಾದ ಅಂಶವಾಗಿದೆ.

'ವಿದ್ಯಾದಾಯಿನಿ' ಮಾಸಪತ್ರಿಕೆಯಲ್ಲಿ ಪ್ರಕಟವಾದ 'ಗುರುಶಿಷ್ಯ ಸಂಬಂಧ' ಗುರುಗಳಲ್ಲಿ ಶಿಷ್ಯರಿಗೆ ಇರಲೇಬೇಕಾದ ವಿಧೇಯತೆಯನ್ನು ತಿಳಿಸುತ್ತದೆ. ಅಜ್ಜ, ಮೊಮ್ಮಕ್ಕಳ ಸಂಭಾಷಣೆಯಲ್ಲಿ ಹಣದ ವಿವಿಧ ಉಪಯೋಗಗಳನ್ನು 'ಹಣ' ಲೇಖನ ತಿಳಿಸುತ್ತದೆ. ಸಂಭಾಷಣೆಯ ರೂಪದ ಇನ್ನೊಂದು ಬರಹ 'ಹಿಮ, ಮಂಜು' ಇಬ್ಬನಿಯ ಸ್ವರೂಪವನ್ನು ತಿಳಿಸುತ್ತದೆ. ಯಂತ್ರಗಳು ಜಾರಿಗೆ ಬಂದು ಹಳ್ಳಿಯ ಕೈಗಾರಿಕೆಗಳು ನಾಶವಾದದ್ದನ್ನು ಜಾಡಿ, ಬಾಗಡೋರು ಹಗ್ಗ, ಕಲಾಬತ್ತು, ಚೀಟಿ ಬಟ್ಟೆ, ಹೊಂಬಳ ದವಣ, ಬಾಳೆಪಟ್ಟೆ ನಾರಿನ ಕೊಡೆ ಮುಂತಾದವು ಖಿಲವಾದುದನ್ನು 'ಮೈಸೂರು ಸೀಮೆಯಲ್ಲಿ ನಶಿಸಿ ಹೋದ ವೃತ್ತಿಗಳು' ತಿಳಿಸುತ್ತದೆ. ಸುಭಿಕ್ಷ ಕಾಲದಲ್ಲಿ ಧಾನ್ಯದ ದಾಸ್ತಾನು ಮಾಡಿ ಕ್ಷಾಮ ಬಂದಾಗ ತೊಂದರೆಯನ್ನು ತಪ್ಪಿಸಿಕೊಳ್ಳುವ ವಿಧಾನವನ್ನು 'ಗ್ರಾಮಪಾಥೇಯ' ಸೂಚಿಸುತ್ತದೆ. 'ಮುಮ್ಮಡಿ ಶ್ರೀಕೃಷ್ಣ

ರಾಜೇಂದ್ರ ಒಡೆಯರ ಬಿಲ್ಲುಗಾರಿಕೆ' ಮುಮ್ಮಡಿಯವರ ಬಿಲ್ವಿದ್ಯೆಯ ಚಾತುರ್ಯವನ್ನು ಬೆರಗುವಡೆಯುವಂತೆ ಚಿತ್ರಿಸುತ್ತದೆ.

ಲಂಚದ ವಿವಿಧ ರೂಪಗಳನ್ನು ವಿವೇಚಿಸಿರುವ ಅದರ ಹಲವು ಮಗ್ಗುಲು ಗಳನ್ನು ತೆರೆದು ತೋರಿಸುವ ಲೇಖನ 'ಲಂಚ'. ಅಧಿಕಾರಿಗಳ ಅನುಕೂಲ ಪ್ರತಿಕೂಲ ಪರಿಸ್ಥಿತಿಗಳು, ಅವರು ಹಿಡಿಯಬೇಕಾದ ಹಾದಿ–ಇವುಗಳನ್ನು 'ಪದವಿಯುಳ್ಳವರು' ಚಿತ್ರಿಸುತ್ತದೆ. 'ಕನ್ನಡ : ಕೆಲವು ವಿಚಾರಗಳು' ಲೇಖನದಲ್ಲಿನ ಹಲವು ವಿಚಾರಗಳು ಇಂದಿಗೆ ಬದಲಾಗಿದ್ದರೂ ಅಲ್ಲಿನ ಹಲವು ಧೋರಣೆಗಳು ಇಂದಿಗೂ ಮನನೀಯವಾ ಗಿವೆ. ಕನ್ನಡ ನಾಡಿನ ಮೇರೆಗಳು ಭಾಷೆ, ರಾಜಧಾನಿ, ಇಲ್ಲಿ ಆಳಿದ ರಾಜರು, ಮತಗಳು, ಬುಡಕಟ್ಟುಗಳು, ಪಾರಿಭಾಷಿಕ ಶಬ್ದಗಳು—ಇವುಗಳ ಬಗೆಗೆ ಪುಟ್ಟಣ್ಣನ ವರ ವಿಚಾರಧಾರೆ ಇಲ್ಲಿ ಕಾಣುತ್ತದೆ. ಮೈಸೂರು ಸಂಸ್ಥಾನದ ಅಭಿವೃದ್ಧಿಗಾಗಿ ಬಹು ವಾಗಿ ಶ್ರಮಿಸಿದ ದಿವಾನ್ ರಂಗಾಚಾರ್ಲು ಅವರ ಜನನ, ಬಾಲ್ಯ, ವಿದ್ಯಾಭ್ಯಾಸ, ಸಹಪಾಠಿಗಳನ್ನು ಕುರಿತ ಅಪೂರ್ಣ ಬರವಣಿಗೆ 'ದಿವಾನ್ ರಂಗಾಚಾರ್ಲು'. ಗಾಜಿನ ಕಲಾಯಿ ಮಾಡುವ ವಿಧಾನ ಕಂಡುಹಿಡಿದ ಪ್ಯಾಲಿಸ್ಸಿಯ ವೃತ್ತಾಂತ 'ಪ್ಯಾಲಿಸ್ಸಿಯ ಜನ್ಮಚರಿತೆ'. ಕಲ್ಲಿದ್ದಲಿನಿಂದ ಇಂಧನ—ಅನಿಲವನ್ನು ಕಂಡುಹಿಡಿದ ಮರಡಾಕನ ವೃತ್ತಾಂತ 'ವಿಲಿಯಂ ಮರಡಾಕನ ಚರಿತ್ರೆ'. ಈ ಆರೂ ಪ್ರಬುದ್ಧಕರ್ಣಾಟಕದಲ್ಲಿ ಬೆಳಕು ಕಂಡ ಲೇಖನಗಳು.

ಹೊಸ ಆವಿಷ್ಕಾರಗಳಿಗೆ ಕಾರಣರಾದ ವಿಜ್ಞಾನಿಗಳಲ್ಲಿ ಪುಟ್ಟಣ್ಣನವರಿಗೆ ಇದ್ದ ಮಮತೆ ಇನ್ನೂ ಮೂರು ವಿಜ್ಞಾನಿಗಳ ಲೇಖನಗಳಲ್ಲಿ ಕಾಣುತ್ತದೆ. ಸುತ್ತಮುತ್ತಲಿ ನವರ ಅಸೂಯೆ, ಕೆಲಸಗಾರರ ಉಪಟಳ, ಇವೆಲ್ಲವನ್ನೂ ನಿರ್ಲಕ್ಷಿಸಿ ಜಾನ ಹೀತ ಕೇಟನು ತನ್ನಷ್ಟಕ್ಕೆ ತಾನು ಪ್ರಯೋಗಗಳನ್ನು ಮುಂದುವರೆಸಿದ್ದು, ದೊಡ್ಡ ಕಾರ್ಖಾನೆ ಯನ್ನು ಸ್ಥಾಪಿಸಿದ್ದು, ಪಾರ್ಲಿಮೆಂಟಿನಲ್ಲಿ ಮೂವತ್ತು ವರ್ಷಗಳ ಕಾಲ ಸದಸ್ಯನಾಗಿ ದ್ದದ್ದು ಮುಂತಾದ ವಿಚಾರಗಳು 'ಕಲಾಪತ್ತು ಮಾಡುವ ಯಂತ್ರ ಮಾಡಿದವನು ಜಾನ ಹೀತ ಕೇಟನು' ಲೇಖನದ ವಸ್ತು. ಚೀಟಿ ಬಟ್ಟೆಗಳಿಗೆ ವಿವಿಧ ವರ್ಣಗಳ ಚಿತ್ರ ಕೆಲಸವನ್ನು ಮಾಡುವುದನ್ನು ಕಂಡುಹಿಡಿದ ಪೀಲ್ ತಂದೆ ಮಕ್ಕಳ ವೃತ್ತಾಂತ'ಪೀಲ್'. ಹಬೆಯಂತ್ರದ ಹಲವು ಉಪಯೋಗಗಳನ್ನು ಜನತೆಗೆ ತಿಳಿಸಿದ ವಿಜ್ಞಾನಿ 'ಜೇಮ್ಸ್ ವಾಟ್'.

ಮಹಾವೀರರಾದ ಪುಷ್ಯಮಿತ್ರ, ಅವನ ಮಗ ಅಗ್ನಿಮಿತ್ರ, ಅವನ ಮಗ ವಸು ಮಿತ್ರರ ವೃತ್ತಾಂತವೇ 'ಪುಷ್ಯಮಿತ್ರ—ವಸುಮಿತ್ರ'. ತನ್ನ ಸುತ್ತ ಇದ್ದ ಶತ್ರುಗಳನ್ನು ಚಾಣಕ್ಯನ ಸಹಾಯದಿಂದ ಜಯಿಸಿ ರಾಜ್ಯಕಟ್ಟಿ ಆಳಿದ ಚಂದ್ರಗುಪ್ತನ ವಿಷಯವನ್ನು 'ಚಂದ್ರಗುಪ್ತ' ತಿಳಿಸುತ್ತದೆ. ಗುಪ್ತಸಂತತಿಯಲ್ಲಿ ಮೊದಲ ಮುಖ್ಯ ಹೆಸರಾದ ಸಮುದ್ರಗುಪ್ತನ ವೃತ್ತಾಂತ 'ಸಮುದ್ರಗುಪ್ತ'. ಈತ ಅಶ್ವಮೇಧಯಾಗ ಮಾಡಿದ ವನು, ಶತ್ರುಭಯಂಕರನಾಗಿದ್ದವನು. ಗುಪ್ತಸಂತತಿಯಲ್ಲಿ ಎರಡನೆಯ ಮುಖ್ಯ ಹೆಸರು

ಸ್ಕಾಂದಗುಪ್ತ. ಈತ ಹೂಣರ ಹಾವಳಿಯನ್ನು ಅಡಗಿಸಿದವನು. ಈತನ ವೃತ್ತಾಂತ 'ಸ್ಕಾಂದಗುಪ್ತ'. ದಕ್ಷಿಣದಲ್ಲಿ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ಆಳಿ ಪರಮೇಶ್ವರ ನೆಂಬ ಬಿರುದಿಗೆ ಪಾತ್ರನಾದ ಪುಲಿಕೇಶಿಯ ವೃತ್ತಾಂತ 'ಎರಡನೇ ಪುಲಿಕೇಶಿ'. ಅಣ್ಣನ ಕೊಲೆಯ ಸೇಡು, ತಂಗಿಯ ರಕ್ಷಣೆ ಎರಡನ್ನೂ ಸಾಧಿಸಿ ಭಾರತದ ವಾಯುವ್ಯ ಪ್ರಾಂತ್ಯವನ್ನು ಜಯಿಸಿ ರಾಜ್ಯವಿಸ್ತರಣೆ ಮಾಡಿದ ಹರ್ಷನ ವೃತ್ತಾಂತ 'ಹರ್ಷ'.

ಪುಟ್ಟಣ್ಣನವರು ಜೀವನ ಚರಿತ್ರೆಗಳನ್ನು ಬರೆದಾಗ, ಚರಿತ್ರೆಯ ಪಠ್ಯಗಳನ್ನು ಬರೆದಾಗ ದೊರಕಿದ ಆನುಷಂಗಿಕ ಸಾಮಗ್ರಿಯನ್ನು ಈ ಲೇಖನಗಳಲ್ಲಿ ಉಪಯೋಗಿಸಿ ಕೊಂಡಿದ್ದಾರೆ. ಈ ಚಾರಿತ್ರಿಕ ಲೇಖನಗಳಲ್ಲಿ ಅಚ್ಚುಕಟ್ಟು ಕಡಿಮೆ. ಮುಖ್ಯ ವಿಚಾ ರಕ್ಕೆ ಧಕ್ಕೆ ಆಗದಿದ್ದರೂ ಇತರ ವಿಷಯಗಳು ಹಲವು ಬಾರಿ ಚದುರಿದಂತೆ ಕಾಣುತ್ತವೆ.

'ಪಿಸುಣನಾದ ಅಧಿಕಾರಿ' ಹಾಗೂ 'ಅಪ್ರಶಿಖ' ಎರಡು ಅಪೂರ್ಣ ಕಥೆಗಳು. ಯಾವ ದಾನಧರ್ಮಗಳಲ್ಲೂ ಮನಸ್ಸಿಲ್ಲದೆ ತಿರಸ್ಕಾರದಿಂದ ವರ್ತಿಸುತ್ತಿದ್ದ ಮಂತ್ರಿ ಯನ್ನು ಕುರಿತದ್ದು 'ಪಿಸುಣನಾದ ಅಧಿಕಾರಿ'. ಧೀರಯುವಕನೊಬ್ಬ ಹಲವು ಅನ್ಯಾಯ ಗಳನ್ನು ಸರಿಪಡಿಸಲು ತೊಡಗಿ ಗೆಲ್ಲುವುದು 'ಅಪ್ರಶಿಖ' ದ ವಸ್ತು.

### ಇಂಗ್ಲಿಷ್ ಲೇಖನಗಳು

'The Indian Heroes' ಎಂಬ ಎಂ. ಶಾಮರಾಯರಿಂದ ಸಂಪಾದಿತವಾದ ಗ್ರಂಥದಲ್ಲಿ ಪುಟ್ಟಣ್ಣನವರ ಆರು ಲೇಖನಗಳಿವೆ. ಅದ್ಭುತ ಸಮಯಸ್ಫೂರ್ತಿ, ಅಸೀಮ ಧೈರ್ಯಗಳ ತಿಮ್ಮಣ್ಣ ನಾಯಕ ವೈರಿಪಾಳಯಕ್ಕೆ ನುಗ್ಗಿ ವೈರಿರಾಜನ ಖಾಸಾಕುದುರೆ ಯನ್ನು ತನ್ನ ಅಂಗೈಯನ್ನು ಬಲಿಕೊಟ್ಟು ಅಪಹರಿಸಿದ್ದು, ಮರುದಿನ ವೈರಿರಾಜನ ಖಾಸಾ ಆನೆಯನ್ನು ಕೊಂದದ್ದು, 'Thimmanna Naik of Chitradurg'ಲೇಖ ನದ ವಸ್ತುವಾಗಿದೆ. ಆತ್ಮಗೌರವಕ್ಕಿಂತ ಪ್ರಾಣ ಹೆಚ್ಚಿನದಲ್ಲ ಎಂದು ನಂಬಿ ಅದರಂತೆ ನಡೆದ ವೀರನ ವೃತ್ತಾಂತ 'Kadarappa Naik' ಹಲವು ಜನ ವೈರಿ ಭಟರ ನಡುವೆ ಶೌರ್ಯಪ್ರದರ್ಶನ ಮಾಡಿದ ಏಕಾಂಗವೀರನ ವಿಚಾರ 'Gudagatti', ಪ್ರಾಣಾ ಪಾಯ ಸನ್ನಿವೇಶದಲ್ಲಿ ಕೂಡ ಹಿಂದಿರುಗಿ ಓಡದೆ ವೈರಿಯೊಡನೆ ಹೋರಾಡಿ ಗೆದ್ದ ಮದಕರಿನಾಯಕನ ವೃತ್ತಾಂತ, 'Hiri Madakeri Naik as a hero in Battles'. 'ವೈರಿಗಳ ಆಗಮನವನ್ನು ಆಕಸ್ಮಿಕವಾಗಿ ತಿಳಿದು ಹೆದರದೆ ಅಡಗಿ ಕುಳಿತು ಹೊಂಚುಹಾಕಿ ಅವರನ್ನು ಸದೆಬಡಿದ ವೀರರಮಣಿ ಓಬವ್ವೆಯ ಕಥಾವಸ್ತು 'Vobavva of Chitradurg'. 'ಯುದ್ಧಭೂಮಿಯಲ್ಲಿ ತನ್ನ ಕೈ ಮೇಲಾದಾಗಲೂ ವೈರಿಯ ದ್ವಂದ್ವಯುದ್ಧವನ್ನು ಮನ್ನಿಸಿ ಅವನನ್ನು ಗೆದ್ದ ಪರಾಕ್ರಮಶಾಲಿ ದೊಡ್ಡ ವಸಂತ ನಾಯಕನ ವೃತ್ತಾಂತ 'Dodda Vasantha Naik'.

ನಾಡನ್ನಾಳಿದ ವೀರರಾದ ತಿಮ್ಮಣ್ಣನಾಯಕ, ಕದರಪ್ಪ ನಾಯಕ, ಮದಕರಿ ನಾಯಕ, ದೊಡ್ಡ ವಸಂತನಾಯಕ ಇವರುಗಳ ಶೌರ್ಯದಂತೆಯೇ ಗುದಗತ್ತಿ,

ಓಬವ್ವೆಯರಂತಹ ರಾಜಭಕ್ತರ ನಿಲುವೂ ಇಲ್ಲಿ ಸೂಚಿತವಾಗಿವೆ. ಅಂದಿನ ಮೌಲ್ಯಗಳ ಬಗೆಗೆ ಈ ಲೇಖನಗಳಲ್ಲಿ ಇಣಿಕುನೋಟವಿದೆ. ಈ ವ್ಯಕ್ತಿಗಳ ನಡೆನುಡಿಗಳಲ್ಲಿ ಕಂದರ ವಿಲ್ಲದುದು ಗಮನಾರ್ಹವಾಗಿದೆ.

ದೇಶಭಾಷೆಗಳು ಎಲ್ಲ ಹಂತಗಳಲ್ಲೂ ಮಾಧ್ಯಮವಾಗಿರಬೇಕು, ಆಡುನುಡಿಗೆ ಪ್ರಾಮುಖ್ಯವಿರಬೇಕು ಎಂಬುದು 'The Condition of our Kannada' ಲೇಖನದ ಮುಖ್ಯಧೋರಣೆ. ಹಾಗಿಲ್ಲದಾಗ, ಆಗುವ ವಿರೋಧಾಭಾಸಗಳನ್ನು ಕೂಡ ಈ ಲೇಖನ ಚಿತ್ರಿಸುತ್ತದೆ. ಪುಟ್ಟಣ್ಣನವರ ತರ್ಕಶುದ್ಧಿ ಇಲ್ಲಿ ಗೋಚರವಾಗಿದೆ.

ಆತ್ಮಗೌರವಕ್ಕಿಂತ ರಾಜಾಸ್ಥಾನದ ಮರ್ಯಾದೆ ಹೆಚ್ಚಲ್ಲ ಎಂದು ನಂಬಿ ಅದರಂತೆ ನಡೆದ ಮೈಸೂರು ದರ್ಬಾರಿನ ಒಬ್ಬ ಸಾಮಾಜಿಕನ ವೃತ್ತಾಂತ 'Meer Meeran Srinivasa Rau killing a tiger'. 'ಸಾವು ಸಮೀಪಿಸಿದರೂ ಮನಸ್ಸಿನ ಸ್ಥಿಮಿತ ಕಳೆದುಕೊಳ್ಳದೆ, ಬುದ್ಧಿಶಕ್ತಿ ದೇಹದಾರ್ಢ್ಯಗಳಿಂದ ಅಪಾಯನ್ನು ದಾಟಿ ಬಹುಮಾನ ಪಡೆದು ಜೀವವನ್ನುಳಿಸಿಕೊಂಡ ಶ್ರೀರಂಗಪಟ್ಟಣದ ಮಲ್ಲನ ವಿಚಾರ 'The great athlet of Srirangapattana'. 'ಹುಲಿ ಸಾಯುವಾಗಲೂ ತನ್ನನ್ನು ಕೆಣಕಿದವರನ್ನು ಬಿಡದೆಂಬುದನ್ನು ಟಿಪ್ಪು ಸುಲ್ತಾನ್ ತನ್ನ ಕಡೆಗಾಲದಲ್ಲಿ ನಿರೂಪಿಸುವುದನ್ನು 'The last hour of Tippu Sultan' ನಿರ್ದೇಶಿಸುತ್ತದೆ. ಕರ್ತವ್ಯಪಾಲನೆಗೆ ಬೇರೆ ಬಹುಮಾನ ಬೇಡ ಎಂಬ ನಿಲುವನ್ನು ತೋರಿದ ಲೋಭದೂರಳಾದ ವೀರನಾರಿ ಗಂಗಾಬಾಯಿಯ ವೃತ್ತಾಂತ 'Gangabai Badami'. 'ಗುಣಕ್ಕೆ ಮನ್ನಣೆ ಇತ್ತ ವಿಶಾಲ ಹೃದಯದ ಕವಿ, ವೀರ ಮತ್ತು ಪಂಡಿತರಿಗೆ ಆಶ್ರಯದಾತನಾದ ಲಿಂಗರಾಜ ಅರಸುವಿನ ವಿಚಾರ 'Aliya Lingaraja Arasu of Mysore' ಲೇಖನದಲ್ಲಿ ದೊರಕುತ್ತದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಥಮ ಉಪಕುಲಪತಿಗಳಾದ ಎಚ್. ವಿ. ನಂಜುಂಡಯ್ಯನವರ ವ್ಯಕ್ತಿಚಿತ್ರದಲ್ಲಿ ಅವರ ಬಾಲ್ಯ, ವಿದ್ಯಾಭ್ಯಾಸ, ಪ್ರಾರಂಭದ ಉದ್ಯೋಗಜೀವನಗಳ ಮಾಹಿತಿ ದೊರಕುತ್ತದೆ. ಈ ಅಪೂರ್ಣ ಬರವಣಿಗೆ 'The late Mr. H. V. Nanjundayya C.I.E.'. ತನ್ನ ಜೀವದ ಮೇಲಿನ ಆಸೆ ತೊರೆದು ಅಪಾಯವನ್ನು ಸ್ವಾಗತಿಸಿ ನರಭಕ್ಷಕ ಹುಲಿಯನ್ನು ಸಂಹರಿಸಿದ ಬೇಟೆಗಾರನ ವೃತ್ತಾಂತ 'A hunter killing a tiger'. ಅನ್ಯಾಯ, ದಬ್ಬಾಳಿಕೆಗಳಿಗೆ ಸೊಪ್ಪು ಹಾಕದೆ, ಕರ್ತವ್ಯಪಾಲನೆಯಲ್ಲಿ ಮನಸ್ಸು ನೆಟ್ಟ ನ್ಯಾಯಪರನಾದ ರಣಬೀರ್ ಸಿಂಗನ ವೃತ್ತಾಂತ 'Ranabir Singh'.

ಪುಟ್ಟಣ್ಣನವರ ಲೇಖನಗಳಿಗೆ ಒಂದು ಸೂತ್ರವಿದೆ. ಅದು ಸಮಾಜದ ತಿಳುವಳಿಕೆಗೆ ಸಂಬಂಧಿಸಿದಂತಹ ಸೂತ್ರ. ವಿವಿಧ ವಿಷಯಗಳಿಗೆ ಸಂಬಂಧಿಸಿದ ಅವರ ಎಲ್ಲ ಲೇಖನಗಳಲ್ಲೂ ಈ ಅಂತಃಸೂತ್ರದ ಅಸ್ತಿತ್ವ ಒಂದು ಬಂಧವನ್ನು ಒದಗಿಸಿದೆ. ಇಲ್ಲೆಲ್ಲ ಪುಟ್ಟಣ್ಣನವರ ವ್ಯಕ್ತಿತ್ವ ಕೂಡ ಪ್ರತಿಫಲಿತ ಎನ್ನಬಹುದು. ಇನ್ನೊಂದು ಗಮನಾರ್ಹವಾದ ಸಂಗತಿಯನ್ನು ಮರೆಯುವ ಹಾಗಿಲ್ಲ. ಪುಟ್ಟಣ್ಣನವರು ತಮ್ಮ

ಸಮಕಾಲೀನರ ಸೇವೆಯನ್ನು ನಿರ್ಲಕ್ಷಿಸಿದವರಲ್ಲ. ದುರ್ದೈವದಿಂದ ಅವರು ಬರೆದ ಇಂಥ ಎರಡು ಕೃತಿಗಳೂ ಅಪೂರ್ಣವಾಗಿ ದೊರೆತಿವೆ. ದಿವಾನ್ ರಂಗಾಚಾರ್ಲು ಹಾಗೂ ಎಚ್. ವಿ. ನಂಜುಂಡಯ್ಯ ಇಬ್ಬರಲ್ಲೂ ಅವರಿಗೆ ಅಪರಿಮಿತವಾದ ಆದರ ಗೌರವಗಳಿದ್ದುವು. ಪುಟ್ಟಣ್ಣನವರು ಬರೆದದ್ದೆಂದು ಹೇಳಲಾದ[2] ಡಿ. ವೆಂಕಟರಾಮಯ್ಯನವರನ್ನು ಕುರಿತ ಲೇಖನವೂ ಈಗ ಲಭ್ಯವಾಗಿಲ್ಲ.[3]

## ಮನೋಧರ್ಮ ಪ್ರಕಟಣೆ

ಪುಟ್ಟಣ್ಣನವರ ನೆಚ್ಚಿನ ಅಂಶವಾದ ಪ್ರಾಮಾಣಿಕತೆಯ ಬಗೆಗೆ ಇಲ್ಲಿಯೂ ಹಲವು ಉದಾಹರಣೆಗಳುಂಟು. ವಿರೋಧಾಭಾಸಗಳಿಲ್ಲದ ಮನಸ್ಸಿನ ಪ್ರತೀಕವೇ ವಿರೋಭಾಭಾಸಗಳಿಲ್ಲದ ಶೈಲಿ. ಒಂದು ಉದಾಹರಣೆಯನ್ನು ನೋಡಬಹುದು :

"ಲಂಗೋಟಿ ಕಟ್ಟದ ಊರಿನಲ್ಲಿ ಕಟ್ಟಿದವನೇ ಹುಚ್ಚ, ಪರಿಶುದ್ಧವಾಗಿ ಪ್ರಾಮಾಣಿಕನಾಗಿರತಕ್ಕವನು ಲಂಚಕೋರನನ್ನು ಆಕ್ಷೇಪಿಸಿದರೆ, ನಿಸ್ಪೃಹನಾದವನಿಗೇ ಕೇಡು ಸಂಭವಿಸುವುದು. ಪರಸ್ವತ್ತನ್ನು ಮುಟ್ಟಿ ಮುಟ್ಟಿ ಕೈಯನ್ನು ಕೆಡಿಸಿಕೊಂಡಿರತಕ್ಕವರೆಲ್ಲರೂ ಸೇರಿ ನಿಸ್ಪೃಹನಾದವನಿಗೆ ಇಲ್ಲದ ಕೇಡನ್ನು ತಂದು ಒಡ್ಡುವರು ಕಣಜವೂ ಅವರೇಕಾಯಿ ಹುಳುವನ್ನು ತಂದು ಇರಿಸಿಕೊಂಡು ಅದನ್ನು ಕುಕ್ಕಿ ಕುಕ್ಕಿ ತನ್ನ ಹಾಗೆ ಮಾಡಿಕೊಳ್ಳುವುದು ; ಇದು ಸಾಧ್ಯವಾಗದಿದ್ದರೆ ಆ ಹುಳುವನ್ನು ಕೊಂದುಹಾಕುವುದು. ನೈಸ್ಪೃಹ್ಯವೆಂದು ಕೊಚ್ಚಿಕೊಳ್ಳುವರಿಗೆ ಇದೇ ಕೊನೇ ಫಲ : ಹೀಗೆಂದು ಹುಳತು ಕೊಳತ ಅಧಮರು ಹೇಳಬಹುದು. ಆದರೆ ಪ್ರಾಮಾಣಿಕತೆ ಸ್ಥಿರವಾದ ಧನ, ಖಂಡಿತವಾದ ಆದಾಯ, ನಿಧಾನವಾದ ವೃದ್ಧಿ. ಅಪ್ರಾಮಾಣಿಕತೆಯ ಆದಿಯಲ್ಲಿ ಮಿಂಚಿನ ಹೊಳಪು, ಪರ್ಯವಸಾನದಲ್ಲಿ ನಿರಂತರವಾದ ಅಂಧಕಾರ, ಐಹಿಕಸಾಧನ ತಪ್ಪಿ ಹೋದರೂ ಮನಸ್ಸಾಕ್ಷಿಯಾಗಿ ಮಾಡಿದ ಧರ್ಮಾಚರಣೆಯು ಪರದಲ್ಲಿಯಾದರೂ ಸದ್ಗತಿಯನ್ನು ದೊರಕಿಸುವುದು : ಪ್ರಾಮಾಣಿಕತೆಯೇ ದೊಡ್ಡ ಆಪದ್ಧನವೆಂದು ತಿಳಿಯಬೇಕು. ಈ ವಿಷಯದಲ್ಲಿ ನಮಗೆ ನಿಶ್ಚಲವಾದ ಮನಸ್ಸು ಎಷ್ಟರ ಮಟ್ಟಿಗಿದ್ದರೆ ಅಷ್ಟು ಶುಭೋದಯ, ಅಷ್ಟು ಮನೋನೈರ್ಮಲ್ಯ ಉಂಟು. ಚಂಚಲತ್ವ ಹೋಗಿ ಚಿತ್ತಸ್ಥೈರ್ಯವೂ ಪಾರಿಶುದ್ಧ್ಯವೂ ಹುಟ್ಟಿದರೆ ಅದಕ್ಕಿಂತಲೂ ಬೇರೆ ಐಶ್ವರ್ಯವಿಲ್ಲ. ಈ ಐಶ್ವರ್ಯ ಸದ್ಯದಲ್ಲಿ ಗೋಚರವಾಗದೇ ಇರುವ ಕಾರಣ ದುರ್ಮಾರ್ಗವೇ ರುಚಿಕರವಾಗಿ ಕಾಣಿಸುವುದು." (ಲಂ.ಪು. 22–23)

ಕನ್ನಡದ ಬಗೆಗಿನ ಕಳಕಳಿಗೆ ಒಂದು ಉದಾಹರಣೆಯನ್ನು ನೋಡಬಹುದು. ಮನವೊಲಿಸುವ ಮೋಹಕಶೈಲಿಯಾಗಲೀ ಹಾಸ್ಯದ ನವಿರುಲೇಪವಾಗಲೀ ಇಲ್ಲಿಲ್ಲ. ವಿಷಯದ ಗಾಂಭೀರ್ಯಕ್ಕೆ ಪುಟ್ಟಣ್ಣನವರು ಯಾವುದೇ ಧಕ್ಕೆ ತಗುಲದಂತೆ ಎಚ್ಚರ ವಹಿಸುತ್ತಿದ್ದರು. ಈ ಗಾಂಭೀರ್ಯ ಹಲವು ಬಾರಿ ತೀವ್ರತೆಯನ್ನು ಪಡೆಯುತ್ತದೆ. ಆದರೆ ಅಲ್ಲಿರುವುದು ಅನಗತ್ಯ ಕ್ರೋಧವಲ್ಲ, ಸಾತ್ತ್ವಿಕ ಸಂತಾಪ.

"Judged from the forms of words of each preceding period, the forms of the succeeding period are incorrect or impure. Then we have to go back to the forms of the previous period. That again is wrong, and we have to go back again; so on and so on. In that case where is the starting point ? If they adopt a certain form for the time being to be correct, then I say it is wrong, because we are not authorised to ignore its antecedent correct form. If it is argued that some archaic form should be fixed upon to start with, then I say it is incorrect. Then we both sail in the same boat. Instead of using this old incorrect form and making the language ununder standable, why not keep to the modern incorrect form ? The one is as good or as bad as the other." (C.o.k. pp. 4-5)

ಬಾಲಶಿಕ್ಷಣದ ಬಗೆಗೆ ಪುಟ್ಟಣ್ಣನವರಿಗಿದ್ದ ಆಸಕ್ತಿಯನ್ನು ಮುಂದಿನ ಉದಾಹರಣೆಯಲ್ಲಿ ತಿಳಿಯಬಹುದು. ಎಳೆಯರ ಸ್ವಭಾವದಲ್ಲಿ ಕಾಣುವ ಅನುಕರಣದ ಬಗೆಗಿನ ಒಲವನ್ನು ಸರಿಯಾದ ದಾರಿಗೆ ತಿರುಗಿಸುವುದರಲ್ಲಿನ ಮಹತ್ತ್ವವನ್ನು ಹೀಗೆ ಹೇಳುತ್ತಾರೆ :

"ಬಾಲ್ಯದಲ್ಲಿ ಬುದ್ಧಿಯೂ ಸ್ವಭಾವವೂ ಮೃದುವಾಗಿರುತಾ ಹ್ಯಾಗೆ ತಿರುಗಿಸಿದರೆ ಹಾಗೆ ಬರುವವು ; ಬಲಿತ ಮೇಲೆ ಬೇರೆ ವಿಧವಾಗಿ ತಿರುಗಿಸುವುದು ಕಷ್ಟ. ಮನುಷ್ಯನ ಮುಖದ ಹಾಗಿರುವ ಕುಂಬಳಕಾಯ ಕಂಡೆನೆಂದು ಹೇಳಿದ ಮಾತನ್ನು ಕೆಲವರು ಕೇಳಿರಬಹುದು. ಕುಂಬಳಕಾಯಿಗೆ ಯಾವ ರೂಪವನ್ನು ಬೇಕಾದರೂ ಕೊಡುವುದು ಸಾಧ್ಯ. ಮನುಷ್ಯನ ಮುಖದ ಹಾಗೆ ಒಳಗಡೇ ಮಾಡಿರುವ ಮಡಕೆ ಅಥವಾ ಇತರ ಅಚ್ಚಿನೊಳಕ್ಕೆ ಕುಂಬಳದ ಹೀಚನ್ನು ಸೇರಿಸಿ ಕಟ್ಟಿದರೆ, ಕಾಯಿ ದೊಡ್ಡದಾದ ಹಾಗೆಲ್ಲಾ ಅಚ್ಚಿನ ಆಕೃತಿಯನ್ನೇ ಹೊಂದುವುದು. ಆ ಅಚ್ಚನ್ನು ತರುವಾಯ ತೆಗೆದುಬಿಟ್ಟರೆ ಕುಂಬಳಕಾಯಿಯು ಅಚ್ಚಿನ ಒಳಗಡೇ ಇರುವಂತೆ ಮನುಷ್ಯನ ಮುಖದ ಹಾಗೆ ಕಾಣುವುದು. ಇದ ಬಿಟ್ಟು ಬಲಿತಿರುವ ದೊಡ್ಡ ಕುಂಬಳಕಾಯನ್ನು ತಂದು ಮನುಷ್ಯನ ಮುಖದ ಆಕಾರವನ್ನುಅದಕ್ಕೆ ಕೊಡಬೇಕೆಂದು ಯಾವ ರೀತಿಯಲ್ಲಿ ಯತ್ನಿಸಿದರೂ ಕಾಯಿ ಒಡೆದುಹೋಗುವುದು. ಮೇಣವು ಬಿಸಿಯಾಗಿದ್ದಾಗ ಅದರಲ್ಲಿ ಬೇಕಾದ ಆಕಾರವನ್ನು ಮಾಡಿ ಇರಿಸಬಹುದು ; ಮೇಣದ ಬಿಸಿ ಆರಿದ ಮೇಲೆ ಅದರಲ್ಲಿ ಏನನ್ನು ಮಾಡುವುದಕ್ಕೆ ಹೋದಾಗ್ಯೂ ಮುರಿದು ಹೋಗುವುದು. ಹೀಗೆ ಯಾವ ಅಭ್ಯಾಸವನ್ನು ಸಂಪಾದಿಸಿಕೊಳ್ಳಬೇಕಾದರೂ ಬಾಲ್ಯವೇ ಮುಖ್ಯವಾದ ಕಾಲ ; ತರುವಾಯ ಯಾವುದು ಬರುವುದೂ ಕಷ್ಟ." (ಗು.ಶಿ.ಸಂ. ಪು. 105-106)

ಪುಟ್ಟಣ್ಣನವರ ಬದುಕಿನಲ್ಲಿ ಒದಗಿದ ಹಲವು ರೀತಿಯ ಸಂಸ್ಕಾರಗಳು ಅವರ ಲೇಖನಗಳಲ್ಲಿ ಇಣಿಕುತ್ತವೆ. ಪ್ರಾಮಾಣಿಕತೆಗೆ ಒತ್ತು, ಕನ್ನಡ ಭಾಷಾಭಿಮಾನ; ಸಾರ್ವಜನಿಕ ಹಿತಾಸಕ್ತಿಗಳು ಅವರ ಲೇಖನಗಳ ಮುಖ್ಯ ಎಳೆಗಳಾಗಿವೆ. ಸಮೃದ್ಧ ವಾದ ಜೀವನಾನುಭವ, ನಿಸ್ಸಂದಿಗ್ಧ ವಿಚಾರಧಾರೆ, ಸತ್ಯನಿಷ್ಠುರವಾದ ತಲಸ್ಪರ್ಶಿ ವಿವೇಚನೆ ಇವುಗಳು ಈ ಲೇಖನಗಳಲ್ಲಿ ಮನಸ್ಸನ್ನು ಸೆರೆಹಿಡಿಯುವ ಅಂಶಗಳಾಗಿವೆ.

## ಟಿಪ್ಪಣಿಗಳು

1. 'ಹಿತಬೋಧಿನಿ' ಮಾಸಪತ್ರಿಕೆಯ ಮೊದಲ ಸಂಪುಟದ ಆರು ಸಂಚಿಕೆಗಳು ಮಾತ್ರ ಎಂ. ಎಸ್. ಪುಟ್ಟಣ್ಣನವರ ಮತ್ತು ಎಂ. ಬಿ. ಶ್ರೀನಿವಾಸಯ್ಯಂಗಾರರ ಸಂಪಾದಕತ್ವ ದಲ್ಲಿ ಹೊರಬಂದವು. ಅನಂತರ ಎಂ. ವೆಂಕಟಕೃಷ್ಣಯ್ಯನವರು ಪತ್ರಿಕೆಯ ಸಂಪಾದಕತ್ವ ವನ್ನು ವಹಿಸಿಕೊಂಡರು.
2. ಕೀರ್ತಿಶೇಷ ಶ್ರೀ ಎಂ. ಎಸ್. ಪುಟ್ಟಣ್ಣನವರು ; ದ. ಕೃ ಭಾರದ್ವಾಜ ; ಕನ್ನಡನುಡಿ, ಸಂಪುಟ 1, ಸಂಚಿಕೆ 53 ; 6–10–1939 ; ಪು. 428,
3. ಡಿ. ವೆಂಕಟರಾಮಯ್ಯನವರ ಕಡೆಗಾಲದ ಕೊರಗಿಗೆ ಅವರ ಗಂಡುಮಕ್ಕಳೇ ಕಾರಣ, ಎಂದು ಪುಟ್ಟಣ್ಣನವರು 'D. Venkataramaiah as I know him' ಎಂಬ ಲೇಖನದಲ್ಲಿ ಬರೆದಿದ್ದುದಕ್ಕೆ ಕೋಪಗೊಂಡ ವೆಂಕಟರಾಮಯ್ಯನವರ ಗಂಡುಮಕ್ಕಳು ಆ ಲೇಖನದ ಲಭ್ಯವಿದ್ದ ಎಲ್ಲ ಪ್ರತಿಗಳನ್ನೂ ಒಟ್ಟುಗೂಡಿಸಿ ಸುಟ್ಟುಹಾಕಿದರೆಂದು ವೆಂಕಟ ರಾಮಯ್ಯನವರ ಬಂಧುಗಳಿಂದ ಕೇಳಿದ್ದೇನೆ.

# ಉಪಸಂಹಾರ

ಎಂ. ಎಸ್. ಪುಟ್ಟಣ್ಣನವರು (1854 – 1930) ಉಪಾಧ್ಯಾಯರಾಗಿ, ಭಾಷಾಂತರಕಾರರಾಗಿ, ಅಮಲ್ದಾರರಾಗಿ, ವಕೀಲರಾಗಿ ಹಾಗೂ ಕನ್ನಡದ ಪುನರುಜ್ಜೀವನಕಾಲದ ಲೇಖಕರಾಗಿ ದುಡಿದವರು. ಪ್ರಾಮಾಣಿಕತೆ, ಕನ್ನಡಪ್ರೇಮ ಹಾಗೂ ಸಾರ್ವಜನಿಕ ಹಿತಾಸಕ್ತಿಗಳು ಅವರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ವೈಯಕ್ತಿಕ ಜೀವನದಲ್ಲಿ ಮೊದಲ ದಾಂಪತ್ಯದಲ್ಲಿ ಬಿರುಕು, ವೃತ್ತಿಜೀವನದಲ್ಲಿ ಉಪಾಧ್ಯಾಯರಾಗಿ ಒಮ್ಮೆ ಅಮಲ್ದಾರರಾಗಿ ಒಮ್ಮೆ ರಾಜೀನಾಮೆ ನೀಡಿದ್ದು ರಾಜಿ, ಒಪ್ಪಂದಗಳಲ್ಲಿ ಮನಸ್ಸಿಲ್ಲದ ಅವರ ಸತ್ಯನಿಷ್ಠುರ ಪ್ರವೃತ್ತಿಯ ಉದಾಹರಣೆಗಳು. ಅಮಲ್ದಾರರಾಗಿ ಅವರು ದುಡಿದ ಕಡೆಗಳಲ್ಲೆಲ್ಲ ಅವರು ಜನಸಾಮಾನ್ಯರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟರು, ಪುಂಡರನ್ನು ಅಡಗಿಸಿ ಶಾಂತಿಸ್ಥಾಪನೆಗೆ ದುಡಿದರು, ಕಾನೂನಿನ ಸಹಾಯದಿಂದ ಬಡಜನರ ಏಳಿಗೆಗೆ ಶ್ರಮಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪನೆಗೆ ದುಡಿದ ಅವರು ಅದರ ಕಾರ್ಯದರ್ಶಿಯಾಗಿಯೂ ಸೇವೆ ಸಲ್ಲಿಸಿದರು. ತಾವು ಕಾರ್ಯದರ್ಶಿಯಾಗಿದ್ದ ಬೆಂಗಳೂರು ತೆರಿಗೆದಾರರ ಸಂಘದ ಎಲ್ಲ ಕಾರ್ಯಕ್ರಮಗಳೂ ಕನ್ನಡದಲ್ಲಿರಲು ಶ್ರಮಿಸಿದರು. ಇಂಗ್ಲಿಷ್, ಸಂಸ್ಕೃತ, ಮರಾಠಿ, ಉರ್ದು, ಹಿಂದಿ, ತೆಲುಗು ಭಾಷೆಗಳಲ್ಲಿ ಪರಿಶ್ರಮವಿದ್ದರೂ ತಮ್ಮ ಕನ್ನಡ ಮಾತು ಬರಹಗಳಲ್ಲಿ ಕನ್ನಡ ದೇಸಿಯನ್ನು ದೂರೀಕರಿಸಲಿಲ್ಲ. ಹಾಗೆಂದು ಮೊದಲೇ ರೂಢಿಯಲ್ಲಿದ್ದ ಅನ್ಯಭಾಷಾ ಪದಗಳನ್ನು ಹೊರದೂಡಲು ಯತ್ನಿಸಲಿಲ್ಲ. ಭಾಷೆಯ ಸಾಧು ಅಸಾಧು ರೂಪಗಳನ್ನು ಚರ್ಚಿಸಿದ ಸ್ಪೆಷಲ್ ಸಬ್ ಕಮಿಟಿಯಲ್ಲಿ ಅವರೂ ಒಬ್ಬ ಸದಸ್ಯರು.

ಪುಟ್ಟಣ್ಣನವರು ಸ್ನೇಹಜೀವಿಗಳು. ಅಂತಃಕರಣ, ಸಹಾನುಭೂತಿಗಳಿಗೆ ಅವರು ಬಹುಬೇಗ ಸೋತುಹೋಗುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಉಪಕುಲಪತಿ ಎಚ್.ವಿ. ನಂಜುಂಡಯ್ಯ, ವೃದ್ಧಪಿತಾಮಹ ಎಂ. ವೆಂಕಟಕೃಷ್ಣಯ್ಯ, ಶಿಕ್ಷಣಾಧಿಕಾರಿ ಎಂ. ಶಾಮರಾವ್, ಲಾಯರ್ ಡಿ. ವೆಂಕಟರಾಮಯ್ಯ, ಸಬ್‌ಜಡ್ಜ್ ಲಕ್ಷ್ಮೀನಾರಣಪ್ಪ, ವೈದ್ಯರಾದ ಆರ್ಮುಗಂ ಮೊದಲಿಯಾರ್ ಮುಂತಾದವರು ಪುಟ್ಟಣ್ಣನವರ ಆಪ್ತಮಿತ್ರರು. ದಿವಾನ್ ರಂಗಾಚಾರ್ಲು ಅವರಲ್ಲಿ ಪುಟ್ಟಣ್ಣನವರಿಗೆ ಬಹಳ ಗೌರವವಿತ್ತು. ಬಿ. ಎಂ. ಶ್ರೀ., ಡಿ. ವಿ. ಜಿ. ಮೊದಲಾದ ಮುಂದಿನ ಪೀಳಿಗೆಯವರಲ್ಲಿ ಬಹಳವಾದ ಅಭಿಮಾನವಿತ್ತು.

ಭಾರತೀಯ ಸಂಸ್ಕೃತಿಯಲ್ಲಿ ಪುಟ್ಟಣ್ಣನವರಿಗೆ ಅಪರಿಮಿತ ವಿಶ್ವಾಸವಿತ್ತು.

ಸಮಾಜ ಪರಿಷ್ಕರಣದಲ್ಲಿ ಅವರದು ಅಮಿತವಾದ ಆಸಕ್ತಿ. ಅವರು ನಾಡುನುಡಿಗಳನ್ನು ಪ್ರೀತಿಸಿದವರು, ಪರಿಶುದ್ಧಶೀಲರು ಮತ್ತು ಮೃದುವಾದ ಅಂತರಂಗದ ಖಂಡಿತವಾದಿಗಳು. ಅವರ ಜೀವನ ವ್ಯಕ್ತಿತ್ವಗಳು ಗೌರವಾರ್ಹವಾದುವು.

* * *

ಎಂ. ಎಸ್. ಪುಟ್ಟಣ್ಣನವರು ತಮ್ಮ ಕಾಲದ ಆಗುಹೋಗುಗಳಿಗೆ ಪ್ರತಿಸ್ಪಂದಿಸಿದವರು. ಸಮಕಾಲೀನ ಸವಾಲುಗಳ ಆಂತರ್ಯವನ್ನು ಸೀಳುನೋಟದಿಂದ ತಿಳಿದು ಅಗತ್ಯವಾಗಿ ಮಾಡಬೇಕಾದ ಕಾರ್ಯಗೌರವಗಳ ನೀಲ ನಕ್ಷೆಯನ್ನು ತಯಾರಿಸಿಕೊಂಡು ಅತಿಶೀಘ್ರವಾಗಿಯೇ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಿದ್ದರು.

ಬ್ರಿಟಿಷರ ಆಳ್ವಿಕೆಯಿಂದ ಭಾರತೀಯರ ಆಡಳಿತ, ವಿದ್ಯಾಭ್ಯಾಸ, ಸಾಮಾಜಿಕ ಜೀವನ ಮುಂತಾದ ಪ್ರತಿಯೊಂದು ರಂಗದಲ್ಲೂ ಬದಲಾವಣೆಗಳು ಕಂಡುಬಂದವು. ನಿರಂಕುಶ ಅರಸೊತ್ತಿಗೆಯಿಂದ ಸಾಂಕುಶವಾದ ಅರಸೊತ್ತಿಗೆಯ ಕಡೆಗೆ ರಾಜಕೀಯವಾಗಿ; ವರ್ಣಾಶ್ರಮದ ಕಟ್ಟುಪಾಡುಗಳಲ್ಲಿ ಶೈಥಿಲ್ಯ, ವಿದ್ಯಾಭ್ಯಾಸ ನೌಕರಿಗಳಲ್ಲಿ ಹೊಸಧೋರಣೆಗಳು, ಬಾಲ್ಯವಿವಾಹ ರದ್ಧತಿ ಹಾಗೂ ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಾಮಾಜಿಕವಾಗಿ; ಪದ್ಯದಿಂದ ಗದ್ಯದೆಡೆಗೆ ಒಲವು, ಬಿಗುವಿನಿಂದ ನಾಜೂಕು ಸಾಹಿತ್ಯಕವಾಗಿ—ಮೊದಲಾದ ಸ್ಥಿತ್ಯಂತರಗಳು ಕಂಡುಬಂದವು. ಹಳೆಯದಕ್ಕೆ ಇತಿಶ್ರೀ ಹೇಳುತ್ತಿದ್ದಂತೆ ಹೊಸದಕ್ಕೆ ಶ್ರೀಗಣೇಶ ಪೂಜೆ ನಡೆಯಿತು.

ಇಂಗ್ಲಿಷಿನ ಹಲವು ಪ್ರಭಾವಗಳು ಸಾಂಸ್ಕೃತಿಕ ಭಿನ್ನತೆಯಿಂದ ಕೂಡಿದ್ದರೂ ಅವುಗಳನ್ನು ರುಚಿಭೇದದಂತೆ ಪುಟ್ಟಣ್ಣನವರೂ ಅವರ ಸಮಕಾಲೀನರೂ ಬಳಸಿಕೊಂಡರು. ಮಾರ್ಗವನ್ನು ಬಿಡದ, ದೇಸಿಯನ್ನು ಒಳಕೊಂಡ ಹೊಸ ಹೊಗರಿನ ಶೈಲಿಯ ಮಹತ್ತ್ವವನ್ನು ಅಂದಿನವರು ಕಂಡುಕೊಂಡರು. ತಾಯ್ನುಡಿಯ ಹಾಗೂ ಆಡುಮಾತಿನ ಮಹತ್ತ್ವ ಕ್ರಮೇಣ ಹೆಚ್ಚಾಯಿತು. ಜೊತೆಗೆ ಜೀವನವನ್ನೂ ದೈವವನ್ನೂ ಒಪ್ಪಿಕೊಂಡು ತಮ್ಮ ಸಂಸ್ಕೃತಿಯಲ್ಲಿ ಬೆಳಕು ಕಾಣುವ ಈ ಗುಂಪಿಗೆ ಆಂಗ್ಲ ಸಾಹಿತ್ಯದ ಅರಿವಿನಿಂದ ಹೊಸ ಹೆಬ್ಬಾಗಿಲು ತೆರೆಯಿತು. ದೇಶವೇ ಪಾರತಂತ್ರ್ಯದಲ್ಲಿದ್ದರೂ ನೈರಾಶ್ಯವಾಗಲೀ ನಿರಸನತೆಯಾಗಲೀ ಇವರುಗಳನ್ನು ಬಾಧಿಸಲಿಲ್ಲ. ಮೌಲ್ಯಗಳ ಬಗೆಗೆ ಗಟ್ಟಿನಿಲುವಿತ್ತು. ಹೊಣೆಗೆ ಹಿಂಜರಿಯದ ಮನಸ್ಸು ಇವುಗಳ ಕೊಡುಗೆಯಾಗಿತ್ತು.

ಪುಟ್ಟಣ್ಣನವರು ಕನ್ನಡದ ಪುನರುಜ್ಜೀವನಕ್ಕಾಗಿ ಶ್ರಮಿಸಿದರು. ಪುಟ್ಟಣ್ಣನವರ ಗದ್ಯಸಾಧನೆ ಹಲವು ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡದ್ದು ಗಮನಾರ್ಹವಾದ ವಿಷಯವಾಗಿದೆ. ಭಾಷಾಂತರ ರೂಪಾಂತರಗಳಿಂದ ಪ್ರಾರಂಭವಾದ ಅವರ ಸಾಹಿತ್ಯಸಾಧನೆ ಸ್ವತಂತ್ರ ರಚನೆಗಳಲ್ಲೂ ಮುಂದುವರೆಯಿತು. ಪತ್ರಿಕೋದ್ಯಮದಲ್ಲಿ ಅವರದು ಮರೆಯಲಾಗದ ಹೆಸರು. ಕಾದಂಬರಿ, ಜೀವನಚರಿತ್ರೆ, ಸಂಶೋಧನೆ, ಪಠ್ಯರಚನೆ, ಲೇಖನ

ವ್ಯವಸಾಯಗಳಲ್ಲಿ ಅವರದು ಮೊದಲ ವರ್ಗದ ಫಸಲು. ಪುಟ್ಟಣ್ಣನವರ ಕೃತಿಗಳು ಸುತ್ತಲ ಆಗುಹೋಗುಗಳಿಗೆ ಸ್ಪಂದಿಸಿದ ದಾಖಲೆಗಳು.

ರಾಜಭಕ್ತಿ ದೇಶಭಕ್ತಿಗಳಲ್ಲಿ ಪುಟ್ಟಣ್ಣನವರು ಅವಿನಾಭಾವವನ್ನು ಕಂಡುಕೊಂಡಿದ್ದರು. ಮೈಸೂರು ಮಹಾರಾಜರ ಬಗೆಗೆ ಅವರಿಗೆ ಬಹಳವಾದ ಆದರ ಕೃತಜ್ಞತೆಗಳಿದ್ದುವು. ರಾಜಾಶ್ರಯ ಪುಟ್ಟಣ್ಣನವರಂಥವರಿಗೆ ಬೆಳಕಿನ ಸೆಲೆಯಾಗಿ ನೆಲೆಯಾಗಿ ಕಾಣುವಂಥದು. ನಾಡುನುಡಿಗಳಿಗೆ ಮಹಾರಾಜರು, ದಿವಾನರು, ಅರಮನೆಯ ಅಧಿಕಾರಿಗಳು ಹಾಗೂ ಶಿಕ್ಷಣಾಧಿಕಾರಿಗಳು, ನೀಡಿದ ಪ್ರೋತ್ಸಾಹದ ಸದುಪಯೋಗವನ್ನು ಪಡೆದುಕೊಂಡು ಅವರು ತಮ್ಮ ಸಾಹಿತ್ಯ ಕೈಂಕರ್ಯವನ್ನು ಮುಂದುವರೆಸಿದರು.

* * *

ಗದ್ಯದ ಸಾಧ್ಯತೆಗಳನ್ನು ಪುಟ್ಟಣ್ಣನವರು ಬಹುಬೇಗ ಅರಿತುಕೊಂಡರು. ಕನ್ನಡ ಕಾದಂಬರಿಗಳಿಗೆ ವಸ್ತು ನಮ್ಮಲ್ಲೇ ವಿಪುಲವಾಗಿದೆ ಎಂಬುದನ್ನು ಅವರು ಕಂಡುಕೊಂಡಿದ್ದರು. ಮಾರ್ಗಕಾವ್ಯದ ತೆರಪಾಗುತ್ತಿದ್ದ ಸ್ಥಳಕ್ಕೆ ಇಂದಿಗೂ ಜನಪ್ರಿಯವಾದ ಕಾದಂಬರಿಯ ಪ್ರಕಾರವನ್ನು ಯಶಸ್ವಿಯಾಗಿ ತಂದವರಲ್ಲಿ ಪುಟ್ಟಣ್ಣನವರು ಮುಂಚೂಣಿಯಲ್ಲಿದ್ದಾರೆ. ಕನ್ನಡಿಗರಿಗೆ ಪರಿಚಯವಿಲ್ಲದ ಬೇರೆ ಸಮಾಜಗಳ ಚಿತ್ರಣಗಳಿಂದ ಕೂಡಿದ ಅನುವಾದಿತ ಕಾದಂಬರಿಗಳ ನಡುವೆ ಕನ್ನಡ ಜನರ ಆಚಾರ ವಿಚಾರ, ಸ್ವಭಾವ ಮರ್ಯಾದೆ, ಆಸೆ ಆಕಾಂಕ್ಷೆಗಳು, ಪೂರ್ವಾಚಾರಶ್ರದ್ಧೆ, ನೇರಕೊಂಕುಗಳನ್ನು ಕನ್ನಡದ ನುಡಿಗಟ್ಟಿನಿಂದ ಶ್ರೀಮಂತವಾದ ಶೈಲಿಯಲ್ಲಿ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದರು. 'ಮಾಡಿದ್ದುಣ್ಣೋ ಮಹಾರಾಯ' (1915), 'ಮುಸುಗ ತೆಗೆಯೇ ಮಾಯಾಂಗನೆ' (1928) ಹಾಗೂ 'ಅವರಿಲ್ಲದೂಟ' (1959) ಕಾದಂಬರಿಗಳು ಪುಟ್ಟಣ್ಣನವರ ಸಾಹಿತ್ಯಕ ಸಿದ್ಧಿಯ ಅತ್ಯುತ್ತಮ ಉದಾಹರಣೆಗಳು.

ಈ ಕಾದಂಬರಿಗಳ ಬನಿ ಸೂಸುವ ಆಡುನುಡಿ ಮೊದಲ ಸುತ್ತಿನಲ್ಲೇ ಆಕರ್ಷಕವಾಗಿ ಕಾಣುತ್ತದೆ. ಜೊತೆಗೆ ಘಟನೆಗಳ ಒಳಸಂಬಂಧಗಳಿಂದ ಹೊರಡುವ ಧ್ವನಿಗೂ ಹೊರಡಿಸುತ್ತಿರುವ ವ್ಯಕ್ತಿಗೂ ಬಳಸಿರುವ ಭಾಷೆಗೂ ಬಿರುಕುಗಳಿಲ್ಲದೆ ಇರುವುದರಿಂದ ಸಾಹಿತ್ಯಕ ಮಹತ್ತ್ವದ ಭದ್ರ ನೆಲೆಗಟ್ಟು ಇವುಗಳಿಗೆ ದಕ್ಕಿದೆ. ಸಂವಹನದ ಏಕಮಾತ್ರ ಉದ್ದೇಶವನ್ನು ಪರಿಪಾಲಿಸಿದ ಪುಟ್ಟಣ್ಣನವರಿಗೆ ಭಾಷಾಸಂಬಂಧಿಯಾದ ಯಾವ ಸಂಕೋಚಗಳೂ ಇಲ್ಲದಿರುವುದು ಇಲ್ಲಿ ಸುಸ್ಪಷ್ಟ. ನೈತಿಕ ವಿಜಯದ ಚಿತ್ರಣ ಪುಟ್ಟಣ್ಣನವರ ಪ್ರಮುಖ ಆಶಯ.

ಆ ಕಾಲದ ಸಾಮಾಜಿಕ ಹಾಗೂ ಜನಪದ ವಿಚಾರಗಳು ಬೆರಗುಗೊಳಿಸುವಂತೆ ಇಲ್ಲಿ ಚಿತ್ರಿತವಾಗಿದೆ. ಕಾಲದ ಪರಿಸರವನ್ನು ಪುಟ್ಟಣ್ಣನವರು ಅದರ ಎಲ್ಲ ಗೊಂದಲಗಳೊಡನೆಯೇ ಸೆರೆಹಿಡಿದಿದ್ದಾರೆ. ಅಂದಿನ ಸಾಂಸ್ಕೃತಿಕ ನೆಲೆಬೆಲೆಗಳೇನು ಎಂಬುದನ್ನು ಪುಟ್ಟಣ್ಣನವರ ಕಾದಂಬರಿಗಳಿಂದ ಸುಲಭವಾಗಿ ಕಂಡುಹಿಡಿಯಬಹುದು. ಜೊತೆಗೆ ಅವರ ಕಾದಂಬರಿಗಳಷ್ಟು ಸಮರ್ಥವಾಗಿ ಕನ್ನಡದ ಬೇರೆ ಯಾವುದೇ ಕಾದಂ

ಬರಿ ಮೈಸೂರಿನ ರಾಜಾಸ್ಥಾನವನ್ನು ಚಿತ್ರಿಸಿಲ್ಲ. ನಿಜವಾದ ರಾಜಭಕ್ತರಿಂದ ಹಿಡಿದು ಸಮಯಸಾಧಕರವರೆಗೆ ಹಲವು ಜನರ ಪರಿಚಯ ಇಲ್ಲಿದೆ. ಕಲೆಸಾಹಿತ್ಯಗಳ ಪೋಷಣೆಗಾಗಿ, ದಾನಧರ್ಮಗಳಿಗಾಗಿ ಮುಮ್ಮಡಿಯವರ ಬೆಂಬಲವನ್ನು ತಿಳಿಸುವಾಗ ಅವರ ಅತ್ಯುಜ್ವಲ ವ್ಯಕ್ತಿತ್ವವನ್ನು ರೂಪಿಸಿದಂತೆಯೇ ದೌಲತ್ತಿಗೆ ಎರವಾಗಿ ರಾಜಕೀಯದಲ್ಲಿ ಸೋತ, ಹಲವು ಕ್ಷೋಭೆಗಳ ನಡುವೆ ತೊಳಲಾಡುವ ರಾಜರ ಚಿತ್ರಣವನ್ನೂ ಅವರು ಕೊಟ್ಟಿದ್ದಾರೆ. ಮುಮ್ಮಡಿಯವರಲ್ಲಿ ಪುಟ್ಟಣ್ಣನವರಿಗೆ ಅಪರಿಮಿತ ಗೌರವವಿತ್ತು. 'ರಾಜಾ ಪ್ರತ್ಯಕ್ಷ ದೇವತಾ' ಎಂಬುದು ಪುಟ್ಟಣ್ಣನವರು ಒಪ್ಪಿದ ಧೋರಣೆ.

ರಾಮಾಯಣವನ್ನೇ ಮನಸ್ಸಿನಲ್ಲಿಟ್ಟುಕೊಂಡು ತಮ್ಮ ಮೊದಲ ಕಾದಂಬರಿ 'ಮಾಡಿದ್ದುಣ್ಣೋ ಮಹಾರಾಯ' ವನ್ನು ರಚಿಸಿರುವುದು ಸ್ತ್ರೀಯ ಪಾತಿವ್ರತ್ಯವನ್ನು ಪುಟ್ಟಣ್ಣನವರು ಪ್ರಾಮಾಣಿಕತೆಯ ಒಂದು ರೂಪವೆಂದು ಪರಿಗಣಿಸಿರುವುದರಿಂದ. ತಮ್ಮ ಮೊದಲ ದಾಂಪತ್ಯದ ಬಿರುಕಿನ ಕಾರಣದಿಂದ ನೊಂದ ಪುಟ್ಟಣ್ಣನವರು, ಅದಕ್ಕೆ ವಿರುದ್ಧ ಮುಕ್ತಾಯವನ್ನು ಈ ಕೃತಿಯಲ್ಲಿ ಕಾಣಿಸಿದ್ದಾರೆ. ಒಂದು ಸಂಸ್ಕೃತಿಯ ಧೋರಣೆಯನ್ನು ವೈಯಕ್ತಿಕ ನೆಲೆಗಟ್ಟಿನಲ್ಲಿ ಅನುಭವಿಸಿ, ಪಕ್ವತೆಯನ್ನು ಹೊಂದಿ ಕಲಾತ್ಮಕವಾಗಿ ಅದನ್ನು ಸಾಹಿತ್ಯಕ ಕೃತಿಯಾಗಿಸುವುದರ ಒಂದು ಶ್ರೇಷ್ಠ ಉದಾಹರಣೆ 'ಮಾಡಿದ್ದುಣ್ಣೋ ಮಹಾರಾಯ'. ಮಿಕ್ಕ ಕೃತಿಗಳಲ್ಲೂ ಅವರ ಜೀವನದ ವೈಯಕ್ತಿಕ ಸಂಗತಿಗಳು ಇಣುಕುತ್ತವೆ.

ನ್ಯಾಯಕ್ಕೆ ಗೆಲುವು, ಅನ್ಯಾಯಕ್ಕೆ ಸೋಲು. ಪುರುಷ ಪ್ರಯತ್ನ ದೈವಕ್ಕೆ ಬಾಗುವುದು ಅನಿವಾರ್ಯ–ಈ ಎರಡು ಆಶಯಗಳು ಪುಟ್ಟಣ್ಣನವರ ಎಲ್ಲ ಕೃತಿಗಳಲ್ಲೂ ಕಾಣುವಂತಹುವೇ. ಪ್ರಮುಖವಾಗಿ ಅವರ ಕಾದಂಬರಿಗಳನ್ನು ಈ ಆಶಯಗಳೇ ನಿಯಂತ್ರಿಸುತ್ತವೆ.

ಪುರಾಣ, ಇತಿಹಾಸ, ಕಾವ್ಯ, ಶಾಸ್ತ್ರ ಗ್ರಂಥಗಳು ಮತ್ತು ಇತರ ಹಲವು ಮೂಲಗಳಿಂದ ಆರಿಸಿದ ಸುಮಾರು ನೂರೈವತ್ತು ಕಥೆಗಳ ಸಂಕಲನವೇ 'ನೀತಿಚಿಂತಾಮಣಿ' (1884) ಎಂಬ ಅನ್ವರ್ಥನಾಮಕ ಕೃತಿ. ಕಥೆ ಎಂದರೆ ಪ್ರತಿ ಮಗುವಿನ ಕಣ್ಣೂ ಅರಳುತ್ತದೆ. ಕುತೂಹಲ ಕೊನರುತ್ತದೆ. ಈ ಕಥನ ಕುತೂಹಲವನ್ನೇ ಪುಟ್ಟಣ್ಣನವರು ಬಾಲಶಿಕ್ಷಣದಲ್ಲಿ ಒಂದು ಖಾತರಿಯಾದ ಅಸ್ತ್ರವನ್ನಾಗಿಸಿಕೊಂಡರು. ಒಂಬತ್ತು ದಶಕಗಳಿಗಿಂತಲೂ ಹೆಚ್ಚು ಕಾಲ ಮಕ್ಕಳ ಮನಸ್ಸನ್ನು ಮುದಗೊಳಿಸಿದ, ತಿದ್ದಿದ ಈ ಕೃತಿ ಬಾಲಸಾಹಿತ್ಯದ ಒಂದು ದಾಖಲೆಯಾಗಿದೆ. ನೀತಿಯ ಹೂರಣವನ್ನು ಕಥೆಯ ಕಣಕದಲ್ಲಿಟ್ಟು ಪುಟ್ಟಣ್ಣನವರು ಸಿದ್ಧಪಡಿಸಿದ ಈ ಭಕ್ಷ್ಯವಿಶೇಷ ಹಿರಿಯರ ಪ್ರೀತಿ ಆಸ್ವಾದನೆಗಳಿಗೂ ಹೊರತಾಗಿಲ್ಲ. ರಂಜನೆ ಚಮತ್ಕಾರಗಳ ಅಂಶಗಳನ್ನು ಪುಟ್ಟಣ್ಣನವರು ಹಠದಿಂದೆಂಬಂತೆ ತೆಗೆದು ಹಾಕಿರುವುದರಿಂದ ಕಥೆಗಳ ಉದ್ದೇಶ ನೀತಿಬೋಧೆಯತ್ತ ಮಾತ್ರ ಎಂಬುದು ಸುಸ್ಪಷ್ಟ. ಕಥೆಗಳ ಸಂಕ್ಷಿಪ್ತತೆ ಪುಟ್ಟಣ್ಣನವರು ಉದ್ದೇಶಿಸಿದ ಇನ್ನೊಂದು ಗುಣ. ಪ್ರಾಮಾಣಿಕತೆ ಇಲ್ಲಿನ ಕಥೆಗಳ

ಸ್ಥಾಯಿ. ಮಕ್ಕಳ ಸಾಹಿತ್ಯ ನಿರ್ಮಾಪಕರೆಂಬ ಪಟ್ಟ ಈ ಕೃತಿಯಿಂದಲೇ ಪುಟ್ಟಣ್ಣನವರಿಗೆ ಲಭಿಸಿತು. ಸಹಜವಾಗಿಯೇ ಆ ಪಟ್ಟ ಇನ್ನೂ ಉಳಿದಿದೆ.

'ಪುಟ್ಟಣ್ಣದ ಹೇಳಿ ಕಥೆಗಳು' (ಅಚ್ಚಿನಲ್ಲಿ) ಸಂಕಲನದಲ್ಲಿ ರೂಢಿಯ ಕಥೆಗಳಿಗೆ ಪ್ರಾಧಾನ್ಯ ದಕ್ಕಿದೆ. ಹಲವು ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿದ್ದ ಕಥೆಗಳು, ಹಸ್ತಪ್ರತಿಗಳಲ್ಲಿ ಉಳಿದಿದ್ದ ಕೆಲವು ಕಥೆಗಳು ಇಲ್ಲಿ ಒಟ್ಟುಗೂಡಿವೆ. ಮಕ್ಕಳ ಮನಸ್ಸಿಗೆ ಹೊರೆಯಾಗದಂತೆ ಕ್ಲಿಷ್ಟ ತತ್ತ್ವಗಳನ್ನೂ ಸರಳವಾಗಿ ಕಥೆಗಳ ಮೂಲಕ ಹೇಳುವುದು ಪುಟ್ಟಣ್ಣನವರ ಪ್ರಿಯವಾದ ಹವ್ಯಾಸ ಎಂಬುದು ಈ ಸಂಕಲನದ ಕಥೆಗಳಿಂದಲೂ ವ್ಯಕ್ತವಾಗುತ್ತದೆ. ಹಳೆಯ ದಾಖಲೆಗಳು ಕಳೆಯಬಾರದೆಂಬುದು ಈ ಪ್ರಕಟಣೆಯ ಪ್ರಮುಖ ಉದ್ದೇಶ.

'ಪೇಟೆ ಮಾತೇನಜ್ಜಿ' (1927) ಒಂದು ರಮ್ಯ ಕಥೆ. ಜನಪದ ಕಥೆಗಳಲ್ಲಿ ಕಾಣುವಂತಹದು. 'ಕಲಾವತೀ ಪರಿಣಯ'ದಂತಹ ಮಾರ್ಗಕಾವ್ಯದ ಕಥೆಗೂ ಈ ಕಥೆಗೂ ಕೆಲವು ಹೋಲಿಕೆಗಳನ್ನು ಕಾಣಬಹುದು. ಷೇಕ್ಸ್‌ಪಿಯರನ 'All's Well That Ends Well' ನಾಟಕದಲ್ಲಿ ಕೂಡ ಇವೇ ಹೋಲಿಕೆಗಳನ್ನು ಕಾಣಬಹುದು. ಸ್ತ್ರೀಯ ಪ್ರಾಮಾಣಿಕತೆ ಪುಟ್ಟಣ್ಣನವರಿಗೆ ಬಲು ಪ್ರಿಯವಾದ ಆಶಯ. ತನ್ನ ಪಾತಿವ್ರತ್ಯದ ಬಲದಿಂದ ಎಂಥ ಕಷ್ಟವನ್ನೂ ಎದುರಿಸಬಲ್ಲ ಪಾತ್ರ ಇಲ್ಲಿನ ಚೆಲುವಾಜಿಯದು ಎಂಬುದೇ ಪುಟ್ಟಣ್ಣನವರಿಗೆ ಈ ಕಥಾನಕದಲ್ಲಿ ಮುಖ್ಯ ಆಕರ್ಷಣೆ. ಧರ್ಮದ ಮುದ್ರೆ ಹಾಗೂ ಲೌಕಿಕದ ಕಟ್ಟುಗಳೆರಡನ್ನೂ ಗೌರವಿಸಿ ಬಾಳಿದರೆ ಮಾತ್ರ ಸಮಾಜ ಕ್ಷೇಮ ಎಂದು ತಮ್ಮ ಕಾದಂಬರಿಗಳಲ್ಲಿ ಪ್ರಕಟಿಸಿದ ನಂಬಿಕೆಯನ್ನು ಪುಟ್ಟಣ್ಣನವರು ಇಲ್ಲೂ ಪ್ರಕಟಿಸಿದ್ದಾರೆ.

* * *

ಚೀಣಾದೇಶದ ತತ್ತ್ವಜ್ಞಾನಿ ಕನ್‌ಫ್ಯೂಷಿಯಸ್ಸನನ್ನು ಕುರಿತ 'ಕಾಂಪೂಷನ ಚರಿತ್ರೆ' (1892), ಮುಮ್ಮಡಿಯವರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದ 'ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ' (1910), ಹೈದರಾಬಾದಿನ ಮಂತ್ರಿ 'ಸರ್ ಸಾಲಾರ್ ಜಂಗನ ಚರಿತ್ರೆ' (1917), ಬಹಮನಿ ಸಂಸ್ಥಾನದ ಮಂತ್ರಿ 'ಮಹಮೂದ್ ಗವಾನನ ಚರಿತ್ರೆ' (1922) ಮತ್ತು ಸ್ವಸಾಮರ್ಥ್ಯದಿಂದ ರಾಜ್ಯ ಕಟ್ಟಿ ಆಳಿದ ಶಿವಾಜಿಯ ವೃತ್ತಾಂತ 'ಛತ್ರಪತಿ ಶಿವಾಜಿ ಮಹಾರಾಜ' (ಹಸ್ತಪ್ರತಿ)—ಇವುಗಳು ಪುಟ್ಟಣ್ಣನವರು ರಚಿಸಿದ ಐದು ಜೀವನ ಚರಿತ್ರೆಗಳು.

ಪುಟ್ಟಣ್ಣನವರ ಆಸಕ್ತಿ ಮುಖ್ಯವಾಗಿ ಎರಡು ಕ್ಷೇತ್ರಗಳಲ್ಲಿ ದುಡಿದವರಿಗೆ ಮಾತ್ರ ಮೀಸಲು. ಪಾರಮಾರ್ಥಿಕ, ಧಾರ್ಮಿಕ ರಂಗಗಳಲ್ಲಿ ಸಾಧನೆ ಮಾಡಿದವರು ಮೊದಲ ಗುಂಪು. ಇಂಥವರು ಪುಟ್ಟಣ್ಣನವರ ಅಸೀಮ ಕೃತಜ್ಞತೆಗೆ ಪಾತ್ರರು. ಅಧಿಕಾರ ಸ್ಥಾನದಲ್ಲಿ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಣೆ ಮಾಡಿದವರು ಇನ್ನೊಂದು

ಗುಂಪು. ಈ ಎರಡು ಗುಂಪಿನವರೂ ಯಾವುದೇ ವೈಯಕ್ತಿಕ ಲಾಭಗಳಿಗೆ ಮನಸೋತವರಲ್ಲ. ಧರ್ಮ ಮತ್ತು ಸರಕಾರ ಈ ಎರಡು ವಲಯಗಳಲ್ಲೂ ಸಾವಯುವ ಸಂಬಂಧವನ್ನು ಪುಟ್ಟಣ್ಣನವರು ಗುರುತಿಸುತ್ತಾರೆ. ಕಾಂಪೂಷನಂಥ ತತ್ತ್ವಜ್ಞಾನಿ ಕೋಶಾಧಿಕಾರಿಯಾಗಿ ದಂಡನಾಧಿಕಾರಿಯಾಗಿ ದುಡಿದವನು. ರಾಜಾಶ್ರಯ ಸಿಕ್ಕಿದರೆ ಅನೇಕ ಮಹಾಕಾರ್ಯಗಳಿಗೆ ಇಂಬಾದೀತು ಎಂದು ಆಶಿಸಿದವನು. ರಾಮಶಾಸ್ತ್ರಿಗಳು ರಾಜಾಸ್ಥಾನದ ಕೃಪೆಯನ್ನು ಪಡೆದೇ ತಮ್ಮ ಧಾರ್ಮಿಕ ಕರ್ತವ್ಯಗಳನ್ನು ನೆರವೇರಿಸಿದರು. ಸಾಲಾರ್‌ಜಂಗ್ ಮತ್ತು ಮಹಮದ್ ಗವಾನ್ ಕೂಡ ಅತ್ಯುನ್ನತ ಪದವಿಯಲ್ಲಿದ್ದಾಗಲೂ ಧರ್ಮವನ್ನು ಒಪ್ಪಿ ನಡೆದವರು. ಶಿವಾಜಿ ಬಾಲ್ಯದಿಂದ ಗಾಢವಾದ ಧಾರ್ಮಿಕ ಪರಿಸರದಲ್ಲಿ ಬೆಳೆದು ಸ್ವತಃ ರಾಜ್ಯಕಟ್ಟಿ ಆಳಿ ಆರ್ಯಧರ್ಮವನ್ನು ರಕ್ಷಿಸಿದವನು. ಪುಟ್ಟಣ್ಣನವರ ದೃಷ್ಟಿಯಲ್ಲಿ ಅಧಿಕಾರಸ್ಥಾನದಲ್ಲಿ ಧರ್ಮದ ಚೈತನ್ಯ ಅತ್ಯಂತ ಸುಸಂಬದ್ಧವಾದುದು. ರಾಜಕೀಯ ವ್ಯವಸ್ಥೆ ಸರಿಯಾಗಿಲ್ಲದಿದ್ದರೆ ಆಗುವ ಅನರ್ಥಗಳನ್ನು ತಿಳಿದಿದ್ದುದರಿಂದ ಅಧಿಕಾರದ ಮಹತ್ತ್ವವನ್ನೂ ನೀತಿಪರವಾದ ಬಾಳು ಮಾತ್ರ ಗೌರವಾರ್ಹವಾದುದು ಎಂಬ ನಂಬಿಕೆಯಿಂದ ಧರ್ಮದ ಮಹತ್ತ್ವವನ್ನೂ ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದರು. ಈ ಜೀವನಚರಿತ್ರೆಗಳ ನಾಯಕರೆಲ್ಲರ ಪ್ರಮುಖ ಗುಣ ಪ್ರಾಮಾಣಿಕತೆ. ಎಲ್ಲರೂ ಪಾಂಡಿತ್ಯಕ್ಕೆ ಗೌರವ ಸಲ್ಲಿಸಿದರು. ಮೊದಲ ನಾಲ್ವರು ಸ್ವತಃ ವಿದ್ವಾಂಸರು. ಶಿವಾಜಿ ಪಂಡಿತ ಪೋಷಣೆಯಿಂದ ಈ ಕೊರತೆಯನ್ನು ತುಂಬಿಕೊಂಡವನು. ಪುಟ್ಟಣ್ಣನವರ ಜೀವನಚರಿತ್ರೆಗಳಲ್ಲಿ ಈ ಹೋಲಿಕೆಗಳು ಒಂದು ಅಂತಃಸೂತ್ರವನ್ನು ಕಲ್ಪಿಸಿದೆ.

* * *

ಪುಟ್ಟಣ್ಣನವರು ಷೇಕ್ಸ್‌ಪಿಯರನ ಮೂರು ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸಿದ್ದಾರೆ. 'ಸಿಂಬಲೈನ್' ನಾಟಕದ ರೂಪಾಂತರ 'ಜಯಸಿಂಹರಾಜ ಚರಿತ್ರೆ' (1881), ಇದು ಕಥನರೂಪದಲ್ಲಿದೆ. 'ಕಿಂಗ್‌ಲಿಯರ್' ನಾಟಕದ ರೂಪಾಂತರ 'ಹೇಮಚಂದ್ರರಾಜ ವಿಲಾಸ' (1899), ಇದು ಗದ್ಯಪದ್ಯಮಿಶ್ರ ನಾಟಕ. 'ಹ್ಯಾಮ್ಲೆಟ್' ನಾಟಕದ ರೂಪಾಂತರ 'ಹೇಮಲತ' (ರಚನೆ 1920, ಅಪ್ರಕಟಿತ). ಇದು ಕೂಡ ಗದ್ಯಪದ್ಯಮಿಶ್ರ ನಾಟಕ. ಮೂರು ಕೃತಿಗಳೂ ರೂಪಾಂತರಗಳೇ. ಈ ಮೂರು ಕೃತಿಗಳಲ್ಲೂ ಕನ್ನಡಕ್ಕೆ ಹೊಂದುವಂತೆ ಔಚಿತ್ಯವರಿತು ಹಲವು ಬದಲಾವಣೆಗಳನ್ನು ಪುಟ್ಟಣ್ಣನವರು ಮಾಡಿಕೊಂಡಿದ್ದಾರೆ. ಸರಿಹೊಂದದ ಹಲವು ಅಂಶಗಳನ್ನು ಬಿಟ್ಟಿದ್ದಾರೆ. ಷೇಕ್ಸ್‌ಪಿಯರನ ನಾಟಕಗಳಲ್ಲಿ ಪೂರ್ಣ ಗದ್ಯವನ್ನು ಉಪಯೋಗಿಸಿದವರಲ್ಲಿ ಪುಟ್ಟಣ್ಣನವರದು ಮೊದಲ ಸಾಲಿನ ಹೆಸರು. ಆ ಕಾಲಕ್ಕೆ ಇದೊಂದು ಅಪೂರ್ವ ಸಾಧನೆ. ಈ ರೂಪಾಂತರಗಳಲ್ಲಿ ಮೂಲದ ಸತ್ತ್ವವನ್ನು ಕನ್ನಡಕ್ಕೆ ತರುವ ಧ್ಯೇಯವಿದೆ. ಸಿದ್ಧಿ ಒಂದು ಮಿತಿಯಲ್ಲಿ ಮಾತ್ರ ದೊರಕಿದೆ. ಇರುವ

ದನ್ನು ಅನಗತ್ಯವಾಗಿ ಬದಲಾಯಿಸುವುದು, ಇಲ್ಲದ್ದನ್ನು ಸೇರಿಸುವುದು, ಮೊದಲಾದ ವಿಲಕ್ಷಣತೆಗಳಿಲ್ಲ. ನಾಟಕಗಳನ್ನು ಸುಖಾಂತಗೊಳಿಸುವ ಹಟವಿಲ್ಲ, ಬಲವಂತವಾಗಿ ಕಾವ್ಯರೂಪದಲ್ಲಿ ತಿಣಿಕಿ ಬರೆಯುವ ರೇಜಿಗೆಯಿಲ್ಲ. ಈ ಗುಣಗಳೆಲ್ಲ ಎಲ್ಲ ಕಾಲಕ್ಕೂ ನಿಲ್ಲುವಂಥವೇ. ಈ ದೃಷ್ಟಿಯಿಂದ ಹಲವು ಮಿತಿಗಳಿದ್ದರೂ ಪುಟ್ಟಣ್ಣನವರ ರೂಪಾಂತರಗಳು ಗಮನಾರ್ಹವಾದ ಮೊದಲ ರೂಪಾಂತರ ಪ್ರಯತ್ನಗಳು. ಇಲ್ಲಿನ ಯಾವೊಂದು ರೂಪಾಂತರದಲ್ಲೂ ಮೂಲದ ಕಾವ್ಯಗುಣವಾಗಲೀ ವೈದುಷ್ಯವಾಗಲೀ ಇಲ್ಲ. ಇಲ್ಲಿನ ವಿವರಣಾತ್ಮಕ ಗದ್ಯದಲ್ಲಿ ಅಚ್ಚುಕಟ್ಟು ಕೂಡ ಕಡಿಮೆ. ಆದರೆ ಸಂವಹನಕ್ಕೆ ಅಡ್ಡಿಯಿಲ್ಲ. ಕಾವ್ಯಕ್ಕೆ ಸಂಬಂಧಿಸಿದಂತೆ ಪುಟ್ಟಣ್ಣನವರು ತಮ್ಮ ಮಿತಿಯನ್ನರಿತು ಗದ್ಯದಲ್ಲಿ ಸಾಧನೆಯ ಅವಕಾಶಗಳನ್ನು ತಿಳಿದುಕೊಂಡಿದ್ದು, ಷೇಕ್ಸ್‌ಪಿಯರನ ನಾಟಕಗಳನ್ನು ಪೂರ್ಣಗದ್ಯದಲ್ಲಿ ಬರೆಯುವುದು ಒಂದು ಸಾಹಿತ್ಯಕ ಧೋರಣೆ ಆಗದಿದ್ದಾಗಲೂ ಹಾಗೆ ಮಾಡಿದ್ದು ಮತ್ತು ಸಾಧ್ಯವಿದ್ದೆಡೆಗಳಲ್ಲೆಲ್ಲ ಆಡುಮಾತನ್ನು ಬಳಸಿದ್ದು ಇಲ್ಲಿಯ ಹೆಚ್ಚಳ. ಪುಟ್ಟಣ್ಣನವರ ಒಟ್ಟು ಗದ್ಯಸಾಧನೆಯಲ್ಲಿ ಇದೊಂದು ಗಣನೀಯವಾದ ಅಂಶವಾಗಿದೆ.

ಥಾಮಸ್ ಡೇ ಬರೆದ 'ದಿ ಹಿಸ್ಟರಿ ಆಫ್ ಸ್ಯಾಂಡ್‌ಫರ್ಡ್ ಅಂಡ್ ಮರ್ಟನ್' ಕೃತಿಯ ರೂಪಾಂತರವೇ 'ಸುಮತಿ ಮದನಕುಮಾರರ ಚರಿತ್ರೆ' (1897). ಮಕ್ಕಳಿಗೆ ಕಥೆಗಳ ಮೂಲಕ ಒಳ್ಳೆಯ ನಡತೆಯನ್ನು ಮತ್ತು ವಿದ್ಯಾಭ್ಯಾಸದ ವಿಷಯಗಳನ್ನು ಬೋಧಿಸುವುದೇ ಇಲ್ಲಿಯ ಸ್ವಾರಸ್ಯ. ಇಬ್ಬರು ಮುಗ್ಧ ಬಾಲಕರು ಗುರುಕುಲವಾಸದಲ್ಲಿ ಸ್ವಲ್ಪಕಾಲ ಬೆಳೆಯುವ ಚಿತ್ರಣ ಹಾಗೂ ಉಪಾಧ್ಯಾಯರು ಕೊಡುವ ಉತ್ತಮ ಶಿಕ್ಷಣ ಕ್ರಮ ಈ ಕೃತಿಯ ವಸ್ತು. ಮೂಲದ ಸಾರ ರೂಪಾಂತರದಲ್ಲಿ ಸೊಗಸಾಗಿ ಭಟ್ಟಿಯಿಳಿದಿದೆ. ಆಡುನುಡಿಯ ಸೊಗಡು ಸೂಸುವ ಭಾಷೆ ಇಲ್ಲಿನ ಸಿದ್ಧಿಯ ಒಂದು ಭಾಗ. ಮೂಲದ ಕಥೆಯನ್ನು ಪುಟ್ಟಣ್ಣನವರು ತಮ್ಮ ಸುತ್ತಲಿನ ಸಮಾಜಕ್ಕೆ ತಕ್ಕಂತೆ ಒಗ್ಗಿಸಿಕೊಂಡರು. ಇಲ್ಲಿಗೆ ಒಗ್ಗದುದನ್ನು ಕೈಬಿಟ್ಟರು. ಪುಟ್ಟಣ್ಣನವರ ರೂಪಾಂತರಗಳಲ್ಲಿ ಈ ಕೃತಿ ಅತ್ಯಂತ ಯಶಸ್ವಿಯಾದುದು.

'ಹಾತಿಂ ತಾಯ್' (ರಚನೆ 1920, ಅಪ್ರಕಟಿತ) ಪರ್ಶಿಯನ್ ಮೂಲದ್ದು. ಈ ಕೃತಿಯ ಇಂಗ್ಲಿಷ್ ಭಾಷಾಂತರದಿಂದ ಕನ್ನಡದ ತಮ್ಮ ಭಾಷಾಂತರವನ್ನು ಪುಟ್ಟಣ್ಣನವರು ಸಿದ್ಧಪಡಿಸಿದ್ದಾರೆ. ಹಾತಿಮ ಅಪರಿಗ್ರಹಣದ ಸಾಕಾರಮೂರ್ತಿ ಎಂಬುದೇ ಪುಟ್ಟಣ್ಣನವರಿಗೆ ಆಕರ್ಷಣೆಯನ್ನು ಉಂಟುಮಾಡಿದೆ. ಇಂಗ್ಲಿಷ್ ಮೂಲದ ನಾಲ್ಕೂ ಕೃತಿಗಳು ರೂಪಾಂತರಗಳು. ಇಂಗ್ಲಿಷೇತರ ಮೂಲದ (ಇಂಗ್ಲಿಷ್ ಭಾಷಾಂತರದ ಮೂಲಕ ಬಂದ) 'ಹಾತಿಂತಾಯ್' ಉಪಲಬ್ಧ ದಾಖಲೆಗಳ ಪ್ರಕಾರ ಪುಟ್ಟಣ್ಣನವರ ಏಕೈಕ ಭಾಷಾಂತರ ಕೃತಿ.

* * *

ಪುಟ್ಟಣ್ಣನವರು ಪಾಳಯಗಾರರನ್ನು ಕುರಿತು ಮೊದಲು ಬರೆದ ಕೃತಿ 'ಪಾಳಯ

